ಮುಂದೆಯೂ ಬತ್ತುವದಿಲ್ಲ. ಕಾಲಮಾನಕ್ಕನುಗುಣವಾಗಿ ಅದಕ್ಕೆ ಏರಿಳಿತ ಬರಬಹುದು, ಅಷ್ಟೆ! ಶ್ರೀಸಾಮಾನ್ಯರು ಇರುವವರೆಗೆ ಅದಕ್ಕೆ ಬದುಕುವ ದಾರಿ ಇದ್ದೇ ಇದೆ. ತೋಂಡಿಯಾಗಿ ಬೆಳೆಯುವ ಈ ಸಾಹಿತ್ಯವನ್ನು ಒಬ್ಬರಿಂದ ಇನ್ನೊಬ್ಬರು ಕಲಿಯದೆ ಹೋದರೆ ಈ ಸಾಹಿತ್ಯ ಕುಗ್ಗಬಹುದು. ಆದರೆ ಬಗ್ಗಲಾರದು. ಆನೆ ಬಿದ್ದರೂ ಆಳೆತ್ತರ ಎನ್ನುವಂತೆ ಅಳಿದರೂ ಉಳಿಯಬಲ್ಲ ಅಗಾಧಶಕ್ತಿ ಅದರಲ್ಲಿದೆಯೆಂಬುದನ್ನು ಮರೆಯು ಲಾಗದು. ಆದರ ಸತ್ವವನ್ನು ಮೆರೆಯುಲೆಂದೇ ನಮ್ಮ ವಿಶ್ವವಿದ್ಯಾಲಯವು ಪ್ರತಿವರ್ಷ ಸಮ್ಮೇಳನವೊಂದನ್ನು ಏರ್ಪಡಿಸುತ್ತ ಬಂದಿದೆ. ಜನಮನವನ್ನು ಅದರತ್ತ ಸೆಳೆಯುವ ಪ್ರಯತ್ನಮಾಡುತ್ತಲಿದೆ.

ನಮ್ಮ ನಚ್ಚಿನ ಕುಲಪತಿಗಳಾದ ಶ್ರೀ ಎಸ್. ಎಸ್. ಒಡೆಯರ ಅವರು ಸಾಹಿತ್ಯ ಪ್ರೇಮಿಗಳು, ಕಲಾಪ್ರೇಮಿಗಳು. ವಿಶ್ವವಿದ್ಯಾಲಯವು ಕೈಕೊಳ್ಳುವ ಪ್ರತಿಯೊಂದು ಕಾರ್ಯ ಅಚ್ಚುಕಟ್ಟಾಗಿ ನಡೆಯಬೇಕೆಂಬುದು ಅವರ ಮನದಾಸೆ. ಅವರ ಆಡಳತೆಯ ಕ್ರಮ ಆಸೀಮ; ಸಾಹಿತ್ಯಪ್ರೇಮ ನಿಸ್ಸೀಮ. ಈ ಜಾನಪದ ಸಮ್ಮೇಳನ ಅಚ್ಚು ಕಟ್ಟಾಗಿ ನಡೆಯಲೆಂದು ನಮ್ಮ ಬೆನ್ನು ತಟ್ಟಿದರು; ನಮಗಿದ್ದ ತೊಂದರೆಗಳನ್ನು ನಿವಾರಿಸಿ ಕೊಟ್ಟರು. ಮೇಲಾಗಿ ಅವರಿಗೆ ಅನೇಕ ಕಾರ್ಯಗಳಿದ್ದರೂ ಅದರಲ್ಲಿಯೇ ಬಿಡುವು ಮಾಡಿಕೊಂಡು, ನಮ್ಮ ಆಮಂತ್ರಣಕ್ಕೆ ಮನ್ನಣೆಯಿತ್ತು, ಸಮ್ಮೇಳನವನ್ನು ಉದ್ಘಾಟಿ ಸಲು ಇಲ್ಲಿಯವರೆಗೆ ಬಂದುದು ನಮಗೆ ಸಂತೋಷವನ್ನುಂಟುಮಾಡಿದೆ. ಅವರಿಗೂ ನಮ್ಮ ಸುಸ್ವಾಗತ.

ಇಂದು ಪ್ರಾರಂಭವಾಗಲಿರುವ ಅಖಿಲ ಕರ್ನಾಟಕ ಆರನೆಯ ಜಾನಪದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಗಮಿಸಿದವರು ಕನ್ನಡದ ಸುಪ್ರಸಿದ್ಧ ಸಾಹಿತಿ ಶ್ರೀ ಸಿಂಪಿ ಲಿಂಗಣ್ಣನವರು. ಅವರ ಸಾಹಿತ್ಯಸೇವೆ ಬಹುಮುಖವಾದುದು. ೧೯೦೫ನೆಯ ಇಸ್ವಿ ಯಲ್ಲಿ ಜನಿಸಿದ ಅವರಿಗೀಗ ಎಪ್ಪತ್ತುಮೂರರ ಪ್ರಾಯ. ಅವರು ಸಾಹಿತ್ಯ ಸೃಷ್ಟಿ ಯನ್ನು ಪ್ರಾರಂಭಿಸಿ ಅರ್ಧಶತಮಾನ ಕಳೆದಿದೆ. ಕವಿತೆ, ನಾಟಕ, ಪ್ರಬಂಧ, ಅನುವಾದ, ವಿಮರ್ಶೆ–ಹೀಗೆ ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ಅವರು ಸಲ್ಲಿಸಿದ ಸೇವೆ ಪ್ರಶಂಸನೀಯ ವಾಗಿದೆ. ವಿಶೇಷವಾಗಿ, ಅವರು ಮಾಡಿದ ಜನಪದ ಸಾಹಿತ್ಯಸೇವೆ ಅನುಪಮವಾದುದು. ಹಲಸಂಗಿ ಗೆಳೆಯರು ನೀಡಿದ ಅಪೂರ್ವ ಕಾಣಿಕೆಯಾದ 'ಗರತಿಯ ಹಾಡು' ಸಂಗ್ರಹದಲ್ಲಿ ಶ್ರೀ ಲಿಂಗಣ್ಣನವರ ಪರಿಶ್ರಮವೂ ಇದೆ. ಪಿ. ಧೂಲಾಸಾಹೇಬರೊಂದಿಗೆ ಸಂಗ್ರಹಿಸಿದ 'ಜೀವನ ಸಂಗೀತ' ಶ್ರೀ ಲಿಂಗಣ್ಣನವರ ಜನಪದ ಸಾಹಿತ್ಯ ಸಂಗ್ರಹದಲ್ಲಿ ಮೇಲ್ಮೆಗೆ ಕುರುಹಾಗಿದೆ. ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಪ್ರಕಟವಾದ 'ಉತ್ತರ ಕರ್ನಾಟಕ ಜಾನಪದ ಕೃತಿಗಳು,' ಸಿಂಪಿಯವರ ಇನ್ನೊಂದು ಮಹತ್ವದ ಕೊಡುಗೆ.

ಶ್ರೀ ಲಿಂಗಣ್ಣನವರು ಬರಿಯ ಸಂಗ್ರಹಕಾರರಾಗಿ ಉಳಿಯದೆ ಜನಪದ ಸಾಹಿತ್ಯಕ್ಕೆ ಅರ್ಥವಿವರಣೆ ನೀಡುವ ಕಾರ್ಯವನ್ನೂ ಸಾಕಷ್ಟು ಮಾಡಿದ್ದಾರೆ. 'ಗರತಿಯ ಬಾಳು' 'ಜನಾಂಗದ ಜೀವಾಳ' ಮುಂತಾದ ಕೃತಿಗಳು ಇದಕ್ಕೆ ನಿದರ್ಶನವಾಗಿವೆ. ಈಗಲೂ ಅವರು ಜನತೆಯ ಸಾಹಿತ್ಯದ ಬಗೆಗೆ ಚಿಂತನೆ ಮಾಡುತ್ತಿರುವದು ನಮ್ಮ ನಾಡಿನ ಪುಣ್ಯ ವೆಂದೇ ಹೇಳಬೇಕು.

ಶ್ರೀ ಸಿಂಪಿ ಲಿಂಗಣ್ಣನವರ ಜನಪದ ಸಾಹಿತ್ಯ ಸೇವೆಯುನ್ನು ಗುರುತಿಸಿದ ಕನ್ನಡ ಜನತೆ ೧೯೪೫ರಲ್ಲಿ, ರಬಕವಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಜಾನಪದ ಗೋಷ್ಠಿಯ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿತ್ತು. ಅನಂತರ ೧೯೬೯ರಲ್ಲಿ ಮಂಗಳೂರಿನಲ್ಲಿ ಜರುಗಿದ ಜಾನಪದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗುವ ಭಾಗ್ಯ ಅವರಿಗೆ ಸಂದಿತ್ತು. ನಮ್ಮ ಪ್ರಥಮ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಒಂದು ವಿಚಾರಗೋಷ್ಠಿಗೆ ಅಧ್ಯಕ್ಷ ರಾಗಿ ಅವರು ನಮಗೆ ಸಹಾಯ ಮಾಡಿದ್ದರು. ಅವರಿಂದು ಈ ಸಮ್ಮೇಳನದ ಸರ್ವಾಧ್ಯಕ್ಷ ರಾಗಿದ್ದಾರೆ. ಅವರನ್ನು ತುಂಬು ಹೃದಯದಿಂದ ಸ್ವಾಗತಿಸುತ್ತೇನೆ. ಶ್ರೀ ಸಿಂಪಿ ಲಿಂಗಣ್ಣನವರು ಉದ್ದಾಮ ಸಾಹಿತಿಗಳು, ಆದರ್ಶಶಿಕ್ಷಕರು, ತತ್ವನಿಷ್ಠ ನಡೆನುಡಿ ಯುಳ್ಳವರು. ಅವರ ಅಧ್ಯಕ್ಷತೆಯಲ್ಲಿ ನಡೆಯುವ ಈ ಸಮ್ಮೇಳನಕ್ಕೆ ಹೆಚ್ಚಿನ ಕಳೆ, ಹೆಚ್ಚಿನ ಬೆಲೆ ಬರುವದರಲ್ಲಿ ಸಂದೇಹವಿಲ್ಲ.

ಈ ಸಮ್ಮೇಳನದ ಅಂಗವಾಗಿ ಮೂರು ವಿಚಾರಗೋಷ್ಠಿಗಳು ನಡೆಯಲಿವೆ. ಉತ್ತರ ಕರ್ನಾಟಕದ ಜಾನಪದ ವೃತ್ತಿಕಾರರ ಜನಾಂಗಿಕ ಅಧ್ಯಯನ ಮಾಡುವದು ಜನಪದ ಸಾಹಿತ್ಯದೃಷ್ಟಿಯಿಂದ ಮಹತ್ವಪೂರ್ಣವಾಗಿದೆ. ಈ ಗೋಷ್ಠಿಗಳ ಅಧ್ಯಕ್ಷರಾಗಿ ಡಾ. ಜೀ. ಶಂ. ಪರಮಶಿವಯ್ಯ, ಡಾ. ಕೆ. ಜಿ. ಶಾಸ್ತ್ರಿ, ಶ್ರೀ ಶಾಂತರಸ ವಿಚಾರಮಂಥನ ವನ್ನು ನಡೆಸಿಕೊಡಲಿದ್ದಾರೆ. ವಿಚಾರಗೋಷ್ಠಿಗಳಲ್ಲಿ ಭಾಗವಹಿಸಲು ಪಂಡಿತ ಮಂಡಳಿ ಒಪ್ಪಿ ಬಂದಿದೆ. ಅವರ ವಿಚಾರಲಹರಿ ಕತ್ತಲೆಯಲ್ಲಿ ಅಡಗಿದ ವೃತ್ತಿಕಲಾಕಾರರ ಜೀವನದ ಮೇಲೆ ಹೊಸ ಬೆಳಕನ್ನು ಚಲ್ಲುವದೆಂಬ ಭರವಸೆ ತಾಳಿದ್ದೇವೆ. ಈ ಪಂಡಿತ ಕಲಾ ಮಂಡಿತರಿಗೆ ಸುಸ್ವಾಗತ.

ಪ್ರದರ್ಶನದಿಂದಲೇ ದಿವ್ಯದರ್ಶನವಾಗುವದು ಸಾಧ್ಯವೆಂದು ಭಾವಿಸಿ, ಇಂದು ನಾಳೆ ರಾತ್ರಿ ರಂಗಪ್ರದರ್ಶನಗಳನ್ನು ಏರ್ಪಡಿಸಲಾಗಿದೆ. ನಾಡಿನ ನಾನಾಭಾಗದ ಕಲಾಕಾರರು ಬಂದಿದ್ದಾರೆ. ರಂಗಪ್ರದರ್ಶನದಲ್ಲಿ ಭಾಗವಹಿಸಲಿದ್ದಾರೆ. ರಂಗಪ್ರದರ್ಶನದ ಉದ್ಘಾಟನೆ ಇಂದು ರಾತ್ರಿ ೮ ಗಂಟೆಗೆ ಜನನಾಯಕರೂ, ಕಲಾಪ್ರೇಮಿಗಳೂ ಆದ ಶಾಸಕ ಶ್ರೀ ಎಸ್. ಎಸ್. ಕವಿಶೆಟ್ಟಿ ಅವರಿಂದ ನೆರವೇರುತ್ತದೆ. ಇದೀಗ ಅವರು ನಮ್ಮ ಮಧ್ಯದಲ್ಲಿದ್ದಾರೆ. ಅವರಿಗೂ ಕಲಾಕಾರರಿಗೂ ನಮಗೆ ಬೇಕಾದ ಸಕಲಸಿದ್ಧತೆಯ

ನ್ನೊದಗಿಸಲು ಸಜ್ಜಾಗಿ ನಿಂತ ಶ್ರೀ ವಿಜಯ ಮಹಾಂತೇಶ ಮಹಾವಿದ್ಯಾಲಯದ ಪ್ರಾಧ್ಯಾಪಕರಿಗೂ ಅಧ್ಯಾಪಕರಿಗೂ ಹೃದಯಾರೆ ನಮನಗಳನ್ನು ಸಲ್ಲಿಸುತ್ತೇನೆ.

ಸರ್ವೇಶನ ಅನುಗ್ರಹವಿಲ್ಲದೆ ಯಾವದೂ ನಡೆಯದು. ಪೂಜ್ಯ ಶ್ರೀ ನಿ. ಪ್ರ. ಮಹಾಂತ ಮಹಾಸ್ವಾಮಿಗಳವರು ನಮ್ಮ ಮೇಲೆ ಕರುಣೆದೋರಿ, ಸಮ್ಮೇಳನಕ್ಕೆ ಬಂದ ಕಲಾಕಾರರಿಗೆ ಪ್ರಸಾದ ನೀಡಿ ಜನ ಬದುಕಲೆಂದು ಹಾರೈಸಿ, ಆಶೀರ್ವಚನ ನೀಡಲು ಸಮ್ಮತಿಸಿ ಬಂದು, ಇಲ್ಲಿ ವಿರಾಜಮಾನರಾಗಿದ್ದಾರೆ. ಅವರಿಗೆ ಸುಸ್ವಾಗತವೆಂದು ಹೇಳುವದು ಉಪಚಾರದ ಮಾತಲ್ಲ, ಸತ್ಯವಾಕ್ಯ. ಒಟ್ಟಿನಲ್ಲಿ, ಊರೇ ನಮ್ಮದಾದಾಗ ಯಾರನ್ನು ನೆನೆಯಲಿ, ಯಾರನ್ನು ಬಿಡಲಿ? ಸರ್ವರಿಗೂ ಸ್ವಾಗತಬಯಸಿ ವಿಶ್ರಮಿಸುತ್ತೇನೆ.

ಜೈ ಜನಪದ!!

● ●

## ಸ್ವಾಗತ ಭಾಷಣ

ಪ್ರಿ. ಎಸ್. ಆರ್. ಪಾಟೀಲ

ಪೂಜ್ಯ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳವರ ಪಾದಾರವಿಂದಗಳಲ್ಲಿ ಅನಂತ ಪ್ರಣಾಮಗಳನ್ನು ಸಮರ್ಪಿಸಿ; ಕರ್ನಾಟಕ ವಿಶ್ವವಿದ್ಯಾಲಯದ ಸನ್ಮಾನ್ಯ ಕುಲಪತಿಗಳಾದ ಶ್ರೀ ಎಸ್. ಎಸ್. ಒಡೆಯರ ಅವರೆ, ಸಮ್ಮೇಳನದ ಅಧ್ಯಕ್ಷರೂ ಹಿರಿಯ ಸಾಹಿತಿಗಳೂ ಆದ ಶ್ರೀ ಸಿಂಪಿ ಲಿಂಗಣ್ಣನವರೆ, ಡಾ. ಎಂ. ಎಸ್. ಸುಂಕಾಪುರ ಅವರೆ, ಶಾಸಕ ಶ್ರೀ ಎಸ್. ಎಸ್. ಕವಿಶೆಟ್ಟಿಯವರೆ, ಪಂಡಿತ ಪ್ರಾಧ್ಯಾಪಕರೇ, ಹಿರಿಯರೇ ಹಾಗೂ ತಾಯಂದಿರೇ,

ಕರ್ನಾಟಕ ವಿಶ್ವವಿದ್ಯಾಲಯದ "ಆರನೆಯ ಜಾನಪದ ಸಮ್ಮೇಳನ"ವು ನಮ್ಮ ಶ್ರೀ ವಿಜಯ ಮಹಾಂತೇಶ್ವರ ಕಲಾ–ವಾಣಿಜ್ಯ–ಹಾಗೂ ವಿಜ್ಞಾನ ಮಹಾವಿದ್ಯಾಲಯದಲ್ಲಿ ಜರುಗುತ್ತಿರುವದು ಅತ್ಯಂತ ಅಭಿಮಾನಾಸ್ಪದ ಸಂಗತಿಯಾಗಿದೆ. ಜಾನಪದ ಸಾಹಿತ್ಯ ಹಾಗೂ ಅದರಲ್ಲಿಯೂ ವಿಶೇಷವಾಗಿ "ಜಾನಪದ ವೃತ್ತಿಕಲೆ"ಗಳ ಬಗ್ಗೆ ಅಭ್ಯಾಸ ಮಂಡಲಗಳನ್ನು ರಚಿಸಿಕೊಂಡು, ಮೂರು ವಿದ್ವದ್ಗೋಷ್ಠಿಯಲ್ಲಿ ನಡೆಯಲಿರುವ ಕಾರ್ಯಕ್ರಮಗಳು ಹೊಸ ಉಪಕ್ರಮವಾಗಿವೆ. ವಿಜಾಪುರ ಜಿಲ್ಲೆಯ ಹುನಗುಂದವು ತಿರುಳ್ಗನ್ನಡ ಸೀಮೆಯಾಗಿದೆ. ನಗರಗಳಲ್ಲಿ ನಶಿಸಿಹೋದ, ಇಲ್ಲವೆ, ತೀರ ವಿಕೃತವಾದ ಜಾನಪದ ಸಾಹಿತ್ಯ ಹಾಗೂ ವೃತ್ತಿಕಲೆಗಾರಿಕೆಗಳು, ನಮ್ಮೂರಿನಲ್ಲಿ ಹಾಗೂ ಸುತ್ತಲಿನ ನೂರಾರು ಹಳ್ಳಿಗಳಲ್ಲಿ ಇನ್ನೂ ಸಜೀವವೂ ಸುಸಂಪನ್ನವೂ ಆಗಿವೆ. ಕೃಷ್ಣಾತೀರದ ಈ ಬೆಳ್ವೊಲಭೂಮಿಯಲ್ಲಿ ಪ್ರಾಚೀನ ಕನ್ನಡ ಸಂಸ್ಕೃತಿಯ ಪರಂಪರೆಗಳಾದ ಬಯಲಾಟ ಸಣ್ಣಾಟ, ಗೊಂಬೆಯಾಟ, ವಾದ್ಯಮೇಳ, ಗೊಂದಲಿಗರ ಕಥೆ, ಚೌಡಕಿಯರು–ಮುಳ್ಳಾವಿಗೆಯವರು, ಸಾರು ಅಯ್ಯನವರು, ದುರಗಮುರಗಿ, ಬುಡಬುಡಕೆ, ಕೊರವಂಜಿ, ಸುಡಗಾಡಸಿದ್ಧರು, ಕಿಳ್ಳಿಕೇತರು, ಲಾವಣಿಕಾರರು, ವೇಷಗಾರರು ಮೊದಲಾದವರ ವೃತ್ತಿಕಲೆ

ಗಳು ಅಚ್ಚಳಿಯದೇ ಉಳಿದಿರುವದು ನಾಡಿನ ಸುದೈವ. ಆದ್ದರಿಂದ ನಮ್ಮ ವಿಶ್ವ-ವಿದ್ಯಾಲಯಗಳಿಗೆ ಹಾಗೂ ಸರಕಾರಕ್ಕೆ ಸಂಶೋಧಿಸಿ ಹೊರದೆಗೆಯಲು ಉತ್ಕೃಷ್ಟಮಟ್ಟದ ವಿಪುಲ ಜನಪದ ಸಾಹಿತ್ಯವೇ ಜನಮನದಲ್ಲಿ ಇಲ್ಲಿ ವೆಗ್ಗಳವಾಗಿ ನೆಲೆಸಿದೆ ಎಂದು ಧೈರ್ಯ ವಾಗಿ ಹೇಳುತ್ತೇನೆ. ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚಾರ್ಯರು ಈ ಅಂಶವನ್ನು ಮನದಂದು, ಹಾಗೂ ಪಂಡಿತರಿಗೆ ಸಾಧ್ಯವಿದ್ದಷ್ಟು ಆಶ್ರಯ ನೀಡುತ್ತಿರುವ ನಮ್ಮ ಪೂಜ್ಯ ಸ್ವಾಮಿಗಳವರ ಘನವ್ಯಕ್ತಿತ್ವಕ್ಕೆ ಆಕರ್ಷಿತರಾಗಿ; ತಮ್ಮ 'ಆರನೆಯ ಜಾನಪದ ಸಮ್ಮೇಳನ' ವನ್ನು ಇಲ್ಲಿ ಹಮ್ಮಿಕೊಂಡಿರುವದು ಸ್ತುತ್ಯಾರ್ಹ ಸಂಗತಿಯೇ ಸರಿ. ಹೀಗೆ ಹಲವು ದಿನಗಳ ನಮ್ಮ ಹಂಬಲ ಇಂದು ಫಲವಾಗಿ, ನಮ್ಮೂರಿಗೆ ದೊಡ್ಡಭಾಗ್ಯವನ್ನೇ ತಂದುಕೊಟ್ಟಿತು. ಏಕಕಾಲಕ್ಕೆ ಅನೇಕ ಜನ ಪಂಡಿತರು ಒಂದೆಡೆಗೆ ಕಲೆತು, ಜನತಾಂತ ದೃಷ್ಟಿಯನ್ನು ತಾಳಿ, ಇಲ್ಲಿ ಸಮಾವೇಶಗೊಂಡಿದ್ದಾರೆ.

ಈ ಸಮೇಳನಕ್ಕೆ ಮೂಲ ಚೈತನ್ಯ, ಮೂಲ ಸಂಕಲ್ಪವೆಂದರೆ ನಮ್ಮ ಪೂಜ್ಯ ಶ್ರೀ. ನಿ. ಪ್ರ. ಮಹಾಂತಸ್ವಾಮಿಗಳವರೇ ಆಗಿದ್ದಾರೆಂದು ಖಂಡಿತವಾಗಿಯೂ ಹೇಳಬಹುದು. ಕಾರಣ, ಕೇವಲ ಒಂದೂವರೆ ತಿಂಗಳ ಹಿಂದೆ, ಡಾ. ಎಮ್. ಎಸ್. ಸುಂಕಾಪುರ ಅವರು ನಮ್ಮ ಕರೆಯ ಮೇರೆಗೆ ಕಾಲೇಜಿನ ಉಪನ್ಯಾಸಕ್ಕೆ ಇಲ್ಲಿಗೆ ಬಂದಾಗ, ಶ್ರೀಗಳವರ ಸಮ್ಮುಖದಲ್ಲಿ ಈ ಸಮ್ಮೇಳನದ ಸೂಚನೆಗಳನ್ನು ಮುಂದುವರಿಸಿದರು. ಆಕ್ಷಣವೇ ಪೂಜ್ಯ ಶ್ರೀಗಳವರು ಒಪ್ಪಿ, ಮಾತ್ರವಲ್ಲದೇ ಸಮ್ಮೇಳನಕ್ಕೆ ಬರುವ ಕಲಾವಿದರೂ ಪಂಡಿತರೂ ಮುಂತಾದ ಎಲ್ಲರಿಗೂ ಪ್ರಸಾದದ ವ್ಯವಸ್ಥೆ ಮಾಡುವದಾಗಿ ಸಂಪೂರ್ಣ ಭರವಸೆ ನೀಡಿದರು. ಆಗ ನಮ್ಮ ಆಕಾಂಕ್ಷೆಗೆ ನೂರುನೂರು ರೆಕ್ಕೆಗಳು ಗರಿಬಲಿತು ಮೂಡಿದವು ಶ್ರೀಗಳವರ ಸಂಕಲ್ಪದ ಫಲವೇ ಇಂದಿನ ಈ ಮಹಾಸಭೆ.

ಪ್ರಾಚೀನ ಸಂಸ್ಕೃತಿಯ ಶುದ್ಧ ಸಾಹಸದ ಉದ್ಯಮವಾದ ಸೀರೆಯ ಕಾಯಕಕ್ಕೆ ಇಲಕಲ್ಲು ಪ್ರಖ್ಯಾತವಾಗಿದೆ. ಇಲ್ಲಿಯ ಜನಮನದಲ್ಲಿ ಕಲಾವಂತಿಕೆ ಹುಟ್ಟುಗುಣವಾಗಿ ಬೆಳೆದಿದೆ. ಹೀಗಾಗಿ ಸಾಹಿತ್ಯ-ಧರ್ಮ-ಕಲೆಗಳೊಂದಿಗೆ ಪುರಾತನಕಾಲದಿಂದ ನಿಕಟ ಸಂಬಂಧ ಹೊಂದಿರುವ ಈ ಊರು ನಿಜವಾಗಿಯೂ ಜಾನಪದ ಸಾಹಿತ್ಯದ ತೊಟ್ಟಿಲು. ಇಲ್ಲಿಯ ಕಲಾವಿದರ ನಾಡೀಪರೀಕ್ಷೆ ಎಂದರೆ ಕನ್ನಡ ಸಂಸ್ಕೃತಿಯ ನಾಡೀಪರೀಕ್ಷೆಯೆಂದು ಒಂದೇ ಮಾತಿನಲ್ಲಿ ಹೇಳಬಯಸುತ್ತೇವೆ.

ಆದ್ದರಿಂದ ನಮ್ಮ ಶ್ರೀ ವಿಜಯ ಮಹಾಂತೇಶ್ವರ ಮಹಾ ವಿದ್ಯಾಲಯದ ಆಶ್ರಯದಲ್ಲಿ ಆರಂಭವಾಗಲಿರುವ ಇಂದಿನ ಈ ಸಮ್ಮೇಳನಕ್ಕೆ ಹಾಗೂ ಸಮ್ಮೇಳನದ ಅತಿಥಿಗಳಿಗೆಲ್ಲ, ವಿದ್ಯಾರ್ಥಿಗಳ ಪರವಾಗಿ, ಇಲಕಲ್ಲ ನಗರದ ಪರವಾಗಿ ಹೃತ್ಪೂರ್ವಕವಾಗಿ ಸ್ವಾಗತಕೋರಿ, ಸಭೆಯು ಯಶಸ್ಸಿನಿಂದ ಸಾಗಲೆಂದು ಹಾರೈಸುತ್ತೇನೆ.

● ●

# ಉದ್ಘಾಟನ ಭಾಷಣ

ಕುಲಪತಿ ಶ್ರೀ ಎಸ್. ಎಸ್. ಒಡೆಯರ

ಪರಮಪೂಜ್ಯ ಶ್ರೀ. ನಿ. ಪ್ರ. ಮಹಾಂತಸ್ವಾಮಿಗಳವರೇ,
ಸಮ್ಮೇಳನಾಧ್ಯಕ್ಷರಾದ ಶ್ರೀ ಸಿಂಪಿ ಲಿಂಗಣ್ಣನವರೇ,
ಸ್ವಾಗತಾಧ್ಯಕ್ಷರಾದ ಶ್ರೀ ಕವಿಶೆಟ್ಟಿ ಅವರೇ ಮತ್ತು ಮಹಾಜನರೇ,

ಕರ್ನಾಟಕ ವಿಶ್ವವಿದ್ಯಾಲಯವು ಈಗ ೮–೯ ವರ್ಷಗಳಿಂದ ಜಾನಪದ ಅಧ್ಯಯನ ವನ್ನು ಸ್ನಾತಕೋತ್ತರ ತರಗತಿಗಳಲ್ಲಿ ಕೈಕೊಂಡು ನಡೆಸುತ್ತಿರುವದಲ್ಲದೆ ಇದುವರೆಗೆ ಐದು "ಅಖಿಲ ಕರ್ನಾಟಕ ಜಾನಪದ ಸಮ್ಮೇಳನ"ಗಳನ್ನು ಪ್ರತಿವರುಷದಂತೆ ಜರುಗಿಸಿ ಈಗ ಆರನೆಯ ಅಧಿವೇಶನವನ್ನು ಹಮ್ಮಿಕೊಂಡಿದೆ. ಹೋದ ವರುಷದ ಸಮ್ಮೇಳನ ವನ್ನು ಕಲಬುರ್ಗಿಯ ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಕೇಂದ್ರದ ಆಶ್ರಯದಲ್ಲಿ ನಡೆಸಿದ್ದರೆ ಈ ಸಲ ಇಲಕಲ್ಲದ ಈ ಶ್ರೀವಿಜಯ ಮಹಾಂತೇಶ ಮಹಾ ವಿದ್ಯಾಲಯದ ನೆರವಿನಿಂದ ನೆರವೇರಿಸಲಾಗುತ್ತಿದೆ. ಈ ರೀತಿ ವಿಶ್ವವಿದ್ಯಾಲಯವ ಕೇಂದ್ರವಾದ ಧಾರವಾಡದ ಹೊರಗಣ ಸ್ಥಳವನ್ನು ಆಯ್ದುಕೊಳ್ಳುವದಕ್ಕೆ ನಮ್ಮ ಚಟು ವಟಿಕೆಗಳು ಸೀಮಿತ ಕೇಂದ್ರಗಳಿಗೆ ನಿರ್ಬಂಧಿತವಾಗದೆ ಅಖಿಲ ಕರ್ನಾಟಕದ ಜನಪದದ ವ್ಯಾಪ್ತಿಯತ್ತ ವಿಸ್ತೃತವಾಗಬೇಕೆಂಬ ಹಂಬಲವೇ ಕಾರಣ.

ಈ ಜಾನಪದ ಸಮ್ಮೇಳನಗಳನ್ನು ಪ್ರತಿವರುಷ ತಪ್ಪದೆ ನಡೆಸುವಲ್ಲಿ ನಮ್ಮ ಕನ್ನಡ ಅಧ್ಯಯನಪೀಠವು ಇಟ್ಟುಕೊಂಡಿರುವ ಹಿರಿಯ ಗುರಿಯೆಂದರೆ ನಮ್ಮ ಕಾರ್ಯ ಕ್ಷೇತ್ರವನ್ನು ತರತಿಗಳಲ್ಲಿಯ ಜಾನಪದದ ಬೋಧನೆಗೆ ಮಾತ್ರ ಮರ್ಯಾದಿತಗೊಳಿಸದೆ, ಸಂಶೋಧನೆ, ಸಮಾಲೋಚನೆ ಮತ್ತು ಜಾನಪದ ಕಲಾಪ್ರದರ್ಶನಗಳ ಮೂಲಕ

ಸುತ್ತೆಲ್ಲ ಜಾನಪದ ಪ್ರಜ್ಞೆಯನ್ನು ಜಾಗ್ರುತಗೊಳಿಸುವದಾಗಿದೆ. ನಮ್ಮ ಸಂಸ್ಕೃತಿಯ ಉಳಿವಿಗೂ, ಪರಂಪರಾಗತವಾದ ಸಾಂಸ್ಕೃತಿಕ ಸಂಪತ್ತಿನ ತಿಳಿವಿಗೂ ಇದು ಅತ್ಯಂತ ಅವಶ್ಯವೆಂಬುದು ನಮ್ಮ ಭಾವನೆ. ಈ ದೃಷ್ಟಿಯಿಂದ ಸಮ್ಮೇಳನಗಳ ಅಂಗವಾಗಿ ಜಾನಪದ ವಿದ್ವಾಂಸರಿಂದ ಪ್ರಮುಖ ವಿಚಾರಗಳ ಕುರಿತು ಪ್ರಬಂಧವಾಚನ, ಜಾನಪದ ಕಲಾವಿದರಿಂದ ಅವರ ಮೌಲಿಕ ಕಲೆಗಳ ಪ್ರದರ್ಶನಗಳನ್ನು ಏರ್ಪಡಿಸಿ ಸಿದ್ಧಾಂತ ಪ್ರಯೋಗ ಭಾಗಗಳೆರಡನ್ನು ಲಕ್ಷಿಸಿ ಸಾರ್ಥಕವಾಗಿದೆ. ಇನ್ನೊಂದು ಮಹತ್ವದ ವಿಷಯ ವೆಂದರೆ, ಪ್ರತಿ ಸಮ್ಮೇಳನಗಳಲ್ಲಿಯೂ ಅಧ್ಯಯನದ ಹೊಸ ಮುಖವೊಂದನ್ನು ಕಲ್ಪಿಸಿ ಕೊಂಡು ವಿಚಾರಗೋಷ್ಠಿಗಳನ್ನು ನಡೆಸಿ ಅದರ ಫಲವಾಗಿ ಆ ಕ್ಷೇತ್ರಕ್ಕೆ ಕಾಣಿಕೆಯನ್ನು ನೀಡುವದು. ಇದುವರೆಗಿನ ಪ್ರಯತ್ನ ಜಾನಪದ ಸಾಹಿತ್ಯ ವೈವಿಧ್ಯದ ಸಮಾ ಲೋಚನೆಗೆ ಮೀಸಲಾಗಿದ್ದರೆ ಈ ಸಲ ಜಾನಪದದ ಜಾನಾಂಗಿಕ ಅಧ್ಯಯನದ ಹೊಚ್ಚ ಹೊಸ ಆಯಾಮಕ್ಕೆ ಒಲಿದಿರುವದು ಅತ್ಯಂತ ಸ್ತುತ್ಯವೂ, ಸಮರ್ಪಕವೂ ಆದ ಮುನ್ನಡೆ ಎಂದು ಹೇಳಲು ನಾನು ಹರುಷ ಪಡುತ್ತೇನೆ.

ಆಧುನಿಕ ಜೀವನದ ಸ್ವರೂಪವಾದ ಕೈಗಾರಿಕಾ ಕ್ರಾಂತಿಯಿಂದಾಗಿ ಉದ್ಭವಿಸಿದ ಗಡಿಬಿಡಿಯ ಹಾಗೂ ಗೊಂದಲದ ಜೀವನ ಪ್ರಪಂಚದ ಜನಸಾಮಾನ್ಯನ ಜೀವನದ ನೆಮ್ಮದಿ, ಶಾಂತಿಗಳನ್ನು ಬಹುವಾಗಿ ಕಲಕಿತು. ಇದರಿಂದಾಗಿ ನೆಮ್ಮದಿಯನ್ನು ಉಳಿಸಿ ಕೊಳ್ಳಲೂ, ಮೂಲ ಸಂಸ್ಕೃತಿ-ಪರಂಪರೆಗಳನ್ನು ಯಾವ ರೂಪದಲ್ಲಾದರೂ ಸಂರಕ್ಷಿಸಿ ಕೊಳ್ಳಬೇಕೆಂಬ ಹಂಬಲದಿಂದಲೂ ಅನೇಕ ರಾಷ್ಟ್ರಗಳು ಜಾನಪದದತ್ತ ತಮ್ಮ ದೃಷ್ಟಿ ಯನ್ನು ಹರಿಸಿದವು. ಪ್ರಪಂಚದ ಅತ್ಯಂತ ಪ್ರಗತಿಪರ ದೇಶಗಳಾದ ರಷ್ಯಾ, ಅಮೇರಿಕ ದಂತಹ ರಾಷ್ಟ್ರಗಳು ಈ ದಿಕ್ಕಿನಲ್ಲಿ ಅಪೂರ್ವ ಮತ್ತು ಅದ್ವಿತೀಯ ಕಾರ್ಯಗಳನ್ನು ಮಾಡಿವೆ. ಭಾರತದಲ್ಲಿಯೂ ಜಾನಪದದ ಕುರಿತು ಅಷ್ಟಿಷ್ಟು ಕೆಲಸ, ಅಲ್ಲಲ್ಲಿ ನಡೆ ದರೂ ಅದಕ್ಕೊಂದು ತೀವ್ರಗತಿಯುಂಟಾಗಿ ಜಾನಪದದ ಬಹುಮುಖವನ್ನು ಗುರುತಿಸಿ ಶಾಸ್ತ್ರೀಯವಾದ ಕಾರ್ಯ ಪ್ರಾರಂಭವಾಗಿದ್ದು ತೀರ ಇತ್ತೀಚೆಗೆ. ಈ ಮಾತು ಕರ್ನಾಟಕಕ್ಕೂ ಅನ್ವಯಿಸುತ್ತದೆ.

'ಜಾನಪದ', ಜೀವನದಷ್ಟೇ ವಿಶಾಲವಾಗಿದೆ. ಅದಕ್ಕೆ ಅನಂತ ಮುಖಗಳು. ಅದರ ವೈವಿಧ್ಯ, ವ್ಯಾಪಕತೆ ಒಂದು ಹಿಡಿತಕ್ಕೆ ಸಿಕ್ಕುವದಿಲ್ಲ. ದಿನದ ಉಡಿಗೆ-ತೊಡಿಗೆ, ಊಟ ಉಪಚಾರಗಳಿಂದ ಹಿಡಿದು ನಡೆಸುವ ಹೋರೆ ಅನುಸರಿಸುವ ವೃತ್ತಿ, ಕಸಬು, ನಲಿಯುವ ರೀತಿ ನೀತಿ, ನೆಚ್ಚಿ ಬದುಕುವ ನಂಬಿಕೆಗಳು, ದೈವಭಕ್ತಿ ಮತ್ತು ಅವುಗಳಿಗನು ಗುಣವಾಗಿ ರೂಢಿಸಿಕೊಂಡ ಬಗೆಬಗೆಯ ಸಂಪ್ರದಾಯಗಳು-ಕಟ್ಟಿದ ಹಾಡುಗಳು, ಹೇಳುವ ಕಥೆಗಳು, ಉದಾಹರಿಸುವ ಗಾದೆಗಳು, ಪರೀಕ್ಷಿಸುವ ಒಗಟುಗಳು-ಹರುಷ, ದೈವಶ್ರದ್ಧೆಗಳನ್ನು ಉಕ್ಕಿತೋರಿಸುವ ಕುಣಿತದ ಬಗೆಗಳು ಮನರಂಜನೆ ಮನೋವಿಕಾಸ

ಕ್ಕಾಗಿ, ದಿನಜೀವನದ ಬಳಕೆಯ ವಸ್ತುಗಳಲ್ಲಿ ಕೂಡ ಒಡಮೂಡುವ ಅವರ ಕಲಾ ಪ್ರಕಾರಗಳು- ಹೀಗೆ ಅದರದು ವಿಶ್ವವಿರಾಡ್ರೂಪ.

'ಜಾನಪದ' ಒಂದು ವಟವೃಕ್ಷ. ಜನಪದ ಸಾಹಿತ್ಯ, ಕಲೆಗಳೆಲ್ಲ ಅದರ ಶಾಖೋಪ ಶಾಖೆಗಳು. ಜಾನಪದದ ಕಲ್ಪನೆ ಇತ್ತೀಚಿನವರೆಗೂ ನಮ್ಮವರಲ್ಲಿ ಯಾರಲ್ಲಿಯೂ ಸರಿ ಯಾಗಿ ಮೂಡದೆ ಇದ್ದುದರಿಂದ ಬರಿಯ ಹಾಡುಗಳ ಸಂಗ್ರಹಮಾತ್ರ ನಮ್ಮಲ್ಲಿ ನಡೆ ಯುತ್ತಿತ್ತು. ೧೯೬೫ರಿಂದೀಚೆಗೆ ಒಂದು ಹೊಸರೀತಿಯ ಜಾನಪದ ಚಳವಳಿ ಪ್ರಾರಂಭ ವಾಗಿ ಅದೀಗ ಹೆಚ್ಚುಹೆಚ್ಚು ಪ್ರಾಂತಗಳನ್ನು ಆಕ್ರಮಿಸತೊಡಗಿರುವದು ಸಮಗ್ರ ಜ್ಞಾನ ಪೋಷಕವೂ, ಶುಭದಾಯಕವೂ ಆಗಿದೆ.

ಯಾವದೇ ನಾಡಿನ ಕಲೆಗಳ ಅಭ್ಯಾಸದಲ್ಲಿ ಕೆಲವಕ್ಕೆ ಶುದ್ಧ ಧಾರ್ಮಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಗಳಿದ್ದರೆ ಇನ್ನು ಕೆಲವಕ್ಕೆ ವೃತ್ತಿಜೀವನದ ಪ್ರೇರಣೆಯಿರುವದು ಕಂಡುಬರುತ್ತದೆ, ಕನ್ನಡ ನಾಡಿನ ಉದ್ದಗಲಕ್ಕೂ ಕೂಡ ಈ ರೀತಿ ವೃತ್ತಿಗಾಯನ, ವೇಷಗಾರಿಕೆ ನಟನೆ, ಶಕ್ತಿಪ್ರದರ್ಶನ, ಚಾತುರ್ಯ ಕೌಶಲ್ಯದ ನೋಟಗಳನ್ನೊದಗಿಸಿ ಜನ ರಿಗೆ ಮನರಂಜನೆಯನ್ನುಂಟುಮಾಡಿ ಅದಕ್ಕೆ ಪ್ರತಿಫಲವಾಗಿ ದವಸುಧಾನ್ಯ, ಉಡಿಗೆ- ತೊಡಿಗೆ, ಕಾಸು-ಪಾಸುಗಳನ್ನು ಪಡೆದು ಬದುಕುವ ಜನ ಇದ್ದಾರೆ. ಇಂದಿನ ನಗರ ಸಂಸ್ಕೃತಿಯ ಧಾಳಿಯಿಂದ ಅವರು ತತ್ತರಿಸಿ ಹೋಗಿದ್ದರೂ ಗ್ರಾಮೀಣ ಭಾಗಗಳಲ್ಲಿ ಇಂದಿಗೂ ಜೀವನ ನಡೆಸಿಕೊಂಡು ಹೋಗುತ್ತಿದ್ದಾರೆ. ಅಳಿಯುತ್ತಿರುವ ಈ ಜನ, ಜನಾಂಗಗಳ ತಿಳುವಳಿಕೆ ಅಳಿಯುವ ಮೊದಲೇ ಅರಿತು ಪರಿಶೀಲಿಸುವದು ಸಾಂಸ್ಕೃತಿಕ ತುರ್ತು ಆಗತ್ಯಗಳಲ್ಲಿ ಒಂದು. ಅಂತೆಯೇ ನಮ್ಮ ಕನ್ನಡ ಅಧ್ಯಯನ ಪೀಠವು ಈ ಸಲ "ಉತ್ತರ ಕರ್ನಾಟಕದ ಜಾನಪದ ವೃತ್ತಿಕಾರರು" ಎಂಬ ವಿಷಯವನ್ನು ಸಮಾಲೋಚ ನೆಗೆ ಎತ್ತಿಕೊಂಡಿರುವದು ಸಕಾಲಿಕವೂ, ಸೂಕ್ತವೂ ಆಗಿದೆ. ಅಲ್ಲದೆ ನನ್ನ ತಿಳುವಳಿಕೆಯ ಪ್ರಕಾರ ಜಾನಪದ ವಿಷಯಕ ಅಧ್ಯಯನದಲ್ಲಿ ಒಂದು ಸಾಮೂಹಿಕ ಜನಾಂಗಿಕದ ನಿಟ್ಟನ್ನು ಹಿಡಿದಿರುವದು, ಇದೇ ಪ್ರಥಮ ಸಲವಾಗಿದೆ. ಇದೇ ಫಲ-ಪರಿಣಾಮಗಳು ನಿಜವಾಗಿಯೂ ಪ್ರಯೋಜಕವೂ ಮೌಲಿಕವೂ ಆಗುವ ವಿಷಯದಲ್ಲಿ ನನಗೆ ಸಂದೇಹವಿಲ್ಲ.

ಈ ಸಮ್ಮೇಳನದ ಮೂರು ಗೋಷ್ಠಿಗಳಲ್ಲಿ ಕೂಡಿ ಮುಖ್ಯ ವಿಷಯವಾಗಿ ಗಮನಿಸುತ್ತಿರುವ ೨೦-೨೧ ವೃತ್ತಿಪರ ಜನಾಂಗಗಳು ಉತ್ತರ ಕರ್ನಾಟಕದವು. ಜನಪದ ಹಾಡುಗಳ ವೈವಿಧ್ಯದಲ್ಲಿ ಹೇಗೋ ಹಾಗೆ ಜನಪದ ಕಸುಬು, ಕಲೆಗಳ ವರ್ಣಮಯತೆ ಯಲ್ಲಿಯೂ ಸಂಪನ್ನವಾಗಿರುವದನ್ನು ಸ್ಪಷ್ಟಪಡಿಸುತ್ತದೆ. ಈ ಜನರ ಮುಖ್ಯಗುರಿ ಮನರಂಜನೆಯಾದ್ದರಿಂದ ಜನರ ಮನಸ್ಸು ಕಲೆ-ಕೌಶಲ್ಯ-ವಿಸ್ಮಯಗಳಿಗೆ ಒಲಿಯುವ ಪರಿಯನ್ನು ಚೆನ್ನಾಗಿ ಅರಿತು ತಮ್ಮ ಪ್ರದರ್ಶನಗಳನ್ನು ರೂಪಿಸಿಕೊಳ್ಳುವವರು. ಜಾನ ಪದ ಮತ್ತು ಮನೋವಿಜ್ಞಾನದ ಅಭ್ಯಾಸಕ್ಕೆ ಇದೊಂದು ಒರೆಗಲ್ಲು. ಜನದ ಬೇಡಿಕೆ

ಯಾದ ನಂಬಿಕೆಯು ಆಚರಣೆ, ಪುರಾಣಕಥನ, ನೀತಿಬೋಧೆ, ಭವಿಷ್ಯದ ಕೇಳಿಕೆಗಳಲ್ಲಿಯ ಆಸಕ್ತಿ, ದೈಹಿಕವಾಗಿಯೂ ಮಾನಸಿಕವಾಗಿಯೂ ಬೆರಗುಪಡಿಸುವ ಸಾಧನೆಗಳ ನೋಟ–ಎಲ್ಲವೂ ಇಲ್ಲಿ ಪಾತ್ರವಹಿಸುವದನ್ನು ಕಾಣಬಹುದು. ಹಾಗೆಯೇ ಈ ವೃತ್ತಿಯನ್ನನುಸರಿಸುವವರಲ್ಲಿ ಕೆಲವರು ಮೂಲತಃ ಕರ್ನಾಟಕದವರಾದರೆ ಇನ್ನು ಕೆಲವರು ನೆರೆಯ ಪ್ರಾಂತಗಳಾದ ಮಹಾರಾಷ್ಟ್ರ, ಆಂಧ್ರಗಳಿಂದ ಬಂದು ನೆಲಸಿದವರು ಎಂದು ಹೇಳಲಾಗುತ್ತದೆ. ಈ ವೃತ್ತಿಕಲೆಗಳಲ್ಲಿ ಕೆಲವು ಉತ್ತರ ಕರ್ನಾಟಕದಿಂದ ದಕ್ಷಿಣ ಕರ್ನಾಟಕದೆಡೆಗೂ ಸಾಗಿ ಹೊಸಬಗೆಯಾಗಿ ಬೆಳೆದ ನಿದರ್ಶನಗಳೂ ಇವೆ. ಈ ಎಲ್ಲ ಮುಖಗಳ ಸಮಗ್ರ ಅಧ್ಯಯನ, ಮೌಲ್ಯಮಾಪನವನ್ನು ಈ ಸಮ್ಮೇಳನದಲ್ಲಿ ಭಾಗವಹಿಸುವ ವಿದ್ವಾಂಸರು ಮಾಡಿಕೊಡುವರೆಂದು ನಾನು ನಂಬಿದ್ದೇನೆ. ಇದರಿಂದ ಜಾನಪದ ಅಧ್ಯಯನದ ವೈಜ್ಞಾನಿಕ ಮುಖ ಕಳೆಗಟ್ಟಲೆಂದೂ ಹಾರೈಸುತ್ತೇನೆ.

ಈ ಸಮ್ಮೇಳನದ ಅಧ್ಯಕ್ಷರಾಗಿ ದಯಮಾಡಿಸಿರುವ ಶ್ರೀ ಸಿಂಪಿ ಲಿಂಗಣ್ಣನವರು ಉತ್ತರ ಕರ್ನಾಟಕದ ಜಾನಪದದ ಸಮರ್ಥ ಮತ್ತು ಅರ್ಹ ಪ್ರತಿನಿಧಿಗಳು. ಕರ್ನಾಟಕದಲ್ಲಿ ಜಾನಪದ ಸಾಹಿತ್ಯ, ಸಂಗ್ರಹ ಕ್ಷೇತ್ರದಲ್ಲಿ ಮೊದಲ ಕೃತಿಯಾಗಿ ಬಂದ 'ಗರತಿಯ ಹಾಡು' ಹಲಸಂಗಿಯಿಂದ ಹೊರಹೊಮ್ಮಿಬಂತು. ಶ್ರೀ ಸಿಂಪಿ ಲಿಂಗಣ್ಣನವರು ಆ ನೆಲದಿಂದ ಒಡಮೂಡಿದವರು, ಅದರ ಸತ್ವವನ್ನು ಮೈಗೂಡಿಸಿಕೊಂಡು ಕನ್ನಡ ನಾಡಿನ ಉದ್ಧಗಲಕ್ಕೂ ಅದರ ಪ್ರಚಾರಕ್ಕಾಗಿ ದುಡಿದವರು. ಉತ್ತರ ಕರ್ನಾಟಕದ ಲಾವಣಿ, ಬಯಲಾಟಗಳ ಸೊಗಸನ್ನು–ಈ ಪ್ರದೇಶದ ಜನಪದ ಕತೆಗಳ ಸ್ವಾರಸ್ಯವನ್ನು ಬಿತ್ತರಿಸಿದವರು. ಈ ನೆಲದ ಹುಡಿಯಲ್ಲಿ ಹೊರಳುವದನ್ನೇ ಈ ಜನದ ಬದುಕಿನ ಹಾಡುಗಳನ್ನು ಹಾಡಿ ವಿವರಿಸುವದನ್ನೇ ತಮ್ಮ ಭಾಗ್ಯವೆಂದು ತಿಳಿದು ಜಾನಪದಕ್ಕೆ ತಮ್ಮ ಜೀವನ ಸೇವೆ ಮೀಸಲು ಎಂದು ಭಾವಿಸಿ, ಸಾಧಿಸಿ ನಡೆದ ಈ ಹಿರಿಯರು ಈ ಸಮ್ಮೇಳನಕ್ಕೆ ಅಧ್ಯಕ್ಷರಾಗಲು ಒಪ್ಪಿ ಬಂದುದು ನಮ್ಮ ಭಾಗ್ಯವಿಶೇಷ.

ಜಾನಪದ ದರ್ಶನಕ್ಕೆ ಹೊಸ ಅಡಿಪಾಯವನ್ನು ಹಾಕಲು ಹಮ್ಮಿಕೊಂಡಿರುವ ಈ ಸಮ್ಮೇಳನದ ಸಂಘಟನೆಗೆ ನೆರವಾದ ಎಲ್ಲರನ್ನು ಅಭಿವಂದಿಸಿ, ಅತ್ಯಂತ ಹರುಷದಿಂದ ಇದನ್ನು ಉದ್ಘಾಟಿಸುತ್ತೇನೆ.

● ●

# ಆಶೀರ್ವಚನ

ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು, ಇಲಕಲ್ಲ

ಮಹಾತಪಸ್ವಿ ಶ್ರೀ ವಿಜಯ ಮಹಾಂತೇಶ್ವರನ ಈ ಪುಣ್ಯಭೂಮಿಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪರವಾಗಿ ಕೈಕೊಂಡ "ಆರನೆಯ ಜಾನಪದ ಸಮ್ಮೇಳನ"ದ ಅಧ್ಯಕ್ಷರಾದ ಶ್ರೀ ಸಿಂಪಿ ಲಿಂಗಣ್ಣನವರೆ, ನಮ್ಮ ವಿಶ್ವವಿದ್ಯಾಲಯದ ಸನ್ಮಾನ್ಯ ಕುಲಪತಿಗಳಾದ ಶ್ರೀ ಸದಾಶಿವ ಶಿವದೇವ ಒಡೆಯರ ಅವರೇ, ಕನ್ನಡ ಅಧ್ಯಯನ ಪೀಠದ ಮುಖ್ಯಸ್ಥರಾದ ಡಾ. ಎಂ. ಎಸ್. ಸುಂಕಾಪುರ ಅವರೇ, ಸ್ವಾಗತಾಧ್ಯಕ್ಷರಾದ ಶಾಸಕ ಶ್ರೀ ಎಸ್. ಎಸ್. ಕವಿಶೆಟ್ಟಿಯವರೇ, ಸಮ್ಮೇಳನಕ್ಕೆ ಆಗಮಿಸಿದ ವಿವಿಧ ವಿಶ್ವ-ವಿದ್ಯಾಲಯ ಹಾಗೂ ವಿದ್ಯಾಸಂಸ್ಥೆಗಳ ವಿದ್ವಾಂಸರೇ, ಜಾನಪದ ಕಲಾವಿದರೇ, ಮಾನ್ಯರೇ ಹಾಗೂ ಮಾತೆಯರೇ,

ಕನ್ನಡದ ನೆಲೆಯಲ್ಲಿ ಕನ್ನಡದ ನುಡಿದೇವಿಗೆ, ಕಲಾಸರಸ್ವತಿಗೆ ವಿದ್ವಜ್ಜನರ ಪ್ರೇರಣೆ ಪುರಸ್ಕಾರಗಳು ದೊರಕುತ್ತಿರುವದಕ್ಕೆ ಈ ಸಮ್ಮೇಳನ ಪ್ರತ್ಯಕ್ಷ ಸಾಕ್ಷಿ.

ಶಿವಶಿವ ಎಂದಾರ ಸಿಡಿಲೆಲ್ಲ ಬಯಲಾಗಿ<br>
ಕಲ್ಲು ಬಂದೆರಗಿ ಕಡೆಗಾಗಿ । ಎಲೆ ಮನವೆ<br>
ಶಿವನೆಂಬ ಸಬುದ ಬಿಡಬ್ಯಾಡ ॥

ಎಂದು ಹಾಡಿದ ಜಾನಪದದ ನಾಡಿಗನ ಭಕ್ತಿ–ನಿಷ್ಠೆ ಎಷ್ಟೊಂದು ಪ್ರಗಾಢವಾಗಿರಲಿಕ್ಕಿಲ್ಲ? ನಮ್ಮ ಸಮಗ್ರ ಗ್ರಂಥಸ್ಥ ಸಾಹಿತ್ಯಕ್ಕೆ ಜಾನಪದವೇ ಮೂಲ ತಾಯಿಬೇರು ಎಂಬ ಅಭಿಪ್ರಾಯವಿದೆ. ಶುದ್ಧ ಕನ್ನಡತನ. ಕನ್ನಡತನದ ಶುದ್ಧರಕ್ತ, ತಿರುಳ್ಗನ್ನಡದ ಭಾವದ ಬೆಡಗು ಕಾಣಬೇಕಾದರೆ ಜಾನಪದ ಕಲಾರಂಗವೇ ನೆಲೆಯೂರು. ಆಧುನಿಕ ನವರಸವಾರಿಧಿಯಿಂದ ತುಂಬಿತುಳುಕುತ್ತಿರುವ ಸಾಹಿತ್ಯಕ್ಕೆ ಮೊದಲ ಚೊಚ್ಚಿಲ ಕೂಸೆಂದರೆ ಜನಪದ

ಸಾಹಿತ್ಯವೇ ಆಗಿದೆ. ನಮ್ಮ ಹಿರಿಯರು ಕಲೆಗೆ ಕಾಯಕದ ಕಂಕಣ ಕಟ್ಟಿದರು; ಕಾಯಕಕ್ಕೆ ಕಲೆಯ ಬಾಸಿಂಗ ತೊಡಿಸಿದರು. ಈ ಕಲೆ-ಕಾಯಕಗಳ ಸಂಗಮದ ಫಲವೇ ಜಾನಪದ ವೃತ್ತಿ ಕಲೆಗಾರಿಕೆ. ನಮ್ಮದು ಕಲೆಗಾಗಿ ಕಲೆಯಲ್ಲ; ಕಾಯಕಕ್ಕಾಗಿ ಕಲೆ. ಅದೇ ರೀತಿ ಕಾಯಕವು ಶುಷ್ಕವೂ ಶಾಸ್ತ್ರಬದ್ಧವೂ ಅಲ್ಲ; ಅದು ಕಲಾಮಧುರ, ರಸ ಸುಂದರ. ಹೀಗೆ ನಮ್ಮ ಹಳ್ಳಿಯ ದುಡಿಮೆಗಾರ ತನ್ನ ಬಾಳಿಗೆ ಅರ್ಥ ತುಂಬಿದನು. ಹೋರಾಟಕ್ಕೆ ಹದ ಬೆರೆಸಿದನು. ಹೀಗಾಗಿ ನಮ್ಮ ಜನಾಂಗದ ಅಸಂಖ್ಯ ಕಾಯಕಗಳ ಮೂಲ ತಾಯಿಬೇರಾದ ಕೃಷಿಕಾಯಕವು: ತನ್ನ ಟೊಂಗೆ ಟಿಸಿಲುಗಳಲ್ಲಿ ಕಲೆ-ಸಾಹಿತ್ಯ-ಸಂಸ್ಕೃತಿಗಳ ಹಂದರವನ್ನು ಹರಡಿ ಸಾಲಂಕೃತವಾಯಿತು. ಈ ಕಲೆ ಹಾಗೂ ಕಾಯಕಗಳ ಹೆಗ್ಗುರಿಯೇ ಕೈವಲ್ಯ, ಆದ್ದರಿಂದ ಕಲೆ-ಕಾಯಕ-ಕೈವಲ್ಯಗಳ ಸಂಗಮವೇ ಕರ್ನಾಟಕ ಸಂಸ್ಕೃತಿಯೆಂದೂ, ವಿಶಾಲಾರ್ಥದಲ್ಲಿ ಭಾರತೀಯ ಸಂಸ್ಕೃತಿಯೆಂದೂ ಧೈರ್ಯವಾಗಿ ಹೇಳಬಹುದು. ಆದ್ದರಿಂದ ಶರಣರ ದಾಸರ-ಸಂತರ ಬಾಳು: ಭಗವಂತನು ಆಲಿಸಿ ಕೇಳಬಹುದಾದ ಜೋಗುಳವಾಯಿತು.

ಮೊದಲು ಜಾನಪದ ಕಲೆಗಳ ಬೆಳವಣಿಗೆಯಲ್ಲಿ: ವೃತ್ತಿಯೇ ಕಲೆಯಾಯಿತು ಅದರ ಎರಡನೆಯ ಘಟ್ಟದಲ್ಲಿ ಕಲೆಯೇ ವೃತ್ತಿಯಾಯಿತು. ವೃತ್ತಿಯೇ ಕಲೆಯಾದದ್ದನ್ನು ಕೃಷಿಕಾಯಕ-ಬಡಿಗಕಾಯಕ-ಮನೆ ಹಾಗೂ ದೇವಾಲಯಗಳನ್ನು ಕಟ್ಟುವ ಶಿಲ್ಪಕಾಯಕ-ನೇಯ್ಗೆಯ ಕಾಯಕ ಮುಂತಾದವುಗಳಲ್ಲಿ ಸ್ಪಷ್ಟವಾಗಿ ಗಮನಿಸಬಹುದು. ನಂತರದ ಎರಡನೆಯ ಘಟ್ಟದಲ್ಲಿ ಕಲೆಯೇ ವೃತ್ತಿಯಾದದ್ದನ್ನು ಗೊಂದಲಿಗರು, ಕರಪಲ್ಲದವರು, ಲಾವಣಿಕಾರರು, ಕಿಳ್ಳೀಕೇತರು, ವೇಷಗಾರರು, ಡೊಂಬರು, ಹಾವಾಡಿಗರು, ಬಯಲಾಟ. ಯಕ್ಷಗಾನ, ಗೊಂಬೆಯಾಟ ಮೊದಲಾದವುಗಳಲ್ಲಿ ಗಮನಿಸಬಹುದು. ಹೀಗೆ ನಮ್ಮ ಸಂಸ್ಕೃತಿಯ ಬೆಳವಣಿಗೆಯೊಂದಿಗೆ ಕಲೆ ಹಾಗೂ ವೃತ್ತಿಗಳೆರಡೂ ಪರಸ್ಪರ ಪೂರಕ ಪೋಷಕವಾಗಿ ಬೆಳೆದುಬಂದವು.

ನಮ್ಮ ಜಾನಪದ ಕಲಾವಿದನ ಜೀವನವೆಂದರೆ ತನ್ನದೆ ಆದ, ಅಲಿಖಿತವಾದ ಸ್ವಯಂಭೂ ಮಹಾಕಾವ್ಯ. ಆತನ ಸಾಹಿತ್ಯ ಹೆಸರಾಂತವಾದರೂ ಹೆಸರಿಗೆ ನೇತು ಬಿದ್ದ ಸಾಹಿತ್ಯವಲ್ಲ. ಆತ ಗುಪ್ತಕವಿ. ಅನಾಮಧೇಯ. ಅಂತೆಯೇ ತ್ಯಾಗಿ. ಭಗವಂತನಿಗೆ ತೀರ ಸಮೀಪದಲ್ಲಿ ನಿಲ್ಲಬಲ್ಲವ.

ಬೆಳೆದು ಬಂದ ನಮ್ಮ ಜನಪದ ಸಾಹಿತ್ಯವನ್ನು ಗಮನಿಸಿದರೆ ಅದು ಮೊತ್ತದಲ್ಲಿಯೂ ಸತ್ವದಲ್ಲಿಯೂ ಅಸ್ಯಾದೃಶ. ಜೀವನದೊಂದಿಗೆ ಸಾಹಿತ್ಯ ಬಾಳಿದೆ. ಸಾಹಿತ್ಯದೊಂದಿಗೆ ಜೀವನ ಅರಳಿದೆ. ಆದ್ದರಿಂದ: ನಮ್ಮ ಬಡತನ-ಸಿರಿತನ, ಗುರುಭಕ್ತಿ-ಪರಭಕ್ತಿ. ದಾಂಪತ್ಯದ ಸರಸ-ವಿರಸಗಳು, ತಾಯ್ತನ-ಬಂಜೆತನಗಳು. ಬಂಧ-ಮೋಕ್ಷಗಳು: ಒಂದೇ ಎರಡೇ ಹಲವಂದದಿಂದ ಹಿಗ್ಗಿ ಹೆಮ್ಮರವಾಗಿ ಬೆಳೆದಿವೆ ನಮ್ಮ ಹಳ್ಳಿಯ

ಸಾಹಿತ್ಯ. ನಮ್ಮ ಗ್ರಂಥಸ್ಥ ಸಾಹಿತ್ಯದಲ್ಲಿ ಹೆಣ್ಣಿಗೆ ಸ್ವಾತಂತ್ರ್ಯವಿಲ್ಲವಾದರೂ; ಆ 'ಹೆಣ್ಣು' ಜಾನಪದ ಸಾಹಿತ್ಯದ ಸಾಮ್ರಾಜ್ಞಿಯೇ ಆಗಿದ್ದಾಳೆ. ಅಷ್ಟೇಏಕೆ, ಹೆಣ್ಣಿ ನೊಂದಿಗೇ ಈ ಜೀವನ ಸಾಹಿತ್ಯ ಅವಳ ಬಹುಮುಖ ಪ್ರತಿಭೆಯನ್ನು ಅರಳಿಸಿತು. ಅವಳು ತಾಯಿಯಾಗಿ, ತಂಗಿಯಾಗಿ, ದೇವಿಯಾಗಿ, ಕೈಹಿಡಿದ ಧರ್ಮಪತ್ನಿಯಾಗಿ, ಸದಾ ಮುತ್ತೈದೆಯಾಗಿ, ಶರಣೆಯಾಗಿ ನಮ್ಮ ತ್ರಿಪದಿ–ಸಾಂಗತ್ಯ–ಹಾಡುಗಬ್ಬಗಳಲ್ಲಿ ತುಂಬಿದ್ದಾಳೆ. ನಮ್ಮ ಗ್ರಂಥಸ್ಥ ಸಾಹಿತ್ಯಕ್ಕೆ ಉಂಟಾದ ನಾನಾಶಾಸ್ತ್ರ ದಿಗ್ಬಂಧನ ಜಾನ ಪದ ವಾಙ್ಮಯಕ್ಕೆ ಬಾರದ್ದರಿಂದ ಅದು ಸರ್ವಸ್ವತಂತ್ರ ಹಾಗೂ ಸ್ವಯಂಪರಿಪೂರ್ಣ. ಅದು ಕಾವ್ಯಸಾಹಿತ್ಯದ ಮಹಾಕಾವ್ಯವಲ್ಲ; ಜೀವನ ಸಾಂಗತ್ಯದ ಮಹಾಕಾವ್ಯ.

ಈ ನಮ್ಮ ಪಾಡುಗಬ್ಬದ ಸಿರಿಮೆ–ಗರಿಮೆ ಆಧುನಿಕ ಪಾಶ್ಚಾತ್ತೀಕರಣದ ಸುಂಟರ ಗಾಳಿಯಲ್ಲಿ ನಶಿಸಿಹೋಗಬಾರದೆಂದು, ಆ ಕಲಾವಿದರನ್ನೆಲ್ಲಾ ಒಂದೆಡೆ ಕಲೆಹಾಕಿ, ಪ್ರಯೋಗ ನಡೆಸಿರುವ ಕರ್ನಾಟಕ ವಿಶ್ವವಿದ್ಯಾಲಯ ನಿಜಕ್ಕೂ ಧನ್ಯ.

ನಮ್ಮ ನಾಡಿನ ಹಿರಿಯ ಜಾನಪದ ಕವಿಗಳಾದ ಶ್ರೀ ಸಿಂಪಿ ಲಿಂಗಣ್ಣನವರನ್ನು ಈ ಸಮ್ಮೇಳನಕ್ಕೆ ಸರ್ವಾಧ್ಯಕ್ಷರನ್ನಾಗಿ ಆಯ್ಕೆಮಾಡಿರುವದು ತುಂಬ ಸಮಯೋಚಿತ. ಈ ಕಾರ್ಯಕ್ರಮಕ್ಕೆ ಮೂಲಪ್ರೇರಣೆ, ಸತ್ವಪೂರ್ಣವಾದ ಸಂಯೋಜನೆ ಒದಗಿಸಿ ದವರು; ನಮ್ಮ ಕರ್ನಾಟಕ ವಿಶ್ವವಿದ್ಯಾಲಯದ ಬಹುಶ್ರುತ ಪಂಡಿತರೂ ಮಾನವತಾ ವಾದಿಗಳೂ ಆದ ಡಾ. ಎಮ್. ಎಸ್. ಸುಂಕಾಪುರ ಅವರು. ಅವರ ಬೆಂಬಲಿಗರಾಗಿ ಡಾ. ಎಮ್. ಎಮ್. ಕಲಬುರ್ಗಿಯವರು, ಜಾನಪದ ವಿಭಾಗದ ಪ್ರಾಧ್ಯಾಪಕರಾದ ಪ್ರೊ. ಸೋಮಶೇಖರ ಇಮ್ರಾಪೂರ ಅವರು, ಕರ್ನಾಟಕ ವಿಶ್ವವಿದ್ಯಾಲಯದ ಧಾರವಾಡ ಹಾಗೂ ಕಲಬುರ್ಗಿ ಕನ್ನಡ ಸ್ನಾತಕೋತ್ತರ ವಿಭಾಗದ ಎಲ್ಲ ಪಂಡಿತ ಪ್ರಾಚಾರ್ಯರು ಸಮರ್ಥವಾಗಿ ಹಾಗೂ ಸುಸಂಘಟಿತವಾಗಿ ಕಾರ್ಯ ನಿರ್ವಹಿಸಿದ್ದನ್ನು ಪ್ರತ್ಯಕ್ಷ ಕಂಡಿದ್ದೇವೆ. ವಿಜಾಪುರ, ರಾಯಚೂರ, ಧಾರವಾಡ, ಬಳ್ಳಾರಿ, ಬೆಳಗಾವಿ ಉತ್ತರಕನ್ನಡ ಜಿಲ್ಲೆಗಳ ಸುಮಾರು ಮೂರುನೂರು ಕಲಾವಿದರು ವಿವಿಧ ಜಾನಪದ ವೃತ್ತಿ ಕಲಾ ಕ್ಷೇತ್ರಗಳಲ್ಲಿ ಇಲ್ಲಿ ಪ್ರತಿನಿಧಿಸುತ್ತಿರುವದು ತುಂಬ ಪ್ರಶಂಸನೀಯ. ಕರ್ತೃ ಶ್ರೀ ವಿಜಯಮಹಾಂತ ಶಿವಯೋಗಿಯು ಈ ಸಮ್ಮೇಳನಕ್ಕೆ ಸರ್ವತೋಮುಖ ಯಶಸ್ಸನ್ನು ನೀಡಲೆಂದು ಹಾರೈಸುತ್ತೇವೆ. ಸಮ್ಮೇಳನಕ್ಕೆ ಗೆಲುವಾಗಲಿ. ಜಾನಪದ ಸಾಹಿತ್ಯಕ್ಕೆ ಜಯವಾಗಲಿ.

ಭದ್ರಂ ಶುಭಂ ಮಂಗಳಂ

# ಅಧ್ಯಕ್ಷರ ಭಾಷಣ

**ಶ್ರೀ ಸಿಂಪಿ ಲಿಂಗಣ್ಣನವರು**

"ಮಾತುಕತೆ ಯಾವಾಗ ? ಕೈಕೈ ಹಿಡಿದಾಗ.
ಅಳೊದು ಕರೆಯೊದು ಯಾವಾಗ ? ಅರ್ಥ ಒಳಸೇರಿದಾಗ
ನಗೂದು ಕೆಲಿಯೂದು ಯಾವಾಗ ? ಪೂರಾ ಒಳಸೇರಿದಾಗ."

ಎಂಬ ಒಗಟು ಕೇಳಿ, ರಸಿಕರು ನಗಬಹುದಾಗಿದೆ. ಆದರೆ ಅದರರ್ಥ ಸಾಮಾನ್ಯವಾಗಿದೆ. ಬಳೆಗಾರ್ತಿ ಹೆಣ್ಮಗಳಿಗೆ ಬಳೆತೊಡಿಸುವ ಪ್ರಸಂಗದ ಕ್ರಮವನ್ನು ಹೇಳಿಕೊಡುತ್ತಲಿದೆ. ಈ ಒಗಟು. ಎಂದು ತಿಳಿದಾಗ ಆಚ್ಚರಿಯೆನಿಸಿ ಮತ್ತೊಮ್ಮೆ ನಗುತ್ತಾರೆ. ಈ ಒಗಟಿನಂತೆ ನಮ್ಮ ಜನಪದ ಸಾಹಿತ್ಯದ ಅಧ್ಯಯನಕ್ಕೂ ಮೂರು ಅವಸ್ಥೆಗಳಿರುತ್ತವೆಂದು ಸ್ಥೂಲವಾಗಿ ಹೇಳುವುದು. ಮಾತುಕತೆ. ಅಳೊದು ಕರೆಯೊದು, ನಗೊದು ಕೆಲಿಯೊದು ಇವೇ ಆ ಮೂರು ಅವಸ್ಥೆಗಳು.

## ಪ್ರಥಮಾವಸ್ಥೆಯ ಮಾತುಕತೆ

ಸುಮಾರು ಐವ್ವತ್ತು ವರ್ಷಗಳ ಹಿಂದೆ ನಮ್ಮಲ್ಲಿ ಜನಪದಸಾಹಿತ್ಯವನ್ನು ಕುರಿತು ಮಾತುಕತೆಗಳು ಆರಂಭವಾದವೆನ್ನಬೇಕು. ಮಾತು ಕಥನವೆನಿಸಿದಂತೆ, ಕಥನವು ಕತೆಯಾಗಿ ಬಿಟ್ಟಿತು. ಜನಪದಸಾಹಿತ್ಯದ ಸ್ವಾರಸ್ಯವನ್ನು ಸವಿದು ಆನಂದಪಟ್ಟವರು, ರಸಿಕರು ತಲೆದೂಗುವಂತೆ ವಿವರಿಸಿ. ಅವರಲ್ಲಿಯೂ ಆನಂದದ ಬುಗ್ಗೆ ಪುಟಿದೇಳುವಂತೆ ಮಾಡಿದರು. ಜನಪದಸಾಹಿತ್ಯದಲ್ಲಿ ಪದವೀಧರರನ್ನೂ ಬೆರಗುಗೊಳಿಸುವ ಸತ್ವವಿದ್ದುದೇ ಇದಕ್ಕೆ ಕಾರಣ.

ಇಂದಿನ ಕನ್ನಡದ ಆಚಾರ್ಯಪುರುಷರಲ್ಲಿ ಒಬ್ಬರಾದ ಡಾ. ಮಾಸ್ತಿ ಅವರು ಒಂದು ಸಂದರ್ಭದಲ್ಲಿ ಹೇಳಿದ್ದು ಹೀಗೆ-"ನಾನು ಸಂಸ್ಕೃತ ಹಾಗೂ ಇಂಗ್ಲಿಷಕಾವ್ಯಗಳನ್ನು

ಸಾಕಷ್ಟು ಅಂದರೆ ಸಾಧ್ಯವಾದಷ್ಟು ಓದಿ ಆನಂದಪಟ್ಟಿದ್ದೇನೆ. ಆದರೆ ನಮ್ಮ ಗರತಿಯ ಹಾಡಿನ ಒಂದು ತ್ರಿಪದಿಯನ್ನು ಓದಿದಾಗ ನನಗಾದ ಆನಂದವು, ಶಿಷ್ಟಕಾವ್ಯಗಳನ್ನೋದಿ ಹೊಂದಿದ ಆನಂದವನ್ನು ಮೀರಿಸುವಂಥದು."

ಕನ್ನಡದ ಶ್ರೇಷ್ಠ ಸಂಶೋಧಕರಾದ ಪ್ರೊ. ಕುಂದಣಗಾರರು ತಾವು ಕನ್ನಡಸಾಹಿತ್ಯದಲ್ಲಿ ಮೆಚ್ಚಿಕೊಂಡ ಕೃತಿಗಳನ್ನು ಕುರಿತು ಹೇಳಿದ್ದೇನೆಂದರೆ–"ಕುಮಾರವ್ಯಾಸನ ಭಾರತ ಕಥಾಮಂಜರಿ, ರತ್ನಾಕರನ ಭರತೇಶ ವೈಭವ. ಷಡಕ್ಷರಿಯ ರಾಜಶೇಖರ ವಿಳಾಸ, ಲಕ್ಷ್ಮೀಶನ ಜೈಮಿನಿಭಾರತ ಹಾಗೂ ಬೆಲ್ಲದ ಬಾಗೇವಾಡಿಯ ಬಾಳಗೋಪಾಳ ಕವಿಯ ಲಾವಣಿಗಳು."

ಈ ರೀತಿ ಜನಪದಸಾಹಿತ್ಯವನ್ನು ಸಾಹಿತ್ಯಿಕ ಅಳತೆಗೋಲಿನಿಂದ ಅಳೆಯುವ ಪದ್ಧತಿಯು ಮೊದಲನೇ ಘಟ್ಟದ ಲಕ್ಷಣವಾಗಿತ್ತು, ಆವಾಗ ತ್ರಿಪದಿ ಕಥನ ಹಾಗೂ ಆ ಗೀತೆಗಳಲ್ಲಿ ಹುದುಗಿದ ಕಾವ್ಯಸೌಂದರ್ಯಗಳನ್ನು ವ್ಯಾಖ್ಯಾನಿಸುವ ಪ್ರವೃತ್ತಿ ಕಾಣಿಸುತ್ತಿತ್ತು.

**ಆಕ್ರೋಶದ ಅವಸ್ಥೆ :**

ಸಂಗ್ರಹವಾದ ಜನಪದಸಾಹಿತ್ಯವನ್ನು ಅರಿದು ತಣಿಯದೆ, ಒರೆದು ಸಾಕಾಗದೆ ಹಲವು ಸಂಕಲನಗಳನ್ನೂ, ಪುಸ್ತಕರೂಪದಲ್ಲಿ ಪ್ರಕಟಿಸುವ ಕೆಲಸ ನಡೆಯಿತು. ಶಾವಿಗೆ ಸೈದಾನಗಳು ಸಿದ್ಧವಾದದ್ದು ಮೂಲತಃ ಪಾಯಸದಂಥ ಸಿಹಿಯಡಿಗೆಗಾಗಿ, ಪಾಯಸವು ನಮ್ಮನ್ನು ತೃಪ್ತಿಪಡಿಸಿದರೆ ತೀರಿತೇ ? ಶಾವಿಗೆ ಸೈದಾನಗಳಿಂದ ಉಪ್ಪಿಟ್ಟು ಮಾಡಿದರೆ, ಭಿನ್ನ ಅಭಿರುಚಿಯವರೂ ತಿಂದು ತಣಿಯಬಲ್ಲರು-ಎನ್ನುವ ವಿಚಾರವು ಬುದ್ಧಿವಂತ ಸಂಶೋಧಕರಲ್ಲಿ ಮೊಳೆಯಿತು. ಅಥವಾ ಹೊಳೆಯಿತು. ಆಗ ನಮ್ಮ ಜನಪದ ಸಾಹಿತ್ಯದ ಮಾತುಕತೆಯ ಮೊದಲವಸ್ಥೆ ಮುಗಿಯಲಣಿಯಾಯಿತೆಂದು ಹೇಳಬಹುದು. ಚಿಕಿತ್ಸಕ ಬುದ್ಧಿಯವರು ಇನ್ನೂ ಮುಂದೆ ಹೋಗಿ ಶಾವಿಗೆ ಸೈದಾನಗಳಿಂದ ಉಪ್ಪಿನಕಾಯಿ–ಚಟನಿಗಳನ್ನು ಮಾಡಿಕೊಂಡರೆ ಅದು ಹಸಿವೆಯನ್ನು ಕೆರಳಿಸಿ, ಬಾಯಿಗೆ ನೀರೂರುವಂತೆ ಮಾಡುವುದರಲ್ಲಿ ಹೆಚ್ಚು ಸಫಲವಾಗುವದೆಂದು ಪ್ರತಿಪಾದಿಸಿದರು. ಅವರೇ ಪ್ರಗತಿಶೀಲರು. ಇದು ಎರಡನೇ ಅವಸ್ಥೆಯ ಸನ್ನಿವೇಶ. ಅರ್ಥ ಒಳಸೇರಿದಾಗ. ಹಾಗಾದರೆ ಇದು ಅಳುವ ಕರೆಯುವ ಅವಸ್ಥೆ ಹೇಗೆ ? ಪ್ರಚಲಿತವಿದ್ದ ಜನಪದಗೀತ, ಕಥೆ, ಒಗಟು, ಗಾದೆಗಳನ್ನೆಲ್ಲ ಸಂಗ್ರಹಿಸುವದು, ಅವುಗಳನ್ನು ಪ್ರಕಟಿಸುವದು, ಅಲ್ಲದೆ ಸಂಶೋಧನ ವಿಚಾರ ಸಂಕಿರಣ. ಚರ್ಚೆ, ಗೋಷ್ಠಿ ಏರ್ಪಡಿಸುವದು ಇವೆಲ್ಲ ದ್ವಿತೀಯ ಅವಸ್ಥೆಯಲ್ಲಿ ನಡೆಯಲೇಬೇಕಾದ ಕಾರ್ಯಗಳಾಗಿವೆ. ಮಾತುಕತೆ ನಡೆದ ಅವಸ್ಥೆಯಲ್ಲಿರುವ ತೃಪ್ತಿ–ಸಂತೋಷಾದಿಗಳು, ಅತ್ತುಕರೆಯುವ ಆಕ್ರೋಶಾವಸ್ಥೆಯಲ್ಲಿ ಆವೇಶ–ಆವೇಗಗಳಾಗಿ ಮಾರ್ಪಡುವಂತೆ ತೋರುತ್ತದೆ. 'ನೀನು ಕಂಡೇ ಇಲ್ಲ ನಾನು ಕಂಡಿದ್ದೇನೆ. ನೀನು ಕಂಡಿ

ರುವೆಯೋ ಇಲ್ಲವೋ, ನಾನು ಮಾತ್ರ ಕಂಡಿದ್ದೇನೆ. ನೀನು ಕಂಡಿದ್ದಕ್ಕಿಂತ ಚೆನ್ನಾಗಿ ಕಂಡಿದ್ದೇನೆ ನಾನು. ನೀನು ಕಂಡಿದ್ದು ಸತ್ಯವಿರಲಿಕ್ಕಿಲ್ಲ. ನಾನು ಕಂಡಿದ್ದು ಮಾತ್ರ ಸತ್ಯಸತ್ಯ. ನಿತ್ಯನಿತ್ಯ" ಹೀಗೆ ಆವೇಶ-ಆವೇಗಗಳನ್ನು ತಳೆಯುವುದೇ ದ್ವಿತೀಯಾವಸ್ಥೆಯ ಲಕ್ಷಣ. ಕುದಿದು ಅನ್ನವೂ ಆಗಿಲ್ಲ; ತಡೆದು ಅಕ್ಕಿಯೂ ಆನಿದಿಲ್ಲ. ನೆನೆಗುದಿ ನೀರ್ಗೆಚ್ಚು; ಉಣ್ಣುವಂತೆಯೂ ಇಲ್ಲ, ಚೆಲ್ಲುವಂತೆಯೂ ಇಲ್ಲ. . ಈ ಅವಸ್ಥೆಗೇ ಅರ್ಥ ಒಳಸೇರಿದ್ದು ಅನ್ನುತ್ತದೆ ಒಗಟು. ಆದರೆ ಈ ಅವಸ್ಥೆ ಅನಿವಾರ್ಯ. ಇದರೊಳ ಗಿಂದ ಕಿತ್ತುಕೊಂಡು ಎದ್ದಾಗಲೇ ನಗುವ ಕೆಲೆಯುವ ಸಂದರ್ಭ ಸಂಗಳಿಸುತ್ತದೆ. ಇಲ್ಲಿ ಗಮನಿಸಬೇಕಾಗುವದೇನೆಂದರೆ- ಈ ಎರಡನೇ ಘಟ್ಟದಲ್ಲಿ ಜನಪದಸಾಹಿತ್ಯದೊಳಗಿನ ಹೊಸಹೊಸ ಪ್ರಕಾರಗಳನ್ನು ಗುರತಿಸಲಾಯಿತು. ತ್ರಿಪದಿಗಷ್ಟೇ ಸೀಮಿತವೆನಿಸಿದ ಜನಪದಸಾಹಿತ್ಯವು ಕಥೆ, ಬಯಲಾಟ. ಗಾದೆ, ಒಗಟು, ಯಕ್ಷಗಾನಗಳನ್ನು ಒಳಗೊಂಡಿತು. ಕಥೆಗಳ ಆಶಯ ಮತ್ತು ವರ್ಗಗಳನ್ನು ಗುರುತಿಸುವದರೊಂದಿಗೆ ನಾನಾ ವೈಶಿಷ್ಟ್ಯಗಳ ಅಧ್ಯಯನವೂ ನಡೆಯಿತು, ಈ ದ್ವಿತೀಯಾವಸ್ಥೆಯಲ್ಲಿ. ಈ ಘಟ್ಟದಲ್ಲಿ ಹೆಚ್ಚಾಗಿ ಸಂಗ್ರಹಕಾರ್ಯ ಮಾತ್ರ ಮುಂದುವರಿಯಿತು. ಆದರೆ ಆಳವಾದ ಅಧ್ಯಯನ ಮಾತ್ರ ನಡೆಯಲಿಲ್ಲ.

## ಅದ್ವಿತೀಯ ತೃತೀಯಾವಸ್ಥೆ :

ಶಾವಿಗೆ ಸೈದಾನಗಳ ಉಪ್ಪಿಟ್ಟು ಸವಿದು ಸಾಕಾಗದೆ, ಅವುಗಳಿಂದ ಉಪ್ಪಿನಕಾಯಿ ಚಟನಿಗಳನ್ನೂ ಏಕೆ ಮಾಡಿಕೊಳ್ಳಬಾರದು ? ಸಂಕಲನವಾಗಿಯೋ ಸಂಗ್ರಹವಾಗಿಯೋ ಇರುವ ಜನಪದ ಸಾಹಿತ್ಯವು ಬೇಯಿಸಲಾರದೆ ತಿನ್ನುವ ಹಣ್ಣುಕಾಯಿ-ಕರೆದಿಟ್ಟ ಹಾಲು ಇದ್ದಂತೆ. ಅವುಗಳಿಗೆ ಉಪ್ಪುಕಾರು, ಹುಳಿ ಒಗರು, ಸಿಹಿಕಹಿ ಬೆರಸಿ ಷಡ್ರಸದ ಪಾಕ ಮಾಡಿಕೊಳ್ಳುವ ವಿಚಾರವು ಪ್ರಗತಿಪರವೆನ್ನದೆ ಇರಲಿಕ್ಕಾಗದು. ಹಾಗೆ ಮಾಡುವ ವಿಧಾನವೂ ಪಾಕಶಾಸ್ತ್ರದ ಮುನ್ನಡೆಯೇ ಅಹುದು. ಆದರೆ ಈ ಎಲ್ಲ ಖಟಾಟೋಪ; ಗಳು, ಹಿಂದಿನ ಜನಪದ ಸಾಹಿತ್ಯವನ್ನು ಬಳಸಿಕೊಳ್ಳುವುದಕ್ಕೆ ಮಾತ್ರ ಸೀಮಿತವಾಗಿವೆ ಬೆಳೆಸಿಕೊಳ್ಳುವದಕ್ಕಲ್ಲ. ಗೀತಸಂಗ್ರಹ ಹಾಗೂ ಅವುಗಳ ಧ್ವನಿಮುದ್ರಿಕೆ, ಕಥಾಸಂಕಲನ ಹಾಗೂ ಅವುಗಳ ಪ್ರಾಂತಭೇದದ ಭಾಷೆ. ಗಾದೆ ಒಗಟುಗಳಲ್ಲಿ ಕಂಡುಬರುವ ಸಾಂಸ್ಕೃತಿಕ ಹಾಗೂ ಐತಿಹಾಸಿಕ ಹೊಗರು ಇವುಗಳನ್ನು ಕಂಡುಹಿಡಿಯುವದು ಒಂದು ಕೆಲಸ ವಾದರೆ, ಅವುಗಳನ್ನು ಮುಂದಿನ ಜೀವನಕ್ಕೆ ಅಳವಡಿಸಿಕೊಳ್ಳುವದಾಗಲಿ, ಪ್ರಚೋದನೆ ನೀಡುವುದಾಗಲಿ ಇನ್ನೊಂದು ಕೆಲಸ. ಈ ಮೂರನೇ ಅವಸ್ಥೆಯಲ್ಲಿ ಜನಪದ ಸಾಹಿತ್ಯ ವನ್ನು ಮಾನವ ಶಾಸ್ತ್ರೀಯ ದೃಷ್ಟಿ, ಭಾಷಾ ಶಾಸ್ತ್ರೀಯ ದೃಷ್ಟಿ, ಮಾನಸ ಶಾಸ್ತ್ರೀಯ ದೃಷ್ಟಿಗಳಿಂದ ಅಳೆಯಲಾಗುತ್ತದೆ. ಇಂಥ ಅಧ್ಯಯನದಿಂದ ಜನಾಂಗದ ಸಂಸ್ಕೃತಿ ಯನ್ನು ಅಳೆಯಲು ಸಹಾಯವಾಗುತ್ತದೆ.

### ಸಾಹಿತ್ಯ ಜೀವನದ ಇನ್ನೊಂದು ಮಗ್ಗಲು :

ಸಾಹಿತ್ಯವು ಜೀವನಕ್ಕೆ ಪ್ರತಿಭೆಯೂ ಅಹುದು; ಜೀವನದ ಪ್ರತಿಬಿಂಬವೂ ಅಹುದು. ಜನಪದಸಾಹಿತ್ಯವು ಜನಪದ ಜೀವನಕ್ಕೆ ಇನ್ನೊಂದು ಮಗ್ಗುಲೇ ಆಗಿರುತ್ತದೆನ್ನುವುದು ನಮಗೆಲ್ಲ ತಿಳಿದ ವಿಷಯವೇ ಆಗಿದೆ. ಅದು ಕಾಯಕದಲ್ಲಿ ನಿರತವಾದ ಜೀವಕ್ಕೆ ಭಾವಗೀತೆಯಾಗಿ ದಣಿವು ತೋರಗೊಡದಂತೆ ಮೈದಡಹುತ್ತದೆ; ಜೋಳಯಿಸುತ್ತದೆ, ಆಡುತ್ತ ಕಲಿಯುವುದು ಶಿಕ್ಷಣದ ಜೀವಾಳದಂತೆ, ಹಾಡುತ್ತ ದುಡಿಯುವುದು ಜಾನಪದ ಜೀವನಕ್ಕೆ ಸ್ವಾಭಾವಿಕವೇ ಆಗಿದೆ. ಗೀತವನ್ನು ಹಾಡುವದಾಗಲಿ, ಕಥೆಯನ್ನು ಕೇಳುವದಾಗಲಿ, ಒಗಟು ಗಾದೆಗಳನ್ನು ಉಸುರುವುದಾಗಲಿ ಕೆಲಸಗೇಡಿಗಳ ಕೆಲಸವೇನಲ್ಲ. ಒಮ್ಮೆ ಅವು ಕೆಲಸದಲ್ಲಿ ಮೈಮರೆಸಿದರೆ, ಇನ್ನೊಮ್ಮೆ ಕೆಲಸ ಮಾಡುವವರ ಮನಮರೆಸುತ್ತವೆ. ಮನುಷ್ಯನು ಹುಟ್ಟಿದಂದಿನಿಂದ ಅವನಿಗೆ ಜೋಗುಳ, ಲಲ್ಲೆನುಡಿ, ಕತಿಕತಿ ಕಾರಣ, ಒಗಟು ಮೊದಲಾದ ಸಂಪರ್ಕಗಳನ್ನು ಒದಗಿಸಿಕೊಡುವ ಕೆಲಸವನ್ನು ಜನಪದವು ನಿರ್ವಹಿಸುತ್ತಲೇ ಇರುತ್ತದೆ. ಅದರಿಂದ ಅವನಲ್ಲಿರುವ ಋಷಿಯಂಶವಾದ ಕವಿಮೊಗ್ಗೆ ಸಹಜವಾಗಿ ಅರಳುತ್ತದೆ: ಆನಂದದ ಊರ್ಮಿಯು ಕೆರಳುತ್ತದೆ; ಮನುಷ್ಯತ್ವವು ಸಹಜಯೋಗದಿಂದ ರೂಪುಗೊಳ್ಳುತ್ತದೆ.ದುಡಿಯಲಾರದವರಿಗೆ ಉಣ್ಣುವ ಅಧಿಕಾರವಿಲ್ಲದಂತೆ. ಅದೇ ಬಗೆಯಾಗಿ, ಶ್ರಮಿಸಲಾರದವರಿಗೆ ಹಾಡುವ, ಕಥಿಸುವ, ಒಗಟಿಸುವ ಅಧಿಕಾರವಿಲ್ಲವೆನ್ನುವುದು ಜನಪದ ಜೀವನದ ಕಟ್ಟಳೆಯೇ ಆಗಿದೆಯೇನೋ. ಹಾಡುತ್ತ ಕಥಿಸುತ್ತ ಶ್ರಮಿಸುವಂತೆ, ಶ್ರಮವನ್ನು ತಣಿಸುವಾಗ, ಶ್ರಮಿಸಲು ನವೋತ್ಸಾಹವನ್ನು ತುಂಬುವಾಗ, ಹಾಡು ಕಥೆಗಳನ್ನು ಆಶ್ರಯಿಸಬಹುದು. ಜನಪದ ಸಾಹಿತ್ಯವು ಹಲವು ಕಲೆಗಳ ಮುಖಾಂತರ ವ್ಯಕ್ತಿಯ ಪ್ರಕೃತಿಯಲ್ಲಿ ಸಮನ್ವಯ-ಸಾಮರಸ್ಯಗಳನ್ನು ಚಿಗುರಿಸಬಹುದಾಗಿದೆ. ಅದು ವ್ಯಕ್ತಿಯ ಸ್ವಾಸ್ಥ್ಯಕ್ಕೆ ಜೀವಕಳೆಯೆಂದು, ಸಮಾಜದ ಸ್ವಾಸ್ಥ್ಯಕ್ಕೆ ಸಂಜೀವಿನಿಯೆಂದು ಬಲ್ಲವರು ಹೇಳುತ್ತಾರೆ. ಕೈ ಕೆಲಸಕ್ಕೆ ತೊಡಗುತ್ತಲೆ ಬಾಯಿ ಹಾಡಲು ಮೊದಲುಮಾಡಿದರೆ, ವ್ಯಕ್ತಿಯಂತೆ ಸಮಷ್ಟಿಯೂ ಆಂತರಿಕ ಸಮನ್ವಯ-ಸಾಮರಸ್ಯಗಳನ್ನು ಸಾಧಿಸುವಂತೆ ತೋರುತ್ತದೆ. ಕೋಲಾಟ–ಕುಣಿತ, ಭಜನೆ–ಗೀತಗೋಷ್ಠಿ, ಲಾವಣಿ ಸ್ಪರ್ಧೆ-ಗೊಂದಲ ನಡೆದಾಗ, ಹಂತಿ ತುಳಿಸುವಾಗ, ಹತ್ತಿಬಿಡಿಸುವಾಗ ಹಾಡುವ ಗೀತಗಳಾಗಲಿ, ಕೇಳಿಸುವ ಕಥೆಗಳಾಗಲಿ ಜನಪದದ ಆಂತರಿಕ ಆರೋಗ್ಯವನ್ನು ಕಾಪಾಡಿಕೊಂಡು ಬರಲು ಸಮರ್ಥವಾಗುವುದಕ್ಕೆ, ಸಪ್ಪಳಿಲ್ಲದೆ ಮೈಗೂಡಿದ ಸಮನ್ವಯ–ಸಾಮರಸ್ಯಗಳೇ ಕಾರಣವೆಂಬುದು ಸ್ಪಷ್ಟವಾಗಿದೆ.

### ಹಿಂದಿನ ಜೀವನ ಹಾಗೂ ಸಾಹಿತ್ಯಗಳ ಗತಿ :

ಜನಪದಜೀವನಕ್ಕೂ ಸಾಹಿತ್ಯಕ್ಕೂ ಇರುವ ನಂಟು ಇಂದು ಸಡಿಲುಗೊಳ್ಳುತ್ತಿದೆ. ಹಾಡಿಹಾಡಿ ಸಂಸಾರವೇದವೆನಿಸಿದ್ದ ಗರತಿಯಹಾಡು, ನುಡಿದು ನುಡಿದು

ವ್ಯವಹಾರಕುಶಲತೆಯೆನಿಸಿದ್ದ ಅನುಭವಕಥನ ಇವು ಅರೆಜೀವವೋ ನಿರ್ಜೀವವೋ ಆಗುತ್ತಲಿವೆ. ಹಾಡು-ಕಥೆಗಳ ಕಲೇವರಗಳು ಸಂಗ್ರಹಿತವಾಗಿ ಮಹಾವಿದ್ಯಾಲಯಗಳ ಕಪಾಟಗಳಲ್ಲಿ ಸಂಪುಟರೂಪದಲ್ಲಿ ಒಟ್ಟಲಾಗಿವೆ. ಅದರಂತೆ ಹಾಡಿನಧಾಟಿ, ಕಥನ ಶೈಲಿಗಳು ಧ್ವನಿಮುದ್ರಿಕೆಯ ರೂಪದಲ್ಲಿ ಇನ್ನೊತ್ತಟ್ಟಿಗೆ ಶೇಖರಗೊಂಡಿವೆ. ಒಂದಕ್ಕೆ ಜೀವವಿಲ್ಲ; ಇನ್ನೊಂದಕ್ಕೆ ದೇಹವಿಲ್ಲ. ಅದು ಹೆಣ, ಇದು ಪಿಶಾಚಿ. ಇವುಗಳನ್ನು ಸಂಗಳಿಸುವುದೆಂತು? ಮುಂಚಿನಂತೆ ಮುಡಿಮೆಯ ರಂಗಸ್ಥಳ ಸಿದ್ಧವಾದರೆ ಹಾಡು-ಧಾಟಿಗಳ ಸೇರುವೆಯಾಗಲಿ, ಕಥೆನಿರೂಪಣೆಗಳ ಸಂಗಮವಾಗಲಿ ಕಾಣಿಸಿಕೊಳ್ಳಲು ಸಾಧ್ಯವಾಗಬಹುದು. ನಮ್ಮ ಜನಪದ ಸಾಹಿತ್ಯದಲ್ಲಿ ಹೆಣ್ಮಕ್ಕಳಹಾಡು ವಿದ್ಯಾರಣ್ಯರ 'ಪಂಚದಶಿ' ಯೆನಿಸಿದರೆ, ಗಂಡುಮಕ್ಕಳ ಕಥನವು 'ವ್ಯವಹಾರ ಮಾಧವೀಯ' ಯೆನಿಸುವದು. ಸಂಸಾರವೇದವೆನಿಸುವ ತ್ರಿಪದಿಗಳಿಗೆ ಮಂತ್ರಶಕ್ತಿಪ್ರಾಪ್ತವಾಗಿತ್ತೆಂದು ತೋರುತ್ತದೆ. ಅಂತೆಯೇ ಅದನ್ನು ಕೇಳಿದವರು ಮಂತ್ರಮುಗ್ಧರಾಗುತ್ತಾರೆ. ಬೀಸುವ ಕಲ್ಲು, ಕುಟ್ಟುವ ಒರಳು ಯಜ್ಞವೇದಿಕೆಯಾದರೆ, ಗೃಹಿಣಿಯರೇ ಅದರ ಋತ್ವಿಜರು. ಹಾಡುವ ತ್ರಿಪದಿಗಳೇ ಗಾಯಿತ್ರೀಮಂತ್ರ. ಅಂತೆಯೇ ಅಲ್ಲಿ ಜೀವನಸಿದ್ಧಿ ಸಂಗಳಿಸುತ್ತಿತ್ತು.[೧] ಇಂಥ ಸಂಗ್ರಹಿತ ತ್ರಿಪದಿಗಳನ್ನು ಶಾಸ್ತ್ರೋಕ್ತ ಸಂಗೀತದಲ್ಲಿ ಹಾಡಿದರೇನು, ಧ್ವನಿಮುದ್ರಿಕೆಗಳನ್ನು ಹೊತ್ತಲ್ಲದ ಹೊತ್ತಿನಲ್ಲಿ ಕೇಳಿದರೇನು? ಅದರಿಂದಾಗುವ ಆನಂದ ಕ್ಷಣಭಂಗುರವೇ. ಹಾವು ಚೇಳಿನ ಮಂತ್ರಕಲಿತವರು, ಅವುಗಳಿಂದ ಕಡಿಸಿಕೊಂಡವರ ಮುಂದೆ, ಆ ಮಂತ್ರಗಳನ್ನು ಸೂಕ್ತವಾಗಿ ಪಠಿಸಿದರೆ, ಏರಿದ ವಿಷ ಇಳಿಯಬಹುದು. ಆದರೆ ಹಾವೂ ಕಚ್ಚಿಲ್ಲ; ಚೇಳೂ ಕುಟುಕಿಲ್ಲ. ಅಂಥ ಸಂದರ್ಭದಲ್ಲಿ ಹೊತ್ತು ಹೋಗದೆಂದೋ, ಸಮಯದೊರಕಿದೆಯೆಂದೋ ಇಲ್ಲವೆ ಮನೋರಂಜನೆಗೆಂದೋ ಹಾವು-ಚೇಳಿನ ಮಂತ್ರಪಠಿಸಿದರೆ ಪ್ರಯೋಜನವೇನು? ತಿರುಗಿ ಕೇಳಿದರೆ ಅದರಿಂದ ಮಂತ್ರಗಳು ಮಂತ್ರಶಕ್ತಿಯನ್ನೇ ಕಳಕೊಳ್ಳಬಹುದಾಗಿದೆ. ಇಲ್ಲಿ ಶ್ರೀ ಅಲ್ಲಮ ಪ್ರಭುಗಳ ಈ ವಚನವನ್ನು ಸ್ಮರಿಸಿಕೊಳ್ಳುವಂತಿದೆ-

"ಊರದ ಚೇಳಿಂಗೆ, ಏರದ ವಿಷಕ್ಕೆ
ಜಗವೆಲ್ಲ ನರಳಿ ಉರುಳಿ ಹೊರಳುತ್ತಿದೆ
ಹುಟ್ಟದ ಗಿಡುವಿನ ಬಿಟ್ಟೆಲೆಯ ತಂದು
ಮುಟ್ಟದೆ ಪೂಜಿಸು ನಮ್ಮ ಗುಹೇಶ್ವರನ."

---

೧. ರಾಮಕೃಷ್ಣ ಪರಮಹಂಸರಿಗೆ ಅವರ ಶಿಷ್ಯರು ಕೇಳಿದರು— ಸಂಸಾರದಲ್ಲಿ ಹೇಗಿರಬೇಕು? ಅವರು ಹೇಳಿದರು— ನೆಲ್ಲುಕುಟ್ಟುವ ಹೆಂಗಸಿನಂತೆ. ತೊಡೆಯಮೇಲೆ ಒರಗಿದ ಮಗುವನ್ನು ತಮ್ಮಣಿಸುತ್ತಿದ್ದಾಳೆ. ಗಿರಾಕಿಗೆ ಅಕ್ಕಿಯ ಧಾರಣೆ ಹೇಳುತ್ತಿದ್ದಾಳೆ. ಬಲಗೈಯಿಂದ ಒನಕೆ ಯೆತ್ತಿ ಪೆಟ್ಟುಹಾಕುತ್ತಿದ್ದಾಳೆ, ಎಡಗೈಯಿಂದ, ಹೊರಚೆಲ್ಲಿದ ನೆಲ್ಲುಕಾಳುಗಳನ್ನು ಒರಳಿಗೆ ನೂಕುತ್ತಿದ್ದಾಳೆ. ಕೈಯಮೇಲೆ ಒನಕೆಯ ಪೆಟ್ಟು ಬೀಳದಂತೆ ಜಾಗ್ರತೆವಹಿಸಿದ್ದಾಳೆ. ಪರಮಹಂಸರು ಹೇಳಿದ್ದು ಉದಾಹರಣೆ, ಆದರೆ ಗರತಿಗೆ ಅದು ನಿತ್ಯದ ಆಚರಣೆಯಾಗಿದೆ.

## ಹಳೆಯ ಬಾಳು ಹಿಂಜರಿದಿದೆ, ಹೊಸದು ಹುಟ್ಟಿಲ್ಲ:

ಅದೆಂಥದೋ ಭೂಕಂಪದಿಂದ ಸಪ್ತಸಮುದ್ರಗಳೆಲ್ಲ ಉಕ್ಕಿ, ಭೋರ್ಗರೆದು, ತುಳುಕಾಡಿ ಒಂದುಗೂಡಿವರೆ. ವಿಶಿಷ್ಟ ಮಾನವತೆಗಳೆಲ್ಲ ಪರಿಶಿಷ್ಟ ಮನುಷ್ಯತ್ವವನ್ನೇ ಧಾರಣ ಮಾಡುತ್ತಲಿವೆ. ಒಂದು ಪಾರತಂತ್ರ್ಯವನ್ನು ಕಳಚಿಹಾಕುವಷ್ಟರಲ್ಲಿ ನೂರೊಂದು ಪರಾಧೀನತೆಗಳು, ಸಂಕೋಲೆಯಾಗಿ ಪರಿಣಮಿಸುತ್ತಿವೆ. ಪರಿಣಾಮ ವಾಗಿ ಮೂಲ ಉದ್ಯೋಗ-ಧಂದೆಗಳೆಲ್ಲ ಕೈಬಿಟ್ಟು ಓಡುತ್ತಿವೆ; ಕೈಕೊಟ್ಟು ಅಡುಗುತ್ತಿವೆ. ಹೊಸವಿನ್ನೂ ಕೈಸೇಡಿಲ್ಲ. ಪಶುಗಳ ಸಹಕಾರಕ್ಕೆ ಎರವಾಗಿ, ಯಾಂತ್ರಿಕ ಸಾಹುಕಾರಿಕೆಗೆ ಶರಣಾಗತರಾಗುತ್ತಿದ್ದೇವೆ. ಆದ್ದರಿಂದ ನಮ್ಮ ಬದುಕು ಕಲ್ಲಿನೊಡನೆ ಕವಣೆಯನ್ನೂ ಕಳಕೊಂಡಂತಾಗಿದೆ. ಸಾಮೂಹಿಕ ಭೂವ್ಯವಸಾಯದಲ್ಲಿಯೋ, ಯಾಂತ್ರಿಕ ಕಾರ್ಖಾನೆ ಯಲ್ಲಿಯೋ ನಾವು ಕಾರ್ಮಿಕರಾಗಿ ಗತಿಗಾಣಬಹುದು. ಅಲ್ಲಿ ಹಿಂದಿನ ಗೀತಗಳಾಗಲಿ ಕಥೆಗಳಾಗಲಿ ಅದೆಷ್ಟು ಪ್ರಯೋಜನ ಪಡೆಯುವವೋ ತಿಳಿಯದು. ಹೊಸಗೀತ ಹೊಸಕಥೆ ಹುಟ್ಟಿಕೊಳ್ಳಬಹುದು. ಆ ಹೊಟ್ಟೆಯ ಹೋರಾಟದಲ್ಲಿ ಹಾಡಿದ ಗೀತೆ, ಹೇಳಿದ ಕಥೆ ಸಾರ್ಥಕ ಸಾಹಿತ್ಯವೆನಿಸಬಹುದೇ ? ಅದು ವಿಷಮಜ್ವರದಲ್ಲಿ ಅರಿವು ಗೆಟ್ಟು ವಟವಟಿಸುವ ಅಲಾಪವೆನಿಸಬಹುದೇನೋ– ಈಗಲೇ ಹೇಳಲಿಕ್ಕಾಗದು.

## ಕಾಯ ದುಡಿಸದ ಕಾಯಕ :

ನಾವಿಂದು ವಿಚಿತ್ರಕಾಲದ ಸಂದುಕಟ್ಟಿನಲ್ಲಿ ಸಿಕ್ಕುಬಿದ್ದಿದ್ದೇವೆ. ಹಗ್ಗಕೊಟ್ಟು ಕೈಕಾಲು ಕಟ್ಟಿಸಿಕೊಂಡಿದ್ದೇವೆ. ದುಡಿಮೆಯಿಲ್ಲದ ಗಳಿಕೆಗೆ ಕೈಯೊಡ್ಡುತ್ತಿದ್ದೇವೆ. ನೀರ ಮೇಲಿನ ಬೆಣ್ಣೆಯನ್ನು ಕಬಳಿಸಲು ತವಕಿಸುತ್ತಿದ್ದೇವೆ. ದುಡಿಮೆ ಶೂನ್ಯ, ಗಳಿಕೆ ಪೂರ್ಣ ಅಥವಾ, ದುಡಿತ ಕಡಿಮೆ ಪ್ರಾಪ್ತಿಹೆಚ್ಚು– ಇದೇ ನಮ್ಮ ಕಾಯಕದ ಮೂಲಸೂತ್ರ ವಾಗಿದೆ. ಕಾಯವನ್ನು ದುಡಿಸದಿರುವುದೇ ಮಿಗಿಲಾದ ಕಾಯಕವೆಂದು ದೃಢವಾಗಿ ಗ್ರಹಿಸಿದ್ದೇವೆ. ಕೆಲಸಿಯಾಗಿ ಕೈಹೊಲಸು ಮಾಡಿಕೊಳ್ಳುವುದಕ್ಕಿಂತ, ಆಲಸಿಯಾಗಿ ಅಂಗಳವನ್ನೆಲ್ಲ ಹೊಲಸುಮಾಡಿಕೊಳ್ಳುವುದೇ ಸೂಕ್ತವೆಂದಿದ್ದೇವೆ. ಕೆಲಸಮಾಡದಿರು ವುದು ಉತ್ತಮ, ಕೆಲಸಮಾಡಿಸುವುದು ಮಧ್ಯಮ, ಕೆಲಸ ಮಾಡುವುದು ಅಧಮ ಎಂದು ಬಗೆದಿದ್ದೇವೆ. ಕೆಲಸ ಬೇಡ, ಹಾಡು ಬೇಕೆಂವರೆ, ಬಾನುಲಿಗೆ ಶರಣು ಹೋಗು ವುದೇ ನೇರವಾದ ದಾರಿ. ಮಿತಿಮೀರಿದ ಗಳಿಕೆ ನೀಡುವುದೇ ಉದ್ಯೋಗವೆನಿಸಿದೆ ನಮಗೆ. ಸಾರ್ವಜನಿಕ ಸೇವೆಯ ನಟನೆಯೇ ಸರ್ವಶ್ರೇಷ್ಠ ಬುದ್ಧಿಮೆಯೆನಿಸಿದೆ. ಹೆರವರ ತಟ್ಟೆಯೊಳಗಿನ ನೊಣತೆಗೆದು, ನಮ್ಮ ತಟ್ಟೆಯೊಳಗೆ ಬಿದ್ದ ಕತ್ತೆಯನ್ನು ಬದುಕಿಸುವುದೇ ಮಿಗಿಲಾದ ಕಾಯಕವೆಂದು ಹೇಳತೊಡಗಿದ್ದೇವೆ. ಶರಣರು ಹೇಳುವ ಕಾಯಕಕ್ಕೂ ನಾವು ನಡೆಸಿರುವ ಕಾಯಕಕ್ಕೂ ಮಹದಂತರವಿದೆ. ಒಂದು ಸಿಂಹ, ಇನ್ನೊಂದು ಗ್ರಾಮಸಿಂಹ, ಕಾಯಕದಲ್ಲಿ ಪ್ರಾಪ್ತಿ ಅನಿವಾರ್ಯ; ಆದರೆ ಮುಖ್ಯವಲ್ಲ. ಏಕಾಗ್ರತೆ–

ಮನಶ್ಶಾಂತಿ ಮುಖ್ಯ. ಕಾಯಕವಲ್ಲಿ ಮೇಲು ಕೀಳು ಇಲ್ಲ. ಆತ್ಮತೃಪ್ತಿ–ಅಂತರ್ಮು
ಗಳ ಪ್ರಾಪ್ತಿಗೆ ತೀವ್ರಸಹಾಯಕವಾಗುವುದೇ ಕಾಯಕ. ಕೆಲಸವಿಲ್ಲದಿದ್ದರೆ ಹು
ಹಿಡಿದಂತಾಗುತ್ತದೆಂದು ಹಿಂದಿನ ತಲೆಮಾರಿನವರು ಹೇಳುತ್ತಿದ್ದರು. ಆ ಹು
ಹಿಡಿಯಬಾರದೆಂದಿದ್ದರೆ, ಕೆಲಸವಹಿಸಿಕೊಳ್ಳಬೇಕಲ್ಲವೇ ? ಒಂದಾನೊಂದು ಕಾ
ರಾಜರು, ಶ್ರೀಮಂತರು ತಮ್ಮ ಅಷ್ಟೈಶ್ವರ್ಯಗಳನ್ನು ತೊರೆದು, ಸಾಮಾನ್ಯ ಕಾಯ
ಕೈಕೊಂಡು ಶರಣಪದ ಪಡೆದದ್ದು, ನಮ್ಮ ಈ ಜನಪದದಲ್ಲಿಯೇ. ಆಯ್ದಕ್ಕಿ ಮಾರಯ
ನೂಲಿಯ ಚೆಂದಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ, ಹಡಪ
ಪಂಪಯ್ಯ ಮೊದಲಾದ ಶರಣರು, ತಮ್ಮ ಹೆಸರಿನ ಹಿಂದೆ ತಮ್ಮ ಕಾಯಕವನ
ಕಾಣಿಸಿಕೊಳ್ಳಲಿಕ್ಕೆ ಎಷ್ಟೂ ಹಿಂಜರಿಯಲಿಲ್ಲ; ನಾಚಲಿಲ್ಲ. ಅಂತೆಯೇ ಅವರು ಕೈಕೊಂ
ಕಾಯಕದಿಂದ ಶರಣಪದ ಪಡೆಯಲು ಸಾಧ್ಯವಾಯಿತು. ನಮ್ಮ ಸೋದರಿಯರಂತ
ತಮ್ಮ ಅವ್ಯಾಹತವಾದ ಕಾಯಕ ನಿಷ್ಠೆಯಿಂದ ಅತೀಂದ್ರಿಯ ಸ್ಪರ್ಶವನ್ನೂ ಪಡೆದಿ
ರೆನ್ನುವಂತಿದೆ. ಆ ಮಾತಿಗೆ ಸಾಕ್ಷಿಯಾಗಿ ಕೆಳಗಿನ ತ್ರಿಪದಿಗಳನ್ನು ಉದಾಹರಿಸಬಹುದು

ಇಂದು ನನ್ನಂಗಳ ಶ್ರೀಗಂಧ ನಾತಾವ
ಬಂದಿದಾನೇನ ಶ್ರೀಹರಿ । ನನಮನಿಗೆ ।
ಗಂಧದ ಮಡುವ ತುಳಕೂತ ॥

ಬಿತ್ತೀದ ಹೊಲದಾಗ ಒತ್ತಿ ಹಾಯಕಿ ಯಾರ
ಮುತ್ತಿನಡಿಯಕ್ಕೀ ಬನದಮ್ಮ । ಹಾಯ್ದರ ।
ಬಿಚ್ಚಿ ಬಿದ್ದಾವ ಬಿಳಿಜೋಳ ॥

ಹೂವಿನಾಗ ಹುದಗ್ಯಾನ ಮಾಲ್ಯಾಗ ಮಲಗ್ಯಾನ
ಮೊಗ್ಗ್ಯಾಗ ಕಣ್ಣ ತೆರದಾನ । ಲಿಂಗಯನ ।
ನೋಡಟಿಗೆ ನಿದ್ದಿ ಬಯಲಾಗಿ ॥

**ಶರಣ ಪದಕ್ಕೆ ಶರಣು :**

ಕಾಯಕಕ್ಕೆ ಕಾಲುಬಿದ್ದು, ಶರಣಪದಕ್ಕೆ ಶರಣು ಹೊಡೆದು, ನಾವಿಂದು
ಅದೆಂಥದೋ ಶಿಕ್ಷಣದೀಕ್ಷೆಹೊಂದಿ, ಸಾಹೇಬಕೀ ವೇಷತೊಟ್ಟು ಪರರ ಸೇವೆಗೆ ಅಣಿ
ಯಾಗಿದ್ದೇವೆ. ಅದು ಕಾಯಕವಂತೂ ಅಲ್ಲೇ ಅಲ್ಲ. ಉದ್ಯೋಗವೆನ್ನಬಹುದಾದರೆ
ಅದರಲ್ಲಿ ಉತ್ + ಯೋಗದ ಲಕ್ಷಣವೇ ಕಂಡುಬರುತ್ತಿಲ್ಲ. ದುಡಿಮೆಯಿಲ್ಲದ
ಸೋಮಾರಿ ಹಗಲು ತೂಕಡಿಸುತ್ತಾನೆ; ರಾತ್ರಿ ನಿದ್ದೆ ಮಾಡುವದಿಲ್ಲ. ಕನಸಿನಲ್ಲಿ ಸಹ
ನಿದ್ರೆ ಮಾಡದವನು ಕಾಲುಕುಣಿಸುತ್ತ ತರಾ ತರಲ ಹಾಡಬಲ್ಲನೆಂತು ? ಕಟ್ಟಿಗೆ ಕುಳಿತು
ಕಥೆಹೇಳಬಲ್ಲನೆಂತು ? ದುಡಿಮೆಯಿಲ್ಲದ ಬದುಕು ಜಾನಪದಜೀವನವೂ ಅಲ್ಲ, ನಾಗರಿಕ

ಜೀವನವೂ ಇಲ್ಲ. "ದುಡಿದು ಬೇಸತ್ತಾಗ, ದುಡಿದುಡಿದು ಸತ್ತಾಗ" ಮಾತ್ರ ಜನಕೆ ಹಿಗ್ಗಿನಹಾಡು ನೀಡಲು ಸಾಧ್ಯವಿದೆ. ಆದ್ದರಿಂದ ನಮ್ಮ ಬದುಕು ಭಾಗ್ಯದ್ದಾಗುವುದಕ್ಕೆ ಮೊದಲು ದುಡಿಮೆಯು ಒಲುಮೆ ಮೂಡಿಸಿಕೊಳ್ಳಬೇಕು. ದುಡಿಮೆಯು ಒಲವು ಇದ್ದಲ್ಲಿ ಹಾಡಿನ ಸಿಲವು, ಕಥೆಯ ಚೆಲುವು ಸಂಗಳಿಸಬಹುದಾಗಿದೆ. ದುಡಿಮೆಯು ಒಲುಮೆ, ಉದ್ಯೋಗದ ಮೇಲು-ಕೀಳುಗಳನ್ನು ಸಮಪಾತಳಿಗೆ ತಂದು, ಅದನ್ನು ಕಾಯಕವನ್ನಾಗಿ ಮಾರ್ಪಡಿಸಿಕೊಳ್ಳುತ್ತದೆ. ಆಗ ಅನಿಸುತ್ತದೆ- "ಕಸವ ಬಳಿದ ಕೈ ಕಸ್ತೂರಿ ನಾತಾವ." ಹೀಗೆನ್ನುವವರಿಗೆ ಕಸ-ಕಸ್ತೂರಿಗಳಲ್ಲಿ ಭೇದವೇ ತೋರುತ್ತಿಲ್ಲ ವೆಂದಲ್ಲ. ಈ ಮಾತಿಗೆ "ಕಸ್ತೂರೆಂಥ ಚಾಲ ಕಸದಾಗ ಆಡಿದರ । ಕಸವೀಸಿ ನನ್ನ ಮನದಾಗ" ಈ ಪದ್ಯವೇ ಸಾಕ್ಷಿ.

"ಕಸಬರಿಗೆ ನೀನಿದ್ದರೀ ಮನೆಯು ಹಸನಾವೆ" ಎನ್ನುತ್ತಾಳೆ ಗೃಹಿಣಿ.

"ಹಂತೀಯು ನಮ್ಮೆತ್ತು ಹಂತೀಲಿ ಬಂದರ । ಸೆರಗೀಲಿ ಸುಂಕ ವರಸೇನ" ಎನ್ನುತ್ತಾಳೆ ಅಕ್ಕ.

ಕುರಿಕಾಯುವ ತಮ್ಮನ ಕಾಯಕದ ಸೊಗಸನ್ನೂ ಬಲು ಅಭಿಮಾನದಿಂದ ಹೇಳಿಕೊಳ್ಳುತ್ತಾಳೆ ಆಕೆ—

ಎಳೆಹುಲ್ಲು ಅಡಿವ್ಯಾಗ ತಿಳಿನೀರು ಕೊಳದಾಗ
ಬಲವುಳ್ಳ ನಾಯಿ ಸಾಕ್ಯಾನ । ನನ ತಮ್ಮ ।
ಒನಪೀಲೆ ಕುರಿಯ ಕಾಯ್ದಾನ॥

ಮಗ ಮಾಡಿದ ಕಬ್ಬಿನ ತೋಟ ಅಲೌಕಿಕವಾದುದೆಂದೇ ಭಾವಿಸುತ್ತಾಳೆ ಆತನ ತಾಯಿ-

ಕಾಮನ ತೋಟಕ ಭೀಮನ ಕಾವಲು
ಜೇನು ತುಪ್ಪದಲೆ ಮಡಿಯೆಳೆದು। ನನಬಾಲ।
ಕಾಮು ಬೆಳೆದಾನ ಕರಿಕಬ್ಬ॥

ನಮ್ಮ ಜನಪದ ಜೀವನದಲ್ಲಿ ಹೆಣ್ಣುಮಕ್ಕಳು, ಮನೆ-ಮನೆತನ-ಮಕ್ಕಳ ಸಲುವಾಗಿ ಸಿಪ್ಪಾಮುಕರ್ಮ ಮಾಡಬಲ್ಲವರಾಗಿದ್ದರು. ಆಡಿಬಂದ ಕಂದಮ್ಮನ ಅಂಗಾಲನ್ನು ತೆಂಗಿನ ನೀರಿನಿಂದ ತೊಳೆಯಲು ತವಕಿಸುತ್ತಾಳೆ ತಾಯಿ. ಆಕೆ ತೊಡುವ ಹೂಣಿಕೆಯೆಂಥದೆಂದರೆ:

ಹೆಣ್ಣಿನ ಕಾಯುವ ಮಣ್ಣು ಪ[illegible]
ಸುಣ್ಣದ್ಹರಳಾಗಿ ಸುಡಬೇಕ [illegible]
ಮಣ್ಣುಮಾಡಿ ಮರ್ತ್ಯ ಗೆದಿಬೇಕ॥

ಈ ತ್ರಿಪದಿ ಭಗವದ್ಗೀತೆಯ ಸಾರವಾಗಿದೆ. ಇಂಥ ಉಚ್ಚ ವಿಚಾರಸರಣಿ ತಂಬಾಕದ ಬೆಳೆಯಲ್ಲಿ ಮಾರಕವಾದ ಬಂಬಾಕದ ಕಸವನ್ನು ಕಾಣಬಹುದಾಗಿ ಶ್ರೀಮಂತ ಮನೆತನದಿಂದ ಬಂದ ಮೊದಲಗಿತ್ತಿಯ ವಿಚಾರಸರಣಿಯೇ ಬೇರೆಯಾಗಿದೆ

ಹೇಡ್ಸ್ಹುಡಗಿ ಹೊರಲಾಕ ಬಡವರ ಮಗಳೇನ
ಮುಂದಿನೂರಾಗ ತವರವರು। ಕೇಳಿದರೆ।
ಮುಂಜಾನೆ ತೊತ್ತು ಕಳವ್ಯಾರ॥

ಇದು ಶ್ರೀಮಂತಿಕೆಯ ಸೊಲ್ಲು, ಮೊದಲಗಿತ್ತಿಯದು. ಆದರೆ ಹೆಣ್ಣಿನ ರು ಯನ್ನು ಹೀಚಿನಲ್ಲಿಯೇ ತೋರಬಲ್ಲ ಕೊಡುಗೂಸಿನ ಮಾದರಿಯಿಂತಿದೆ:

ತಿಂದೋಡಿ ನಿನ್ನಗಂಡ ತಿಂದೇನು ಮಾಡಂದ।
ತಿಂದೇಳು ಮನೆಯ ತಿರುಗೆಂದ। ಉಟ್ಟಶಾಲಿ।
ಉಂಗುಟಕ ಹಾಕಿ ಹರಿಯಂದ॥

**ಚೊಕ್ಕ ಚಿನ್ನ, ಚಿನ್ನದ ನಾಣ್ಯ:**

ಹೆಣ್ಣು, ಹೆಣ್ಣಿನ ಸಾಹಿತ್ಯ ಎಂದರೆ ಚೊಕ್ಕ ಚಿನ್ನ. ಗಂಡು, ಗಂಡಿನ ಸಾಹಿತ್ಯ ಎಂದರೆ ಚಿನ್ನದ ನಾಣ್ಯ. ಚಿನ್ನದಲ್ಲಿ ಟಂಕುಬೆರೆಯದೆ ನಾಣ್ಯವೇ ಆಗದು. ನಾಣ್ಯಕ್ಕೆ ತಾಳಿಕೆ ಬರುವುದೂ, ಸವಕಳಿಯನ್ನು ತಡೆಯುವುದೂ ಚಿನ್ನದಲ್ಲಿ ಟಂಕುಬೆರೆಯುವುದ ರಿಂದಲೇ. ಅಕ್ಷರಗಳಲ್ಲಿ ಸ್ವರ, ವ್ಯಂಜನಗಳಿರುವಂತೆ. ನಮ್ಮ ಜನಪದದಲ್ಲಿ ಹೆಣ್ಣು, ಗಂಡು ಇದ್ದಾರೆ. ಹೆಣ್ಣು ಸ್ವರ, ಗಂಡು ವ್ಯಂಜನ. ಸ್ವರವು ಸ್ವತಂತ್ರವಾಗಿ ಉಚ್ಚರಿಸಲ್ಪಡುವ ಅಕ್ಷರ. ಆದರೆ ವ್ಯಂಜನವು ಸ್ವರಕೂಡಿದಾಗಲೇ ಉಚ್ಚರಿಸಲ್ಪಡುವಂಥದು. ಇನ್ನು, ಸ್ವರದಲ್ಲಿಯೂ ಸೇರದ, ವ್ಯಂಜನದಲ್ಲಿಯೂ ಸೇರದ ಅಯೋಗವಾಹಗಳಿರುವಂತೆ ಮಗುಗಳು. ಅವು ಒಂದು ದೃಷ್ಟಿಯಿಂದ ಸ್ವರಗಳೂ ಅಹುದು, ಇನ್ನೊಂದು ದೃಷ್ಟಿ ಯಿಂದ ವ್ಯಂಜನಗಳೂ ಅಹುದು. ಸ್ವರ–ವ್ಯಂಜನ–ಅಯೋಗವಾಹ ಅಕ್ಷರಗಳಿರುವಂತೆ, ಹೆಂಗಸರ ಹಾಗೂ ಗಂಡಸರ ಮತ್ತು ಮಗುಗಳ ಸಾಹಿತ್ಯವಿರುತ್ತದೆ. ಹೆಣ್ಣುಮಕ್ಕಳ ಪಂಚದಶಿ, ಗಂಡುಮಕ್ಕಳ ವ್ಯವಹಾರ ಮಾಧರ್ಯಗಳನ್ನು ಮೀರಿದ್ದೇ ಮಕ್ಕಳ ಸಾಹಿತ್ಯ. ಕಾಯಕದಲ್ಲಿ ತಲ್ಲೀನಗೊಂಡ ಹೆಣ್ಣುಮಕ್ಕಳ ತ್ರಿಪದಿ ಸಾಹಿತ್ಯವನ್ನು ಈಗಾಗಲೇ ಉದಾಹರಿಸಲಾಗಿದೆ. ಇನ್ನು, ಕಾಯಕದಲ್ಲಿ ಸಾಮರಸ್ಯಗೊಂಡ ಗಂಡುಮಕ್ಕಳು ಹಾಡಿದಂತೆ ಕಥೆಯನ್ನೂ ಹೇಳಿದ್ದಾರೆ. ಇಲ್ಲಿ ಕಥೆಗಳಿಂದಲೇ ಅವರ ವ್ಯವಹಾರ ಮಾಧರ್ಯವನ್ನು ಅರಿತುಕೊಳ್ಳಬಹುದಾಗಿದೆ.

ಲಕ್ಷಣವು

**ಗಂಡಿನ ವ್ಯವಹಾರ ಕುಶಲತೆ:** ನೆ; ರಾತ್ರಿ

ಗಂಡಸು ವ್ಯವಹಾರ ಜೀವಿ. ತರಪ್ಪಿನಿಂದ ಅವನಲ್ಲಿ ಕರುಳಿನ ಕಕ್ಕುಲತೆಗಿಂತ ಬುದ್ಧಿಯ ಚಾತುರ್ಯವೇ ಹೆಚ್ಚು ಬರುವ ಗುಂಜಿತೂಕ. ಅದೇ ಚಾತುರ್ಯ ಹೆಣ್ಣ

ನಲ್ಲಿ ಚತುರಾಯಿಯೆನಿಸುತ್ತದೆ. ಅಕಬರ-ಬೀರಬಲ್ಲರನ್ನೋ ತೆನ್ನಾಲಿ ರಾಮಕೃಷ್ಣನನ್ನೋ ಆರೋಪಿಸಿ ಗಂಡಸು ಅವೆಷ್ಟೋ ಚಾತುರ್ಯದ ಕಥೆಗಳನ್ನು ಸೃಷ್ಟಿಸಿದ್ದಾನೆ. ಅದರಂತೆ ಇಸೋಪನ ಕಥೆಗಳನ್ನು ಹೋಲುವ "ನಾಡನೆಲೆಗಾರ" ಹಾಗೂ "ನನ್ನ ತಾಯಿ" ಯಂಥ ಅಸಂಖ್ಯ ಕಥೆಗಳನ್ನು ರಚಿಸಿ ಬಿಟ್ಟಿದ್ದಾನೆ. ವ್ಯವಹಾರಜ್ಞಾನವೇ ಅವುಗಳ ಜೀವಾಳ ವೆಂದು ಸ್ಥೂಲವಾಗಿ ಹೇಳಿದರೂ, ಅವುಗಳ ಸತ್ತ್ವವು ಅವೆಷ್ಟೋ ಆಂತರಿಕ ಜಡ್ಡು ಗಳನ್ನು ಹೊಡೆದು ಹಾಕಬಲ್ಲವು. ಮೂರು ಹೋರಿಗರುಗಳ ಕಥೆ ಎಲ್ಲರೂ ಕೇಳಿದ್ದು. "ಅವ್ವನ ಮೊಲೆಯಲ್ಲಿ ವಿಪುಲ ಹಾಲು ಇರುವದೆಂ"ದು ಒಕ್ಕಲಿಗರ ಕರು ಜಿಗಿದಾಡಿ ಹೇಳಿದರೆ, ಉಪಾಧ್ಯಾಯರ ಕರು "ಅವ್ವನಿಗೆ ಮೊಲೆಗಳಿರುವವೇ" ಎಂದು ಕಾಲೆಳೆಯುತ್ತ ಕೇಳುವದು. ಗೌಳಿಗರ ಕರುವಾದರೋ "ಅವ್ವನಿಗೆ ಮೊಲೆಗಳಿರುವವೇ" ಎಂದು ಸೊಂಟ ತಗ್ಗಿಸಿ ಚಕಿತಗೊಳ್ಳುವದು. ಬದುಕುಮಾಡುವ ಹವ್ಯಾಸದಿಂದ ಒಕ್ಕಲಿಗರು ಆಕಳನ್ನು ಹಿಂಡಿಕೊಳ್ಳದೆ, ಹಾಲನ್ನೆಲ್ಲ ಹೋರಿಕರುವಿಗೇ ಬಿಟ್ಟು ಕೊಡುವರು. ಹಯನು ಉಣ್ಣುವ ಸಲುವಾಗಿ ಆಕಳು ಸಾಕಿದ ಉಪಾಧ್ಯಾಯರು, ಹಾಲನ್ನೆಲ್ಲ ಜಬ್ಬಿ ಹಿಂಡಿಕೊಂಡು ಶಾಸ್ತ್ರಕ್ಕಾಗಿ ಕರುಬಿಡುವುದರಿಂದ ಅದು ಹಾಲಿಲ್ಲದ ಸೊಟ್ಟ ಮೊಲೆಯನ್ನೇ ಗೀರುತ್ತದೆ. ಗೌಳಿಗರಂತೂ ಕರುವಿಗೆ ಹಾಲು ಬಿಡುವುದಂತೂ ಒತ್ತಟ್ಟಿಗಿರಲಿ, ಕೆಚ್ಚಲಿನ ದರ್ಶನವನ್ನೂ ಕರುವಿಗೆ ಮಾಡಿಸುವದಿಲ್ಲ. ಆ ಮೂರು ಕರುಗಳಂತೆ ಮೂರು ವಿಧದ ಧಾರ್ಮಿಕ ರನ್ನೂ, ವಿದ್ಯಾರ್ಥಿಗಳನ್ನೂ ಕಾಣಬಹುದಾಗಿದೆ. ಚಂಚಲಚಿತ್ತ ವಿದ್ಯಾರ್ಥಿಗಳನ್ನು ಕುರಿತ ಇನ್ನೊಂದು ಕಥೆ–ಶಾಲೆಯಲ್ಲಿ ಮಾವಿನ ಹಣ್ಣಿನ ಬಗ್ಗೆ ಪಾಠ ನಡೆದಾಗ ಚಂಚಲ ಚಿತ್ತನೆಂದು ಕಂಡು ಬಂದಾಗ ಬಾಲಕನಿಗೆ ಗುರುಗಳು ಕೇಳಿದರು–"ಮಾವಿನ ಮರಕ್ಕೆ ಏತರಕಾಯಿ ಆಗುತ್ತವೆ ? ವಿದ್ಯಾರ್ಥಿ ತಟ್ಟನೇ ಹೇಳಿದನು "ಕಾರ್ಜೀಕಾಯಿ" ಎಂದು. ಅಂದು ಆತನು ಮನೆಯಲ್ಲಿ ತಾಯಿ ಕಾರ್ಜೀಕಾಯಿ ಮಾಡುವುದನ್ನು ನೋಡಿ, ಜುಕ್ಕು ಜುಲುಮೆಯಿಂದ ಶಾಲೆಗೆ ಬಂದಿದ್ದನು. ಭಕ್ತನನ್ನು ಕಾಡುವುದೇ ದೇವರ ರೀತಿ ಮತ್ತೊಂದು ಕಥೆಯಲ್ಲಿ ಮೂಡಿ ನಿಂತಿದೆ. ಊರ ಗೌಡನ ಕನಸಿನಲ್ಲಿ ಹನುಮಂತ ದೇವರು ಬಂದು ತನಗೆ ಸೊಂಟ ನೋವು ಆಗಿರುವುದರಿಂದ ಎಣ್ಣೆಮಜ್ಜನ ಮಾಡಿಸೆಂದು ಒತ್ತಾಯ ಪಡಿಸಹತ್ತಲು, ಗೌಡ ಕೇಳಿದನು "ಸೊಂಟನೋವು ಆಗಲು ಕಾರಣವೇನು?"– "ನಿನ್ನೆ ಚಾವಡಿಯಲ್ಲಿ ಇಳಕೊಂಡ ಫೌಜದಾರನು ನನ್ನ ಹೆಗಲ ಮೇಲೆ ಕಾಲೂರಿ ಜಿಗಿದು ಕುದುರೆ ಹತ್ತಿದ್ದರಿಂದ ಆ ಇಸಲಿಗೆ ನನ್ನ ಸೊಂಟು ಚಳಕ್ ಅಂದಿತು" ಎಂದು ಹನುಮಂತ ದೇವರು ಹೇಳಲು, "ಫೌಜದಾರನನ್ನು ಏಕೆ ಬಿಟ್ಟೆ?" ಎಂದ ಗೌಡನ ಪ್ರಶ್ನೆಗೆ,–"ಆ ಮ್ಲೇಂಛನು ನನ್ನ ಭಕ್ತನಲ್ಲವಲ್ಲ ! ಆದ್ದರಿಂದ ನನ್ನ ಪರಮಭಕ್ತನಾದ ನಿನ್ನನ್ನು ಹಿಡಿದಿ ದ್ದೇನೆ" ಎಂದನಂತೆ ಆಂಜನೇಯ. ಅಂಜಿದವರ ಮೇಲೆ ದಬ್ಬಾಳಿಕೆ ಮಾಡುವ ಅಧಿಕಾರಿ ಯಂತಿದ್ದಾನೆ ಇಲ್ಲಿಯ ಆಂಜನೇಯ. ಜಂಗಮಪಂಕ್ತಿಯಲ್ಲಿ ಒಬ್ಬ ವೇಷದ ಜಂಗಮಯ್ಯನು ಸೇರಿದ್ದನು. ಮನೆಯ ಶೆಟ್ಟರು ಸಂಶಯ ಪಟ್ಟು ನೀನಾರು–ಎಂದು ಕೇಳಿದರು. ಅದಕ್ಕ

"ಗಂಡುಗಚ್ಚಿ ಹಾಕ್ಯಾಳ। ದುಂಡಬುಟ್ಟಿ ಹಿಡದಾಳ। ಹೆಂಡೀ ಹಿಡೀತ ನಡದಾಳ
ಇದು ಮದುವಣಿಗನ ಪಡಿಯೊಗಟಾಗಿದೆ.

"ತೆಳ್ಳನ ರೊಟ್ಟಿ। ಬೆಳ್ಳನ ಮಸರ
ತಂಪತಿನಾಗೆದ್ದು ನ್ಯಾರೀ ಮಾಡ್ತಾರ"

ಈ ಒಗಟಿನಲ್ಲಿ ಹೆಂಡತಿ ತನ್ನ ಗಂಡನ ಒಂದು ಕಾರ್ಯಕ್ರಮವನ್ನು ವರ್ಣಿಸಿದ್ದಾಳೆ
ಇನ್ನು. ಹೆಂಡತಿಯ ಆಗಮನವನ್ನು ಬಣ್ಣಿಸಿದ ಗಂಡನ ಒಗಟು ಕೇಳೋಣ—

"ಕಾಲಾಗ ತೋಡೆ। ಉಡ್ಯಾಗ ಪೇಡೆ
ಮ್ಯಾಳಿಗೀ ಏರಿ ಮಾವಾ ಅಂತ ಬರ್ತಾಳ"

ಹೀಗೆ ನಮ್ಮ ಜನಪದವು ತನ್ನ ಸಹಜಯೋಗದ ಸಹವಾಸದಲ್ಲಿ ತನ್ನನ್ನು ಅಸತ್‌ನಿಂದ ಸತ್‌ದೆಡೆಗೆ ಸಪ್ಪಳಿಲ್ಲದೆ ಕೊಂಡೊಯ್ಯುತ್ತ ಆನಂದದಿಂದ ಹಾಡಿದೆ, ಉಲ್ಲಾಸದಿಂದ ಕುಣಿದಿದೆ, ಕಥೆ ಹೇಳಿದೆ, ಕಥೆ ಕೇಳಿದೆ, ನಕ್ಕಿದೆ, ನಗಿಸಿದೆ. ಕನ್ನಡಿಯನ್ನು ಹಲವು ವಿಧದ ತೊಡುವೊಡವೆಗಳಿಂದ ಸಿಂಗರಿಸಿದೆ. ಪಡೆನುಡಿ ಕೊಡುನುಡಿ, ನಂಬಿಗೆ ರೂಢಿ ಮೊದಲಾದ ಅಷ್ಟೈಶ್ವರ್ಯಗಳನ್ನು ಕನ್ನಡ ಬೊಕ್ಕಸಕ್ಕೆ ನಿರರ್ಗಳವಾಗಿ ನೀಡಿದೆ. ಅವುಗಳನ್ನೆಲ್ಲ ವಿಶದಪಡಿಸುವದು ಒತ್ತಟ್ಟಿಗಿರಲಿ, ಅವುಗಳ ಪರಿವಿಡಿಯನ್ನು ರೇಖಿಸುವುದಕ್ಕೂ ಅವಕಾಶವಿಲ್ಲ; ಸ್ಥಳವೂ ಇಲ್ಲ.

**ಮಹಾಪೂರದ ಹಾವಳಿ :**

ಎಲ್ಲಿಯವರೆಗೆ ನಮ್ಮ ಹೆಣ್ಣುಮಕ್ಕಳು–ಗಂಡುಮಕ್ಕಳೆಲ್ಲ ಒಂದೊಂದು ಕಾಯಕವನ್ನು ವಹಿಸಿ, ಅದರಲ್ಲಿ ತಲ್ಲೀನರಾಗುವದಿಲ್ಲವೋ ಅಲ್ಲಿಯವರೆಗೆ ಅವರು ಹಾಡುತ್ತ, ಕಥೆಹೇಳುತ್ತ, ಗಾದೆ-ಒಗಟುಗಳನ್ನು ಬಳಸುತ್ತ ಆನಂದವನ್ನು ಪಡೆಯಲು ಸಮರ್ಥರಾಗುವದಿಲ್ಲ. ಹಿಂದಿನ ತ್ರಿಪದಿಗಳನ್ನೇ ವಿಧಾನ–ಸನ್ನಿವೇಶಗಳಿಲ್ಲದೆ ಹಾಡುತ್ತ ಹೋದರೆ ಅವು ಪ್ಲಾಸ್ಟಿಕ್ ಹೂಗಳಂತೆ ಆಕರ್ಷಿಸಬಹುದು, ಅಷ್ಟೇ. ಆದರೆ ಅವುಗಳ ಸುಗಂಧ ಅನುಭವಕ್ಕೆ ಬರಲಾರದು. ಬೀಸು ಕುಟ್ಟುವ ಹಾಗೂ ಹತ್ತಿ ಬಿಡಿಸುವ ಕಾಯಕಗಳೇ ಹೇಳಹೆಸರಿಲ್ಲದಾದ ಬಳಿಕ, ಆನುಷಂಗಿಕವಾಗಿ ಹಾಡುವ ತ್ರಿಪದಿಗಳು ಯಾವ ಹೆಸರಿನಲ್ಲಿ ಮುಂದೆ ಬಂದಾವು ? ಅರಿಷಿಣಪಚ್ಚಿ, ನೂಲುಸುತ್ತಿ, ಸೆಂಡಿಗೆಕಡಿದು, ಐರಾಣಿ ತಂದು, ಭೂಮಮಾಡಿ, ಅಕ್ಷತೆಹಾಕಿ, ಕೂಸು ಒಪ್ಪಿಸಿಕೊಡುವ ವಿಧಾನಗಳಿಲ್ಲದೆ, ಗುಡಿಯಲ್ಲಿಯೋ ಗದ್ದುಗೆಯ ಬಳಿಯೋ ಅರೆಚಣದಲ್ಲಿ ಮದುವೆ ಮುಗಿಸುವುದು ಅನಿವಾರ್ಯವಾದಾಗ, ವಿಧಾನದ ಹಾಡುಗಳು ಹವ್ಯಾಸಿಗಳ ತರಲಲವಾಗಿ ಮಾತ್ರ ಉಳಿಯಬಲ್ಲವು. ಹೊಲದೊಳಗಿನ ರೆಂಟೆಕುಂಟಿ, ಮೊಟ್ಟೆ ಹಂತಿ ಮೊದಲಾದ ಕೃಷಿಕರ್ಮಗಳನ್ನು ಯಂತ್ರಗಳೇ ಮಾಡಿ ಮುಗಿಸತೊಡಗಿದಾಗ ಹಂತಿಯ ಹಾಡು, ಮೊಟ್ಟೆಯಹಾಡು,

ಆಣೆಪೀಣೆಹಾಡು ಹಾಡುವದು ಯಾವಾಗ? ಅಪ್ರಸಂಗವೇ ಇರಲಿ ಅಧಿಕಪ್ರಸಂಗವೆ ಇರಲಿ ಧ್ವನಿಮುದ್ರಿಕೆಗಳನ್ನು ಒದರಿಸುವದೊಂದೇ ಸುಗಮ ದಾರಿ. ರಥೋತ್ಸವ, ಜಾತ್ರೆ ಸಪ್ತಾಹ, ಸತ್ಯನಾರಾಯಣ ಕಥೆ–ಸಣ್ಣದಿರಲಿ ದೊಡ್ಡದಿರಲಿ ಊರೆಲ್ಲಾ ಕೀಸರಿಡುವಂತೆ ಧ್ವನಿಮುದ್ರಿಕೆಯನ್ನು ಲೌಡಸ್ಪೀಕರ್ ಹಚ್ಚಿ ಕೇಳಿಸಲು ತೊಡಗುವವರಿಗೆ, ಹಾಡುವುದಕ್ಕೆ ಹೆಂಗಸರೂ ಬೇಡ; ಕಥಿಸುವುದಕ್ಕೆ ಗಂಡಸರೂ ಬೇಡ; ಪುರಾಣ, ಕಿರ್ತನ, ಗೊಂದಲ, ಪ್ರವಚನಗಳೆಲ್ಲ ಧ್ವನಿಮುದ್ರಿಕೆಯ ಮುಖಾಂತರವೇ ಕೇಳುವ ಪ್ರಸಂಗ ಸಾರ್ವತ್ರಿಕ ವಾಗಿದೆ. ಕೃತ್ರಿಮ ಗರ್ಭಧಾರಣೆಯನ್ನು ಸ್ವಾಗತಿಸಿದ ನಾವು, ಈ ಸೌಕರ್ಯವನ್ನು ಒಲ್ಲಗಳೆಯುವೆವೆ? ಜಗತ್ತು ತನ್ನಿಂದ ತಾನೇ ಅಸ್ತವ್ಯಸ್ತಗೊಳ್ಳುವುದು ಕಡಿಮೆ. ಲೋಕದ ಡೊಂಕು ತಿದ್ದುವವರ ಕಣ್ತಪ್ಪು–ಕೈತಪ್ಪುಗಳಿಂದಲೇ ಹೆಚ್ಚು ಹದಗೆಟ್ಟಿದೆ. ಗಣಪತಿ ಮಾಡುವಾಗ ಸೊಂಡೆ ಹಚ್ಚುವ ಸ್ಥಳವನ್ನೇ ಮರೆತರೆ ಅದೇನಾದಿತೊ ಹೇಳ ಲಿಕ್ಕಾಗದು.

## ತಪ್ಪದ ದಾರಿಯಲ್ಲಿ :

ಸಾಮೂಹಿಕ ಜೀವನದಲ್ಲಿ ನಮ್ಮ ಜನಪದವು ಮೂಡಿಸಿದ ಹೆಜ್ಜೆಗಳನ್ನು ಇಂದಿನ ದುಷ್ಕಾಣ್ಣಿನಲ್ಲಿಯೂ ಗುರುತಿಸಬಹುದಾಗಿದೆ. ಹಿಂದಿನವರಿಗೆ ನಾಣ್ಯ-ನೋಟುಗಳ ಮೇಲಿನ ಮುಖ ಕಾಣಿಸುವದಕ್ಕಿಂತ ಮೊದಲು, ಮುಂಡದ ಮೇಲೆ ಕಂಗೊಳಿಸುತ್ತಿರುವ ಜೀವಂತ ಮುಖ ಮಾತ್ರ ಕಾಣಿಸುತ್ತಿತ್ತು. ಪ್ರೇಮವೇ ಸಾಮೂಹಿಕ ಜೀವನವನ್ನು ಅಂದು ಪವಣಿಸಿದ್ದರಿಂದ ಅದಕ್ಕೊಂದು ಪ್ರಸನ್ನತೆ ಉಂಟಾಗಿತ್ತು. ಸಮಷ್ಟಿಯ ಅಂತ ರಾತ್ಮವೇ ಜನಪದ ಜೀವನದ ಆಡಳಿತವನ್ನು ಅಂದು ನಿರ್ವಹಿಸುತ್ತಿತ್ತೇನೋ. ಅದ ಕ್ಕೊಂದು ಜೀವಂತ ಉದಾಹರಣೆಯಾಗಿ ಬಂದಿದೆ–ಕೆಳಗೆ ಕಾಣಿಸಿದ ಈ ಕಥೆ—

ಹನುಮರಡ್ಡಿ ಗೋವಿಂದರಡ್ಡಿಗೆ ತನ್ನ ಹೊಲ ಮಾರಿದ್ದನು. ಗೋವಿಂದರಡ್ಡಿ ಹೊಲದಲ್ಲಿ ನೇಗಿಲು ಹೊಡೆಯುತ್ತಿರುವಾಗ ಹೊನ್ನು ತುಂಬಿದ ಕೊಪ್ಪರಿಗೆ ಸಿಕ್ಕಿತು. ಅದನ್ನು ಹನುಮರಡ್ಡಿಗೆ ಒಪ್ಪಿಸಹೋದನು. ನೀನು ಮಾರಿದ ಹೊಲದಲ್ಲಿ ಸಿಕ್ಕಿತೆನ್ನಲು ಹನುಮರಡ್ಡಿ ಅಂದದ್ದೇನೆಂದರೆ–ಮಾರಿದ ಹೊಲದಲ್ಲಿ ಇದ್ದುದೆಲ್ಲ ಕೊಂಡವನದೇ. ಆದ್ದರಿಂದ ಅದನ್ನು ನಿಮ್ಮ ಮನೆಗೆ ತೆಗೆದುಕೊಂಡು ಹೋಗು–ಎಂದು ಅವನು ಗೋವಿಂದರಡ್ಡಿಗೆ ಹೇಳಿದನು. ಆ ನ್ಯಾಯ ಅರಸನ ಬಳಿಗೆ ಒಯ್ದರು. ಅರಸನು ಅದನ್ನು ತನ್ನ ಬೊಕ್ಕಸಕ್ಕೆ ಸೇರಿಸಿ ಕೊಳ್ಳದೆ ಹನುಮರಡ್ಡಿಯ ಮಗನಿಗೆ, ಗೋವಿಂದ ರಡ್ಡಿಯ ಮಗಳನ್ನು ಕೊಡಿಸಿ ಮದುವೆ ಮಾಡಿಸಿದನು. ಆಗ ಆ ಹೊನ್ನ ತುಂಬಿದ ಕೊಪ್ಪರಿಗೆಯನ್ನು ಮದುಮಕ್ಕಳಿಗೆ ಉಡುಗೊರೆಯಾಗಿ ಕೊಡಿಸಿದನು. ಇದೇ ಅಂತ ರಾತ್ಮನ ಆಳಿಕೆಯ ನೀತಿ.

ಆ ಕಾಲದ ನ್ಯಾಯ ನೀತಿಗಳು ಬೀಜರೂಪದಲ್ಲಿ ಇಂದಿಗೂ ಸಿಗುತ್ತವೆ.—

ವೀರಭದ್ರ ಒಂದು ಹಳ್ಳಿಯ ಬಡಿಗ. ದಿನಾಲು ಇಳಿಹೊತ್ತಿನವರೆಗೆ ಜೋಳ ಸಿಗದೆ, ಹೊಟ್ಟೆ ಹುರಿಹಾಕಿಕೊಂಡು ಅಲೆದಾಡುವ ಕಡುಬಡವ. ಆದರೆ ನೆಲಗಡಲೆಯನ್ನು ಬೆಳೆದ ರೈತನು, ಬಡಿಗನಿಗೆಂದು ತೆಗೆದಿರಿಸಿದ ಚುಂಗುಡಿಯನ್ನು ನೋಡಿ ವೀರಭದ್ರ ಹೇಳಿದನು– ಅಷ್ಟೇಕೆ ಕೊಡುವಿರಿ? ಸ್ವಲ್ಪ ಕೊಡಿರಿ ಆಳು, ಹೋಳು, ಲಾಗೋಡಿ ಹೋಗಿ ನಿಮಗೇನು ಉಳಿಯುತ್ತದೆ?

ಇನ್ನು ಒಂದೆರಡು ಸಾಮೂಹಿಕ ಸಹಜೀವನದ ಉದಾಹರಣೆಗಳನ್ನು ಕೇಳೋಣ–

೧) ಒಂದಾನೊಂದು ಮನೆಯಲ್ಲಿ ಹೆರಿಗೆಯ ಸಂದರ್ಭವೊದಗಿದಾಗ ಹೊರಸಲು ಹೆಣೆಸಬೇಕಾದರೆ, ಬಡಿಗನಿಂದ ತುಂಬಿಸಿದ ಚೌಕಟ್ಟು, ಅದಕ್ಕೆ ಬೇಕಾದ ನುಲಿ, ಒಂದು ತೆಂಗಿನಕಾಯಿ ಬೀದಿಯಲ್ಲಿ ಇರಿಸಿಬಿಟ್ಟರಾಯಿತು. ಅದನ್ನು ಕಂಡವರು ಮುಂದಡಿಯಿಡದೆ ಹೊರಸು ಹೆಣೆದು, ತೆಂಗು ಒಡೆದು ಕೊಬ್ಬರಿ ಹಂಚಿ ಹೋಗುತ್ತಿದ್ದರು.

೨) ಹೊಸಮನೆ ಹೊದಿಸುವಾಗ ತೊಲಿ–ಜಂತಿ–ಚಿಲಕಿಗಳನ್ನು ಹರಹಿ, ಅಂಗಳದಲ್ಲಿ ಎರಡು ತುಳಿ ಕೆಸರು ಕಲೆಸಿಟ್ಟರೆ ತೀರಿತು. ಹೋಗಿ ಬರುವವರೆಲ್ಲರೂ ಗಂಡುಗಚ್ಚೆ ಹಾಕಿ, ಆ ಮನೆಗೆ ಮೇಲು ಮುದ್ದೆ ಒಗೆದು ಹೋಗುವರು. ಅಲ್ಲಿ ಪ್ರತಿಫಲದ ಪ್ರಶ್ನೆಯೇ ಇಲ್ಲ.

೩) ಬಿತ್ತುವಾಗ, ಹರಗುವಾಗ, ಹಂತಿತುಳಿಸುವಾಗ ಒಕ್ಕಲಿಗರು ಪರಸ್ಪರ ಸವಡೀ ಕ್ರಮವನ್ನು ಅನುಸರಿಸಿ, ತಮ್ಮ ಎತ್ತು ಆಕಳುಗಳನ್ನು ಕೊಟ್ಟುಕೊಂಡು ಕೆಲಸ ಪೂರ್ತಿಗೊಳಿಸುತ್ತಿದ್ದರು. ಅದರಿಂದ ಕೆಲಸ ಸಕಾಲಕ್ಕೆ ಮುಗಿಯುತ್ತಿತ್ತು.

೪) ಮದುವೆ ಹಮ್ಮಿದಾಗ ಕುಲದವರು, ಮನೆಯ ಕೆಲಸ ಬಿಟ್ಟು, ಹಗಲು ರಾತ್ರಿಯೆನ್ನದೆ ಕಾರಣವನ್ನು ಸುವ್ಯವಸ್ಥಿತವಾಗಿ ನಿಸ್ತರಿಸಿಕೊಟ್ಟು ಹೋಗುತ್ತಿದ್ದರು. ಅದಕ್ಕಾಗಿ ಮದುವೆ ಮನೆಯವರು ಸ್ವಸಂತೋಷದಿಂದ ಓಡಾಡುವವರಿಗೆ ಊಟಕೊಡುತ್ತಿದ್ದರು.

೫) ಎಮ್ಮೆ ಈದ ಮನೆಯವರು, ಎಮ್ಮೆ ಒದೆದ ನೆರೆಮನೆಗೆ ದಿನಾಲು ತಂಬಿಗೆ ಹಾಲು ಕೊಟ್ಟು ಅವರ ಎಮ್ಮೆ ಈದಾಗ ಅದೇ ಕ್ರಮದಿಂದ ಹಾಲನ್ನು ಮರಳಿ ಪಡೆಯುತ್ತಿದ್ದರು. ಅದರಂತೆ ಕಾಳು ಕಡಿಗಳನ್ನು 'ವಾತಪದ್ಧತಿ'ಯಿಂದ ಕೊಟ್ಟು ಕೊಂಡು ಮಾಡುತ್ತಿದ್ದರು.

೬) ಮಜ್ಜಿಗೆ ಶಿವದಾನವೆನಿಸಿತ್ತು; ಮಾರಿಕೊಳ್ಳುವ ವಸ್ತುವಾಗಿರಲಿಲ್ಲ. ಅದರಂತೆ, ಪಡುವಲಕಾಯಿ, ಹತ್ತರಕಿ ಪಲ್ಲೆ, ಪುಟ್ಟೀಕಾಯಿಗಳು ಮಾರುಕಟ್ಟೆಗೆ ಬರುತ್ತಿರಲಿಲ್ಲ.

ಅವು ಪುಕ್ಕಟೆ ಕೊಡುಕೊಳ್ಳುವ ದೀನಸು ಆಗಿದ್ದವು. ಚಿಕ್ಕತಕ್ಕಡಿ ಅಂಗಡಿಯಲ್ಲಿ ಕಾಚು, ಲವಂಗ, ಪೇನ್ಸೀಲು ಇವು ಕೊಸರಿನ ವಸ್ತುವಾಗಿದ್ದವು.

೭) ವೈದ್ಯಕೀಯ ಸಹಾಯಕ್ಕಾಗಲಿ, ವಿದ್ಯಾದಾನಕ್ಕಾಗಲಿ ಪ್ರತಿಫಲ ಕೇಳುವುದು ನಿಷಿದ್ಧವಾಗಿತ್ತು.

"ಎಲ್ಲಿಯ ವರೆಗೆ ಭಾರತೀಯರು ತಮ್ಮ ಪೂರ್ವಿಕರ ಆದರ್ಶದನ್ನು ಮರೆಯು ವದಿಲ್ಲವೋ ಅಲ್ಲಿಯುವರೆಗೆ ಭಾರತೀಯರಿಗೆ ಸಾವಿನಭಯವಿಲ್ಲ" ಎಂದು ಹೇಳಿದ ವಿವೇಕಾನಂದ ಸ್ವಾಮಿಗಳು, ಊಟ–ಉಡಿಗೆ–ತೊಡಿಗೆ–ಆಡುನುಡಿಗಳಲ್ಲಿ ಪೂರ್ವಿಕರ ಆದರ್ಶವನ್ನು ಎತ್ತಿತೋರಿಸಿ, ಪರಾನುಕರಣಕ್ಕೆ ಆಸ್ಪದವೀಯದಂತೆ ಕಾಪಾಡಿಕೊಂಡು ಬಂದರೆ ನಮಗಾಗಲಿ ನಮ್ಮ ಸಂಸ್ಕೃತಿಗಾಗಲಿ ಚ್ಯುತಿಯಿಲ್ಲವೆಂದು ಅಭಯ ನೀಡಿದ್ದಾರೆ. ಅಂಥ ಅದ್ಭುತ ಸಿದ್ಧಿಗೆ ನಮ್ಮ ಜನಪದ ಜೀವನ–ಸಾಹಿತ್ಯದ ಉಪಾಸನೆಯೇ ಪರಮ ಸಾಧನವಾಗಿದೆಯೆಂದು ಹೇಳಲು ಅಡ್ಡಿಯಿಲ್ಲ. ಶಿಷ್ಟಸಾಹಿತ್ಯದ ಹೂವಿಗೆ ಜನಪದ ಸಾಹಿತ್ಯವು ತಾಯಿಬೇರಾಗಿರುವಂತೆ, ನಾಗರಿಕ ಜೀವನದ ಸಫಲತೆಗೆ ಜನಪದ ಜೀವನ ತಳರಸವು ಏರಿಬರುವಂತೆ ಸುಗಮಗೊಳಿಸಬೇಕಾಗಿದೆ.

**ಚಂಡಮಾರುತ ಪ್ರಸನ್ನಗೊಂಡ ಬಳಿಕ :**

ಹಿಂದಿನ ಜೀವನ ಉಳಿದಿಲ್ಲ, ಮುಂದಿನದು ಹೊಳೆದಿಲ್ಲವೆಂದಾಗ ಅಂದಿನ ಜನಪದ ವಾಗಲಿ, ಜನಪದ ಸಾಹಿತ್ಯವಾಗಲಿ ಉಳಿಯಬಲ್ಲದೇ ? ಮುಂದಿನವರ ಕುರುಹು ಮೊಳೆಯಬಲ್ಲದೇ ? ಬೆಳಗಾಗಲಾರದ ರಾತ್ರಿಯಿರಲು ಸಾಧ್ಯವೇ ಇಲ್ಲ. ನಾವು ಅದೆಷ್ಟು ಅಧೋಗತಿಗಿಳಿದಿದ್ದರೂ ನಮಗೆ ಪ್ರಗತಿಯ ಕಡೆಗೆ ಮಾತ್ರ ಸರಿಯಲು ಅವಕಾಶವಿದೆ. ಭಾರತಾಂತರ್ಗತ ಕನ್ನಾಡು, ಶರಣರ ಕಾಯಕದ ಮಾದರಿಯನ್ನು ಭಾರತ ದೇಶಕ್ಕೆ ಮಾತ್ರವಲ್ಲದೆ, ಇಡಿಯ ವಿಶ್ವಕ್ಕೇ ತೋರಿಸಿಕೊಡುವ ಸಂದರ್ಭವೀಗ ಪ್ರಾಪ್ತವಾದುತಿದೆ. ಕಾಯಕವೆಂದರೆ ನೌಕರಿಯಲ್ಲ; ಕೆಲಸ ಮಾತ್ರವೇ ಅಲ್ಲ. ಉದ್ಯೋಗ–ಧಂದೆ ಅಷ್ಟೇ ಅಲ್ಲ, ಉಪಜೀವನದ ಮುಖ್ಯೋಪಾಯವಂತೂ ಅಲ್ಲವೇ ಅಲ್ಲ. ಕಾಯಕವೆಂದರೆ ಕಾಯಕ. ಕೈಲಾಸದ ಆದರ್ಶ. ಮನುಷ್ಯರೂಪದ ತತ್ತಿಗೆ ಕಾವುಕೊಟ್ಟು ಮಾನವ ಮರಿ ಯನ್ನು ಹೊರಗೆಡಹುವ ಕಲೆಯೇ ಕಾಯಕ. ಅದೊಂದು ಜೀವನಯೋಗ. ಆ ಯೋಗ ದಲ್ಲಿ ನಿರತರಾದಾಗ ಹಿಂದಿನ ತ್ರಿಪದಿಗಳನ್ನು ಮೀರಿಸುವ ಗೀತಗಳನ್ನು ನಮ್ಮ ಸೋದರಿ ಯರು ರಚಿಸಬಹುದಾಗಿದೆ. ಅಂದು ಕಾಯಕಕ್ಕೆ ಶರಣಾಗತರಾದ ನಮ್ಮ ಸೋದರರು ಹಿಂದಿನ ಕಥೆಗಳ ಮೋರಿಯ ಮೇಲೆ ಹೊಡೆಯಬಲ್ಲ ಕಥೆಗಳನ್ನು ನೀಡಬಲ್ಲರು. ಜನಪದ ಸಾಹಿತ್ಯ ಸಮ್ಮೇಳನಗಳು, ನಮ್ಮ ರಥವನ್ನು ಆ ದಾರಿಯಲ್ಲಿ ನಡೆಯಿಸಿ, ಆ ಗೊತ್ತಿನ ಮುಟ್ಟುಗಟ್ಟೆಯನ್ನು ತಲಪಿಸಲು ಸಮರ್ಥವಾಗಲಿ

● ●

# ಜಾನಪದ ರಂಗ ಪ್ರದರ್ಶನದ ಉದ್ಘಾಟನೆ

ಎಸ್. ಎಸ್. ಕವಿಶೆಟ್ಟಿ

**ಮಾನ್ಯರೆ !**

ಜಾನಪದ ಸಾಹಿತ್ಯದ ಅಭಿರುಚಿ ವಿದ್ವಾಂಸರಿಗೆ ರುಚಿಸಿದ್ದು ತೀರಾ ಇತ್ತೀಚೆಗೆ. ಹಳ್ಳಿಗರು ತಲೆತಲಾಂತರವಾಗಿ, ಬಾಯಿಂದ ಬಾಯಿಗೆ ಕೇಳಿ-ಹಾಡಿಕೊಂಡು –ಉಳಿಸಿ ಕೊಂಡು ಬಂದಿರುವ ಈ ಸಾಹಿತ್ಯ, ಇಂದು ಕಣ್ಮರೆಯಾಗುವ ಸ್ಥಿತಿಯಲ್ಲಿರುವಾಗ, ಅದ ಕ್ಕೊಂದು ಮೂರ್ತಸ್ವರೂಪ ಕೊಡುವ ರೂಪದಲ್ಲಿ ನಡೆಸುತ್ತಿರುವ ಇಂತಹ ಸಮ್ಮೇಳನ ಗಳು ನಿಜವಾಗಿಯೂ ಸ್ತುತ್ಯಾರ್ಹ. ಹಳ್ಳಿಗರ ದಿನನಿತ್ಯದ ಕಾಯಕದಲ್ಲಿ ಶ್ರಮದ ಅರಿ ವಾಗದಿರಲೆಂದು ಮತ್ತು ಮನರಂಜನೆಗೆಂದು ಹಾಡಿಕೊಂಡಿರುವ ಹಾಡುಗಳು ಅನೇಕ. ವೃತ್ತಿಗಾಗಿಯೇ ಹುಟ್ಟಿಕೊಂಡ ಪ್ರಕಾರಗಳು ಇನ್ನೊಂದು ತೆರ–ಸ್ವರೂಪ ಹೊಂದಿದವು. ಅಂತಹ ಜಾನಪದ ವೃತ್ತಿಕಲಾಕಾರರು ಇಂದು ಅನೇಕ ಜನ ನೆರೆದಿದ್ದೀರಿ. ಕರ್ನಾಟಕ ವಿಶ್ವವಿದ್ಯಾಲಯದವರು, ನಿಮ್ಮನ್ನ, ನಿಮ್ಮ ಕಲೆಯನ್ನ ಗುರುತಿಸಿ, ಕೂಡಿಹಾಕಿ, ಕಲೆಯ ಮೌಲ್ಯದ ಪರಿಚಯ ಮಾಡಿಕೊಡುತ್ತಿರುವದು ಸಾಹಸದ ಕೆಲಸವೇ ಸರಿ. ಸೃಜತೆ ಯಿಂದ ತುಂಬಿರುವ ಇಂತಹ ಕಲೆ ಬಾಳಬೇಕು ಬೆಳಗಬೇಕು. ಅದಕ್ಕೆ ಸರಿಯಾದ ಒಂದು ವೈಜ್ಞಾನಿಕ ವೇದಿಕೆ ಅತ್ಯಗತ್ಯ. ಪರಿಸರ–ಕಾಲ ಬದಲಾದಂತೆ–ಜನಪದವೂ ಬದಲಾಗುತ್ತ ನಡೆದಿದೆ. ಮುಂಬರುವ ಪೀಳಿಗೆ, ಕೊನೆಯಪಕ್ಷ ಗ್ರಂಥಸ್ಥ ರೂಪದಲ್ಲಿ ದೊರೆಯುವ ವೃತ್ತಿ ಕಲಾವಿದರ ಚರಿತೆಯನ್ನ ಓದಿಯಾದರೂ ಕಲ್ಪಿಸಿಕೊಳ್ಳಲೆಂದು ಇಂದು ಜಾನಪದ ಸಾಹಿತ್ಯವನ್ನು ಅಕ್ಷರರೂಪದಲ್ಲಿ ಸೆರೆಹಿಡಿಯುವದು ಅನಿವಾರ್ಯದ ಸಂಗತಿ ನಿಜ, ಆದರೆ ಜಾನಪದ ಹಾಡುಗಳ ಮಾಧುರ್ಯವನ್ನು ಹಾಡುವವರ ಬಾಯಿಂದ ಕೇಳಿಯೇ ಆನಂದಿಸ ಬೇಕು,

ಇಲಕಲ್ಲು ಕಲೆಯ ತವರೂರು. ಇಲಕಲ್ಲ ಜನತೆ ಸದಾಕಾಲ ಕಲಾಕಾರರಿಗೆ ಪ್ರೋತ್ಸಾಹಿಸುತ್ತ–ಪೋಷಿಸುತ್ತಾ ಬಂದಿದೆ. ಇಂತಹ ಈ ಕಲೆಯ ಬೀಡಿನಲ್ಲಿ ಹಮ್ಮಿಕೊಂಡಿರುವ ಇಂದಿನ ಈ ರಂಗಪ್ರದರ್ಶನ ಶುಭದಾಯಕವಾಗಲೆಂದು ಹಾರೈಸುತ್ತೇನೆ.

● ●

## ಗೋಷ್ಠಿ : ೧

| | | |
|---|---|---|
| ಅಧ್ಯಕ್ಷರ ಭಾಷಣ | : | ಡಾ. ಜೀ. ಶಂ. ಪರಮಶಿವಯ್ಯ |
| ಗೊರವರು | : | ಪ್ರೊ. ಎಂ. ಬಿ. ಕಣವಿ |
| ಗೊಂದಲಿಗರು | : | ಶ್ರೀ ನಿಂಗಣ್ಣ ಸಣ್ಣಕ್ಕಿ |
| ದೇವದಾಸಿಯರು (ಪಾತರದವರು) | : | ಡಾ. ಮ. ಗು. ಬಿರಾದಾರ |
| ದಾಸರು | : | ಪ್ರೊ. ಬಿ. ವಿ. ಗುಂಜೆಟ್ಟಿ |
| ಕರಪಲ್ಲದವರು | : | ಪ್ರೊ. ಎಸ್. ಜಿ. ಹುಬ್ಬಳ್ಳಿ |
| ಚೌಡಕಿಯವರು | : | ಡಾ. ಎಂ. ಬಿ. ಕೊಟ್ರಶೆಟ್ಟಿ |
| ಮುಳ್ಳಾವಿಗೆ ಅಯ್ಯನವರು | ; | ಪ್ರೊ. ಬಿ. ಸಿ. ಜವಳಿ |

# ಗೊರವರು

ಎಂ. ಬಿ. ಕಣವಿ

ಕಲೆಯ ಮುಖ್ಯ ಉದ್ದೇಶ ಮನೋಲ್ಲಾಸವಾದರೂ ಅದು ಜೀವನ ನಿರ್ವಹಣೆಗೆ ಹಲವು ಸಲ ಸಾಧನವೂ ಆಗಬಲ್ಲದು. ಈ ಮಾತು ಜಾನಪದ ಕಲೆಗಳಿಗೆ ಹೆಚ್ಚು ಅನ್ವಯಿಸುತ್ತದೆ. ಕಲೆಯನ್ನು ಜೀವನದ ನಿರ್ವಹಣೆಗಾಗಿ ಉಪಯೋಗಿಸಿಕೊಳ್ಳುವವರು ಧಾರ್ಮಿಕ ಹಿನ್ನೆಲೆಯನ್ನು ಆಶ್ರಯಿಸಬೇಕಾದ ಪ್ರಸಂಗ ಬಹಳ ಸಲ ಉಂಟು. ಕರಪಲ್ಲದವರು, ಗೊಂದಲಿಗರು, ಗೊರವರು ಮುಂತಾದವರೆಲ್ಲ ಜನರ ಧಾರ್ಮಿಕ ಶ್ರದ್ಧೆಯನ್ನಾಶ್ರಯಿಸಿಯೇ ಬದುಕುತ್ತಾರೆ. ಜಾನಪದ ಕಲೆಗಳು ಉತ್ಸಾಹಕ್ಕಾಗಿ, ವೃತ್ತಿಗಾಗಿ ಧಾರ್ಮಿಕ ಆಚರಣೆಗಳ ಅಂಗವಾಗಿ ಅರಳಿ ನಿಲ್ಲುತ್ತವೆ. ಉಪಜೀವನದ ಹಾಡೇ ಇರಲಿ ಉತ್ಸಾಹದ ಹಾಡೇ ಇರಲಿ, ಇವೆರಡೂ ಒಂದಿಲ್ಲೊಂದು ರೀತಿಯಿಂದ ಮನುಷ್ಯನ ಧಾರ್ಮಿಕ ಪ್ರವೃತ್ತಿಯ ಪ್ರತೀಕಗಳಾಗುತ್ತವೆ. ಮನುಷ್ಯನ ಈ ಧಾರ್ಮಿಕ ಪ್ರವೃತ್ತಿ ಜಾನಪದ ಕಲೆಗೆ ನೀರು ಗೊಬ್ಬರವಾಗಿದೆ. ಆದುದರಿಂದಲೇ ಸಾವಿರಾರು ಜಾನಪದ ವೃತ್ತಿ–ಕಲಾವಿದರು, ಎಲ್ಲಿಯವರೆಗೆ ಜನರಲ್ಲಿ ಧಾರ್ಮಿಕ ಪ್ರಜ್ಞೆ ಉಳಿದುಕೊಂಡಿರುತ್ತಿದೋ ಅಲ್ಲಿಯವರೆಗೆ ಬದುಕುತ್ತಾರೆ. ಜಾನಪದದ ಸೌಂದರ್ಯ ಪ್ರಜ್ಞೆ ಬಹಳಷ್ಟು ಸಲ ಧಾರ್ಮಿಕ (ಆವರಣದಲ್ಲಿ) ಮುಖವಾಡ ಧರಿಸುತ್ತದೆ.

ಕೆಲವು ವೃತ್ತಿಕಲಾವಿದರ ಕಲೆಯ ಒಟ್ಟುಪರಿಣಾಮ ಅಪ್ಪಟ ಕಲೆಯಾಗಿ ಉಳಿಯದೆಯೇ. ಧಾರ್ಮಿಕ ಸಂಪ್ರದಾಯದ ಪರಿಣಾಮವೇ ವಿಶೇಷವಾಗಿ ತೋರಿ ಆ ಒತ್ತೇ ನಿಖರವಾಗಿ ನಿಲ್ಲುವ ಸಂಭವವಿರುತ್ತದೆ. ಇದಕ್ಕೆ ಕಾರಣವನ್ನು ದೂರ ಹುಡುಕಬೇಕಾಗಿಲ್ಲ. ಒಂದುಮತದ ವ್ಯಕ್ತಿಗಳೇ ಕಟ್ಟು ನಿಟ್ಟಾಗಿ ಇಂಥ ಕಲೆಯನ್ನು ಆಶ್ರಯಿಸಿ ಉಪಜೀವಿಸುವದರಿಂದ, ಮತ್ತು ಧಾರ್ಮಿಕ ಕ್ರಿಯೆಗಳ ಮೇಲೆಯೇ ಒತ್ತನ್ನು ಹಾಕಿ, ಆ ನಿಟ್ಟಿನಲ್ಲಿ ಜನರಿಗೆ ಮಾನಸಿಕ ಸಿದ್ಧತೆ ಕೊಟ್ಟಿರುವದರಿಂದ, ಇಲ್ಲಿ ಕಲೆ

ಯೆಂಬುದು ಗೌಣವಾಗಿ ಬಿಡುವ ಸಾಧ್ಯತೆಯುಂಟು. ಜಾನಪದ ಸಾಹಿತ್ಯವನ್ನು ಸಂಗ್ರಹಿಸಿ ಪ್ರಸಿದ್ಧಿಸುವಾಗ ನಾವು ಈ ಬಗೆಯ ಅಭ್ಯಾಸದ ಜಾಡನ್ನನುಸರಿಸಬೇಕಾಗುತ್ತದೆ.

ಭಾರತೀಯ ಪರಂಪರೆ ನೂರು ಮತ ಪಂಥಗಳಿಂದ ಮುಂದುವರಿದುಕೊಂಡು ಬಂದುದು. ನಮ್ಮ ಸಂಸ್ಕೃತಿ ನಡೆದುಕೊಂಡು ಬಂದದ್ದರಲ್ಲಿ ತುಂಬಿಕೊಂಡಿದ್ದು ಬಣ್ಣ ಬಣ್ಣದ ಬೆಳಕು. ಇದು ಮುಂದಿನ ಜನಾಂಗಕ್ಕೆ ಸಹಾಯಕ್ಕಾಗಿಯೋ, ಸಂತೋಷಕ್ಕಾಗಿಯೋ, ಪರಂಪರೆಯ ಅಧ್ಯಯನಕ್ಕಾಗಿಯೋ ಉಳಿಯಬೇಕು. ಶಾಸನಗಳು, ಗ್ರಂಥಗಳು ಪರಂಪರೆಯ ಅಭ್ಯಾಸದಲ್ಲಿ ನೀಡುವ ಮಾರ್ಗದರ್ಶನದಲ್ಲಿ ಜಾನಪದ ಪರಂಪರೆಯೂ ಪಾಲ್ಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ವೃತ್ತಿ ಕಲಾವಿದರಾದ ಗೊರವರ ಅಭ್ಯಾಸವನ್ನು ಕೈಗೆತ್ತಿಕೊಳ್ಳಬೇಕಾಗಿದೆ.

ಹೀಗೆ ಅಭ್ಯಾಸಕ್ಕೆ ಮೊದಲು ಮಾಡಿದಾಗ 'ಗೊರವ' ಶಬ್ದದ ವ್ಯುತ್ಪತ್ತಿಯನ್ನು ನೋಡಿ, ಅವರ ಜೀವನ ಪ್ರಾಚೀನತೆಗೆ ಶಾಸನ, ಗ್ರಂಥಗಳ ಆಧಾರಗಳನ್ನು ಗಮನಿಸಿ ಅವರ ಇಂದಿನ ಬದುಕಿನ ಒಟ್ಟು ರೀತಿಯನ್ನು ನಾವಿಲ್ಲಿ ನೋಡಬೇಕು.

ತನ್ನ ಕಾವ್ಯದ ಮೇಲ್ಮೆಯನ್ನು ಹೇಳಿಕೊಳ್ಳುವ ಭರದಲ್ಲಿ ಮಧುರ ಕವಿಯಿಂದ ಅಪಮೌಲ್ಯಗೊಂಡ 'ಗೊರವ' ಪದ ಇಷ್ಟೊಂದು, ದೀರ್ಘ ಅವಧಿಯನಂತರ ಜಾನಪದ ಸಾಹಿತ್ಯಾಭ್ಯಾಸಿಗಳಿಂದ ಹೊಸ ಹುಟ್ಟನ್ನು ಪಡೆಯಬೇಕಾಯಿತು. ಮೂಲತಃ 'ಗೊರವ' ಈ ಶಬ್ದ ಶ್ರೇಷ್ಠ ಅರ್ಥವನ್ನು ಒಳಗೊಂಡಿದೆ. 'ಗುರು' ಎಂಬ ಸಂಸ್ಕೃತ ಶಬ್ದದ ಬಹುವಚನ 'ಗುರವಃ' ಎಂದಾಗುತ್ತದೆ. ಇದೇ ಮುಂದೆ ತದ್ಭವವಾಗಿ 'ಗುರವ' 'ಗೊರವ' ಎಂದಾಗುತ್ತದೆ. ಡಾ. ಸಾಲೆತ್ತೂರ ಅವರ ಅಭಿಪ್ರಾಯದ ಮೇರೆಗೆ 'ಗೊರವ' ಎನ್ನುವದು ಸಂಸ್ಕೃತದ ಗುರು + ಅಡಿಯ ತದ್ಭವರೂಪ. 'ಗೊರವ' ಎನ್ನುವದಕ್ಕೆ ವಿವರಣೆ ಕೊಡುತ್ತ "ದೇವಸ್ಥಾನದ ಗುರು ಅಥವಾ ಭಗವಂತನ ಪಾದದ ಸಮೀಪದಲ್ಲಿರುವವನು ಎಂದರ್ಥ" ಅನ್ನುತ್ತಾರೆ. ಡಾ। ಸಾಲೆತ್ತೂರ ಅವರ ಈ ವಿವರಣೆ ವಿದ್ವಾಂಸರಿಂದ ಸ್ವೀಕಾರವಾಗಿಲ್ಲ, ಡಾ। ಎಂ. ಚಿದಾನಂದ ಮೂರ್ತಿಯವರ ಅಭಿಪ್ರಾಯದಂತೆ "ಗುರು ಎಂಬ ಸಂಸ್ಕೃತ ಪದದ ಬಹುವಚನದ ರೂಪ ಗುರವಃ ಎಂಬುದೇ 'ಗುರವ' 'ಗೊರವ' ಎಂದಾಗಿ ಅದಕ್ಕೆ 'ಅಡಿಗಳ್' ಎಂಬುದು ಸೇರಿ 'ಗುರವಡಿಗಳ್' ಅಥವ 'ಗೊರವಡಿಗಳ್' ಎಂದಾಗುತ್ತದೆ.

ಎಲ್ಲ ಸಂಪ್ರದಾಯದವರೂ ತಮ್ಮ ಪ್ರಾಚೀನತೆಯ ಹಿರಿಮೆಗೋ, ಪ್ರತಿಷ್ಠೆಗೋ ನಾನಾರೀತಿಯ ಕಥೆಗಳನ್ನು ಸೃಷ್ಟಿಸುತ್ತಾರೆ. ಹಾಗೆಯೇ ಗೊರವರು ತಮ್ಮ ವಿಷಯಕವಾಗಿಯೂ ಹೇಳಿಕೊಳ್ಳುತ್ತಾರೆ. ಪುರಾಣಕಾಲದಲ್ಲಿ ಮಣಿಸುರ ಮತ್ತು ಮಲ್ಲಾಸುರ

ಎಂಬ ರಾಕ್ಷಸರು ಶಿವನನ್ನು ಕುರಿತು ತಪಸ್ಸು ಮಾಡಿದರು. ಬಹಳ ದಿನಗಳ ತರುವಾಯ ಶಿವನು ಒಲಿದ. ಇವರು ತಮಗೆ ಯಾರಿಂದಲೂ ಮರಣ ಬಾರದಿರಲಿ ಎಂದು ಬೇಡಿ ಕೊಂಡರು. ದೇವರು ತಥಾಸ್ತು ಎಂದ. ಆದರೆ ಈ ರಾಕ್ಷಸರು ಜನರಿಗೆ ಮಾರಕವಾಗ ಬಾರದೆಂದು, ಶಿವ ಕಂಬಳಿ ಹೊದ್ದು ಗೊರವನ ವೇಷ ಧರಿಸಿ ರಾಕ್ಷಸರನ್ನು ಸಂಹಾರ ಮಾಡಿದ. ಶಿವನ ಅಂದಿನ ರೂಪವೇ ಇಂದು ಗೊರವರಾಗಿ ತೋರುತ್ತಾರೆ.

ಈ ಸಂಬಂಧದಲ್ಲಿ ಇನ್ನೊಂದು ಕಥೆ. "ತುಪ್ಪದ ಮಾಳಮ್ಮ ಶ್ರೀಮಂತ ಹೆಣ್ಣು ಮಗಳು. ತನ್ನ ಐದು ಜನ ಅಣ್ಣಂದಿರಾದ ಚಿಕ್ಕಸಿದ್ದ, ದೊಡ್ಡಸಿದ್ದ, ಬೀರಜ್ಜ, ಕರಿಯಾಲ, ಕೆಂದಾಲ ಎಂಬವವರಿಗೆ ಮಾಳಮ್ಮ ಬುತ್ತಿಯನ್ನು ಹೊತ್ತು ತರುತ್ತಿದ್ದಳು. ಏಳು ಹೆಡೆಯ ಸರ್ಪವನ್ನೇ ಅವಳು ತನ್ನ ಸಿಂಬಿಯನ್ನಾಗಿ ಮಾಡಿಕೊಂಡಿದ್ದಳು. ಆಗ ಮೈಲಾರಲಿಂಗ ಮಾಳಮ್ಮ ಬುತ್ತಿ ಹೊತ್ತು ಹೋಗುತ್ತಿದ್ದ ಕಡೆಗೆ ಬಂದು ಅವಳನ್ನು ತಡೆದು ನಿಲ್ಲಿಸಿ "ಗಂಗೆ ಮಾಳಿಯೊಡನೆ ತನಗೊಂದು ಮದುವೆಯಾಗಿದೆ. ತನ್ನ ಲಿಂಗಕ್ಕೊಂದು ಮದುವೆಯಾಗಬೇಕು ಎಂದು ಹೇಳಿದ." ಅವನ ವೇಷ ಅಪ್ಪಟ ಗೊರವ ನಂತಿತ್ತು. ಈ ಚಿತ್ರ ವೇಷದವನನ್ನು ನೋಡಿದ ಮಾಳಮ್ಮ ರಾಕ್ಷಸ ಬಂದನೆಂದು ಹೆದರಿದಳು. ಆಕೆಯ ಅಣ್ಣಂದಿರು ಸಮೀಪದಲ್ಲಿಯೇ ಕುರಿಯನ್ನು ಕಾಯುತ್ತಿದ್ದರು. ತಂಗಿ ಕೂಗಿದ ಶಬ್ದ ಕೇಳಿದ ಚಿಕ್ಕಸಿದ್ದ ಏಳು ಯೋಜನ ಉದ್ದದ ಬೂಸಗದ ಮರಹತ್ತಿ ನೋಡಿದ. ಆಕಾಶಕ್ಕೂ ಭೂಮಿಗೂ ಒಂದೇ ಆಗಿ ಮೈಲಾರಲಿಂಗ ನಿಂತಿದ್ದನ್ನು ಕಂಡ. ಯಾರೋ ರಾಕ್ಷಸನಿರಬೇಕೆಂದು ಹೆದರಿದ. ಆರು ಸಾವಿರ ಕುರಿಹಾಲು ಕರೆದು ತನ್ನ ಎರಡೂ ನಾಯಿಗಳಿಗೂ ಇಟ್ಟು ಆ ರಾಕ್ಷಸನನ್ನು ಸೀಳಿ ಬನ್ನಿ ಎಂದು ಹೇಳಿ ಛೂ ಬಿಟ್ಟ. ನಿಮ್ಮ ಅಣ್ಣನ ನಾಯಿಗಳು ನನ್ನನ್ನು ಏನೂ ಮಾಡಲಾರವು, ಎಂದು ಗೊರವಯ್ಯ ಭಂಡಾರವನ್ನು ನಾಯಿಗಳ ಮುಖಕ್ಕೆ ಒಡಿದ. ವೈರವನ್ನು ಬಿಟ್ಟ ನಾಯಿಗಳು ಆತನನ್ನು ಮುದ್ದಾಡಲು ಪ್ರಾರಂಭಿಸಿದವು. ಅನಂತರ ಗೊರವಯ್ಯ ಮಾಳಮ್ಮನ ರಟ್ಟೆ - ಹಿಡಿ ಯಲು ಹೋದ. ತನ್ನ ಕೊರಳಿನ ಸರ್ಪ ಕಚ್ಚುತ್ತದೆ ಎಂದು ಮಾಳಮ್ಮ ಬೆದರಿಸಿದಳು. ಅದಕ್ಕೂ ಗೊರವಯ್ಯ ಭಂಡಾರ ಹಾಕಿದ. ಆಗ ಅವಳ ಕತ್ತು ಬಿಟ್ಟು ಗೊರವಯ್ಯನ ಕತ್ತಿಗೆ ಬಂದು ಸುತ್ತಿಕೊಂಡಿತು ಆ ಸರ್ಪ. ಅನಂತರ ಮಿಕ್ಕ ಅಣ್ಣಂದಿರು ಓಡಿ ಬಂದು ದೊಣ್ಣೆಗಳಿಂದ ಗೊರವಯ್ಯನಿಗೆ ಪೆಟ್ಟು ಹಾಕಿದರು. ಆದರೆ ಆ ಪೆಟ್ಟುಗಳು ಮಾಳಿಗೆ ತಗಲಿ ಅವಳ ಮೈಮೇಲೆ ಬಾಸುಂಡೆಗಳೆದ್ದವು.

ತುಪ್ಪದ ಮಾಳಿ ಲಗ್ನ ಆಗಲು ಬಂದುದಾಗಿ ಗೊರವಯ್ಯ ಹೇಳಿದಾಗ ಅಣ್ಣಂದಿರು 'ಆರು ಸಾವಿರ ಕುರಿ ಮೇಯಿಸ ಬೇಕು. ಮೂರು ಸಾವಿರ ಮರಿಗೆ ಹಾಲು ಕುಡಿಸ ಬೇಕು. ಮರಿಗೆ ಸೊಪ್ಪು ಸದೆ ತರಬೇಕು. ಏಳು ಮೊಳದ ಜಾಡಿಯನ್ನು ಒಂದು ದಿನಕ್ಕೆ ತೆಗೆಯಬೇಕು. ಇಷ್ಟು ಮಾಡಿದರೆ ನಮ್ಮ ತಂಗಿ ಕೊಟ್ಟು ಲಗ್ನ ಮಾಡ್ತೀವಿ.

ಎಂದರು. ಅದಕ್ಕೂ ಗೊರವಯ್ಯ ಒಪ್ಪಿಕೊಂಡ. ಮಾಯದಿಂದ ಗಂಗೇಮಾಳಿಯ
ಕರೆಸಿದ. ಇಬ್ಬರೂ ಕೂಡಿ ಎಲ್ಲ ಕೆಲಸಗಳನ್ನೂ ಮುಗಿಸಿದರು. ಕಂಬಳಿಸೇ
ಕೊಟ್ಟರು. ಇಷ್ಟಾದರೂ ಅಣ್ಣಂದಿರು ಮದುವೆಗೆ ಒಪ್ಪಲಿಲ್ಲ. ಕೊನೆಗೆ ತುಪ್ಪ
ಮಾಳಿಯನ್ನು ಕರಿನಾಯಿಯನ್ನಾಗಿ ಮಾಡಿಕೊಂಡು ಗೊರವ ಹೊರಟುಬಿಟ್ಟ. ಅಣ್ಣಂದಿ
ಬೆನ್ನಟ್ಟಿ ಬಂದರು. ಆಗ ಗೊರವಯ್ಯ ಐದು ಜನರ ಕತ್ತುಗಳಿಗೂ ಮೂರು ಮೂ
ಕವಡೆಕಟ್ಟಿ, ಐದುಬಟ್ಟಲು, ಐದು ಡಮರುಗ ಕೊಟ್ಟು ದೋಣಿಸೇವೆ ಮಾಡಿಸಿ
ಮೂಲತಃ ಗೊರವರಿಗೆ ಮೈಲಾರಲಿಂಗನೇ ಗೊರವ ದೀಕ್ಷೆ ಕೊಟ್ಟನೆನ್ನುವ ವಿಚಾ
ಈ ಪ್ರಸಂಗದಲ್ಲಿ ವಿಧಿತವಾಗುತ್ತದೆ. ಈ ಜನಪದ ಕಥೆ ನೃತ್ಯ ರೂಪದಲ್ಲಿ ಈಗಲ
ಅಲ್ಲಲ್ಲಿ ಬಳಕೆಯಲ್ಲಿದೆ.

ಇನ್ನೊಂದು ಹೇಳಿಕೆಯ ಪ್ರಕಾರ ಮಣಿಸುರ ಮತ್ತು ಮಲ್ಲಾಸುರರೆಂಬ ರಾಕ್ಷಸರ
ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ತಮಗೆ ಚಿರಂಜೀವಿತ್ವವನ್ನು ಬೇಡಿದರು. ಬ್ರಹ್ಮನ
ಅವರನ್ನು ಶಿವನ ಬಳಿಗೆ ಕಳಿಸಿದ. ಈ ದುಷ್ಟರ ಸಂಹಾರಕ್ಕಾಗಿ ಶಿವನು ತನ್ನ ತ
ಯನ್ನು ಕೊಡವಿ ಮಾಳವ್ವನನ್ನು ಕಳುಹಿಸಿದ. ಆದರೆ ಆಕೆ ಇವರನ್ನು ಸಂಹರಿಸುವ
ದರಲ್ಲಿ ವಿಫಲಳಾದಾಗ ಶಿವನೇ ಕರಡಿ ಗೊರವನ ವೇಷ ಧರಿಸಿ ಆ ರಾಕ್ಷಸರನ್ನು ಕೊಂದ
ಅಂದಿನ ಶಿವನ ಆ ವೇಷವೇ ಇಂದಿನ ಗೊರವಯ್ಯಗಳ ಅನುಕರಣೆ.

ಈ ಕಥೆಗಳ ಒಡಲಿನಿಂದ ಜಿನುಗುವ ಎರಡು ಅಂಶಗಳು ಗೊರವರ ವೇಷಕ್ಕೆ
ಕಾರಣವನ್ನೂ ಗೊರವರ ದೀಕ್ಷಾಕ್ರಮವನ್ನೂ ವಿಶದಪಡಿಸುತ್ತವೆ.

ಗೊರವರು ಲಕುಲೀಶ ಪಾಶುಪತ ಮತ್ತು ಕಾಳಾಮುಖ ಎಂಬ ಸಂಪ್ರದಾಯಕ್ಕೆ
ಸೇರಿದವರು, "ವೀರಶೈವಕ್ಕೆ ಪೂರ್ವದ ಕರ್ನಾಟಕವು ಲಕುಲೀಶ-ಪಾಶುಪತ–ಕಾಳಾ
ಮುಖ ಎಂಬ ಸಾತ್ವಿಕ ಮಾರ್ಗದ ಕಾಪಾಲಿಕ ಕೌಲ ಎಂಬ ವಾಮ ಮಾರ್ಗಗಳ ಶೈವ
ಪಂಥಗಳ ಕೇಂದ್ರವಾಗಿತ್ತು. ಇವರಲ್ಲಿ ಸಾತ್ವಿಕ ಶೈವ ಪಂಥಕ್ಕೆ ಸಂಬಂಧಿಸಿದವರು"
ಎಂದು ಡಾ। ಎಂ. ಎ. ಕಲಬುರ್ಗಿಯವರು ಅಭಿಪ್ರಾಯ ಪಡುತ್ತಾರೆ.

ನಮಗೆ ಗೊರವರಿಗೆ ಸಂಬಂಧಪಟ್ಟ ಪ್ರಾಚೀನ ಶಾಸನಾಧಾರವೊಂದು ಕ್ರಿ. ಶ.
೧೧೬೬ ರದು–

ಹರಿಗೃಹದಿಂ ಹರಗೃಹದಿಂ
ಸುರಗೃಹದಿಂದರುಹಗೃಹದೆ ಬೌದ್ಧಾಲಯದಿಂ
ಗೊರವರ, ಸವಣರ, ಬೌದ್ಧರ
ನೆರಪಿಗಳಿಂದಿಂಡಿ ನಾಡೆ ಸೊಗಯಿಸಿ ತೋರ್ಕುಂ

ಇಂದಿಯ ಈ ಶಾಸನದ ಉಲ್ಲೇಖನದ ಪ್ರಕಾರ ೧೨ನೇ ಶತಮಾನದ ಕೊನೆಯಲ್ಲಿ
ಗೊರವರ ಜನಾಂಗ ಉತ್ತರ ಕರ್ನಾಟಕದಲ್ಲಿ ಪ್ರಾಮುಖ್ಯತೆಯನ್ನು ಪಡೆದಿತ್ತೆಂಬ

ಪಲಾತಿಗೆ ಸಾಕ್ಷಿ ದೊರೆಯುತ್ತದೆ. ಆದರೆ ಇಲ್ಲಿ 'ಗೊರವ' ಎಂಬುದಕ್ಕೆ ವಿವರಣೆಯಿಲ್ಲ. ಕೇಶಿರಾಜ ಗೊರವನೆಂದರೆ ಶಿವನೆಂದು ವಿವರಣೆ ಕೊಡುವದರಿಂದ ಅಂದು ಶಿವೋಪಾಸನೆಯ ಒಂದು ಪ್ರಮುಖ ಮತವಾಗಿದ್ದ ವೀರಶೈವರು 'ಗೊರವರು' ಎಂಬ ಪರ್ಯಾಯ ನಾಮುವನ್ನು ಪಡೆದಿರಬಹುದೇ? ಎಂಬ ಸಂಶಯ ಹುಟ್ಟುತ್ತದೆ. ಮೂಲತಃ ಮಲ್ಲಯ್ಯನೆಂದರೆ ಶಿವನೇ ಎಂದರ್ಥವಿದ್ದರೂ ಇಂದು ಗೊರವರಿಗೂ ವೀರಶೈವರಿಗೂ ನೆಲ ಮುಗಿಲಿನ ಅಂತರವನ್ನು ಕಾಣುತ್ತೇವೆ.

ಡಾ। ಎಂ. ಎಂ. ಕಲಬುರ್ಗಿಯವರು ಪ್ರಾಚೀನ ಗ್ರಂಥಗಳಲ್ಲಿ ದೊರೆಯುವ ಗೊರವರ ಉಲ್ಲೇಖವನ್ನು ಉತ್ತರ ಕರ್ನಾಟಕದ ಜನಪದ ಸಾಹಿತ್ಯದಲ್ಲಿ ಪೇರಿಸಿದ್ದಾರೆ.

೧ "ಮೈಲಾರದ ಗೊರವನಂತೆ ತಂತ ಮನೆ
ಬಡಿದುಕೊಳ್ವಬ್ಬುಳಾಯಿಲರು"

೨ "ವರಮೀಗುಮೆ ಮೈಲಾರಂ ಕೇತಂ ಕಾಟಂ
ಮಾರಿಗೆ ಮಸಣೆಗೆ ಯೆನಿಪ್ಪ ಕೊಳೆದೆಯ್ವಂಗಳ್"

೩ "ಒಳ್ಳಿಹ ಮೈಲಾರನೊಳಗೆಲ್ಲ ಸಣಬು,
ಹೊರಗಣ ಬಣ್ಣ ಕರಲೇಸಾಯಿತ್ತಯ್ಯ"

೪ "ಒಳ್ಳಿಹ ಮೈಲಾರನ ಸಿಂಗಾರದಂತೆ"

೫ 'ಮೈಲಾರನ ಪೂಜಿಸಿ ನಾಯಾಗಿ ಬಗಳುವದ ಕಂಡೆ'

೬ "ಮೈಲಾರನ ದೈವವೆಂದಾರಾಧಿಸಿದಾತನು
ಕೊರಳಲ್ಲಿ ಕವಡೆಯ ಕಟ್ಟಿ ನಾಯಾಗಿ ಬಗಳುತಿರ್ಪ"

ಒಟ್ಟಾರೆ ಈ ಪದ್ಯಗಳಿಂದ ಸ್ಪಷ್ಟವಾಗುವ ಅಂಶವೆಂದರೆ, ನಯಸೇನ, ಬ್ರಹ್ಮಶಿವ ಇವರಿಬ್ಬರೂ ಗೊರವರನ್ನೂ ಅವರ ಅಧಿದೇವತೆ ಮಲ್ಲಯ್ಯನನ್ನೂ ಕೀಳು ಕಣ್ಣಿಂದ ಕಂಡರು.

ಬಹುತೇಕ ಕರ್ನಾಟಕದ ತುಂಬ ಗೊರವರು ಅಥವ ಗೊಗ್ಗಯ್ಯಗಳು ತುಂಬಿಕೊಂಡಿದ್ದಾರೆ. ಇವರ ಆಚಾರ ವಿಚಾರಗಳನ್ನು ನೋಡುವದಕ್ಕಿಂತ ಮೊದಲು ಉತ್ತರ ಕನ್ನಡದ 'ಗುರವ'ರ ಬಗೆಗೆ ಎರಡು ಮಾತು ಹೇಳಬೇಕು. ವಿಜಾಪುರ ಜಿಲ್ಲೆಗೆ ಸಂಬಂಧಿಸಿದ Bombay Gazatteer xxlll (Bijpur District) ನಲ್ಲಿ:

"Guravas also called as jirs and Hugars are returned as numbereing 1622'. They are ministrants of maruti or Hanuman, the monkey God & the village guardian, who wears both the

sacred thread and the Ling and is worshiped both by Brahma
and by Lingayat Hindus. Like Lingayts they neither eat fl
ncr liquor Atleast one famely in every village holds herditary r
free land in return for worhipping the village maruti & lives
the produce of the land & offerings made to the God. most shi
tempes have Gurav priests"

ಮಾರುತಿ ದೇವರ ಸೇವೆ ಮಾಡಿಕೊಂಡು ಬದುಕುವ ಹೂಗಾರರು 'ಗುರವರ
'ಗೊರವರು' ಹೆಸರನ್ನು ಪಡೆದಿದ್ದಾರೆ. ಮಾರುತಿ ದೇವರ ದತ್ತಿ ಜಮೀನನ್ನು ಅ
ಲಂಬಿಸಿ ಬಾಳುತ್ತಾರೆ. ಇಂದು ವೀರಶೈವದ ಶಾಖೆಯಾಗಿದ್ದ ಹೂಗಾರರು (ಕೆಲ
ಸಲ ಕುರುಬ ಜನಾಂಗದವರು ಮಾರುತಿ ದೇವರ ಪೂಜಾರಿಗಳಾಗಿ ಹೂಗಾರರೆನ್ನಿ
ಕೊಳ್ಳುವದೂ ಉಂಟು) ಗೊರವರೆನ್ನಿಸಿಕೊಳ್ಳುತ್ತಾರೆಯೇ ವಿನಃ ಗೊಗ್ಗಯ್ಯಗಳ
ಗುವದು ಇಲ್ಲವೆಂದೇ ತೋರುತ್ತದೆ. ಹೂಗಾರರು ದೇವರ ಜಮೀನನ್ನು ಹಿಡಿದ
ಕೊಂಡು ಗೌರವಯುತವಾಗಿ ಅರ್ಚಕ ಸ್ಥಾನದಲ್ಲಿ ನಿಂತರೆ ನಿಮ್ನ ವರ್ಗದ ಕುರುಬರು
ಉಪ್ಪಾರರು ಮುಂತಾದವರು ಮೈಲಾರಲಿಂಗನನ್ನು ಆಶ್ರಯಿಸಿ ಭಿಕ್ಷಾಟನೆ ಕೈಕೊಂಡರು
ಇಲ್ಲಿ ಹುಟ್ಟುವ ಪ್ರಶ್ನೆಯೆಂದರೆ ಈ ಹೂಗಾರರಿಗೆ ಗೊರವರು ಎನ್ನುವ ಹೆಸರು ಹೇಗ
ಬಂತು ? ಹೂಗಾರರು ಗೊರವರೊಂದಿಗೆ ಯಾವ ಮಟ್ಟದಲ್ಲಿ ಸಂಬಂಧ ಪಡೆ
ಯುತ್ತಾರೆ ? ಜಾನಪದ ಅಭ್ಯಾಸಿಗಳು ಯೋಚಿಸಬೇಕಾದ ವಿಷಯವಿದು. ಈ ವಿಷಯ
ವನ್ನೂ ಇವರೊಂದಿಗೆ ಸಮಾಜ ಶಾಸ್ತ್ರಜ್ಞರು ಕೈಗೂಡಿಸಿದರೆ ಇನ್ನೂ ಹೆಚ್ಚಿನ
ಪ್ರಯೋಜನ.

ಉತ್ತರಕರ್ನಾಟಕದಲ್ಲಿ ಗೊರವರನ್ನು ವಗ್ಗಯ್ಯ, ಗೊಗ್ಗಯ್ಯ, 'ವಾಗ್ಯಾ' ಎಂದು
ಕರೆಯುತ್ತಾರೆ. ದಕ್ಷಿಣ ಕರ್ನಾಟಕದಲ್ಲಿ ಇವರನ್ನು ಉತ್ತರ ಕರ್ನಾಟಕದವರಂತೆ
ಗೊಗ್ಗಯ್ಯ ಎಂದು ಕರೆಯುವದರ ಜೊತೆಗೆ 'ಗಗ್ಗಯ್ಯ' 'ಗಡಬಡ್ಡಯ್ಯ' 'ಕಡಬಡ್ಡ'
ಎಂದೂ ಕರೆಯುತ್ತಾರೆ. ದಕ್ಷಿಣಕರ್ನಾಟಕದವರಿಗೆ ಮೈಲಾರಲಿಂಗ ಮನೆದೇವರಾದರೆ.
ಉತ್ತರ ಕನ್ನಡದವರಿಗೆ ಮಂಗಸೂಳಿ ಮಲ್ಲಯ್ಯನು ಮನೆದೇವರು. (ಮಂಗಸೂಳಿ
ಮಲ್ಲಯ್ಯ, ಮೈಲಾರ ಮಲ್ಲಯ್ಯ, ಪಾಲಿ ಮಲ್ಲಯ್ಯ.-ಒಂದೇ ದೇವರೆಂಬ ತಿಳು
ವಳಿಕೆಯೂ ಇವರಲ್ಲಿದೆ.)

ಉತ್ತರ ಕನ್ನಡದವರೇ ಇರಲಿ, ದಕ್ಷಿಣ ಕನ್ನಡದವರೇ ಇರಲಿ ಮೈಲಾರಲಿಂಗನ
ಭಕ್ತರಿಗೆ ಜಾತಿಯ ಕಟ್ಟಳೆಯಿಲ್ಲ. ಮಲ್ಲಯ್ಯನ ಹೆಸರಿನಲ್ಲಿ ಯಾವುದೇ ಜಾತಿಯವರು
ಈ ಸಂಪ್ರದಾಯವನ್ನು ನಡೆಸಿಕೊಂಡು ಬರಬಹುದು. "ಕುರುಬರು ಉಪ್ಪಾರರು,
ನಾಯಕರು ಹಾಗೂ ಹರಿಜನರಲ್ಲಿ ಈ ಸಂಪ್ರದಾಯಿಕ ಕಲೆ ಕಂಡುಬಂದರೂ ಹೆಚ್ಚು

ಪ್ರಚಲಿತವಿರುವದು ಕುರುಬ ಜನಾಂಗದಲ್ಲಿ." ಉತ್ತರ ಕನ್ನಡದ ಒಂದು ವಿಶೇಷವೆಂದರೆ ಮಂಗಸೂಳಿ ಮಲ್ಲಯ್ಯನಿಗೆ ಸೂಳೆಯರನ್ನು ಬಿಡುತ್ತಾರೆ. ಅವರಿಗೆ 'ಮುರಳಿ' ಎಂದು ಹೆಸರು. ಗೊಗ್ಗಯ್ಯಗಳ ಸಂಗಡ ಇವರೂ ಊರೂರು ಅಲೆಯುತ್ತಾರೆ. ಗೊಗ್ಗಯ್ಯ ಗಳ ಸಂಗಡ ಇವರ ನೈತಿಕ ಸಂಬಂಧ ಒಳ್ಳೆಯದಾಗಿದ್ದು "ಗೊಗ್ಗಯ್ಯ"ನಿಗೆ 'ಮುರಳಿ' ತಂಗಿಯಾಗಿರುತ್ತಾಳೆ.

"ಗೊರವ ದೀಕ್ಷೆ ಸಂಪ್ರದಾಯಬದ್ಧವಾಗಿ ಸಂಬಂಧಪಟ್ಟ ಜನಾಂಗದ ಪ್ರಮುಖ ರೆದುರು, ತಂದೆ ತಾಯಿಗಳ ಸಮ್ಮುಖದಲ್ಲಿ ನಡೆಯುವ ಒಂದು ಧಾರ್ಮಿಕ ಕ್ರಿಯೆ. ಮನೆಯ ಹಿರಿಮಗನಿಗೆ ೧೨ ವರ್ಷವಾದಮೇಲೆ ೨೦ ವರ್ಷದೊಳಗೆ ಮದುವೆಗೆ ಮುಂಚೆ ಗೊರವ ದೀಕ್ಷೆ ಶಾಸ್ತ್ರ ಮಾಡಬೇಕು. ಹಣ್ಣು, ಕಾಯಿ, ಎಲೆ ಅಡಿಕೆ ಹೂವು ಗಂಧ ಹೀಗೆ ಎಲ್ಲ ಶುಭ ಸಾಮಗ್ರಿಗಳನ್ನು ಅಣಿಮಾಡಿಕೊಂಡು ದೀಕ್ಷೆ ತೆಗೆದುಕೊಳ್ಳುವ ವ್ಯಕ್ತಿಗೆ ವಪನ ಕ್ರಿಯೆಮಾಡಿ ಮೈತೊಳೆದು ವಿಭೂತಿ ಭಂಡಾರ ಧರಿಸಿ ನಾಲ್ಕು ಕಲಶಗಳನ್ನು ಹೂಡಿ, ಮಧ್ಯದಲ್ಲಿ ಕುಳ್ಳಿರಿಸಿ ಕಳಶಕ್ಕೂ ವ್ಯಕ್ತಿಯ ಕೊರಳಿಗೂ ಸೂತ್ರ ಬಿಟ್ಟು ಬಹು ಕ್ರಮವಾಗಿ ಈ ಶಾಸ್ತ್ರವನ್ನು ನಡೆಸುತ್ತಾರೆ. ಮುಂದೆ ಅವನು ನಡೆಸಬೇಕಾದ ಶುದ್ಧ ಜೀವನದ ಬಗೆಗೆ ತಿಳುವಳಿಕೆ ನೀಡಿ, ಭಾಷೆ ತೆಗೆದುಕೊಂಡು, ಮೇಲೆ ಕೊರಳಿಗೆ ಕವಡೆಯ ಸರಹಾಕಿ 'ಗುಡ್ಡ'ನೆಂದು ಘೋಷಿಸುತ್ತಾರೆ. ತಂದೆ ತಾಯಿಯರನ್ನು ಕುರಿತು 'ಇವನು ಯಾರ ಮಗ' ಎಂದು ಕೇಳುತ್ತಾರೆ. 'ಅವರು ಇದುವರೆಗೆ ನಮ್ಮ ಮಗನಾಗಿದ್ದ ಈಗ ಸ್ವಾಮಿಯ (ಶಿವನ) ಮಗ' ಎಂದು ಹೇಳುತ್ತಾರೆ. ದೀಕ್ಷೆ ವಹಿಸಿದ ವ್ಯಕ್ತಿ" ಹೊಲದಲ್ಲಿ ಒಂದು ಪಸು ಮೇಯುತ್ತಿದ್ದರೆ ಅದು ಮೇಯುತ್ತಿದೆ ಎಂದು ಹೇಳುವದಿಲ್ಲ. ಕರು ಹಾಲು ಕುಡಿಯುತ್ತಿದ್ದರೆ ಕುಡಿಯುತ್ತಿದೆ ಎಂದು ಹೇಳುವದಿಲ್ಲ. ಕಾಲಿಗೆ ಉಕ್ಕಡ, ಹಾಕುವದಿಲ್ಲ. ಸರ್ಪವನ್ನು ಹೊಡೆಯುವದಿಲ್ಲ– ಎಂದು ಮುಂತಾಗಿ ಪ್ರಾಮಾಣಿಕತೆ ಅಹಿಂಸೆ, ಪ್ರಾಣಿದಯೆಗಳ ಬಗೆಗೆ ಪ್ರತಿಜ್ಞೆ ಮಾಡುತ್ತಾನೆ. ನಂತರ ಬುಡಕಟ್ಟಿಗೆ ಸೇರಿದ ಹಿರಿಯ ಗೊರವ ಸಾಂಬ್ರಾಣಿಯ ಧೂಪ ದೀಪ ಹಾಕಿ ಕೊರಳಿಗೆ ಕವಡಿಯ ಸರವನ್ನು ಕಟ್ಟಿ ಹಣೆಗೆ ವಿಭೂತಿ ಭಂಡಾರ ಧರಿಸುತ್ತಾನೆ. ಇದು 'ಗೊರವ' ನಾದುದರ ಸಂಕೇತ! ದೀಕ್ಷೆಯ ನಂತರ ಗೊರವರೆಲ್ಲ ಸೇರಿ ಹಿತ್ತಾಳೆಯ ದೋಣಿ ಮತ್ತು ಜೋಳಿಗೆ ನೀಡಿ 'ಮರಿಪೂಜೆ' ಮಾಡುತ್ತಾರೆ. ಆದಿನ ಸಾಂಕೇತಿಕವಾಗಿಯಾದರೂ ಆತ ನಾಲ್ಕು ಮನೆಯ ಭಿಕ್ಷೆ ಮಾಡಬೇಕು, 'ಗೊರವ' ದೀಕ್ಷೆಯಾದ ಮೇಲೆ ಅವರವರ ಶಕ್ತ್ಯಾನುಸಾರ ಅನ್ನ ಹಾಕಬೇಕು."[೧]

ನನ್ನ ಅಭ್ಯಾಸದ ಪರಿಮಿತಿಗೆ ಸಾಧ್ಯವಾಗದಿದ್ದ ದಕ್ಷಿಣ ಕರ್ನಾಟಕದ ಗೊರವ ಸಂಪ್ರದಾಯದ ಬಗ್ಗೆ ಹೆಚ್ಚು ಹೇಳದೆ, ಉತ್ತರ ಕರ್ನಾಟಕದ ಗೊರವರ ಸಂಪ್ರದಾಯದ ವಿಶೇಷ ಲಕ್ಷಣಗಳತ್ತ ಇನ್ನು ಮುಂದೆ ಗಮನ ಹರಿಸಿದ್ದೇನೆ.

---

೧. ಗೊ. ರು. ಚನ್ನಬಸಪ್ಪ— ಕರ್ನಾಟಕ ಜನಪದ ಕಲೆಗಳು, : ಪುಟ ೬೬–೬೭.

ಉತ್ತರ ಕನ್ನಡದ ಗೊರವರು ತಲೆಗೆ ಮುಂಡಾಸು ಸುತ್ತುತ್ತಾರೆ. ಮುದ್ರೆಗ ರುವ ಕಂಬಳಿಯ ನಿಲುವಂಗಿ ತೊಡುತ್ತಾರೆ. ಕೈಯಲ್ಲಿ ತ್ರಿಶೂಲ, ಆ ತ್ರಿಶೂಲಕ್ಕೆ ಕಟ್ಟಿದ ಬುಡು ಬುಡಿಕೆ ಕೊರಳಲ್ಲಿ ಕೊಟಮಿ ಗಂಟೆಗಳು ಜೋತು ಬಿದ್ದಿರುತ್ತವೆ. ಡಮರು ವನ್ನು ಬಾರಿಸುತ್ತ ಮುಂದೆ ಸಾಗುತ್ತಾರೆ. ಬಗಲಿಗೆ ಹಾಕಿದ ಜಿಗರೆ ಚರ್ಮದ ಚೀ ದಲ್ಲಿ ಭಂಡಾರ, ಕೈಯಲ್ಲಿ ಬೆತ್ತ, ಹಣೆಯಲ್ಲಿ ಭಂಡಾರ, ಕಂಬಳಿಯೊಂದು ಹೆಗಲಮೇ ಇರುತ್ತದೆ. ಆ ಹೆಗಲ ಮೇಲೆ ಉಕ್ಕಿನ ಸರಪಳಿ ಸುಮಾರು ೧೨ ಫೂಟು ಇರುತ್ತದೆ ಭಕ್ತರ ಮನೆಯ ಮುಂದೆ "ಏಳು ಕೋಟಿ"...ಎಂದು ಹರಿಯುತ್ತಾರೆ. ಹಿಂದ ಹೇಳಿದಂತೆ 'ಮುರಳಿ'ಯರು ಈ ವಾಗ್ಯಾಗಳ ಸಂಗಡ ಇರುತ್ತಾರೆ. ಮುರಳಿಯರು ಉಡುವುದು ಅರಿಸಿಣ ಸೀರೆಯುಟ್ಟು. ಕಚ್ಚೆಹಾಕುತ್ತಾರೆ. ನಡುವಿಗೆ ಸೆರಗುಸುತ್ತುತ್ತಾರೆ. ಜೋಡುಗಂಟೆಯನ್ನು ಕೈಯಲ್ಲಿ ಬಾರಿಸುತ್ತ ಕುಣಿಯುತ್ತಾರೆ.

ಈ ವಾಗ್ಯಾಗಳು ಆದಿತ್ಯವಾರ ಮಾತ್ರ ಭಿಕ್ಷೆಗೆ ಹೋಗುತ್ತಾರೆ. 'ಏಳು ಕೋಟಿಗ್ಯೋ' ಎನ್ನುತ್ತ ಭಿಕ್ಷೆ ಎತ್ತುತ್ತಾರೆ. ಹರಿಜನ ವಾಗ್ಯಾಗಳು ಲಿಂಗಾಯತರ ಮನೆಯಲ್ಲಿ ಪ್ರವೇಶಿಸುವದಿಲ್ಲ. ಅಂಥಲ್ಲಿ ಕುರುಬ ವಾಗ್ಯಾಗಳು ಮಾತ್ರ ಹೋಗು ತ್ತಾರೆ. ಭಿಕ್ಷೆ ನೀಡುವವರು 'ಕೊಟಮಿ'ಯಲ್ಲಿ ಐದು ಚಪಾತಿ ಐದು ಬಾಳೆಹಣ್ಣು ಹಾಕುತ್ತಾರೆ. ಐದು ಪೈಸೆಯಿಂದ ೫ ರೂಪಾಯಿಗಳವರೆಗೆ ದಕ್ಷಿಣೆಯಿಡುತ್ತಾರೆ.

ಗೊಗ್ಗಯ್ಯ ಆದಿತ್ಯವಾರ ಉಪವಾಸವಿದ್ದು ಹಾಲು, ಬಾಳೆಹಣ್ಣು ಸ್ವೀಕರಿಸು ತ್ತಾನೆ. ಇವನು ರವಿವಾರವೊಂದನ್ನು ಬಿಟ್ಟು ಉಳಿದ ದಿನಗಳಲ್ಲಿ ಮಾಂಸವನ್ನೂ ತಿನ್ನ ಬಹುದು.

ಮದುವೆಯಂತಹ ಮಂಗಲ ಕಾರ್ಯದಲ್ಲಿ 'ಜಾಗರಣೆ' ಎಂದು ವಾಗ್ಯಾ ಮತ್ತು 'ಮುರಳಿ'ಯನ್ನು ಕರೆಸುತ್ತಾರೆ. ಹರಿಜನ ವಗ್ಗಯ್ಯ ಕುರುಬ ಗೊಗ್ಗಯ್ಯ ಎಂದು ಭೇದಮಾಡದೆ ಎಲ್ಲರೂ ಈ ಪ್ರಸಂಗದಲ್ಲಿ ಪಾದಕ್ಕೆ ಬೀಳುತ್ತಾರೆ. ಕಂಬಳಿ ಹಾಸಿ ಸಾಸಕ್ಕಿ ಹೊಯ್ದುರಂಗದಲ್ಲಿ ಮದುಮಗನನ್ನು ವಾಗ್ಯಾ ತಂದು ರಂಗದಲ್ಲಿ ಕೂಡ್ರಿಸು ತ್ತಾನೆ. ವಾಗ್ಯಾ ಮುರಳಿಯರ, ಅಕ್ಷತಾರೋಪಣ ಮಾಡಿದ ಮೇಲೆ ಬೇರೆಯವರು ಅಕ್ಷತಾರೋಪಣ ಮಾಡುತ್ತಾರೆ. ವಾಗ್ಯಾಗಳು ಲಗ್ನಕ್ಕೆ ಹೋಗುವದು ತಮ್ಮ ಭಕ್ತರ ಮನೆಗಳಿಗೆ ಮಾತ್ರ. ಹೀಗೆ ಹೋದ ವಾಗ್ಯಾಗಳಿಗೆ ಉಡುಗರೆಯೂ ದೊರೆಯುತ್ತದೆ. ೫ ಮಂದಿ ವಾಗ್ಯಾಗಳಿಗೆ ೫ ಮುಂಡಾಸು ೫ ಶಲ್ಯೆಗಳು ಒಬ್ಬ ವಾಗ್ಯಾನಿಗೆ ೨೫ ರೂ. ಗಳಂತೆ ದಕ್ಷಿಣೆ ಇಡುತ್ತಾರೆ. ೫ ಮಂದಿ ಮುರಳಿಯರಿಗೆ ೫ ಸೀರೆ ಕೊಡುತ್ತಾರೆ. ಅವರ ಕೊಟಮಿಗೆ ೫ ಹೋಳಿಗೆ ಉತ್ತತ್ತಿ, ಬಾಳೆಹಣ್ಣು. ಅರಿಸಿಣ ಮುಂತಾದ ಮಂಗಲ ವಸ್ತುಗಳನ್ನು ತುಂಬುತ್ತಾರೆ. ನಂತರ ವಾಗ್ಯಾ 'ಹೊಗಳಿಗೆ' (ಮಲ್ಲಯ್ಯನಸ್ತುತಿ) ಅನ್ನು

ತ್ತಾನೆ. ಹೀಗೆ ಗೊಗ್ಗಯ್ಯಗಳು ತಮ್ಮ ಭಕ್ತರ ಮದುವೆಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ.

ವಾಗ್ಯಾಗಳು ಹೆಣವನ್ನು ಹುಗಿದು 'ತಡಿ' (ಗದ್ದುಗೆ) ಕಟ್ಟುತ್ತಾರೆ. ವಾಗ್ಯಾಗಳ ಜಾಗರಣೆ ಸೊಗಸಾಗಿರುತ್ತದೆ. ಇವರು ಕೈಯ್ಯಲ್ಲಿ ತುಂತುಣಿ ಹಿಡಿದು ಹಾಡುವುದು ಈ ಕಡೆಯ ವಿಶೇಷ. ಹಾಡುಸಾಗಿದ ವೇಳೆಯಲ್ಲಿ ಮುರಳಿ ನೆಲದಮೇಲೆ ಬಿದ್ದ ನಾಣ್ಯ ವನ್ನು ಹಣೆಯಿಂದ ಕಪಾಳಿಸಿಂದ ಮೇಲೆತ್ತುತ್ತಾಳೆ. ಈ ಸಮಯದಲ್ಲಿ ಕೆಲವು ವಾಗ್ಯಾ ಗಳು ನಾಯಿಯಂತೆ ಸುತ್ತುನಿಂತು ಬಗುಳುತ್ತಾರೆ. ಇವಳು ಹಚ್ಯಾ, ಹಚ್ಯಾ ಎನ್ನುತ್ತಲೇ ಹಣವನ್ನು ಎತ್ತುತ್ತಾಳೆ. ಈ ಜಾಗರಣೆಯಲ್ಲಿ ಬಹಳಷ್ಟು ಹಾಡುಗಳು ಮಲ್ಲಯ್ಯನ ಸ್ತುತಿ ಪರವಾಗಿರುತ್ತವೆ. ಬೆಳಗಿನ ೪-೫ ಗಂಟೆಯ ಸುಮಾರಿಗೆ ವಾಗ್ಯಾ ಕಲ್ಲಿನ ಗೂಟಕ್ಕೆ ಸರಪಳಿ ಹಾಕಿ ಜಾಡ್ಸಿ ಹೊಡೆದು ಹರಿಯುತ್ತಾನೆ. ಹೀಗೆ ಹರಿಯಲು ತೊಡಗಿದ ವೇಳೆಯಲ್ಲಿ ಕುಂತ ನಿಂತ ಜನರು ಏಳುಕೋಟಿಗೇಳುಕೋಟಿಗ್ಯೊ ಎನ್ನುತ್ತಿರು ತ್ತಾರೆ. ಸರಪಳಿ ಹರಿದ ನಂತರ ಎಲ್ಲರೂ ಮಲ್ಲಯ್ಯನ ಪ್ರಸಾದ ತೆಗೆದುಕೊಂಡು ಮನೆಗಳಿಗೆ ಮರಳುತ್ತಾರೆ. ಅಲ್ಲಿಗೆ ಜಾಗರಣೆ ಮುಕ್ತಾಯವಾಯಿತು.

ಗೊರವರ ಸಾಹಿತ್ಯವನ್ನು ಇನ್ನು ಮೇಲೆ ನಾವು ಸಂಗ್ರಹಿಸಬೇಕು, ಸಂಪಾದಿಸ ಬೇಕು ಎಂದು ತೋರುತ್ತದೆ. ಆ ಕೆಲಸ ಅಷ್ಟೊಂದು ನಿಖರವಾಗಿ ನಡೆದದ್ದು ಇಲ್ಲ ವೆಂದು ನನ್ನ ಅನಿಸಿಕೆ. ಕೊಟ್ಟ ನಿರ್ದಿಷ್ಟ ವೇಳೆಯಲ್ಲಿ ಸಿಕ್ಕ ಸಾಹಿತ್ಯವನೆಲ್ಲ ವಿವರಿಸುವ ದಾಗಲೀ ವಿಭಾಗಿಸುವದಾಗಲಿ ನನಗೆ ಅಸಾಧ್ಯ. ಒಂದೆರಡು ಹಾಡುಗಳು ಮಾತ್ರ ಇಲ್ಲಿ ಉಲ್ಲೇಖಿಸಿ ಪ್ರಬಂಧಕ್ಕೆ ಮುಕ್ತಾಯ ಹೇಳುತ್ತೇನೆ.

ಗೊರವರು ತಮ್ಮ ಅಧಿದೇವತೆ ಮಲ್ಲಯ್ಯನನ್ನು ಕುರಿತು ಬೆಳಗು ಹರಿಯುವ ವರೆಗೂ ಹಾಡುತ್ತಾರೆ. ಅಂಥ ಒಂದು ಭಕ್ತಿಪರ ಉತ್ಸಾಹ ಸಂದರ್ಭದ ಹಾಡು ಇದು.

ಮಲ್ಲಯ್ಯ ನಂಬಿದವರಿಗೆ ಬೆಲ್ಲಯ್ಯ
ಕುದರಿ ಚೌರಿ ಮುಂದ
ಪಲ್ಲಕ್ಕಿ ತಿರುಗಾದು ನಿಂದ
ಕರ್ಪೂರ ಕಾಯಿತಂದ
ಒಡೆಯರುವರು ಭಕ್ತರು ಒಂದ
ತಾಸೆ ಸನಾದಿ ಮೇಳ
ಕರಡೀಯ ಕೈತಾಳ
ಹಿಡಿಸ್ಯಾರ ಇದರ ತಾಳ
ವಾಗ್ಯಾರ ಕೂಡ್ಯಾರ ಬಾಳ
ಗಂಟಿ ಮುರಳಿಯರ ನಗಾರಿಯ ಆವಾಜ ಬಾಳ ॥ ೧ ॥

ಜನಾ ಜಾತ್ರಿಕೂಡಿ
ವಾಗ್ಯಾನ ಸರಪಳಿಕಡಿ
ದೀವಟಿಗೆ ಬೆಂಕಿ ಕಿಡಿ
ಹಾರತಾವ್ರಿ ಭಂಡಾರಪುಡಿ
ಬಾಗಿಲಿದಿರಿಗಾಟ
ಮ್ಯಾಲೆ ನಗಾರಿಪೆಟ್ಟು
ಹನಮಂತ ಬಲಿ ಬಂಟ
ನಿಂತಾನ ಇದರಕಟ್ಟು ॥ ೨ ॥

ಮಂಗಸೂಳಿ ಗ್ರಾಮದಲ್ಲಿ
ನೆನೆದಾನ ಆರಾಮು ನೋಡಿ
ಮ್ಯಾಲ ಶಿಖರ ಜೋಡಿ
ವಾಗ್ಯಾ ಹೇಳಿದ ನುಡಿ

ಕೇವಲ ಮಲ್ಲಯ್ಯನ ಹೊಗಳಿಕೆ, ಉತ್ಸವದ ಸಂದರ್ಭಗಳನ್ನಷ್ಟೆ ಗೊರವರು ತಮ್ಮ ಹಾಡುಗಳಿಗೆ ಆಕರಗಳನ್ನಾಗಿ ಮಾಡಿಕೊಳ್ಳಲಿಲ್ಲ. ಅನುಭಾವ ಪದಗಳನ್ನೂ ಮನದುಂಬಿ ಹಾಡುತ್ತಾರೆ. ನಮ್ಮ ಬಹಳಷ್ಟು ಪ್ರಾಚೀನ ಸಾಹಿತ್ಯದಲ್ಲಿ ಅನುಭಾವ ತುಂಬಿಕೊಂಡಂತೆ ಗೊರವರ ಹಾಡುಗಳೂ ಇದಕ್ಕೆ ಹೊರತಾಗಿಲ್ಲ. ಮಲ್ಲಯ್ಯನ ಪಾದ ದಡಿಯಲ್ಲಿ ನಿಂತು ಬದುಕಿಗೆ ಬೆಳಕನ್ನು ಕಾಣಲು ಯತ್ನಿಸುತ್ತಾರೆ.

ಅರುವೆಂಬ ಮಲ್ಲಯ್ಯಗ ಮಾಡುವಾ ಶರಣ
ಶರಣ ಹೋದಾಂಪಗ ತಗಿ ಇಲ್ಲ ಮರಣ
ದುರಿತ ಕರ್ಮ ದೂರ ಮಾಡೋ ನೀನು
ಅವನಿಂದಲೇ ಆಗುವದು ಜನ್ಮಪಾವನ ॥ ಪಲ್ಲ ॥

ಲಕ್ಷ ಚೌರ್‍ಯಾಂಸಿ ಜಲ್ಮ ತಿರುಗುತ ಹ್ವಾದಿ
ತಾಯಿ ತಂದಿಲಿ ಹುಟ್ಟಿ ಬದಕ ನೀ ಬಂದಿ
ಮುನ್ನೂರದರವತ್ತ ಕುತ್ತ ಮುಳ್ಳಗಿಳ್ಳ ತುಳದಿ
ಹಸನ ಮಾಡಿಕೋ ತಮ್ಮಾ ನೀ ಹೋಗುವ ಹಾದಿ ॥ ೧ ॥

ಸಂಸಾರವೆಂಬುದುದು ಮೂರು ದಿನದ ಸಂತಿ
ಎಷ್ಟೋ ಗಳಿಸಿದರೂ ಬಿಟ್ಟು ಒಂದಿನ ಹೋಗ್ತಿ
ಹೋಗುದು ಖರೆಐತಿ ಮಾಡಬ್ಯಾಡ ಚಿಂತಿ
ವಾಗ್ಯಾ ಹೇಳ್ತಾನ ಗುರುಮಾರ್ಗ ರೀತಿ
ಇದರಂತ ನಡದರ ಆಗ್ತದ ಮುಕ್ತಿ ॥ ೨ ॥

ಮಂಗಸೂಳಿ ಎಂಬುದು ಊರ ಪರಸಿದ್ಧ
ಮಲ್ಲೇಶ ದೇವರಲ್ಲಿ ವಾಸ ಮಾಡಿದ್ದ
ದುರಿತ ಕರ್ಮವ ದೂರ ಮಾಡಿದ್ದ
ಭಕ್ತ ವಾಗ್ಯಾನ ತಲಿಮೇಲೆ ಇಟ್ಟಾನೋ ಹಸ್ತ ॥ ೩ ॥

ಜಾನಪದ ಕಲೆಗಳೆಲ್ಲ ಇಂದು ವೈಜ್ಞಾನಿಕ ಯುಗದಲ್ಲಿ ಮುಸಳಿಸುತ್ತಿವೆ. ತೋರಿಕೆಯ ಬಣ್ಣ ಬೆಡಗುಗಳಿಗೆ ಮಾರುಹೋಗುತ್ತಿರುವ ಯುವಜನಾಂಗ ನಮ್ಮ ಸಂಸ್ಕೃತಿಯ ತಾಯಿ ಬೇರಿನಂತಿರುವ ಜಾನಪದ ಅರ್ಥೈಸಿಕೊಂಡು ಅರಗಿಸಿಕೊಳ್ಳಲು ಯತ್ನಿಸಬೇಕು. ಸಾವಿರಾರು ಕೈಗಳು ಪ್ರಾಮಾಣಿಕವಾಗಿ ದುಡಿದರೆ ನಮ್ಮ ಜಾನಪದ ಒಂದು ಕಡೆ ಶೇಖರ ಗೊಂಡೀತು. ಆ ರೀತಿ ಮನ ಮಾಡಲು ಇಂಥ ವೇದಿಕೆಗಳು ಅತ್ಯವಶ್ಯ. ಈ ದಿಶೆಯಲ್ಲಿ ಮನಃ ಪೂರ್ವಕವಾಗಿ ದುಡಿಯೋಣ ಎಂದು ತಮ್ಮೆಲ್ಲರಲ್ಲಿ ಕಳಕಳಿಯಿಂದ ಕೇಳಿಕೊಂಡು ಪ್ರಬಂಧ ಮುಗಿಸುತ್ತೇನೆ.

ಈ ಪ್ರಬಂಧದ ತಯಾರಿಕೆಗೆ ವಿಷಯ ಒದಗಿಸಿದ ಜಕನೂರಿನ ಶ್ರೀ ತುಕೋರಾಮ, ಲಕ್ಷ್ಮಪ್ಪ, ಖಂಡೋಬಾ ಅವರಿಗೂ ನೆರವು ನೀಡಿದ ಬೀಳಗಿ ಜ್ಯೂನಿಯರ್ ಕಾಲೇಜಿನ ವಿದ್ಯಾರ್ಥಿ ಪ್ರಭು ಕಾಂಬಳೆಗೂ ಜಾನಪದದಲ್ಲಿ ನನ್ನ ಆಸಕ್ತಿಯನ್ನು ಕುದುರಿಸಿ ಲೇಖನ ತಮ್ಮದೇ ಎನ್ನುವಷ್ಟು ಶ್ರದ್ಧೆಯಿಂದ ಅದನ್ನು ಸಿದ್ಧಪಡಿಸಲು ನೆರವಾದ ಬಿಳಗಿ ಜ್ಯೂನಿಯರ್ ಕಾಲೇಜಿನ ನನ್ನ ಗೆಳೆಯರಾದ ಶ್ರೀರಾಮ ಇಟ್ಟಣ್ಣವರ ಅವರನ್ನು ಸ್ಮರಿಸುತ್ತೇನೆ. ನಮಸ್ಕಾರ.

● ●

# ಗೊಂದಲಿಗರು

ನಿಂಗಣ್ಣ ಸಣ್ಣಕ್ಕಿ

**ಪೂರ್ವೇತಿಹಾಸ :**

ಗೊಂದಲಿಗರು ಕರ್ನಾಟಕದ ವೃತ್ತಿಗಾಯಕರಲ್ಲಿ ಪ್ರಮುಖ ಜನಾಂಗದವರಾಗಿದ್ದಾರೆ. 'ಗೊಂದಲವೆಂಬುದು ದೇವಾರಾಧನೆಯ ಒಂದು ವಿಧಿ-ವಿಧಾನ. ಈ ವಿಧಿ-ವಿಧಾನಗಳನ್ನು ಕ್ರಮಬದ್ಧವಾಗಿ ನಡೆಯಿಸುವವರು ಗೊಂದಲಿಗರೆನ್ನಿಸಿಕೊಂಡಿದ್ದಾರೆ. ಗೊಂದಲಿಗರು ದೇವಿ ಆರಾಧಕರು, ದೇವಿ ಆರಾಧನೆಯನ್ನು ಇವರು ನಡೆಯಿಸುವದಕ್ಕೆ "ಗೊಂದಲ ಹಾಕುವದು" ಎಂದು ಹೇಳಲಾಗುತ್ತದೆ. ಹೀಗೆ ಗೊಂದಲಿಗ ಅನ್ನುವುದು ಒಂದು ಜನಾಂಗ-ಜಾತಿ ಮತ್ತು ಗೊಂದಲ ಅನ್ನುವದು ಅವರ ಕುಲ ಕಸಬು. ಮೂಲತಃ ಆರಾಧನೆಗೆ ಸಂಬಂಧಿಸಿದ ಈ ಕಸಬು ಅನಂತರದ ದಿನಗಳಲ್ಲಿ ಕಥಾಗೋಷ್ಠಿಯಾಗಿಯೂ ರೂಪಾಂತರ ಪಡೆದಿದೆ."[1] ಕನ್ನಡ ಸಾಹಿತ್ಯದಲ್ಲಿ ಅದರಲ್ಲೂ ಹನ್ನೆರಡನೆಯ ಶತಮಾನದ ವಚನಕಾರರ ದೃಷ್ಟಿಯಲ್ಲಿ ಶರಣರ ಚಿಂತನಗಳಲ್ಲಿ ಕಸಬುಗಳ ಮೇಲಿಂದಲೇ ಜನಾಂಗವನ್ನು ಗುರುತಿಸಿದ್ದುಂಟು. ಆದರೂ ಮಾನವರೆಲ್ಲ ಒಂದೇ. ಕೀಳು-ಮೇಲಿಲ್ಲ ಎಂಬ ಸಮತಾವಾದದ ಕೂಗು ಎಲ್ಲರ ಮನ ಒಡಿಯುವಂತಹ ಧ್ವನಿಯಾಗಿದೆ.

ಕನ್ನಡದ ಪಂಪ, ರುದ್ರಭಟ್ಟ, ಅಲ್ಲಮಪ್ರಭು, ಹರಿಹರ, ವಿರೂಪಾಕ್ಷ ಪಂಡಿತ, ಲಕ್ಷ್ಮೀಶ ಮೊದಲಾದ ಕವಿಗಳು ಗೊಂದಳ (ಗೊಂದಲ) ಶಬ್ದವನ್ನು 'ಸಮೂಹ' ಎಂಬರ್ಥದಲ್ಲಿ ಪ್ರಯೋಗಿಸಿದ್ದಾರೆ. ಹನ್ನೊಂದನೆಯ ಶತಮಾನದ ಅಭಿನವ ಪಂಪನು ಒಂದು ಬಗೆಯ "ಗೋಷ್ಠಿ" ಎಂಬರ್ಥದಲ್ಲಿ ಉಪಯೋಗಿಸಿದ್ದಾನೆ.

೧. ಕಾಲ-೧: ಸಂಪಾದಕರು— ಜ್ಯೋತಿ ಹೊಸೂರ, ಪುಟ-೫೦.

ದೇಶಿಯ ವಿಲಾಸಮುಂ ಪಡೆಯೆ ಗೊಂದಳವೆಕ್ಕಣವಾಗಳಾ ನೃಪಾ।
ವಾಸದೊಳಾಡಿದತ್ತೆಸೆಯೆ ಪಾಣಿತಲಂ ಪಡೆವಂತೆ ಕುಂಕುಮು।
ಸ್ಥಾನಕಮುಂ ಕುರುಳ್ ಕೆದರುವಂತೆ ತಯೊಳನವ ಪ್ರವಾಳನಂ।
ಕೇಸಡಿ ವಾಸುವಂತೆ ತಳಿರಂ ನಗೆಗಣ್ದುಗುಳ್ವಂತೆ ನೆಯ್ದಿಲಂ।
(೩–೧೧೬ ಪಂಪರಾಮಾಯಣ)

ಎಂದು ತನ್ನಕಾಲದ 'ಗೊಂದಳ'ದ ದೇಶಿ ವಿಳಾಸವನ್ನು ವರ್ಣಿಸಿದ್ದಾನೆ.

ಹನ್ನೆರಡನೆಯ ಶತಮಾನದಲ್ಲಿ ಪ್ರಭುದೇವರು ತಮ್ಮ ವಚನದಲ್ಲಿ 'ಗೊಂದಣ ಗೊಂಡು' ಎಂದು ಪ್ರಯೋಗಿಸಿದ್ದಾರೆ.

ಎಂಬತ್ತು ನಾಲ್ಕು ಲಕ್ಷ ಯೋನಿಮುಖ ಜೀವಗಳಿಗೆ
ಎಂಬತ್ತು ನಾಲ್ಕು ಲಕ್ಷಾರಾಧನೆ
ಒಂದೊಂದಜಾರಾಧನೆಯನೊಂದಂದಜಿಯದೆ
ಗೊಂದಣಗೊಂಡು ಲಯವಾದುದಲ್ಲಾ[೧]

ರೇಣುಕಾ ಮಹಾತ್ಮೆಯಲ್ಲಿ ಗೊಂದಲವನ್ನು ಕುರಿತು ನೃತ್ಯ ವಿಧಾನ ಎಂಬುದಾಗಿ ತಿಳಿಸಲಾಗಿದೆ. "ರೇಣುಕಾ ಮಹಾತ್ಮ್ಯದಲ್ಲಿ ಈ ಗೊಂದಲೀ ನೃತ್ಯದ ವಿಧಾನವು ವರ್ಣಿಸಲ್ಪಟ್ಟಿದೆ. ಈ ಅಧ್ಯಾಯದ ೩೭ನೆಯ ಶ್ಲೋಕವು ಈ ಗೊಂದಲೀನೃತ್ಯವು ಕರ್ನಾಟಕದೇಶದಲ್ಲಿ ಹುಟ್ಟಿದ್ದು ಎಂದು ಸ್ಪಷ್ಟವಾಗಿ ಹೇಳುತ್ತದೆ."[೨] ಅಲ್ಲದೆ ಗೊಂದಲ ನೃತ್ಯದ ಸಾಮಗ್ರಿಗಳನ್ನು ವಿವರಿಸಲಾಗಿದೆ. ಅವು–(೧) ದೀವಟಿಗೆ (೨) ಕವಡೆಯ ಸರ (೩) ಮಾತೃವಾದ್ಯ (೪) ತಾಳ (೫) ವಂಶವಾದ್ಯ (೬) ಮೃದಂಗ (೭) ವೀಣೆ (೮) ಜಂಡಕ (೯) ತ್ರಿವಳಿ (೧೦) ಮುರಜ ಇತ್ಯಾದಿ ವಾದ್ಯಗಳು.

ನಿಜವಾಗಿ ನೋಡಿದಲ್ಲಿ ಪ್ರಾಚೀನ ಕರ್ನಾಟಕವು "ಕಾವೇರಿಯಿಂದಮಾ ಗೋದಾವರಿವರ" ಹಬ್ಬಿದ ಪ್ರದೇಶ. ಈ ಪ್ರದೇಶದಲ್ಲಿ ಅಲ್ಲದೆ ದಕ್ಷಿಣ ಭಾರತದಲ್ಲಿ ಸವದತ್ತಿಯೇ 'ರೇಣುಕಾ' (ಯಲ್ಲಮ್ಮ)ನ ಕ್ಷೇತ್ರವಾಗಿದೆ. ದೇವಿಯ ಆರಾಧನೆಯ ಸಲುವಾಗಿ ಗೊಂದಲ ನೃತ್ಯ ನಡೆಯುತ್ತಿತ್ತು. ಮೂವತ್ತೆರಡು ಜನ ಸಂಗೀತದ ಜೊತೆ ದೀವಟಿಗೆಯಿಂದ ಪತ್ರವಾಡುವ ಈ ನೃತ್ಯ ಜಿರುಸಿನ ಕುಣಿತದಿಂದ ಕೂಡಿರುವುದಲ್ಲದೆ, ಮೈನವಿರೇಳುವ, ಭಾವನಾಪರವಶವಾಗುವ ನೃತ್ಯವೂ ಆಗಿದೆ. ಈ ನೃತ್ಯದಿಂದಾಗಿಯೂ ನೃತ್ಯಗಾರರಿಗೆ ಗೊಂದಲಿಗರೆಂದು ಆಗಲೇ ಹೆಸರಿಸಿದ್ದುಂಟು. ಗೊಂದಲದ ನಂತರ ಈಗಲೂ ಈ ನೃತ್ಯ ನಡೆಯುತ್ತದೆ. ಮತ್ತು ಅದೇ ಶಕ್ತಿಯನ್ನು ಕಾಯ್ದುಕೊಂಡಿದೆ.

---

೧. ಗೂಳೂರ ಸಿದ್ಧಲಿಂಗೊಡೆಯರು ಸಂಪಾದಿಸಿದ ಪ್ರಭುದೇವರ ಶೂನ್ಯಸಂಪಾದನೆ. ಸಂಪುಟ–೧: ಪುಟ–೩೮೨.

೨. ಪ್ರಬುದ್ಧ ಕರ್ನಾಟಕ ಸಂಪುಟ–೨೧: ಸಂಚಿಕೆ–೨, ಪುಟ–೧೨೨.

ಗೊಂದಲಿಗರ ಮನೆಯಲ್ಲಿ ಮಾತನಾಡುವ ಭಾಷೆ ಮರಾಠಿ ಇರುವದರಿಂ ಮೇಲು ನೋಟಕ್ಕೆ ಅವರು ಮಹಾರಾಷ್ಟ್ರದವರಿರಬೇಕೆಂದು ಅನ್ನಿಸದೇ ಇರದು ಜನಾಂಗದ ಪ್ರಮುಖರೂ ಸಹ ತಾವು ಶಿವಾಜಿ ಮಹಾರಾಜನ ಕಾಲದವರೆಂದು ಹೆಮ್ಮೆಯಿಂದ ಹೇಳುವದುಂಟು. 'ತೋತಾರಾಮ ಗೊಂಧಳಿ ಹೆಸರು ಆಗ ಪ್ರಸಿದ್ಧ ವಾದುದು. ಅಲ್ಲದೆ ಅನೇಕ ಗೊಂಧಳಿ ವೃತ್ತಿಕಾರರು ಛತ್ರಪತಿ ಶಿವಾಜಿ ಮಹಾರಾಜನಿಗೆ ಗುಪ್ತಚಾರರಾಗಿ ಕಾರ್ಯಮಾಡಿದ್ದುಂಟು. ಅಲ್ಲದೆ ಪೇಶ್ವೆಯರ ಆಳಿಕೆಯಲ್ಲಿ ಪೇಶ್ವಾಯಿ ಅಮಲಿನ ಒತ್ತಡ ಪ್ರಭಾವವು ಕರ್ನಾಟಕದ ಮೇಲೆ ವಿಶೇಷ ಬೀಳಲು ಕರ್ನಾಟಕದ ಗೊಂದಲಿಗರೂ ಮಹಾರಾಷ್ಟ್ರದಲ್ಲಿ ಸೇರಿಕೊಂಡ ತಮ್ಮ ಬೀಗ ಬಿಜ್ಜರ ಧರ್ಮಾಚರಣೆಗಳನ್ನೊಪ್ಪಿಕೊಂಡು ಅಂಭಾಭವಾನಿ ತುಳಜಾಭವಾನಿಯ ಭಕ್ತರಾದುವಲ್ಲದೆ ಅನೇಕರು ಮರಾಠಿಭಾಷೆಗೆ ಮನಸೋತು ಮರಾಠಿಯನ್ನೇ ತಮ್ಮ ಮಾತೃಭಾಷೆ ಯನ್ನಾಗಿ ಮಾಡಿಕೊಂಡರು. ಹೀಗಾಗಿ ಮರಾಠಿಗರ ಪ್ರಭಾವವು ಈ ಸಂಚಾರ ಮಾಡುವ ಜನರ ಮೇಲೆ ವಿಶೇಷ ಪರಿಣಾಮಮಾಡಿತು."[೧] ಕರ್ನಾಟಕದ ಈ ಜನಾಂಗವನ್ನು ಧಾರ್ಮಿಕವೃತ್ತಿಗಾಯಕರೆಂದೇ ಕರೆಯುವುದು ಸೂಕ್ತವಾದುದು ಮತ್ತು ಔಚಿತ್ಯಪೂರ್ಣ ವಾದುದು.

## ಗೊಂದಲಿಗ ಪದದ ರೂಪ ನಿಷ್ಪತ್ತಿ:

ಹನ್ನೆರಡು ಶತಮಾನದಿಂದಲೂ 'ಗೊಂದಲ' ಶಬ್ದವನ್ನು ಕನ್ನಡ ಹಾಗೂ ಅದರ ಜ್ಞಾತಿ ಭಾಷೆಗಳಲ್ಲಿ ನೋಡಬಹುದು. 'ಮರಾಠಿಯಲ್ಲಿ ಗೋಂಧಳ, ಗೊಂಧಳಿ ಶಬ್ದಗಳ ಪ್ರಯೋಗಗಳು ಬಹಳಷ್ಟು ಪ್ರಭಾವಿಯಾಗಿವೆ, 'ಗೋಂಧಳ' ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಗೊಂದಲ ಎಂಬ ಪದವೇ ಅಲ್ಪ ಪರಿವರ್ತನೆಗೊಂಡು ಮರಾಠಿ ಭಾಷೆಯಲ್ಲಿ ಗೋಂಧಳ ಆಗಿದೆ. ಇದರ ವಿವರಣೆ ಬಲು ಸುಲಭವಿದೆ. ಮರಾಠಿ ಭಾಷೆಯಲ್ಲಿ ಒ (ಹ್ರಸ್ವ) ಸ್ವರವಿಲ್ಲ. ಕೇವಲ ಓ (ದೀರ್ಘ) ಸ್ವರ ಮಾತ್ರ ಇವೆ. ಆದ್ದರಿಂದ ಮರಾಠಿಗರು ಎಲ್ಲ ಪ್ರಸಂಗಗಳಲ್ಲೂ ಓ ಸ್ವರವನ್ನೇ (ದೀರ್ಘ) ಉಚ್ಚರಿಸುತ್ತಾರೆ.[೨] ಹೀಗಾಗಿ ಈ ಗೊಂದಲ ಗೋಂಧಳ ಆಗಿರಬೇಕೆಂಬುದರಲ್ಲಿ ಸಂಶಯ ವಿರುವದಿಲ್ಲ.

ಮರಾಠಿ ಉತ್ಪತ್ತಿ ಕೋಶಕಾರ ಶ್ರೀ ಕೃ. ಪಾ. ಕುಲಕರ್ಣಿ ಅವರು "ಭಾಷಾಶಾಸ್ತ್ರ ಆಣಿ ಮರಾಠಿ ಭಾಷಾ" ಎಂಬ ಹೆಸರಿನ ಗ್ರಂಥ ರಚಿಸಿದ್ದಾರೆ. ಅದರಲ್ಲಿ ಅವರು ಮರಾಠಿ

೧. ಜಯಕರ್ನಾಟಕ: ಡಾ|| ಜಿ. ಎಸ್. ಗದ್ದಿಗಿಮಠ. ಕರ್ನಾಟಕದ ಗೊಂದಲಿಗರು. ಸಂಪುಟ. ೩೩ ಪುಟ ೩೭೯.

೨. ಕಾಲ-೧. ಸಂ. ಜ್ಯೋತಿ ಹೊಸೂರ. ಪುಟ ೮೬

ಭಾಷೆಯಲ್ಲಿ ಬಳಸಲಾಗುವ ಕಾಲವಣೇಂ ಗೊಂಧಳ ಮುಂತಾದ ಹದಿನೇಳು ಶಬ್ದಗಳು ಮೂಲತಃ ಕನ್ನಡದ್ದಾಗಿವೆಯೆಂದು ಒಪ್ಪಿಕೊಂಡಿದ್ದಾರೆ.[೧] ಅಂದ ಮೇಲೆ ಹೆಚ್ಚಿನ ಪ್ರಮಾಣಗಳ ಅಗತ್ಯಬೇಕೆನಿಸುವದಿಲ್ಲ. ಗೊಂದಲ ಶಬ್ದದ ಬಗೆಗೆ ಡಾ. ಎಂ. ಬಿ. ಎಮಿನೋ ಮತ್ತು ಟಿ. ಬರೋ ಅವರು ತಮ್ಮ ದ್ರಾವಿಡ ಭಾಷಾ ಜ್ಞಾತಿ–ಪದಕೋಶ ಗಳಲ್ಲಿ ಇದಕ್ಕೆ ಸ್ಥಾನ ಕೊಟ್ಟಿದ್ದಾರೆ. ಒಟ್ಟಿನಲ್ಲಿ "ಗೊಂದಲ" ಗೊಂದಣ ಮೊದಲಾದ ಈ ಪದಗಳ ರೂಪಗಳಲ್ಲಿ ಕೊನ್ತು ಅಥವಾ ಕೊತ್ತ್ ಎಂಬ ಮೂಲ ಪ್ರಕೃತಿಯಿದ್ದು ಅದರಿಂದ ಉಳಿದ ರೂಪಗಳು ಸಿದ್ಧಿಸಿವೆ ಎಂದು ಹೇಳಲು ಅಭ್ಯಂತರವಿಲ್ಲ.[೨]

ಕನ್ನಡದಲ್ಲಿ ಪ್ರಚಲಿತವಾಗಿ ಬಳಸುವ ಗೊಂದಲಿ ಮರಾಠಿ ಭಾಷೆಯಲ್ಲಿ 'ಗೊಂಧಳಿ' ಎಂದು ಕರೆಯುವಂತೆ, ಉರ್ದು ಭಾಷೆಯಲ್ಲಿ 'ಗೋಂದಲಿ' ಎಂದು ಕರೆಯುತ್ತಾರೆ. ಬಿಜಾಪೂರ ಮತ್ತು ಕಲಬುರ್ಗಿ ನಗರಗಳಲ್ಲಿಯ ಮುಸಲ್ಮಾನರಿಂದ ಈ ವಿಷಯ ಮನವರಿಕೆ ಮಾಡಬಹುದು[೩]. ಹೀಗೆ ಗೊಂದಲ ಶಬ್ದವು ಪೂರ್ತಿಯಾಗಿ ಕನ್ನಡದ ಬಳಕೆಯಾಗಿದೆ. ಆದರೆ ಇನ್ನೊಂದು ಅರ್ಥದಲ್ಲಿ 'ತಿಳಿಯದಂತಾಗು' ಎಂಬುದಾಗಿಯೂ ಅರ್ಥವನ್ನು ಮಾಡುವುದರಿಂದ ಗೊಂದಲ 'ಶಕ್ತಿದೇವಿ'ಯ ಪೂಜಾವಿಧಿ, ಬಹು ಜೊಂಜಾಟದ್ದು ವಿಧಿಯನ್ನು ನೋಡಿದಲ್ಲಿ ಅರಿಯಬೇಕು. ಅರಿತ ಮೇಲೆ ಪೂಜಾವಿಧಿ ಸರಳವೆನ್ನಿಸುವುದು.



### ಗೊಂದಲಿಗರು ವಾಸಿಸುವ ಪ್ರದೇಶ:

ಗೊಂದಲಿಗರು ಪೂರ್ವಕಾಲದಿಂದಲೂ ಇಂದಿನವರೆಗೆ ಸಂಚಾರಿ ಜನಾಂಗವಾಗಿದೆ. ಅವರು ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಪ್ರದೇಶಗಳಲ್ಲಿ ಇದ್ದಾರೆ. ತಮಿಳ ನಾಡಿಗೂ, ಆಂಧ್ರಪ್ರದೇಶಕ್ಕೂ, ಗೋವೆಗೂ ಹೋಗಿ ಸಂಚಾರ ಮಾಡುತ್ತಿದ್ದಾರೆ. ಆದರೆ ಪ್ರಮುಖವಾಗಿ ಅವರ ವಾಸ ಮತ್ತು ಸಂಚಾರ ಕರ್ನಾಟಕದಲ್ಲಿಯೇ ಇದೆ. ಪ್ರಮಾಣವೂ ಹೆಚ್ಚಿದೆ. ಅಖಿಲ ಕರ್ನಾಟಕದ ಗೊಂಧಳಿ ಸಂಘ ಹುಬ್ಬಳ್ಳಿ'ಯವರು ಕರ್ನಾಟಕದ ಗೊಂದಳಿ ಜನರ ಬಗೆಗೆ ಅರುವಿನ ಹಾಗೂ ಸುಧಾರಣೆಯ ಜಾಗ್ರತೆ ನಡೆಯಿಸಿದ್ದಾರೆ. ಅವರ ಎಣಿಕೆಯ ಪ್ರಕಾರ ಕರ್ನಾಟಕದಲ್ಲಿ ಎರಡು ಲಕ್ಷ ಮೇಲ್ಪಟ್ಟು ಜನರು ಇದ್ದಾರೆಂದು ತಿಳಿದುಬಂದಿದೆ. ಮೊದಲೆಲ್ಲಕಡೆ ಸಂಚಾರಿಯಾಗಿದ್ದು ಅನಂತರ ಅವರು ಅವಶ್ಯ ಅನುಕೂಲ ನೋಡಿಕೊಂಡು ವಾಸಿಸಿದ್ದಾಗಿ ಕೆಲವು ಸಮಾಜದ ಹಿರಿಯರು ಹೇಳುತ್ತಾರೆ.

---

೧. ಕೃ. ಪಾ. ಕುಲಕರ್ಣಿ, ಭಾಷಾಶಾಸ್ತ್ರ ಆಣಿ ಮರಾಠಿ ಭಾಷಾ, ಪೃ. ೧೯೭
೨. ಕಾಲ ಪತ್ರಿಕೆ. ಸಂಚಿಕೆ–೨ ಪುಟ–೩೮–೩೯
೩. ಕಾಲಗತಿ–೪. ಸಂ. ಜ್ಯೋತಿ ಹೊಸೂರ–ಪುಟ ೪೯

ಕರ್ನಾಟಕದಲ್ಲಿ ಬಿಜಾಪೂರ, ಕೆರೂರ, ಬಾದಾಮಿ, ಕೊಪ್ಪಳ ಜತ್ತ ಜಮಖಂಡಿ ಕಡ(ಟ)ಕೋಳ್, ಮುಂರಗೋಡ, ಬೈಲವಾಡ, ಒಕ್ಕುಂದ, ಗದಗ ಮುಳಗುಂದ, ಲಕ್ಷ್ಮೇಶ್ವರ ಈ ಎಲ್ಲ ಸ್ಥಳಗಳಲ್ಲೂ ಗೊಂದಲಿಗರು, ಬಹುಪ್ರಾಚೀನ ಕಾಲದಿಂದಲೂ ವಾಸವಾಗಿದ್ದಾರೆ, ಗುಲಬುರ್ಗಾ, ಬೀದರ, ರಾಯಚೂರ, ಬಿಜಾಪೂರ, ಗುಳೇದಗುಡ್ಡ, ಇಳಕಲ್ಲ, ಕೋಡಿಹಾಳ, ಬೆಳಗಾಂವ, ಗೋಕಾಕ, ರಾಯಬಾಗ, ರಾಮದುರ್ಗ, ಸಂಕೇಶ್ವರ, ಹುಕ್ಕೇರಿ, ನಿಪ್ಪಾಣಿ, ಸಾಂಗಲಿ, ಮಿರಜ, ರಬಕವಿ, ಬನಹಟ್ಟಿ, ಸವದತ್ತಿ, ಬೈಲಹೊಂಗಲ, ಹುಬ್ಬಳ್ಳಿ, ಧಾರವಾಡ, ಕುಂದಗೋಳ, ಹಾವೇರಿ, ಮಾನ್ವಿ, ಬಳ್ಳಾರಿ, ಹೊಸಪೇಟ, ಶಿವಮೊಗ್ಗಾ, ಚಿತ್ರದುರ್ಗ, ದಾವಣಗೇರೆ, ಹಾಸನ, ಮಂಡ್ಯ, ಮೈಸೂರ, ಕೊಳ್ಳೆಗಾಲ, ನಂಜನಗೂಡ, ಬೆಂಗಳೂರ, ಮಂಗಳೂರ, ಪುತ್ತೂರು ಮುಂತಾದ ನಗರಗಳಲ್ಲೂ ಹಾಗೂ ಆ ನಗರಗಳ ಸುತ್ತಮುತ್ತಲಿನ ಹಳ್ಳಿಗಳಲ್ಲೂ ಇದ್ದಾರೆ. ಕೋಲಾರ ಮತ್ತು ಕೊಡಗು ಜಿಲ್ಲೆಗಳಲ್ಲಿ ಅವರ ಸಂಚಾರ ಇದೆ. ವಾಸವಿನ್ನೂ ಆಗಿಲ್ಲ.

ಇಡೀ ಕರ್ನಾಟಕವನ್ನು ನೋಡಿದಲ್ಲಿ ಗೊಂದಲಿಗರ ವಾಸ ಉತ್ತರಕರ್ನಾಟಕ ದಲ್ಲಿಯೇ ಅವರ ಜನಸಂಖ್ಯೆ ಹಾಗೂ ಕಲಾಕಾರರು ಹೆಚ್ಚಾಗಿ ತೋರುತ್ತಾರೆ. ಕೊಲ್ಹಾಪೂರ, ತುಳಜಾಪೂರ ಹಾಗೂ ಸುತ್ತಮುತ್ತಲಿನ ಗ್ರಾಮಗಳಲ್ಲಿ ಇವರ ವಸತಿ ಇದೆ.

**ಗೊಂದಲಿಗರ ಆಡುವ ಭಾಷೆ :**

ಗೊಂದಲಿಗರು ಮನೆಯಲ್ಲಿ ಮರಾಠಿಯ ಭಾಷೆಯನ್ನಾಡಿದರೂ, ಕನ್ನಡವೇ ಅವರ ಪ್ರಮುಖ ಸಾಹಿತ್ಯಕ ಹಾಗೂ ವ್ಯವಹಾರಿಕ ಭಾಷೆಯಾಗಿದೆ. ಹಾವೇರಿ ಹಾಗೂ ಕುಂದಗೋಳ ಸುತ್ತಲಿನ ಕೆಲವು ಜನರಿಗೆ ಮರಾಠಿಯೇ ಗೊತ್ತಿಲ್ಲ. ಧಾರವಾಡದ ಕನ್ನಡವೇ ಅವರಿಗೆ ಗೊತ್ತು. ಹೈದರಾಬಾದಿನಲ್ಲಿರುವ ಗೊಂದಲಿಗರಿಗೆ ಮರಾಠಿ ಗೊತ್ತಿಲ್ಲ; ಕನ್ನಡ ಮತ್ತು ತೆಲಗು ಭಾಷೆಗಳು ಗೊತ್ತುಂಟು. ಇತ್ತೀಚೆಗೆ ಹೈದರಾಬಾದಿನಲ್ಲಿ 'ಗೊಂಡಿಲು (ಗೊಂದಲ) ಸಭೆ'ಯಾಯಿತು. ಕರ್ನಾಟಕದಿಂದ ಇಂದಿಗೆ ನೂರಾರು ವರ್ಷಗಳ ಹಿಂದೆ ತಾವಲ್ಲಿ ವಲಸೆ ಹೋದವರೆಂದು ತಿಳಿಸುತ್ತಾರೆ. ಕರ್ನಾಟಕ ಕರಾವಳಿ ಪ್ರದೇಶದಲ್ಲಿ ವಾಸವಾದ ಕನ್ನಡ ಮತ್ತು ತುಳು ಭಾಷೆಗಳು ಗೊತ್ತುಂಟು. ಗೊಂದಲ ವನ್ನು ಹಾಕುವಾಗ ಕನ್ನಡ ಭಾಷೆಯಲ್ಲಿಯೇ ದೇವಿಯನ್ನು ಸ್ತುತಿಸುವರು.

**ಗೊಂದಲಿಗರ ನಂಬಿಕೆಗಳು :**

ಗೊಂದಲಿಗರ ನಂಬಿಕೆಗಳನ್ನು ವಿಂಗಡಿಸಿ ತಿಳಿಯಬಹುದು. ಧಾರ್ಮಿಕ ನಂಬಿಕೆಗಳು, ಸಾಂಸ್ಕೃತಿಕ ನಂಬಿಕೆಗಳು, ಮೂಢನಂಬಿಕೆಗಳು ಇತ್ಯಾದಿಯಾಗಿ ಗೊತ್ತುಪಡಿಸ ಬಹುದು.

**ಧಾರ್ಮಿಕ ನಂಬಿಕೆಗಳು :** ಶಕ್ತಿದೇವಿಯನ್ನು ಆರಾಧಿಸುತ್ತಾರೆ. ದೇವಿಯ ನಂತರ ದೈವವನ್ನು ನಂಬಿದ್ದಾರೆ. ದೇವಿಗೆ ಪ್ರಾಣಿಬಲಿ ಕೊಡಲು ಇಷ್ಟಪಡುತ್ತಾರೆ. ಪ್ರಾಣಿವಧೆ ಮಾಡುತ್ತಾರೆ. ಸಂಚಾರಕ್ಕಾಗಿ ಎಲ್ಲಿಯೋ ಹೋಗಲಿ ವರ್ಷದ ಆಷಾಢಮಾಸ ದಲ್ಲಿ ಊರಿಗೆ ಬರುವರು, ಈ ಮಾಸದಲ್ಲಿ ದೇವಿಯ ಆರಾಧನೆ, ಜಾತ್ರೆ, ಗೊಂದಲ ಹಾಕುವ ಕಾರ್ಯ, ಮದುವೆಯ ಮಾತುಕತೆ ಮಾಡುವರು.

**ಸಾಂಸ್ಕೃತಿಕ ನಂಬಿಕೆಗಳು :** ದೇಹಕ್ಕೆ ತಲೆ, ಮನೆಗೆ ಒಲೆ, ಜೀವನಕ್ಕೆ ಕಲೆ ಅತ್ಯವಶ್ಯ ಎನ್ನುವದನ್ನು ನಂಬಿದವರುಂಟು. ಮನೆ ಕಟ್ಟುವದಿದ್ದಲ್ಲಿ ಜಗಳಗಳಾದಲ್ಲಿ ದೈವ ಕೂಡಿಸುವ ಶುಭದಿನ ಗೊತ್ತುಮಾಡುತ್ತಾರೆ. ದೇವಿಯ ಕಟ್ಟಿ ಅಥವಾ ಗುಡಿಯಲ್ಲಿ ಆದ ನ್ಯಾಯನಿರ್ಣಯಗಳನ್ನು ಕೇಳುತ್ತಾರೆ. ತಪ್ಪುಗಳನ್ನು ಒಪ್ಪುತ್ತಾರೆ. ಆತ್ಮಸಾಕ್ಷಿ, ಆಣೆಮಾಡುವುದು, ಕಡ್ಡಿನ್ಯಾಯ ಇವುಗಳಲ್ಲಿ ಬಲವಾದ ನಂಬಿಕೆಗಳು ಗೊಂದಲಿಗರಲ್ಲಿವೆ.

**ಮೂಢನಂಬಿಕೆಗಳು :** ಯಾವದೇ ಕೆಲಸಕ್ಕೆ ಹೊರಟಾಗ ಬೆಕ್ಕು, ಕಾಗೆ, ಬರಿಗೊಡ, ಬರಿಬುಟ್ಟಿ, ಕುಳ್ಳು, ಕಟ್ಟಿಗೆ ಎದುರಿಗೆ ಬಂದರೆ ಹೊರಟ ಕಾರ್ಯ ಆಗು ವದಿಲ್ಲವೆಂದು ಅರ್ಥೈಸುತ್ತಾರೆ. ತುಂಬಿದ ಕೊಡ, ಮುತ್ತೈದೆ, ಆಕಳು ಎದುರಿಗೆ ಬಂದರೆ ಶುಭವೆಂದು ನಂಬುತ್ತಾರೆ. ನಾಲ್ಕು ಜನ ಕೂಡಿ ನಡೆದಾಗ— 'ಎಲ್ಲಿ ಹೊಂಟಿರಿ' ಎಂದು ಯಾರೂ ಕೇಳಬಾರದು. ಅದು 'ಅಡಬಾಯಿ' ಎಂದು ಕರೆಯುತ್ತಾರೆ. ಯಾವದೇ ಶುಭ ಕಾರ್ಯಕ್ಕೆ ಹೋಗುವಾಗ ನಾವಲಿಗ (ನಾಭಿಕ) ಎದುರು ಬರಬಾರದಾಗಿ ನಂಬಿದ್ದಾರೆ.

**ಆಚಾರ-ವಿಚಾರ ಸಂಪ್ರದಾಯಗಳು :**

ಪೂಜೆಯಲ್ಲಿ ಬ್ರಾಹ್ಮಣರಿಗೆ ಹೆಚ್ಚು ಮಹತ್ವ. ನಂತರದಲ್ಲಿ ಕ್ಷತ್ರಿಯರಿಗೆ, ಲಿಂಗಾಯತರಿಗೆ ಮಹತ್ವ ಕೊಡುತ್ತಾರೆ. ಗೊಂದಲ ಪ್ರಸಂಗಗಳಲ್ಲಿ ಗೊಂದಲಿಗರ ಕಾಲಿಗೆ ನಮಸ್ಕರಿಸುವ ಬ್ರಾಹ್ಮಣರು ಇವರಿಗೆ ಹೆಚ್ಚು ಮಹತ್ವವನ್ನೀಯುತ್ತಾರೆ. ಇವರ ಆಚಾರದಲ್ಲಿ ಸಾಧು-ಸಂತರು, ಸತ್ಪುರುಷರಿಗೆ ಮರ್ಯಾದೆ ಇದೆ. ಯಾರೇ ಭಿಕ್ಷುಕರು ಇವರ ಮನೆಬಾಗಿಲಿಗೆ ಬಂದಾಗ ನೀಡಿ ಕಳಿಸುತ್ತಾರೆ. ಭಿಕ್ಷುಕರ ಬಗ್ಗೆ ತಿರಸ್ಕಾರವಿಲ್ಲ.

ಸಾಧು ಸಂತರು, ಸತ್ಪುರುಷರು ತಾವಾಗಿಯೇ ಗೊಂದಲಿಗರ ಕಡೆಗೆ ಬಂದರೆ,ಆದರ ಹೆಚ್ಚು. ಗೊಂದಲಿಗರು ಧಾರ್ಮಿಕ ಸಂಪ್ರದಾಯದವರಾದುದರಿಂದ ಗೊಂದಲಿಗರು ತಮ್ಮ ಮಕ್ಕಳಿಗೆ ಗೊಂದಲ ವಿಧಾನವನ್ನು ಕಲಿಸುವ ಮೊದಲು ದೇವಿ ಕಾರ್ಯಮಾಡಿ, ಹರಸಿ, ಕಲೆಯನ್ನುಳಿಸಲು ಪ್ರಾರಂಭಿಸುವರು, ಬುಡ

ಬುಡಕಿಯುವರು, ಭೂತೇರು, ಭಾಟರು ಸಹ ದೈವದವರನ್ನು ಕರೆದು ತಮ್ಮ ವೃತ್ತಿಯ
ಒಂದು ಧಾರ್ಮಿಕ ನಿಯಮವೆಂದು ತಿಳಿದು ತಮ್ಮ ಮಕ್ಕಳಿಗೆ ಕಲಿಸುವರು. ಅ
ದೈವದವರಿಗೆ ಫಲಹಾರ ಅಥವಾ ಊಟವನ್ನು ವೃತ್ತಿ ಸ್ವೀಕಾರ ಮಾಡಿದ ಬ
ಅಥವಾ ವ್ಯಕ್ತಿಯ ಹೆಸರಿನಿಂದ ಕೊಡುವರು.

ಮನೆಯಲ್ಲಿ ತಂದೆಯೇ ಹಿರಿಯನು. ಅವನಿಲ್ಲದಾಗ ತಾಯಿಯೇ ಮನೆಯ ಆ
ಹೋಗುಗಳನ್ನು ನೋಡುವವಳು. ಈ ಎಲ್ಲ ಸಂಪ್ರದಾಯಗಳಲ್ಲಿ ಧಾರ್ಮಿಕ ಸಂ
ದಾಯ ಗೊಂದಲಿಗರಲ್ಲಿ ಅತೀ ಮಹತ್ವದ್ದು.

ಇವರು ಮೂಲತಃ ಶೈವ ಸಂಪ್ರದಾಯದವರು. ಬಳಿಕ ವೈದಿಕ ಮ
ಸಂತ ಸಂಪ್ರದಾಯಗಳಿಗೂ ಮನ ನೀಡಿದ್ದಾರೆ. ಇವರಲ್ಲಿ ಪಂಡರಪುರದ 'ವಾರಕ
ಯಾಗುವ ಇತ್ತೀಚಿನ ಸಂಪ್ರದಾಯವಾಗಿದೆ. ವಾರಕರಿಗಳು ತಮ್ಮ ಮನೆಯ ಹಿಂಭಾ
ದಲ್ಲಾಗಲೀ ಮುಂಭಾಗದಲ್ಲಾಗಲಿ ತುಳಸಿ ಕಟ್ಟೆ ಕಟ್ಟಿರುತ್ತಾರೆ. ಇಲ್ಲ
ತುಳಸಿಯ ಗಿಡವನ್ನು ಮಣ್ಣಿನ ಕುಂಡಲಿಯಲ್ಲಿ ನಟಿಸಿ ಕುಂಡಲಿಯ ಮೇಲೆ ಸು
ಬರೆದು, ಕೆಂಬಣ್ಣದಿಂದ ಅದರ ಮೇಲೆ 'ಕಾರ್ತಿಕ ರಾಧಾ ದಾಮೋಧರ ಪ್ರಸನ
ಬರೆಯುವರು.

ದೇವಿಯ ಆರಾಧನೆಯ ಕಾಲಕ್ಕೆ, ಆಷಾಢ ಮಾಸದಲ್ಲಿ, ನವರಾತ್ರಿಗಳಲ್ಲಿ, ದೇವಿ
ಧಾರ್ಮಿಕ ಸಂಪ್ರದಾಯವೆಂದು ಬಲಿ ಕೊಡುವದನ್ನಿರಿಸಿಕೊಂಡಿದ್ದಾರೆ.

ಗೊಂದಲಿಗರು ಕಲಾವೃತ್ತಿ ಮತ್ತಾವದೇ ವೃತ್ತಿ (ಕಾಯಕ)ವನ್ನು ಮಾಡದೆ
ಬೇರೆಯವರಿಗೆ ಕೈಯೊಡ್ಡುವದಿಲ್ಲ. ಯಾರಾದರಾಗಲಿ ತಮ್ಮ ಗೊಂದಲಿ ಸಮಾಜ
ದವರು ಆಹಾರಕ್ಕಾಗಿ ನಿರ್ಗತಿಕರಾದರೆ, ಸಮಾಜದ ಹಿರಿಯರು ಕೂಡಿ ಅಂತಹ ನಿರ್ಗತಿ
ಕರಿಗೆ ಉದ್ಯೋಗವಕಾಶ ಕಲ್ಪಿಸಿಕೊಡುವರು.

**ಹುಟ್ಟು :** ಮಗು ಹುಟ್ಟಿದ ಐದನೆಯ ದಿನ ಬಚ್ಚಲ ಪೂಜೆ ಮಾಡುತ್ತಾರೆ.
ಹನ್ನೆರಡನೆಯ ದಿನ ಹೆಸರಿಡುತ್ತಾರೆ. ಗೊಂದಲಿ ಸಮಾಜದಲ್ಲಿ ಅನುಭವಿ ಸೂಲಗಿತ್ತಿ
ಯರಿರುತ್ತಾರೆ. ಗರ್ಭವತಿ ಬೇನೆ ತಿನ್ನುತ್ತಿದ್ದಾಳೆ ಎಂದು ಆಕೆಯ ಕಿವಿಗೆ ಬಿದ್ದರಾಯಿತು.
ಅಲ್ಲಿಗೆ ಸೂಲಗಿತ್ತಿ ಹೋಗುತ್ತಾಳೆ. ಬೇರೆ ಜಾತಿಯವರು ಕರೆದಾಗಲೂ ಪ್ರಸೂತಿ
ಮಾಡಿಸಲು ಅನೇಕ ಸೂಲಗಿತ್ತಿಯರು ಹೋದ ಪ್ರಸಂಗಗಳುಂಟು. ಗೋಕಾಕದಲ್ಲಿ
ದಿವಂಗತ ಶ್ರೀಮತಿ ಪಾರ್ವತಿಬಾಯಿ ಸಿದ್ದಪ್ಪ ವಾಕಡೆ ಗೋಕಾದ ಪ್ರಸಿದ್ಧ "ಗೊಂದಲಿ
ಸೂಲಗಿತ್ತಿ ಪಾರ್ವತಿದೇವಿ" ಎಂದು ಹೆಸರುವಾಸಿಯಾಗಿದ್ದಳು, ಈಗಲೂ ಶ್ರೀಮತಿ
ಅಂಬವ್ವ ಸುಬಾನ ಉಗಡೆ ಅನುಭವಿ ಸೂಲಗಿತ್ತಿಯಿದ್ದಾಳೆ.

ಸಟವಿ ಹಣೆಬರಹ (ದೈವ) ಬರೆಯುವ ನಂಬಿಕೆ ಇದೆ. 'ಹದಿಮೂರದೆಸಿ' ಮಾಡುತ್ತಾರೆ. ಅಂದು ರಾತ್ರಿ ಶಟವಿ ಪೂಜೆ ನಡೆದು ಮುಸಿಕುಡಿಕೆ ಒಂದು ಕಡ್ಡಿಯನ್ನು ತಾಯಿ ಮಗುವನ್ನು ಮಲಗಿಸುವ ಸಮೀಪದಲ್ಲಿ ಇಡಲಾಗುವುದು.

ಮಗುವಿನ ಹೆಸರಿಡುವುದಕ್ಕೆ ಸೋದರತ್ತೆ ಇದ್ದರೆ ಮೊದಲು ಪ್ರಶಸ್ತಿ, ಇಲ್ಲದಿದ್ದರೆ, ಸಂಬಂಧಿಕರು ಹೆಸರಿಡುತ್ತಾರೆ. ದೇವರ ಹೆಸರುಗಳನ್ನು ಹೆಸರಿಡಿಸಲು ಮೊದಲು ಮನಸ್ಸು ಮಾಡಿ, ತಂದೆ-ತಾಯಿ ಸೂಕ್ಷ್ಮವಾಗಿ ತಿಳಿಸುತ್ತಾರೆ. ಹೆಸರಿಡುವವರು ಮಗುವನ್ನು ತೊಟ್ಟಲಿಗೆ ಹಾಕಿ ಹೆಸರು ಹೇಳಿ 'ಕುರ್‍ರ್ರs ಕುರ್‍ರ್ರs ಕುಕಡಿ ಕುರ್‍ರ್ರss' ಅಂತಾ ಮಗುವಿನ ಕಿವಿಗಳಲ್ಲಿ ಕೂಗುತ್ತಾರೆ. ಹೆಸರಿಡಲು ಕೂಡಿದ ಜನರಿಗೆ, ಐದು ತರದ ಧಾನ್ಯಗಳ ಗುಗ್ಗರಿಯನ್ನು ತಿನ್ನಲು ಕೊಡುತ್ತಾರೆ, ಮೇಲೆ ಕೆಲವ ಮನೆತನದವರು ಬೆಲ್ಲ ಕೊಬ್ರಿಯನ್ನೂ ಕೊಡುವ ಪದ್ಧತಿಯುಂಟು. ಅವರವರ ಮನೆಗೆ ಹೋಗುವಾಗ ಎಲೆ-ಅಡಿಕೆಗಳನ್ನು ಕೊಟ್ಟು ಕಳಿಸುವರು. ಇತ್ತೀಚಿನ ದಿನಗಳಲ್ಲಿ ಮಗುವಿಗಾಗಿ ಬಟ್ಟೆಯ ಕಾಣಿಕೆಗಳನ್ನು ೧ ರಿಂದ ೧೦ರೂಪಾಯಿವರೆಗೆ ಹಣವನ್ನೂ ಕೊಡುವುದುಂಟು. ಇವರಲ್ಲಿ ಮುಂಜಿವೆಯ ಪದ್ಧತಿಗಳಿಲ್ಲ. ಮದುವೆಯುವರೆಗೆ ವಿಶೇಷವಾದ ಯಾವ ಸಂಸ್ಕಾರ ಪದ್ಧತಿಯನ್ನೂ ಗಂಡಿಗೆ ಮಾಡುವುದಿಲ್ಲ.

**ಮೈನೆರೆಯುವದು** : ಹುಡುಗಿ ಮೈನೆರೆದಾಗ ಮನೆಯಲ್ಲಿ ಮೂಲೆಯಲ್ಲಿ ಕೂಡ್ರಿಸುವರು. ಉಳ್ಳವರಿದ್ದರೆ, ಬೇರೊಂದು ಖಾಲಿ ಮನೆಯಲ್ಲಿ ಹಂದರ (ಮಕರ) ಹಾಕಿ ಮಂಚದಮೇಲೆ ಕೂಡ್ರಿಸುವರು, ಶಿವಮೊಗ್ಗಾ ಭಾಗದ ಗೊಂದಲಿಗರು 'ಗುಡ್ಡ ಕೂಡುವ ಶಾಸ್ತ್ರ' ಎಂದು ಕರೆಯುವರು. ಐದು ದಿನಗಳವರೆಗೆ ಏಳುದಿನಗಳ ವರೆಗೆ ಒಂಬತ್ತು ಹನ್ನೆರಡು ದಿನಗಳವರೆಗೆ ಕೂಡ್ರಿಸುವರು. ನೆರೆದವಳಿಗೆ ಸಿಹಿ ಊಟ; ಸಪ್ಪಾನ ಊಟ ಕೊಡುವರು. ಊಟಕ್ಕೆ ಉಳ್ಳೆಗಡ್ಡೆ ಕೊಡುವದಿಲ್ಲ. ಖಾರ ಹಾಕು ವಂತಿಲ್ಲ, ದಿನಾಲು ಸ್ನಾನಮಾಡುವುದು; ಹಸಿರು ಸೀರೆಯನ್ನು ಉಡಿಸುವದು. ಹಸಿರುಬಳೆ ತೊಡಿಸುವುದು; ಬೇರೆ ಹೆಂಗಸರು ಬಂದು ಆರತಿಮಾಡು ವುದು ಈ ಕಾರ್ಯಕ್ರಮಗಳು ನಡೆಯುವವು. ಮುಖಕ್ಕೆ ಅರಿಷಣ ಹಚ್ಚುವರು. ಹೂವು ಮುಡಿಸುವರು. ಸೋಬಾನ ಪದಗಳನ್ನೂ, ದೇವಿಸ್ತುತಿಗಳನ್ನು ಹಾಡುವರು, ಉಳ್ಳವರು ಸಮಾಜಕ್ಕೆ ಒಂದೂಟವನ್ನು ಹಾಕುವರು. ಇದು ಸಿಹಿ ಊಟವಾಗಿರು ವುದು. ಹುಡುಗಿಯ ಗಂಡ ಊರಲ್ಲಿ ಇದ್ದರೆ, ಅವನಿಗೆ ಕೆಂಪು ಬಣ್ಣ ಎರಚುವರು. ೨-೩ ದಿನಗಳವರೆಗೆ ಅವನು ಅದೇ ಬಟ್ಟೆ ತೊಟ್ಟಿರಬೇಕು.

**ಮದುವೆ** : 'ಗೊಂದಲಿಗರಲ್ಲಿ ಎರಡು ಗೋತ್ರಗಳಿವೆ. ಅವು ಸ್ವಗೋತ್ರ, ಭಿನ್ನಗೋತ್ರ. ಸ್ವಗೋತ್ರದ ಗುಂಪು ಬ್ರಾಹ್ಮಣ, ಧಾನಗಾರ, ಮರಾಠಾ, ಕಂಬಾರ, ಕದಮ್‌ರಾಯ್, ರೇಣುಕಾರಾಯ್, ಮಾಲಿ, ಆಕರ್ಮಾಸೆ ಎಂದು ಎಂಟು ವಿಭಾಗ

ಗಳಾಗಿ ಒಡೆದಿವೆ. ಭಿನ್ನಗೋತ್ರದ ಬುಡಕಟ್ಟಿನಲ್ಲಿ ಗಾಯಕವಾಡ. ಪವಾರ, ಮು
ಹನ್ನೆರಡು ಬಗೆಯ ಉಪಗೋತ್ರಗಳಿವೆ.[9] ಮದುವೆ ಹೆಣ್ಣಿನ ಮನೆಯಲ್ಲಿಯೇ
ಬೇಕು. ಗಂಡಿನವರು ಹೆಣ್ಣಿಗಾಗಿ ತೆರವು ಕೊಡಬೇಕು. ಐದು ರೂಪಾಯಿಂ
ಐದನೂರರವರೆಗೆ ಈ ತೆರವು ಈಗಲೂ ರೂಢಿಯಲ್ಲಿದೆ. ವರದಕ್ಷಿಣೆ ಇಲ್ಲ. ವರ
ಚಾರವೂ ಕಡಿಮೆ. ಮದುವಿಗೆ ಮೊದಲು ದೇವಕಾರ್ಯ (ದೇವರಿಗೆ ಮಾಡುವ
ಗೊಂದಲ ಹಾಕುವ ಪದ್ಧತಿಯುಂಟು. ಪ್ರಾಚೀನ ಕಾಲದಲ್ಲಿ ಐದು ದಿನಗಳ. ಮ
ದಿನಗಳವರೆಗೆ ನಡೆಯುವ ಪದ್ಧತಿ ಇತ್ತು ಈಗ ಒಂದೇ ದಿನದಲ್ಲಿ ಮದುವೆಯು
ಮುಗಿಯುತ್ತದೆ. ಸಮಾಜದ ಜನರಿಗೆ ಮಾಂಸದ ಊಟವನ್ನು ಕೊಡುವ ಪ
ಇದೆ. ಗೊಂದಲಿಗರಲ್ಲಿ ಮಹಿಳೆಗೆ ಪುನರ್‌ಲಗ್ನವಿರುವುದು. ಈ ಪುನರ್‌ಲ
'ಉಡುಕಿ' ಪದ್ಧತಿ ಎಂದೂ, ಮರಾಠಿಯಲ್ಲಿ 'ಪಾಟ' ಎಂದೂ ಹೆಸರು. ಮೂರನೆ
ಬಾರಿ ಹೆಂಗಸು ಮದುವೆಯಾಗಬಾರದೆಂದೂ, ನಾಲ್ಕನೇ ಬಾರಿ ಗಂಡಸು ಮದು
ಯಾಗಬಾರದೆಂದೂ ಸಮಾಜದ ಕಟ್ಟಳೆ ಇದೆ.

ಮದುವೆಯಲ್ಲಿ ಐರ್ಯಾಣಿ ತರುವ ಪದ್ಧತಿ, ಕಳಸ ತಂಬಿಗೆ ಇಟ್ಟು ಬಿಳಿ ನೂ
ನಿಂದ ಸುರಗಿ ಸುತ್ತಿ, ಸುರಗಿಯಲ್ಲಿ ಮದುಮಕ್ಕಳನ್ನು ಕೂಡ್ರಿಸಿ, ಅವರ ಹಿಂದೆ ಅ
ರವರ ತಾಯಿ ಅಥವಾ ಸಂಬಂಧಿಕರನ್ನು ಕೂಡ್ರಿಸಿ, ಅವರಿಗೂ ನೀರು ಹಾಕಿ, ಸು
ತೆಗೆದು, ಹೊಸ ಬಟ್ಟೆಗಳನ್ನು ತೊಡಿಸಿ, ಮದುಮಕ್ಕಳಿಗೆ ಕುಂಕುಮ ಹಚ್ಚಿ ಮುತ್ತೈ
ಯರು ಆರತಿ ಮಾಡುತ್ತಾರೆ. ಇನ್ನೊಂದೆಡೆಗೆ ಸೋಬಾನದ ಹಾಡುಗಳನ್ನು ಹಾ
ತ್ತಾರೆ. ಮದುಮಕ್ಕಳಿಗೆ ಬಾಸಿಂಗಕಟ್ಟಿ ಜಗಲಿಗೆ ( ಹೊರಕಟ್ಟೆ ) ತಂದು ಆಚಾಯ
ರಿಂದ ಮಂತ್ರ ಹೇಳಿಸಿ, ಮದುವೆಯ ಗಂಡು ಹೆಣ್ಣಿಗೆ ತಾಳಿಕಟ್ಟಿದ ಮೇ
ಅಕ್ಕಿಕಾಳು ಒಗೆಯುತ್ತಾರೆ. ಮದುಮಗ ಮದುಮಗಳಿಗೆ ಸಂಬಂಧಿಕರುಗಳ
ಮುಯ್ಯ ಕೊಡುವದುಂಟು. ಜಗಲಿಯಲ್ಲಿ ಆರತಿಗಾಗಿ ಗಂಡ ಹೆಂಡತಿಯ ಹೆಸರನ್ನೂ
ಹೆಂಡತಿ ಗಂಡನ ಹೆಸರನ್ನೂ, ಹೇಳುತ್ತಾರೆ. ಆಚಾರ್ಯರ, ಹಿರಿಯರ ಕಾಲ
ಗಳನ್ನು ಮದುಮಕ್ಕಳು ಬೀಳುತ್ತಾರೆ. ಅಕ್ಕಿಕಾಳ ದಿನ ಬೀಗರ ಊಟವಾದ ಬಳಿ
ಕೊಡಕೊಳ್ಳುವ ವ್ಯವಹಾರ ಮುಗಿಯುತ್ತದೆ. ಅಂದೇ ಮಗಳನ್ನು ಕಳಿಸಿಕೊಡುವ
ದುಂಟು. ಸಂಬಂಧಿಕರನ್ನು ಕಳಿಸುವಾಗ ಹೆಣ್ಣು ಮಕ್ಕಳು ತಮ್ಮ ಗಂಡನ ಅಕ್ಕ-
ತಂಗಿಯರಿಗೆ ಕಾಲು ತೊಳೆದು ನಮಸ್ಕರಿಸಿ ಆಲಿಂಗನ ಮಾಡುವರು.

**ಜಗಲಿ** : ಗೊಂದಲಿಗರ ಮನೆಗಳಲ್ಲಿ, (ದೇವರ ಮೂರ್ತಿಗಳನ್ನು ಇಡುವಸ್ಥಳ)
ಇರುತ್ತದೆ. ಮನೆಯಲ್ಲಿ ಆಗ್ನೇ ದಿಕ್ಕಿನ ಮೂಲೆಯಲ್ಲಿ ಎತ್ತರವಾದ ಸಣ್ಣ ಕಟ್ಟೆಯನ್ನು

---

9. The Mysore Tribes and castes. Vol. III Page 243.

ಕಟ್ಟಿ ಅದಕ್ಕೆ 'ಜಗಲಿ' ಎಂದು ಕರೆಯುತ್ತಾರೆ. ದೀವಟಿಗೆ, ಶಂಖ, ಟೆಂಗಿನಕಾಯಿ ಗಳನ್ನು, ಕಂಚಿನ, ತಾಮ್ರದ ಬೆಳ್ಳಿಯ ಕಿರಿಯ ಮುಖಗಳನ್ನು ಅಲ್ಲಿಡುತ್ತಾರೆ. ಈ ಮುಖಗಳು ಮನೆಯಲ್ಲಿ ಹಿರಿಯರು ಸತ್ತಾಗ ದಿನಕಾರ್ಯದಲ್ಲಿ ಮಾಡಿದ ಮೂರ್ತಿ ಗಳಾಗಿವೆ. ಜಗಲಿಯಲ್ಲಿ ಆರತಿ ಇಟ್ಟಿರುತ್ತಾರೆ. ಮಂಗಳವಾರ, ಶುಕ್ರವಾರ ಹುಣ್ಣಿವೆ ಅಮವಾಸೆಯ ದಿನಗಳಲ್ಲಿ ಜಗಲಿಗೆ ದೀಪ ಹಚ್ಚಿ ಕೈಮುಗಿಯುತ್ತಾರೆ. ಗೊಂದಲ ದಂತಹ ಕಾರ್ಯಗಳಲ್ಲಿ ರಾತ್ರಿಯಲ್ಲಿ ಮದುಮಕ್ಕಳು ನಮಸ್ಕರಿಸಿ ಅಲ್ಲಿಯೇ ಕೂಡ್ರ ಬೇಕಾಗುವುದು.

**ಸಂಸ್ಕಾರ :** ಸತ್ತಬಳಿಕ, ಶವಸಂಸ್ಕಾರವನ್ನು ಕುರಿತು ಚರ್ಚೆ ನಡೆಯುತ್ತದೆ. ಮಗುವಿದ್ದರೆ, ಕೈಗಳ ಮೇಲೆ ಸ್ಮಶಾನದವರೆಗೆ ಒಯ್ದು ಹೂಳುತ್ತಾರೆ. ಮದುವೆ ಯಾದವರಿದ್ದರೆ, ಸಿದಗಿ ಕಟ್ಟಿ ಉದ್ದಾಕ ಮಲಗಿಸಿ ನಾಲ್ಕು ಜನರು ಹೊತ್ತು, ಒಯ್ಯ ಬೇಕಾಗುವುದು. ಮಧ್ಯದಲ್ಲಿ ಗಂಡಸರು ಹೆಗಲು ಬದಲಿಸುತ್ತಾರೆ. ಮನೆಯಿಂದ ಮಡಕೆಯಲ್ಲಿ ಮಗ ಅಥವಾ ಸಂಬಂಧಿಕರಾದವರು ಬೆಂಕಿ ಒಯ್ಯುತ್ತಾರೆ. ಶವಕ್ಕೆ ಹೊಸ ಬಟ್ಟೆ ಹೊದಿಸುವರು. ಸ್ಮಶಾನದವರೆಗೆ ಹೆಂಗಸರೂ ಹೋಗುತ್ತಾರೆ. ಹಾಡಿಹಾಡಿ ಕೊಂಡು ದುಃಖಿಸುತ್ತಾರೆ, ಅಳುತ್ತಾರೆ. ಕೆಲವರಲ್ಲಿ ಸುಡುವ ಕಾರ್ಯವಿದೆ. ಇನ್ನು ಕೆಲವರಲ್ಲಿ ಹೂಳುವ ಕಾರ್ಯವಿದೆ. ಬಾನಂತಿ, ತೊನ್ನು (ಬಿಳುಪು) ಹತ್ತಿದವರನ್ನಂತೂ ಸುಡಲೇಬೇಕೆಂಬ ನಿಯಮ ಇವರಲ್ಲಿದೆ.ಮನೆಗೆ ಮರಳಿ ಬರುವಾಗ ಗಂಡಸರಂತೂ ಹೊಳೆ, ಹಳ್ಳಗಳಲ್ಲಿ ಸ್ನಾನಮಾಡಿ ಬರುತ್ತಾರೆ. ಕೈಕಾಲು ತೊಳೆದುಕೊಂಡಾದರೂ ಬರುವರು. ಬರುವಾಗ ಕರ್ಕಿ (ಗರಕಿ) ತಂದು ಸತ್ತವರ ಮನೆಯಲ್ಲಿ ತುಂಬಿದ ಚರಿಗೆಯಲ್ಲಿ ಗರಕಿಯಲ್ಲಿ ಎದ್ದಿ. ಅಲ್ಲಿಯೇ ಚೆಲ್ಲಿಬಿಡುತ್ತಾರೆ. ಐದು ಅಥವಾ ಏಳು ದಿನಗಳವರೆಗೆ 'ಸೂತಕ ಶಾಂತಿ' ಆಚರಿಸುತ್ತಾರೆ. ಹದಿನೈದು ಅಥವಾ ನಾಲವತ್ತೈದು ದಿವಸಕ್ಕೆ 'ಮುಖ' ಮಾಡಿಸುವ ಪದ್ಧತಿಯುಂಟು. ದೇವರ ಹೆಸರಿನ ಎರಡು ಇಂಚ ಬೇಕಾದ ಅಥವಾ ಅದಕ್ಕೂ ಕಡಿಮೆ ತಾಮ್ರ ಅಥವಾ ಬೆಳ್ಳಿ ಮುಖಗಳನ್ನು ಮಾಡಿಸಿ, ಜಗಲಿಯ ಮೇಲಿಡುವರು. ಅದನ್ನು ಪೂಜಿಸುತ್ತ ಹೋಗುವರು.

**ವಿಧಿ–ನಿಷೇಧಗಳು :** ತಪ್ಪಿತಸ್ತರಿಗೆ ದೈವ ಕೂಡಿ ದಂಡ ಹಾಕುವರು. ಬೇನೆ ಬೇಸರಿಕೆಯಲ್ಲಿ ದೇವರಿಗೆ ಹರಕೆ ಹೊತ್ತುಕೊಳ್ಳುವರು. ದೇವಿ ಪೂಜೆಯಿದ್ದರೆ, ಮಾರಿ (ಕಾಲರಾ) ಬೇನೆ ಬರುವದಿಲ್ಲವೆಂಬ ನಂಬಿಕೆ.

ತಪ್ಪಿತಸ್ತರು ತಪ್ಪು ಒಪ್ಪದಿದ್ದರೆ, ಸಮಾಜದಿಂದ ಹೊರಹಾಕುವರು. ಅವರ ಜೊತೆ ಬೇರೆ ಗೊಂದಲಿಗರು ನೀರ ಬಳಕೆ ಮಾಡುವಂತಿಲ್ಲ. ಹೆಂಗಸು ಬೇರೆ ಜಾತಿ ಯವರೊಡನೆ ಲೈಂಗಿಕ ಸಂಬಂಧ ಹೊಂದಿದ್ದರೆ, ಕ್ಷಮೆ ಇಲ್ಲ. ಜಾತಿಯವನನ್ನು ಕೂಡಿಕೊಂಡಿದ್ದರೆ, ದೈವ ನಿರ್ಣಯಿಸಿದ ದಂಡ ಕೊಟ್ಟು ಜಾತಿ ಒಳಗೆ ಬರಬೇಕಾಗುತ್ತದೆ. ಹೀಗೆ ಒಪ್ಪಿದವರಿಗೆ ಯಾರೂ ಟೀಕೆ ಮಾಡುವಂತಿಲ್ಲ.

**ಜೀವನ ವಿಧಾನ** : ಗೊಂದಲಿಗರು ಗುಂಪಾಗಿ ವಾಸಿಸುತ್ತಾರೆ. ಜೊತೆಯಾಗಿ ಸಂಚರಿಸುತ್ತಾರೆ.

ಗಂಡಸರು ಹೆಂಗಸರು ಯಾವದಾದರೂ ಒಂದು ವೃತ್ತಿಯನ್ನು ಗೊತ್ತುಮಾಡಿ ಕೊಂಡಿರುವರು. ಗಂಡಸರು ಹಾಡುಗಾರ, ಕಥೆಗಾರ, ಬುಡಬುಡಕೆಯುವ, ಭೂತೆ, ಭಾಟ, ಸಿಂಗದ. ಹಸ್ತಸಾಮುದ್ರಿಕ, ಗಿಳಿ ಶಾಸ್ತ್ರ ಮುಂತಾದವರು ವೃತ್ತಿ ಸಂಚಾರ ಕೈಕೊಂಡಾಗ ಕೆಲವರು ಹೆಂಗಸರನ್ನೂ ಮಕ್ಕಳನ್ನೂ ಹಿಂಬಾಲ ಕರೆದೊಯ್ಯುವರು. ಹಳ್ಳಿಗಳ ಧರ್ಮಶಾಲೆ, ಗುಡಿ-ಗುಂಡಾರಗಳ ಪೌಳಿ, ಅಗಸಿ, ದೇವರ ಗುಡಿಯ ಬದಿ ಇತ್ಯಾದಿ ಸ್ಥಳಗಳಲ್ಲಿ ಇಳಿದುಕೊಳ್ಳುತ್ತಾರೆ. ಹೆಂಗಸರು ಅಡುಗೆ ಮಾಡುತ್ತಾರೆ. ಹೆಂಗಸರು 'ಕೌದಿ' ಹೊಲಿಯುತ್ತಾರೆ. ಇದು ಇವರ ಗೃಹ ದಂದೆ. ತಾಮ್ರ, ಹಿತ್ತಾಳಿ, ಕೋಪರ ಪರಸ (ಅಲ್ಯುಮಿನಿಯಮ್) ಪಾತ್ರೆಗಳ ವ್ಯಾಪಾರ ಮಾಡುತ್ತಾಲೆ. ಕರ್ನಾಟಕದಲ್ಲಿಯ ಗೊಂದಲಿಗರಿಗೆ ಒಲಿದ ಉದ್ಯೋಗ ಇದಾಗಿದೆ.

ಗೊಂದಲಿಗರಲ್ಲಿ ನೂರಾರು ವರುಷ ಬದುಕಿದವರೂ ಇದ್ದಾರೆ. ಬ್ರಹ್ಮಚಾರಿಗಳಿಲ್ಲ. ಕಸರತ್ತು ಮಾಡುವ, ಕುಸ್ತಿ ಹಿಡಿಯುವ ಪೈಲ್ವಾನರಿದ್ದಾರೆ. ವಾರಕರಿ ಸಂಪ್ರದಾಯ ಹೊಂದಿದ ಜ್ಞಾನವಂತರೂ ಇದ್ದಾರೆ.

**ಆಹಾರ-ವಿಹಾರ** : ರೊಟ್ಟಿ, ಅನ್ನ, ಪಲ್ಲೆ, ಇವರ ನಿತ್ಯ ಆಹಾರ. ಹೈನದ ಪ್ರಮಾಣ ಕಡಿಮೆ. ಗೋದಿಯನ್ನು ವಿಶೇಷವಾಗಿ ಹಬ್ಬ-ಹುಣ್ಣಿಮೆಗಳಲ್ಲಿ ಊಟಕ್ಕೆ ಬಳಸುವರು. ತತ್ತಿ, ಮೀನ-ಮಾಂಸ ಇವರ ಪ್ರೀತಿಯ ಊಟ. ಆಷಾಢ ಮಾಸದಲ್ಲಿ ಹೆಚ್ಚಿಗೆ ಮಾಂಸಾಹಾರಿಗಳಾಗುವರು, ಕಲಾವೃತ್ತಿ ಭಿಕ್ಷಾಟನೆಯಲ್ಲಿ ರೊಕ್ಕ, ಅರಿವೆ, ಅಕ್ಕಿಯನ್ನು ಪಡೆಯುವರು. ರೊಟ್ಟಿ, ಅನ್ನ ಪಡೆಯುವುದು ಕಡಿಮೆ. ಸಿಹಿಗಿಂತ ಖಾರ ಊಟ ಇವರಿಗೆ ಇಷ್ಟವಾದುದು.

ಗೊಂದಲಿಗರ ವಿಹಾರಗಳೆಂದರೆ, ಸಂಚಾರವೇ ಪ್ರಮುಖವಾದುದು. ಸವದತ್ತಿ, ತುಳಜಾಪೂರ, ಕೊಲ್ಲಾಪೂರ, ಮೈಸೂರ, ಸಿರಸಂಗಿ, ಶಿರಸಿ, ಪಂಡರಪುರ ಇವರ ಯಾತ್ರಾ ಸ್ಥಳಗಳು.

**ಆರಾಧಿಸುವ ದೈವ** : ಗೊಂದಲಿಗರು ಶಕ್ತಿದೇವಿಯ ಆರಾಧಕರು, ಅಂಬಾ ಭಕ್ತರು, ಜಗದಂಬೆಯ ಜನರು, ಸವದತ್ತಿಯ-ಯಲ್ಲಮ್ಮ: ತುಳಜಾಪೂರ-ಅಂಬಾಭವಾನಿ ಕೊಲ್ಹಾಪೂರದ-ಮಹಾಲಕ್ಷ್ಮಿ: ಮೈಸೂರಿನ-ಚಾಮುಂಡಿ, ಕೊಳ್ಳೇಗಾಲದ ಚೌಡೇಶ್ವರಿ ಯನ್ನು ಪೂಜಿಸುವರು, ಗ್ರಾಮ ದೇವತೆಗಳಾದ ದುರ್ಗಾ, ಶಾಂತಿದುರ್ಗಾ, ಲಕ್ಕವ್ವ, ದುರಗವ್ವಾ, ಮಾರಮ್ಮ, ಮಾಕಾಳೀ (ಮಹಾಕಾಳಿ-ಮಾಂಕಾಳಿ) ಮಾಯಮ್ಮ, ಬನದಮ್ಮ, ಶಂಕರಮ್ಮ, [1]ಳಮ್ಮಾ ಮುಂತಾದ ಶಕ್ತಿಯ ರೂಪ ಮತ್ತು ಸ್ವರೂಪ

ಪಡೆದ ದೇವಿಯರನ್ನು ಪೂಜಿಸುತ್ತಾರೆ. ವಾರದಲ್ಲಿ ಮಂಗಳವಾರ ಹಾಗೂ ಶುಕ್ರವಾರ ಪವಿತ್ರ ದಿನಗಳೆಂದು ಬಗೆಯುವರು.

ನೂರಾರು ವರುಷದ ಇತ್ತೀಚೆಗೆ ಪಂಡರಪುರಕ್ಕೆ ಹೋಗಿ ವಾರಕರಿಯ–ಸಂತ ಸಂಪ್ರದಾಯವನ್ನು ಹೊಂದುತ್ತಿದ್ದಾರೆ. 'ಪುಂಡರಿಕ-ವಿಠಲನ' ಭಕ್ತರಾಗುತ್ತಿದ್ದಾರೆ. ಮಹಿಳೆಯರೂ–ಮಕ್ಕಳು ದಿಂಡಿ ಸಮೇತ ಪಂಡರ ಪುರಕ್ಕೆ ಹೋಗಿ ಬರುತ್ತಾರೆ.

ವಾಕುಡೆ, ಕಾಳೆ, ಗೋಕಾಳ, ಭೋಸಲೆ ಮನೆತನಗಳು 'ಸಿದ್ದೇಶ್ವರನ' ಭಕ್ತರಾಗಿರುತ್ತಾರೆ.

ಆಷಾಢ ಮಾಸದಲ್ಲಿ ದೇವಿ ಆರಾಧನೆ ಮಾಡುತ್ತಾರೆ, ಗಣಪತಿ, ದೀಪಾವಳಿ, ನವರಾತ್ರಿ ಹಬ್ಬಗಳನ್ನು ಆಚರಿಸುತ್ತಾರೆ.

ದೇವಿ ಜಾತ್ರೆಯಲ್ಲಿ ಬಲಿಕೊಡುತ್ತಾರೆ. ಕುರಿ ಆಡು ಬಲಿಯ ಪ್ರಾಣಿಗಳಾಗುತ್ತವೆ. ಬಲಿಪ್ರಾಣಿಯ ರುಂಡವನ್ನು ಹನ್ನೆರಡು ತಾಸುಗಳವರೆಗೆ ದೇವಿಯ ಮೂರ್ತಿ ಎದುರು ಇಡುವರು. ಪ್ರಾಣಿ ಬಾಯಲ್ಲಿ ಅದರ ಮುಂದಿನ ಬಲಗಾಲ ತುಂಡನ್ನು ಇಡುವರು. ಮಾರನೆ ದಿನ ಮನೆಗೆ ಒಯ್ದು ಅಡುಗೆ ಮಾಡಿಕೊಳ್ಳುವರು.

ಪಂಚಮಿಯಲ್ಲಿ ನಾಗಪೂಜೆ ಇದೆ. ಹೋಳಿ ಹಬ್ಬದಲ್ಲಿ ಕಾಮನನ್ನು ದೇವಿ ಎದುರಿಗೆ (ಗುಡಿಯ ಪೌಳಿಗೆ) ಸುಡುವರು.

ಗುಲಬುರ್ಗಾ ಭಾಗದ ಗೊಂದಲಿಗರಲ್ಲಿ ಕೆಂಪು ಲಕ್ಷ್ಮಿ, ಕರಿಲಕ್ಷ್ಮಿಯ ಹಬ್ಬಗಳುಂಟು.

**ಮಂತ್ರ, ಮಾಟ :** ಮಂತ್ರ ಮಾಟದಲ್ಲಿ ಗೋಂದಲಿಗರಿಗೆ ನಂಬಿಕೆ ಇದೆ. ಕರಿದಾರ, ಲಿಂಬೆ ಹಣ್ಣು, ಸೂಜಿ, ಅರಿಷಿಣಬೇರು ಕೂಡಿಸಿ ಮತ್ಸರಕ್ಕಾಗಿ ಮಂತ್ರ ಮಾಟ ಮಾಡಿಸಿ ಒಗೆಯುತ್ತಾರೆ. ಇದನ್ನು ಬಲ್ಲವರಾದ ಹಸ್ತ ಸಾಮುದ್ರಿಕೆಯವರು, ಬುಡ ಬುಡಕಿಯವರು ಇದರ ಉತಾರ ಮಾಡಿ, ಪ್ರತಿಯಾಗಿ ತಾಯಿತ ಮಾಡಿ, ವ್ಯಕ್ತಿಯ ರಟ್ಟೆಗೆ, ಕೊರಳಿಗೆ, ಸೊಂಟಕ್ಕೆ ಕಟ್ಟಿಕೊಳ್ಳಲು ಹೇಳುವರು. ಮನೆಗಾದರೆ, ಕಂಬ, ನೆಲವು, ಜಂತೆಗೆ ತಾಯಿತ ಕಟ್ಟಲು ಹೇಳುವರು, ತಾಯಿತಕ್ಕಾಗಿ ತಾಮ್ರವನ್ನು ಬಳಸುತ್ತಾರೆ. ಭೂತೆಯರು ಇಂತಹ ಕಸಬು ಮಾಡುತ್ತಾರೆ. ದೆವ್ವ ಪಿಶಾಚಿಗಳ ಬಾಧೆ ಮನುಷ್ಯರಿಗಾದಾಗ ಬಿಡಿಸುತ್ತಾರೆ.

**ಪ್ರಧಾನ ಕಸಬುಗಳು :** ಕಥೆಗಾರರು, ಕಲೋಪಜೀವಿಗಳೂ ಆಗಿದ್ದರು. ಗುಪ್ತಚಾರರೂ ಬಹುವಾಗಿದ್ದರು, ಬುಡಬುಡುಕಿಯವರು, ಭಾಟರು, ಸಿಂಗದರು

ಭೂತೇರು ಹೀಗೆ ವೃತ್ತಿಯನ್ನವಲಂಬಿಸಿದವರುಂಟು, ಇವರೆಲ್ಲ ವೃತ್ತಿಯಿಂದ ಪಂಗಡವಾದವರು. ಮಹಿಳೆಯರು 'ಕೌದಿ' ಹೊಲಿದು ಮಾರುತ್ತಾರೆ. ಇತ್ತೀಚೆಗೂ ಈ ವೃತ್ತಿಗಳು ಉಳಿದುಕೊಂಡಿವೆ, ಬಾಂಡೆ ಮಾರುವ ಕಸಬು ಇವರಿಗೆ ಲಾಭದ ಕಸಬಾಗಿದೆ. ಕರ್ನಾಟಕದಿಂದ ಈ ಉದ್ಯೋಗಕ್ಕಾಗಿ, ಗೋವಾ, ಸಾಂಗಲಿ, ಮಿರಜ, ಸೊಲ್ಲಾಪೂರ, ಹೈದರಾಬಾದ, ಕಾಸರಗೋಡಗಳಿಗೆ ಹೋದ ಗೊಂದಲಿಗರ ಸಂಖ್ಯೆಯೂ ಇದೆ. ಇದಲ್ಲದೆ ಆಧುನಿಕ ಎಲ್ಲ ಉದ್ಯೋಗಗಳಲ್ಲಿಯೂ ತೊಡಗಿರುತ್ತಾರೆ.

**ವೇಷ ಭೂಷಣ :** ಗಂಡಸರು ಧೋತರ ಉಟ್ಟು, ಅಂಗಿ ತೋಟ್ಟು, ತಲಗೆ ರುಮಾಲ, ಟೊಪ್ಪಿಗೆ, ಮುಂಡಾಸ ಧರಿಸುತ್ತಾರೆ. ಹೆಂಗಸರು ಸೀರೆಉಟ್ಟು ಕುಪ್ಪಸ ತೊಡುತ್ತಾರೆ, ಬೆಳ್ಳಿ ಬಂಗಾರದ ಆಭರಣ ತೊಡುತ್ತಾರೆ. ಕಿವಿಗೆ ಹೂವ, ಕೊರಳಿಗೆ ತಾಳಿ ಮತ್ತು ಪುತ್ಥಳಿ, ಕಾಲಿಗೆ ಕಾಲುಂಗರ, ಪೈಜಣ ಧರಿಸುತ್ತಾರೆ. ಆಧುನಿಕ ಪಡೆವೆಗಳನ್ನು ಮಾಡಿಸಿ ಧರಿಸುತ್ತಾರೆ.

ಯುವಕ ಯುವತಿಯರು ಆಧುನಿಕದ ಎಲ್ಲ ತರದ ಬಟ್ಟೆ ಬರೆಗಳನ್ನು ತೊಡುವರು ನಿರ್ಬಂಧವೇನಿಲ್ಲ. ಹಿರಿಯರು ಹಬ್ಬ ಹುಣ್ಣಿವೆಗಳಲ್ಲಿ ಜರತಾರಿ ತೊಡುವರು.

ಹಾಡುವ ಮತ್ತು ಕಥೆ ಹೇಳುವ ಗೊಂದಲಿಗರು ಧೋತರ, ಅಂಗಿ, ಜರದ ರುಮಾಲ, ಕೋಟ ತೊಟ್ಟು ದಡಿ ವಲ್ಲಿಯನ್ನು ಹೇಗಲ ಮೇಲೆ ತೂಗು ಬಿಟ್ಟಿರುತ್ತಾರೆ. ಕಥೆ ಹೇಳುವಾಗ ಅದನ್ನು ನಡಕ್ಕೆ ಕಟ್ಟುತ್ತಾರೆ, ಹಣೆಗೆ ಭಂಡಾರ ಕುಂಕುಮ ಹಚ್ಚುತ್ತಾರೆ.

ಬುಡಬುಡಕಿಯುವನು ಕಥೆ ಹೇಳುವವರಂತೆ ವೇಷ ತೊಟ್ಟು, ತನಗೆ ಬಂದ ಪುರಸ್ಕಾರಗಳಾದ ಬೆಳ್ಳಿ–ಬಿಲ್ಲಾಗಳನ್ನು ರುಮಾಲ ಅಥವಾ ಮುಂಡಾಸಿಗೆ ಮೇಲಗಡೆಗೆ ಸಿಕ್ಕಿಸಿಕೊಂಡಿರುತ್ತಾನೆ.

ಭಾಟನು ಕಥೆ ಹೇಳುವವರಂತೆ ವೇಷ ತೋಟ್ಟು, ಹಣೆಗೆ ನಾಮು ಬಳೆದು ಕೊಂಡು, ಕೈಯಲ್ಲಿ ಭರ್ಚಿ ಅಥವಾ ತ್ರಿಶೂಲ ಹಿಡಿಯುತ್ತಾನೆ. ಸಿಂಗದವನು ಭಾಟನ ವೇಷ ಧರಿಸುತ್ತಿದ್ದನು. ಇತ್ತೀಚೆಗೆ ಸಾದಾ ವೇಶದಲ್ಲಿರುವನು.

ವಾರಕರಿಯುವನು ಬಿಳಿಬಟ್ಟೆ ಬಗಲಕಿಸೆ ಅಂಗಿ ತೊಡುವನು.

ಭೂತ್ಯಾ ಉದ್ದಾದ ನಿಲುವಂಗಿ ತೊಟ್ಟು ಉದ್ದಾದ ಗಳಿಗೆ ಚೊಣ್ಣ ತೊಟ್ಟು, ಕೊರಳಲ್ಲಿ ಕವಡಿಸರ ಹಾಗು ಶಕ್ತಿಯ ಕಂಚಿನ ಚಿತ್ರವನ್ನು ತೂಗುಹಾಕಿಕೊಂಡಿರುವನು! ಕೈಯಲ್ಲಿ ದೀವಟಿಗೆ, ಬಗಲಲ್ಲಿ ಎಣ್ಣೆ ತಂತ್ರಾಣಿ ಹಾಗೂ ಜೋಳಿಗೆ ತೂಗುಹಾಕಿ ಕೊಂಡಿರುವನು. ಹಣೆಗೆ ಭಂಡಾರ ಹಚ್ಚಿಕೊಂಡಿರುವನು.

**ನ್ಯಾಯಾಲಯ :** ಗೊಂದಲಿಗರಿಗೆ ನಿಜವಾಗಿ ನ್ಯಾಯಾಲಯಗಳಿಲ್ಲ. ತಂಟೆ-ತಕರಾರು, ಬಡಿದಾಟ, ಜಗಳುಗಳಾದರೆ, ಯಾವ ನ್ಯಾಯಾಲಯಕ್ಕೂ ಅವರು ಹೋಗುವುದಿಲ್ಲ. ಇಂದಿನವರೆಗೆ ಈ ಸಮಾಜದಲ್ಲಿ ಹೆಣ್ಣಿಗಾಗಿ, ಮಣ್ಣಿಗಾಗಿ, ಹೊನ್ನಿಗಾಗಿ, ಮಡಿದವರಿಲ್ಲ, ಕಛೇರಿ ಕಟ್ಟಿ ಹತ್ತಿದವರಿಲ್ಲ. ಒಂದು ವೇಳೆ ಹೋದರೂ ತಿರುಗಿ ಗೊಂದಲಿಗರ ದೈವದಲ್ಲಿಯೇ ಅದು ನಿರ್ಣಯವಾಗಬೇಕು. ವಾದಿ ಪ್ರತಿವಾದಿಗಳು ದೈವದವರ ಮಾತುಗಳನ್ನು ಕೇಳುವರು, ತಪ್ಪು ಒಪ್ಪಿದ ಮೇಲೆ ಅಡಿಕೆ, ಕವಡಿ, ತಂಬಾಕು, ಚಹಾ, ದಂಡ ಹಾಕುವರು.

ಹೆಣ್ಣು ಮಕ್ಕಳು ಗಂಡನಿಗೆ ತಪ್ಪು ಮಾಡಿದರೆ ಕೊರಳಲ್ಲಿ ಸಣ್ಣ ಕಲ್ಲುಕಟ್ಟಿ ದೇವಿ ಗುಡಿ ಸುತ್ತಿಸುವ ಪದ್ಧತಿ ಇತ್ತು.

**ಕಲೆ ಮತ್ತು ಸಾಹಿತ್ಯ :**

ಗೊಂದಲಿಗರ ಕಲೆ ಮತ್ತು ಸಾಹಿತ್ಯ ಅಪಾರವಾದುದು. ಅವರ ಕಥೆಗಳು ಇನ್ನೂ ಜನರ ನಾಲಿಗೆಯ ಮೇಲೆ ಸಂಚರಿಸುತ್ತಿರುತ್ತವೆ. ಜ್ಞಾನಾಭಿವೃದ್ಧಿಯನ್ನೂ ನೀಡುತ್ತವೆ. ಗೊಂದಲಹಾಕುವದು ಹಾಡು ಕಥೆಗಳನ್ನು ಹೇಳುವುದು ಕಥೋಪಜೀವಿಗಳಾದ ಗೊಂದಲಿಗರಲ್ಲಿ ಕಲೆ ಮತ್ತು ಸಾಹಿತ್ಯ ಹೇರಳವಾಗಿದೆ. ಅದನ್ನಿಲ್ಲಿ ಸಂಕ್ಷಿಪ್ತ ತಿಳಿಯೋಣ.

ಶಕ್ತಿಯ ಆರಾಧಕರೆಲ್ಲರೂ ಗೊಂದಲ ಪೂಜೆಯನ್ನು ಮಾಡಿಸುವರು. ಬ್ರಾಹ್ಮಣರಿಂದ ಮೊದಲುಮಾಡಿ, ಮಾದಿಗರ ವರೆಗೆ ಗೊಂದಲ ಇದೆ; ಆದರೆ ಅವು ಕೆಲವರಿಗೆ ಮಾತ್ರ ವ್ರತವಾಗಿವೆ,

ಮದುವೆ, ಮುಂಜಿವೆ, ಜಾತ್ರೆ, ನವರಾತ್ರಿ, ದೀಪಾವಳಿ, ಕಾರ್ತಿಕಮಾಸ ಮುಂತಾದ ಸಮಯಗಳಲ್ಲಿ ದೇವಿ ಗೊಂದಲ ನಡೆಯುವದು.

ಮದುವೆಯ ಮೊದಲುದಿನ ಗೊಂದಲ ಹಾಕಿಸುವರು. ಗೊಂದಲಿಗರಲ್ಲಿ ಹೋಗಿ ಎಲೆ ಅಡಿಕೆ ಕೊಟ್ಟು ಗೊಂದಲಿಗರ ಕವಡೆಯ ಸರ ಗೊಂದಲಹಾಕಿಸುವ ಮನೆಗೆ ತರುವರು. ಗೊಂದಲ ದಿನದ ಸಂಜೆ, ಸಾರಿಸಿದ ನೆಲದಮೇಲೆ ಚೌರಂಗ ಹಾಕಿ ಎಂಟು ದಿಕ್ಕುಗಳನ್ನು ಗೊತ್ತುಮಾಡುತ್ತಾರೆ. ದಂಟು, ಕಬ್ಬು, ಬಾಳೆಗಿಡಗಳಿಂದ ಬನ ನಿರ್ಮಿಸಿ ಮಧ್ಯದಲ್ಲಿ ಚೌರಂಗದ ಮೇಲೆ ಮಣಿ ಹಾಕಿ 'ಕಲಶ' ಇಡುತ್ತಾರೆ.

ತಾಮ್ರದ ಚರಿಗೆಯಲ್ಲಿ ನೀರು ಹಾಕಿ ಒಳಗೆ ದುಡ್ಡು ಒಗೆದು, ಅದರ ಬಾಯಲ್ಲಿ ವೀಳೆ ಎಲೆಗಳನ್ನಿಟ್ಟು, ಚರಿಗೆಯ ಬಾಯಲ್ಲಿ ಟೆಂಗಿನಕಾಯಿ ಇರಿಸುವರು. ಕಾಯಿಗೆ

ನತ್ತು ಇಡಿಸಿ, ಅರಿಷಣ ಕುಂಕುಮ ಹಚ್ಚುವರು. ಚರಿಗೆಯ ಕುತ್ತಿಗೆಗೆ ಬಂಗಾರದ ಸರವನ್ನು ಹಾಕುವರು, ಇದೇ ಕಲಶ. ಈ ಕಲಶವೇ ಶಕ್ತಿ ದೇವಿಯ ಪ್ರತೀಕ, ದೂರ ದಲ್ಲಿ ದೀವಟಿಗೆಯನ್ನು ಉರಿಸುತ್ತಾರೆ. ಆರತಿ ಉರಿಯುತ್ತಿರಬೇಕು.

ದಿವಟಿಗೆಗೆ ಎಣ್ಣೆ ಹಾಕುತ್ತ ಕೂಡ್ರುವ ವ್ಯಕ್ತಿಗೆ ದೀವಟಿಗೆ ಮಾಮಾ ಎಂದು ಗೊಂದಲಿಗ ಹೆಸರಿಡುತ್ತಾನೆ. ತನ್ನ ಕಥೆಗಳಲ್ಲಿ ಅವನ ಹೆಸರ ಬಳಸಿ ಹಾಸ್ಯ ಗೈಯುತ್ತಾನೆ.

ಗೊಂದಲಿಗರು ದೇವಿ ಸ್ತುತಿಯನ್ನು ಹಿಮ್ಮೇಳ ಮುಮ್ಮೇಳಾ ಪ್ರಾರಂಭಿಸುತ್ತಾನೆ. ಸಂಬಾಳ, ತುಂತುಣಿ ವಾದ್ಯಗಳಾಗಿರುತ್ತವೆ.

ಆಚಾರ್ಯ ಕೆಲವು ಪೂಜೆಗೆ ಬರುತ್ತಾನೆ. ಕೆಲವರಲ್ಲಿ ಬರುವದಿಲ್ಲ. ಕಲಶಕ್ಕೆ ಹೂವು ಏರಿಸುವರು.

**ಶಕ್ತಿಯ ಸ್ತುತಿ :**

ಮುಮ್ಮೇಳ : ಬಾದೇವಿ ಭಕ್ತರ ಮನಿಗೆ
ಬಾರಮ್ಮಾ ಬಾ ಭಕ್ತರ ಮನಿಗೆ

ಹಿಮ್ಮೇಳ : ಭಾಗ್ಯದ ದೇವಿ ಬಾರಮ್ಮ ಅಮ್ಮಾ
ಬಾದೇವಿ ಭಕ್ತರ ಮನಿಗೆ

ಮುಮ್ಮೇಳ : ಅತ್ತಲಿತ್ತಲಿ ನೋಡುತ ಬಾ
ಭಕ್ತರ ಭಾವಕೆ ಒಲಿಯುತ ಬಾ

ಹಿಮ್ಮೇಳ : ಬಾದೇವಿ ಭಕ್ತರ ಮನಿಗೆ
ಬಾರಮ್ಮಾ ಬಾ ಭಕ್ತರ ಮನಿಗೆ

ಮುಮ್ಮೇಳ : ಹೆಜ್ಜೆಯ ಮ್ಯಾಲ ಹೆಜ್ಜೆಯನಿಟ್ಟು
ಗೆಜ್ಜೆಯ ಕಾಲನು ಕುಣಿಸುತ ಬಾ

ಸಮೂಹ : ಬಾದೇವಿ ಭಕ್ತರ ಮನೆಗೆ
ಭಾಗ್ಯದ ದೇವಿ ಬಾರಮ್ಮ

ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿರುವ ಗೊಂದಲಿಗರು ಶಕ್ತಿಯ ಸ್ತುತಿಯನ್ನೂ, ದೇವಿಯ ಆಹ್ವಾನವನ್ನು ನಾವು ಕಂಡುಕೊಳ್ಳಬಹುದು.

**ಗೋಕಾಕದ ಗೊಂದಲಿಗರು ಹೇಳುವ ಗೊಂದಲದ ಸ್ತುತಿ :**

ಭಗವತಿಯ ನಿಜರೂಪ ತಾಯಿ
ನೀನೇ ಮಾಯಿ ಜಗದಂಬಾ
ಭಗವತಿಯೇ ಜಗದಂಬಾ
ಅಂಬಾ ಜಗದಂಬನ ಗೊಂದಲಕ ಬನ್ನಿ
ಅಂಬಾ ಜಗದಂಬನ " "
ಸವದತ್ತಿ ಯಲ್ಲಮ್ಮನ " "
ತುಳಜಾಪುರ ತುಳಜಾಭವಾನಿ ಗೊಂದಲಕೆ ಬನ್ನಿ
ಕೊಲ್ಹಾಪುರ ಮಹಾಲಕ್ಷ್ಮಿದೇವಿ " "
ಕೈಲಾಸದ ಪಾರ್ವತಿದೇವಿ " "
ವೈಕುಂಠದ ನಾರಾಯಣಿ " "
ಸ್ವರ್ಗದ ಸರಸ್ವತಿದೇವಿ " "
ಉದೋ ಉದೋ ಅನ್ನುತ " "

**ಪುತ್ತೂರು ಗೊಂದಲಿಗರು ಹೇಳುವ ಗೊಂದಲ ಸ್ತುತಿ :**

ಆದಿಮಾತಾ ಗೊಂದಲಕೆ ಬನ್ನಿ
ಶಕ್ತಿದೇವಿ " "
ಅಂಬಾದೇವಿ " "
ಜಗದಂಬಾ " "
ಮೂಕಾಂಬಿಕೆ " "
ಉದೋ ಉದೋ ಅನ್ನಿ
ಉದೋऽ ಉದೋऽ ಉದೋ ಅಂಬಾ
ಉದೋऽ ಉದೋऽ ಉದೋऽ ಅಂಬಾ
ಅಂಬಾನ ಗೊಂದಲಕ ಬನ್ನಿ
ಮಂಗಳಾತಾಯಿ ಗೊಂದಲಕ ಬನ್ನಿ
ಮೂವತ್ತುಮೂರಕೋಟಿ ದೇವತೆಗಳೆ
ಕೈಲಾಸದ ದೇವಾನುದೇವಿಗಳೆ
ಜಗದಂಬೆಯ ಗೊಂದಲಕ ಬನ್ನಿ.

**ಮೈಸೂರ, ಬೆಂಗಳೂರ ಗೊಂದಲಿಗರು ಹೇಳುವ ಗೊಂದಲಸ್ತುತಿ :**

ಆದಿಶಕ್ತಿಯು ಮಾಯಾ ಜನನಿಯು ಗೊಂದಲಕ ಬನ್ನಿ
ಉಧೋ ಉಧೋ ಅನ್ನುತ " "
ಉಧೋ ಉಧೋ ಹೇಳುತ " "
ಆದಿಮಾತಾ ಜಗದಂಬಿ " "
ಮೈಸೂರ ಚಾಮುಂಡಿ " "
ಕೊಳ್ಳೇಗಾಲದ ಚೌಡೇಶ್ವರಿ " "
ಬೆಂಗಳೂರ ತುಳಜಾಭವಾನಿ " "
ಬೆಂಗಳೂರ ದುರ್ಗಾದೇವಿ " "

**ಶಿವಮೊಗ್ಗಾದ ಗೊಂದಲಿಗರು ಹೇಳುವ ಗೊಂದಲ ಸ್ತುತಿ :**

ಶ್ರೀದೇವಿ ಅಂಬಾನ ಗೊಂದಲ
ಉಧೋ ಉಧೋ ಅಂಬಾನ ಗೊಂದಲ
ಉಧೋ ಉಧೋ ಜಗದಂಬಾನ ಗೊಂದಲ
ಉಧೋ ಉಧೋ ಚಾಮುಂಡಿಯು ಗೊಂದಲ
ಉದೋ ಉಧೋ ಚೌಡೇಶ್ವರಿಯು ಗೊಂದಲ
ಗೊಂದಲಕ ಬನ್ನಿ ಗೊಂದಲಕ ಬನ್ನಿ
ಮಾಯೆಯು ಗೊಂದಲಕ ಬನ್ನಿ
ದೇವಿಯು ಪೂಜೆಕ ಬನ್ನಿ
ದೇವಿಯು ರೂಪದ ತಾಯಿಯರು
ದೇವಿಯು ಗೊಂದಲ ನೋಡ ಬನ್ನಿ
ದೇವಿಯು ಮಾಯ ಕೇಳ ಬನ್ನಿ
ದೇವಿಯು ಜಾಲ ತಿಳಿಯ ಬನ್ನಿ
ಉದೋ ಅಂಬಾಬವಾನಿ
ಉದೋ ರೇಣುಕಾ ತಾಯಿ
ಉದೋ ಜಗದಂಬಾ
ಉದೋ ಗೊಂದಳದೇವಿ
ಉದೋ ಅಂಬಾ ಜಗದಂಬಾ
ಉದೋ ಉದೋ ಗೊಂದಲ
ಶ್ರೀದೇವಿ ಅಂಬಾನ ಗೊಂದಲ

**ಬಿಜಾಪುರ ಕೋಡಿಹಾಳ ಗೊಂದಲಿಗರ ಗೊಂದಲ ಸ್ತುತಿ :**

ಗೊಂದಲ ಹಾಕಿದೆ
ತಾಯಿಯ ಗೊಂದಲ ಉದೋ ಉದೋ ॥ಪ॥
ಅಂಬಾಬಾಯಿ ಹೆಸರಿನ ಗೊಂದಲ
ಜಗದಂಬೆಯ ಹೆಸರಿನ ಗೊಂದಲ
ರೇಣುಕೆಯ ಹೆಸರಿನ ಗೊಂದಲ
ಮಹಾಲಕ್ಷ್ಮಿ ಹೆಸರಿನ ಗೊಂದಲ
ತುಳಜಾಬಾಯಿ ಹೆಸರಿನ ಗೊಂದಲ
ಗೊಂದಲ ಹಾಕಿದೆ
ತಾಯಿಯ ಗೊಂದಲ
ಉದೋಽ ಉದೋಽ
ಉದೋ ಉದೋಽಽ

**ಗುಲಬುರ್ಗಾದ ಗೊಂದಲಿಗರು ಹೇಳುವ ಸ್ತುತಿ :**

ಆದಿಶಕ್ತಿ ಮಾಯಾ ಜನನಿ ಗೊಂದಲ ಹಾಕುವೆ
ಮಾಯಾ ಜನನಿ ಅಂಬಾದೇವಿ ಗೊಂದಲ ಹಾಕುವೆ
ಉದೋ ಉದೋ ಅಂಬಾದೇವಿ ಗೊಂದಲ ಹಾಕುವೆ
ದುರ್ಗದ ದುರ್ಗಾದೇವಿ ಗೊಂದಲ ಹಾಕುವೆ
ಆನಂದದ ಅಂಬಾದೇವಿ ಗೊಂದಲ ಹಾಕುವೆ
ರೌದ್ರದ ರುದ್ರಾದೇವಿ ಗೊಂದಲ ಹಾಕುವೆ
ಉದೋ ಉದೋ ಅಂಬಾದೇವಿ ಗೊಂದಲ ಹಾಕುವೆ
ಗೊಂದಲಿಗರ ಮಾಯಾಜನನಿ ಗೊಂದಲ ಹಾಕುವೆ
ಜಗದ ಜಗದಂಬಾದೇವಿ ಗೊಂದಲ ಹಾಕುವೆ
ಭವಾನಿಮಾತಾ ದೇವಿ ಗೊಂದಲ ಹಾಕುವೆ
ಸಿಂಹ ಸವಾರ ಮಾಡು ದೇವಿ ಗೊಂದಲ ಹಾಕುವೆ
ದುಷ್ಟರ ಸಂಹಾರ ಮಾಡಿದ ದುರ್ಗಾದೇವಿ ಗೊಂದಲ ಹಾಕುವೆ
ಮಹಿಷಾಸುರನ ಸಂಹರಿಸಿದ ಚಾಮುಂಡಿದೇವಿ ಗೊಂದಲ ಹಾಕುವೆ
ಗೊಂದಲ ಹಾಕುವೆ ಉದೋ ದೇವಿ
ಪತ್ತೆಯನಾಡುವೆ ಉದೋ ದೇವಿ
ಉದೋ ಉದೋ ಮಾಯಾ ಭವಾನಿ

**ಮಿರಜ ಸಾಂಗಲಿ ಗೊಂದಲಿಗರು ಹೇಳುವ ಸ್ತುತಿ :**

ಮಾಯಿಯ ನಿಜರೂಪ ತಾಯಿಯ ಗೊಂಧಳ
ಉದೆ ಉದೆ ಅಂಬಾಬಾಯಿ ಗೊಂಧಳಕ್ಕೆ ಬಾ ॥ಪ॥
ಮೂರೇಶ್ವರ ಗಣಾ ಗೊಂಧಳಕೆ ಬಾ
ಮೂವತ್ತಮೂರು ಕೋಟಿ ದೇವತೆಗಳು ಗೊಂಧಳಕೆ ಬಾ
ಪುಣೆಯ ಪಾರ್ವತಿ ಗೊಂಧಳಕೆ ಬಾ
ವಾಯಿಯ ಗಣಪತಿ ಗೊಂದಳಕೆ ಬಾ
ಕೃಷ್ಣಾ-ಕೊಯಿನಾಮಾಯಿ ಗೊಂಧಳಕೆ ಬಾ
ಸಂಚಾರದ ಮಂಗಳಾಯಿ ಗೊಂಧಳಕೆ ಬಾ
ರತ್ನಾಗಿರಿ ಜೋತಿ ಬಾ ಗೊಂಧಳಕೆ ಬಾ
ಕೊಲ್ಹಾಪುರಿಯ ಲಕ್ಷ್ಮಿ ಗೊಂಧಳಕೆ ಬಾ
ತುಳಜಾಪುರದ ಭವಾನಿ ಗೊಂಧಳಕೆ ಬಾ
ಕಾರಂಡಿ ಯಲ್ಲಾಬಾಯಿ ಗೊಂಧಳಕೆ ಬಾ
ಮ್ಹಸವಾಡ ಸಿದ್ಧಾ ಗೊಂಧಳಕೆ ಬಾ
ಸಿಂಗನಾಪೂರ ಮಹಾದೇವ ಗೊಂಧಳಕೆ ಬಾ
ಫಲಟನದ ರಾಮಾ ಗೊಂಧಳಕೆ ಬಾ
ನಾಶಿಕದ ಕರಿರಾಮಾ ಗೊಂಧಳಕೆ ಬಾ
ಕವತೆಯ ಯಮಾಯಿ ಗೊಂಧಳಕೆ ಬಾ
ಪಾಡೆ ಕುದುರೆಗಳ ಬೋಲಾಯಿ ಗೊಂಧಳಕೆ ಬಾ
ಜನ್ನರದ ಶಿವಾಬಾಯಿ ಗೊಂಧಳಕೆ ಬಾ
ಏಳುಸುಮುದ್ರಗಳೇ ಗೊಂಧಳಕೆ ಬನ್ನಿ
ನವಲಕ್ಷ ತಾರಾಗಣ ಗೊಂಧಳಕೆ ಬನ್ನಿ
ಅಗ್ನಿಯ ತಂದೆ ಗೊಂಧಳಕೆ ಬನ್ನಿ
ಭಕ್ತರ ಗಣಾ ಗೊಂಧಳಕೆ ಬನ್ನಿ

ಹೀಗೆ ದೇವಿಯ ಮಹಿಮೆಯನ್ನು ಕೊಂಡಾಡುವರು. ಗೊಂದಲದಲ್ಲಿ ಯಾವ ದಾದರೂ ಒಂದು ಕಥೆ ವಿವರಿಸಲು ಸಜ್ಜಾಗಿ. ಸಮೂಹ ಸಂಗೀತದೊಂದಿಗೆ–

ಶರಣರ ಶಾಸ್ತ್ರವ ಹೇಳತೀವ್ರೀs
ರಾಜರ ಕಥೆಗಳ ತಿಳಸತೀವ್ರೀs
ಭಗವಂತನ ನಾಮಾ ತಿಳಸತೀವ್ರೀs
ದೇವಿಯ ಮಹಿಮಾ ತಿಳಸತೀವ್ರೀs

ಎಂದು ಹಾಡಿ–

ಯಾವ ಕಥೆಗಳ ಹೇಳಬೇಕ್ರೀs

ಎಂದು ಗೊಂದಲಿಗರು ಕೇಳುತ್ತಾರೆ.

ಹಿಮ್ಮೇಳದವನು ತುಂತುಣಿ ಬಾರಿಸುತ್ತ ಹರಹರ ಎನದೇವ್ಯೆ, ಕಲ್ಯಾಣ ದೇವ್ಯೆ, ಕೋಲ ಮುತ್ತಿನ ಕೋಲ ಎಂದು ರಾಗ ತೆಗೆಯುವನು.

೧) ಪದ್ಮಾವತಿಕಥೆ ೨) ಕಾಳಿಂಗರಾಜ ರತ್ನಾವತಿಕಥೆ ೩) ಆರಣ್ಯ ಕುಮಾರ ೪) ಜಯರಾಣಿ ಕಥೆ (ಬಂಗಾಲಿ ಬಾಪಾನ ಕಥೆ) ೫) ಸೋಮಶೇಖರ–ಚಂದ್ರಶೇಖರ ೬) ಶ್ಯಾಮನೋಳ ಬಸಾವತಿಯ ಕಥೆ ೭) ಲಕ್ಷಾಪತಿಯ ಕಥೆ ೮) ಬಲವಂತ–ಬಸವಂತರ ಕಥೆ ೯) ರಾಜಾವಿಕ್ರಮನ ಕಥೆ ೧೦) ಸಿರಿಯಾಳನ ಕಥೆ.

ಇಂತಹ ೬೦–೮೦ ಕಥೆಗಳನ್ನು ಒಂದೊಂದು ಮೇಳದವರು ವಿವರಿಸಲು ಕಲಿತಿದ್ದಾರೆ. ಕಥಾ ಕಾಲಾಕ್ಷೇಪ ಇವರ ಕಲೆ.

ಕಥೆಗೆ ಉಪಕಥೆ, ಹಾಸ್ಯದ ಕಥೆಗಳನ್ನು ವಿವರಿಸುತ್ತಾರೆ. ಅರುಣೋದಯಕ್ಕೆ 'ಗೊಂದಲಿಯ ನೃತ್ಯ' ಪತ್ತಾ ಹಿಡಿದು ನಡೆಯುತ್ತದೆ. ಬಹು ಬಿರುಸಿನ ಕುಣಿತವದು.

ಪರಶುರಾಮನನ್ನು ಕಳಿಸುವ ಕಾರ್ಯ ಹಾಗೂ ಕೂಸನಾಡಿಸುವುದು ನಡೆಯುತ್ತದೆ. ಮತ್ತು ಮಂಗಲವಾಗುತ್ತದೆ. ಒಂದು ಗೊಂದಲ ಕಾರ್ಯಕ್ಕೆ ನೂರಾರು ರೂಪಾಯಿಗಳು ಈಗ ದೊರಕುವವು.

ಗೊಂದಲಿಗರ ಹಾಡಿನ ಪ್ರಕಾರಗಳನ್ನು ಮೂರು ಭಾಗವಾಗಿ ಹೇಳಬಹುದು.

೧) ಗೊಂದಲದ ಹಾಡುಗಳು
೨) ಮನೋರಂಜನೆಯ ಹಾಡುಗಳು
೩) ವೃತ್ತಿಕಲಾ ಭಿಕ್ಷಾಟನೆಯ ಹಾಡುಗಳು.

ಗೊಂದಲಿಗರ ಕಥೆಗಳನ್ನು ವಿಭಾಗ ಮಾಡಿ ಹೇಳಲಾಗುವುದು.

೧) ಅತಿ ಮಾನಸ ಕಥೆಗಳು.
೨) ಪೌರಾಣಿಕ ಕಥೆಗಳು.
೩) ಐತಿಹಾಸಿಕ ಕಥೆಗಳು.
೪) ರಮ್ಯ ಕಥೆಗಳು.

೫) ಅದ್ಭುತ ರಮ್ಯ ಕಥೆಗಳು,

೬) ಹಾಸ್ಯದ ಕಥೆಗಳು.

೭) ಸಾಮಾಜಿಕ ಕಥೆಗಳು.

೮) ನೈತಿಕ ಕಥೆಗಳು.

ಕಥಾ ಕಾಲಕ್ಷೇಪದಲ್ಲಿ ಗೊಂದಲಿಗರು ಹೇಳುವ ಕಥೆಗಳು ಪ್ರಶ್ನೋತ್ತರ ರೂಪ ತಾಳುವವು. ಗೊಂದಲಿಗರು ಪಾತ್ರಧಾರಿಗಳಾಗುವರು. ಸಂಭಾಷಣೆಗಿಳಿದು ನಾಟಕ ಮಾಡುವರು. 'ಯಕ್ಷಗಾನ, ದೊಡ್ಡಾಟ, ಹಾಗೂ ಸಣ್ಣಾಟಗಳು ಕರ್ನಾಟಕದ ಜಾನಪದ ಸಾಹಿತ್ಯದಲ್ಲಿ ಪೂರ್ಣ ವಿಕಾಸ ಹೊಂದಿದ ರೂಪಗಳಾಗಿವೆ; ಅಲ್ಲದೆ ದಾಸರಾಟ, ಗೊಂದಲಿಗ ರಾಟ, ಕಿಳ್ಳೆಕೆತ್ತರಾಟ ಈ ರೂಪತಾಂಶವುಳ್ಳ ಪ್ರಕಾರಗಳು ಉತ್ತರ ಕರ್ನಾಟಕದಲ್ಲಿ ಇಂದಿಗೂ ಅಸ್ತಿತ್ವದಲ್ಲಿದ್ದವುಗಳು.[೧]

ಗೊಂದಲಿಗರಲ್ಲಿ ಕಥಾ ಸಾಹಿತ್ಯ ಅಪಾರವಾದಂತೆ ಲಾವಣಿ ಸಾಹಿತ್ಯವು ಅಪಾರ ವಾಗಿದೆ. ಕಲಗಿ (ನಾಗೇಲಿ)ಯ ಹಾಡುಗಳನ್ನೆಲ್ಲ ಕರಗತಮಾಡಿಕೊಂಡಿದ್ದಾರಲ್ಲದೆ, ನೈತಿಕ ಲಾವಣಿಗಳನ್ನು ಗೋಷ್ಠಿಮಾಡಿ ಹಾಡುತ್ತಾರೆ.

ಕನ್ನಡದಲ್ಲಿ ಲಾವಣಿ ಸಾಹಿತ್ಯ ಬದುಕಿಸಿದ ಕೀರ್ತಿ ಇವರದೂ ಅದೆ.

ಗೋಂದಲಿಗರು ಯಾವದೇ ವಸ್ತುವನ್ನು ಸಾಹಿತ್ಯಕ್ಕಾಗಿ ಆಯ್ದುಕೊಂಡರೂ ಅದನ್ನು ತಮ್ಮದನ್ನಾಗಿ ಮಾಡಿಕೊಂಡು ಪ್ರಭಾವ ಬೀರುತ್ತಾರೆ.

**ಬುಡಬುಡಕ್ಯಾ :**

ಅರುಣೋದಯದ ಕಾಲದಲ್ಲಿಕ್ಕಿಂತ ಮೊದಲುಊರಲ್ಲಿ ಬುಡಬುಡಿಕೆ ಬಾರಿಸುತ್ತ–

ಶುಭವಾಗತೈತಿ ಶುಭವಾಗತೈತಿ
ಜಯವಾಗತೈತಿ ಜಯವಾಗತೈತಿ

ಎಂದು ಹೇಳಿ, ಗ್ರಾಮದೇವತೆಗಳನ್ನು ನೆನೆಯುತ್ತ 'ಬುಡಬುಡಿಕೆಯನ್ನು ಚಮಾತ್ಕಾರಯುಕ್ತವಾಗಿ ತ್ರಿತಾಳ ಬಾರಿಸುತ್ತ ಊರಲ್ಲಿ ಬಾರಿಸಿ ಹೋಗುವನು. ಬಳಿಕ ಮುಂಜಾವು ೮–೯ ಗಂಟೆಗೆ ಊರಲ್ಲಿ ಬರುವನು.

ಗಾದೆಗಳ ಕೋಶವೇ ಬುಡಬುಡಕ್ಯಾನ ನಾಲಿಗೆಯಲ್ಲಿರುತ್ತದೆ.

---

೧. ಜಾನಪದ ಸಾಹಿತ್ಯ ದರ್ಶನ ಭಾಗ–೧. ಪುಟ. ೨೨೬-೨೨೭

ಉದಾ : ಹನಿಗೆ ಹನಿಕೂಡಿದರ ಹಳ್ಳೈತಿ
ತೆನಿಗೆ ತೆನಿಕೂಡಿದರ ರಾಶ್ಯೈತಿ
ಮನಕ ಮನಕೂಡಿದರ ಕಾಶ್ಯೈತಿ
ದನಿಗೆ ದನಿ ಕೂಡಿದರ ಹಾಡ್ಯೈತಿ
ಜೀವಕ ಜೀವ ಕೂಡಿದರ ಪ್ರೀತ್ಯೈತಿ
ಪ್ರಾಣಕ ಪ್ರಾಣ ಕೂಡಿದರ ಭಕ್ತ್ಯೈತಿ
ಆನಂದಕೂಡಿ ಬರುವಕಾಲ ಸಮೀಪ್ಯೈತಿ
ಪ್ರೀತಿ ಮಾತೊಂದು ಸಮೀಪ್ಯೈತಿ
ಚಿಂತಿಸುವಕಾಲ ದೂರಾಗತ್ಯೈತಿ,

ಹೀಗೆ ಹೇಳಿ, ತಾನು ಕಟ್ಟಿದ ಹಕ್ಕಿಯು ಪಣ ಕುರಿತು ಶುಭದ ಸಂಕೇತಗಳನ್ನು, ಅಶುಭವ ಸಂಕೇತಗಳನ್ನು ಹೇಳಿ, ಶುಭಕ್ಕೆ ಸೂಚನೆಗಳನ್ನು ಹೇಳುವನು.

ಬುಡಬುಡಕಿಯವನು ಭವಿಷ್ಯಕಾರನಾಗುವನು. ಹೊತ್ತಿಗೆ ಗ್ರಂಥದಲ್ಲಿ ಕಡ್ಡಿ ಹಾಕಿಸಿ ಪ್ರಶ್ನೆ ಕೇಳಿ ಉತ್ತರ ಹೇಳುವನು.

ಪತಿಚಿಂತೆ. ಸಂತಾನಚಿಂತೆ ವೈರಿಯ ಕಾಟದ ರೀತಿ ಇಲ್ಲದಂತೆಮಾಡುವುದಕ್ಕೆ ಪರಿಹಾರ ಹೇಳುವನು.

ಇವನೊಬ್ಬ ಒಳ್ಳೆ ಜಾನಪದ ವೈದ್ಯನಾಗಿರುವನು. ಕೆಲವು ರೋಗಗಳಿಗೆ ಔಷಧ ಗಳನ್ನು ಕೊಡುವನು. ಭೂತ ಚೇಷ್ಟೆಗೆ ಮಂತ್ರ–ತಂತ್ರ ಮಾಡಿ ತಾಯಿತ ಮಾಡುವನು. ಒಳ್ಳೆಯ ಸಂಭಾವನೆ ಪಡೆಯುವನು.

ಬುಡಬುಡಕಿಯುವನು ಕಥೆಗಳನ್ನು ಹೇಳುತ್ತಾನೆ. ಕಥಾ ಸಾಹಿತ್ಯ ಇವನಲ್ಲಿದೆ. ಹಾಗೇ ಬುಡಬುಡಿಕೆಯನ್ನು ಬಾರಿಸುತ್ತ ಪದಗಳನ್ನೂ ಹಾಡುತ್ತಾನೆ. ಅವುಗಳನ್ನು ಕೆಳಗಿನಂತೆ ವಿಭಾಗಿಸಿ ಅಭ್ಯಾಸಿಸಬಹುದು.

೧) ಸ್ತುತಿ ಪದಗಳು
೨) ಚರಿತ್ರೆ ಪದಗಳು
೩) ನೈತಿಕ ಪದಗಳು

ಬುಡಬುಡಕಿಯುವರು ಆಶುಕವಿಗಳಾಗಿರುವರು. ಪಂಡರಪುರದ ವಿಠಲನ ಬಗೆಗೆ ಹಾಡುಗಳನ್ನು ಹಾಡುತ್ತಾರೆ.

ಒಟ್ಟಿನಲ್ಲಿ ಬುಡಬುಡಕಿ ಭವಿಷ್ಯಕಾರ, ಜಾನಪದ ವೈದ್ಯ, ಮಂತ್ರ–ತಂತ್ರಗಾರನಾಗಿ, ಕಥೆಗಾರನಾಗಿ, ಹಾಡುಗಾರನಾಗಿ, ಜಾನಪದ ವೃತ್ತಿಗಾಯಕನಾಗಿರುವನು ಮತ್ತು ತನ್ನ ವೃತ್ತಿಗೆ ಮನುಷ್ಯರನ್ನು ಒಲಿಸುವ ಮಾನಸಶಾಸ್ತ್ರಜ್ಞನಾಗಿರುವನು.

**ಭೂತ್ಯಾ :**

ಭೂತ್ಯಾ ಊರೂರ ಸಂಚರಿಸುವ ಶಕ್ತಿಯ ಆರಾಧಕ. ಭೂತ್ಯಾ ಮಾಡುವ ಶಕ್ತಿಯ ಸ್ತುತಿ.

೧) ಅಂಬಾ ನಿನ್ನ ಸ್ಮರಣೆಯ ನಾನು ಮಾಡುವೆ
ಅಂಬಾ ನಿನ್ನ ಸ್ಮರಸಿ ನಾನು ಮೆರೆವೆನು ॥ಪಲ್ಲ॥
ಎಂಟು ಕೈಯ ನಾಲ್ಕು ಭುಜವ
ರೌದ್ರ ಮುಖವ ಅವತಾರದಲಿ
ದೇವಿ ಶಂಬ–ನಿಶಂಬರನ ಸಂಹಾರ ಮಾಡಿದಾಳ
ಸಿಂಹದ ಮೇಲೆ ಸವಾರಿ ಹಾಕಿ ಖಡ್ಗ ಹಿಡಿದಾಳ
ದೈತರನು ಸಂಹಾರ ಮಾಡಿದಾಳ
ಭಕ್ತರನು ಸದಾ ಕಾಯ್ದಿದಾಳ
ದೇವಿ ರಕ್ತಬೀಜ ರಾಕ್ಷಸರನ
ಸಂಹಾರ ಮಾಡಿದಾಳ ಸಂಹಾರ ಮಾಡಿದಾಳ ।

೨) ಯಲ್ಲಮ್ಮಾ ಏಳ ಕೊಳ್ಳದ ಯಲ್ಲಮ್ಮಾ
ಅಮ್ಮಮ್ಮಾ ಏಳ ಗುಡ್ಡದ ಎಲ್ಲಮ್ಮಾ
ಪರಶುರಾಮ ನಿನ್ನ ಪ್ರೇಮದ ಕಂದಮ್ಮಾ ॥ಪಲ್ಲ॥
ಉಳಿದೆಮ್ಮಾ ಭಕ್ತ ಜನನಾಗಿ ಬೆಳೆದಮ್ಮಾ
ಭಕ್ತರ ಬೇಡಿದಂತಹ ವರವಕೊಟ್ಟೆಮ್ಮಾ
ಭಕ್ತರ ಭಾವನೋಡಿ ರಕ್ಷಣೆ ಮಾಡಿದೆಯಮ್ಮಾ
ನಿನ್ನ ಆಶೀರ್ವಾದ ನಮಗೆ ಸದಾ ಇರಲೆಮ್ಮಾ
ಬೆಳೆದೆಮ್ಮಾ ಉಗರಗೋಳ ಸವದತ್ತಿಯಮ್ಮಾ
ಏಳಕೊಳದೊಳಗೆ ನಿನ್ನ ಕಾಯದ ವಾಸಮ್ಮಾ ।

೩) ದಯವಾಗ ದೇವಿ ನನಗs
ದಯವಾಗ ದೇವಿ ನನಗs
ಭಯಾ ಬಿಡಸ ಪ್ರಚಂಡ ಸಭಾದಾಗ
ಭಯಾ ಬಿಡಸ ಪ್ರಚಂಡ ಸಭಾದಾಗ

ಆದಿ ಶಗತಿ ನೀ ಎನ್ನ ತಾಯಿ
ಆದಿ ಶಗತಿ ನೀ ಎನ್ನ ತಾಯಿs
ನಿನ್ನ ಹೊರತ ಯಾರಿಲ್ಲ ಮಾಯಿ
ನಿನ್ನ ಹೊರತ ಯಾರಿಲ್ಲ ಮಾಯಿ
ವೇಲಾಪುರ ಎಂಬುದು ಪುರಾs
ವೇಲಾಪುರ ಎಂಬುದು ಪುರಾs
ಭಗತರ ಬರುವರು ಪೂರಾs
ಭಗತರ ಬರುವರು ಪೂರಾ
ಉದೋ ಜಗದಂಬಿ ಅಂಬಾ
ಉದೋ ವೇಲಾಪುರದ ಅಂಬಾ
ಉದೋ ಉದೋ ಜಗದಂಬಾ

**ಭಾಟ :**

ಭಾಟನು ವಿಶ್ವಕರ್ಮ, ಪಂಚಾಚಾರ್ಯರ, ಲಿಂಗಾಯತರ, ದೇವಾಂಗ, ಕುರುಬ ಇತ್ಯಾದಿ ಜನಾಂಗಗಳ ಧರ್ಮ ಹಾಗೂ ಸಂಸ್ಕೃತಿಯನ್ನು ವಿವರಿಸುವ ವೀರವ್ಯಕ್ತಿ. ಇವನು ದೇವಿ ಆರಾಧಕನಾಗಿರುವನು.

## ದೇವಿ ಸ್ತುತಿ

೧) ಅಂಬಾ ಪಾಲಿಸ ದೇವಿ ಪಾಲಿಸು
ಜಗದಂಬಾ ದಯಮಾಡ ।
ಶಂಭ ನಿಶುಂಭನ ಸಂಹಾರಿಣಿ ದೇವಿ
ರಾಕ್ಷಸಗ ವಿಧಿಸಿದಿ ಶಿಕ್ಷಾ ಭಕ್ತ ರಕ್ಷಿಣಿ ನೀ
ನಂಬಿದ ಭಕ್ತರಿಗೆ ಬೇಡಿದ ವರಗಳ
ಕೊಟ್ಟ ಸಲಹುವ ತಾಯಿ
ಇಳಿಯೊಳು ಹೊಳೆಯುವ ಸವದತ್ತಿಗ್ರಾಮದಿ
ಉಗರಗೊಳ್ಳದ ನಡುವೆ ನಿನ್ನ ಪೌಳಿ
ಇಂಬು ನೋಡಿ ನೀ ನೆನದಿಯವ್ವಾ

## ಅಂಬಾ ಅಂದರೆ ನೀನೇ

೨) ಅಂಬಾ ಅಂದರೆ ನೀನೇs
ದೇವಿ ಅಂದರೆ ನೀನೇs
ಸೇವೆ ಮಾಡುವರೇನವ್ವಾ ಜನನಿ ॥ ಪಲ್ಲ ॥

ಬಳ್ಳಾರಿ ಹುಲಿಗೆಮ್ಮಾ
ಪ್ರಸನ್ನಳಾಗಮ್ಮಾ
ಲೋಕದಾಗ ಕಾಯು ನಮ್ಮನ್ನಾ ।
ಶಿರಸಂಗಿ ಕಾಳಮ್ಮ
ಪ್ರಸನ್ನಳಾಗಮ್ಮಾ
ಲೋಕದಾಗ ಕಾಯು ನಮ್ಮನ್ನಾ ।
ಏಳಕೊಳ್ಳದೆಲ್ಲಮ್ಮ
ನೀನೇ ರಕ್ಷಕಳಮ್ಮ
ಭಕ್ತ ವತ್ಸಲ ನೀನಮ್ಮ ।
ಧರೆಯೊಳು ಮೆರೆಯುವ
ಇರುವ ಉಗರಗೊಳ್ಳ
ಸವದತ್ತಿಯು ಸಿದ್ಧಮ್ಮಾ ಅಮ್ಮಾ ।

**ಸಿಂಗದ :**

ಸಿಂಗದರು ಗೊಂದಲಿಗರ ವೃತ್ತಿ ಪಂಗಡದವರು. ಇಳಕಲ್ಲ, ಕೆರೂರ, ಗುಳೇದಗುಡ್ಡ, ಹೊಸಪೇಟ, ಬೀದರ ಮುಂತಾದ ಸ್ಥಾನಗಳಲ್ಲಿ ಇಂದಿಗೂ ಇವರ ವೃತ್ತಿ ಇದೆ.

ಪ್ರಾಚೀನ ಅರಸರು ನಪುರಿ ಊದಲು ಇವರನ್ನು ನೇಮಿಸಿಕೊಂಡಿದ್ದರೆಂದು ಇವರು ಹೇಳುವದುಂಟು.

ದೇವಾಂಗದವರು ಮದುವೆಯ ಹಾಗೂ ಇನ್ನಿತರ ಶುಭಕಾರ್ಯಗಳಲ್ಲಿ ನಪುರಿಯನ್ನು ತೆಗೆದುಕೊಂಡು ಹೋಗಿ ಊದಿಸುತ್ತಾರೆ. ಇವರಿಗೆ ದೇವಾಂಗದವರು 'ಆಯು-ಖುಷಿ' ಕೊಡುವ ಪದ್ಧತಿಯನ್ನಿರಿಸಿಕೊಂಡಿದ್ದಾರೆ. ಪ್ರತಿ ವರುಷ ಹಣ. ಅರಿವೆ ಕೊಡುವದಲ್ಲದೆ ವಿಶೇಷ ಮರ್ಯಾದೆಯನ್ನೂ ಶುಭ ಪ್ರಸಂಗದಲ್ಲಿ ಮಾಡುವರು. ಸಿಂಗದರು ತಮ್ಮ ಮನೆಯ ಇನ್ನಿತರ ಕಾಯಕಗಳನ್ನೂ ಮಾಡುತ್ತಾರೆ.

**ವಾರಕರಿಗಳು :**

ಒಂದನೂರು ವರುಷದಿಂದೀಚೆಗೆ ಪಂಡರಪುರ ವಿಠಲನ ಭಕ್ತರಾಗುವ ಒಂದು ಧಾರ್ಮಿಕ ಕಾರ್ಯ ಗೊಂದಲಿಗರ ಸಮಾಜದಲ್ಲಿ ನಡೆದಿದೆ. ವಾರಕರಿಗಳಾದ ಮೇಲೆ ಪಲ ಕೆಲವರಲ್ಲಿ ಮದ್ಯ-ಮಾಂಸ ಸೇವನೆ ನಿಂತಿದೆ.

ಶಿವಮೊಗ್ಗಾದಲ್ಲಿರುವ ಗೊಂದಲಿಗರು ಸಹ ಮಹಾರಾಷ್ಟ್ರದ ಪಂಡರಪುರ ವಿಠಲನಿಗೆ ನಡೆಯುತ್ತ ಹೋಗುತ್ತಾರೆ. ಮಹಿಳೆಯರೂ ವಾರಕರಿಗಳಾಗುವುದರಲ್ಲಿ ಅಭ್ಯಂತರವಿಲ್ಲ.

ಅನೇಕ ಗೊಂದಳಿಗರು ತತ್ವಜ್ಞಾನಿಗಳಾಗಿರುವರು. ಹರಿಕಥೆಮಾಡುವರು. ಮಾನವತೆಯ ಅರಿವಿಗೆ ವಾರಕರಿಪಂಥ ಒಳ್ಳೆ ಕಾರ್ಯಸಾಧಿಸಿದೆ.

## ಮಂಗಲ :

ಕರ್ನಾಟಕದಲ್ಲಿ ಗೊಂದಲಿಗರಂತಹ ವೃತ್ತಿಕಾರರ ಸಂಪೂರ್ಣ ಅಧ್ಯಯನದಿಂದ ಜನಾಂಗಿಕ ಸಾಂಸ್ಕೃತಿಕ ತಿರುಳು ತಿಳಿಯುವದರ ಜೊತೆ ಜಾನಪದ ಸಾಹಿತ್ಯ, ವೈದ್ಯ, ಮನೋವಿಜ್ಞಾನ ಇತ್ಯಾದಿ ಅಂಶಗಳು ತಿಳಿಯುವವು. ಅವುಗಳನ್ನು ಆಧುನಿಕವಾಗಿ ಅಳವಡಿಸಿಕೊಂಡರೆ, ಮಾನವನ ಇಡೀ ಬದುಕಿಗೆ ಒಂದಿಷ್ಟು ಯಶ ದೊರಕುವುದರಲ್ಲಿ ಸಂಶಯವಿಲ್ಲ.



# ಪಾತರದವರು

ಎಂ. ಜಿ. ಬಿರಾದಾರ

**ಪೂರ್ವೇತಿಹಾಸ :**

ದೇವದಾಸಿಯರೆಂದರೆ ದೇವಾಲಯಗಳಲ್ಲಿ, ನಿತ್ಯ ಪೂಜೆಯ ಸಮಯದಲ್ಲಿ, ಜಾತ್ರೆ ಉತ್ಸವಗಳಲ್ಲಿ ದೇವರಿಗೆ ನೃತ್ಯ ಸಂಗೀತ ಸೇವೆ ಸಲ್ಲಿಸುವ ಸುಂದರಿಯರು; ಎಂಬ ಲಕ್ಷ್ಯಾರ್ಥ ಅಳಿಸಿಹೋಗಿ, ವೇಶ್ಯೆಯರು ಎಂಬ ವ್ಯಂಗ್ಯಾರ್ಥ ಮಾತ್ರ ಇಂದು ನೆಲೆ ನಿಂತಿವೆ. ಇದೊಂದು ಅನಂತಕಾಲದಿಂದ ಬೆಳೆದುಬಂದ ಧಾರ್ಮಿಕ ಸಂಪ್ರದಾಯ. ಭಾರತದಲ್ಲಿಯಂತೆ ಪ್ರಪಂಚದ ಇನ್ನಿತರ ದೇಶಗಳಾದ ಇಜಿಪ್ತ, ಅರೇಬಿಯಾ, ಸಿರಿಯಾ ಗಳಲ್ಲಿಯೂ ಒಂದು ಕಾಲಕ್ಕೆ ಈ ಪದ್ಧತಿ ಪ್ರಚಲಿತವಾಗಿತ್ತು. ಪಶ್ಚಿಮ ಆಫ್ರಿಕಾದಲ್ಲಿ ಇಂದೂ ಇದು ರೂಢಿಯಲ್ಲಿದೆಯಂತೆ. ದೇವದಾಸಿಯರ ಜೊತೆ ಸಂಪರ್ಕವಿಟ್ಟು ಕೊಳ್ಳುವುದೆಂದರೆ ಅದೊಂದು ಪುಣ್ಯವಿಶೇಷವೆಂದು ಆಗಿನ ಜನ ತಿಳಿದುಕೊಳ್ಳುತ್ತಿದ್ದ ರಂತೆ.

**ನಾರಂಒ.** ತ್ರದಲ್ಲಿ ಈ ಸಂಪ್ರದಾಯ ತೀರ ಪ್ರಾಚೀನವಾದುದಲ್ಲವೆಂದು ಡಾ. ಅಲ್ತೇಕರ

ಒಂದನ್ನೊಪ್ಪಿಯ ಪಡುತ್ತಾರೆ. 'ಈ ಸಂಪ್ರದಾಯವು ಬಹುಶಃ ಕ್ರಿ. ಶ. ಮೂರನೆಯ

ಧಾರ್ಮಿಕ ಕಾಯ ಆರಂಭವಾಗಿರಬಹುದು. ಏಕೆಂದರೆ ಉಜ್ಜಯನಿಯ ಮಹಾಕಾಲ

ಪಲ ಕೆಲವರಲ್ಲಿ ಮ ನರ್ತಕಿಯರಿದ್ದ ವಿಷಯವನ್ನು ಕಾಳಿದಾಸನು ನಿರೂಪಿಸುತ್ತಾನೆ.

ಶಿವಮೊಗ್ಗಾ ದ ೩೫)... ಈ ಸಂಪ್ರದಾಯವು ಆರನೆಯಶತಮಾನದಲ್ಲಿ ಹೆಚ್ಚಾಗಿ

ವಿಠಲನಿಗೆ ನಡೆಯುತ್ತ ್ಯೂಯೆನ್‌ತ್ಸಾಂಗನು (೭ ನೇ ಶ.) ಮುಲ್ತಾನ ಎಂಬಲ್ಲಿನ ಸೂರ್ಯ

ಅಭ್ಯಂತರವಿಲ್ಲ. ನರ್ತಕಿಯರನ್ನು ಕಂಡಂತೆ ಹೇಳುತ್ತಾನೆ. ಕಾಶ್ಮೀರದಲ್ಲಿ ಕ್ರಿ. ಶ.

ಈ ಸಂಪ್ರದಾಯವಿತ್ತೆಂದು ರಾಜತರಂಗಿಣಿಯಿಂದ (IV. ೩೧)

ತಿಳಿದುಬರುತ್ತದೆ. ಗುಜರಾತಿನ ಬಹು ಪ್ರಸಿದ್ಧವಾದ ಸೋಮನಾಥ ದೇವಾಲಯದಲ್ಲಿ ಐನೂರ್ವರು ನರ್ತಕಿಯರಿದ್ದಂತೆ ತಿಳಿದುಬರುತ್ತದೆ.... ರಾಜರಾಜನು ತಂಜಾವೂರಿನ ದೇವಸ್ಥಾನವನ್ನು ಕಟ್ಟಿಸಿದಾಗ (೧೦ ನೇ ಶ.) ದೇವಸ್ಥಾನದ ಸೇವೆಗಾಗಿ ನಾನೂರ್ವರು ನರ್ತಕಿಯರನ್ನು ಒದಗಿಸಿದನು'[೧].

ಈಗಲೂ ಉತ್ತರ ಪ್ರದೇಶದ (Naiks) ನೈಕರಲ್ಲಿ, ಮಲಬಾರದ ನಂಬೂದಿರಿಗಳಲ್ಲಿ, ಬಂಗಾಲದ ಕುಲಿನಾರ (Kulinr) ರಲ್ಲಿ ಈ ಪದ್ಧತಿ ಇದೆ.[೨]

ಈ ಸಂಪ್ರದಾಯ ಕರ್ನಾಟಕದಲ್ಲಿ ಎಂಟನೆಯ ಶತಮಾನಕ್ಕೆ ಮೊದಲಿದ್ದ ಉಲ್ಲೇಖಗಳಿಲ್ಲ. ದೇವದಾಸಿ ಪದ ಕನ್ನಡ ಶಾಸನಗಳಲ್ಲಾಗಲೀ, ಕಾವ್ಯಗಳಲ್ಲಾಗಲೀ ಬಳಕೆಯಾಗದಿರುವುದೊಂದಚ್ಚರಿಯೇ ಸರಿ. ಆದರೆ 'ದೇಗುಲದ ಸೂಳೆ'[೩] 'ಪಾತ್ರದ ಸೂಳೆ' 'ಪಾತ್ರದವಳು' ಎಂಬ ಪದಗಳು ಮಾತ್ರ ದೇವದಾಸಿ ಪದಕ್ಕೆ ಸಮಾನಾರ್ಥದಲ್ಲಿ ಶಾಸನಗಳಲ್ಲಿ ಬಳಸಲ್ಪಟ್ಟಿವೆ. ಪಾತ್ರ ಅಂದರೆ ನೃತ್ಯ. ಪಾತ್ರ > ಪಾತರ, ಪಾತರ ದವಳು = ನೃತ್ಯಗಾತಿ. ಆದರೆ 'ಸೂಳೆ' ಶಬ್ದ ಬಹಳಹಿಂದೆಯೇ ಬಂದು ಸೇರಿ ಕೊಂಡಂತಿದೆ. ದೇಗುಲದ ಸೂಳೆ ಪಾತ್ರದಸೂಳೆ ಸಾಮಾನ್ಯ 'ಸೂಳೆ'ಗಿಂತ ಬೇರೆಯನ್ನು ವುದನ್ನು ಮಾತ್ರ ಶಾಸನಾಧಾರಗಳು ಖಚಿತಪಡಿಸುತ್ತವೆ.

ಕ್ರಿ. ಶ. ೭೭೮ ರ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಶಾಸನವೊಂದರಲ್ಲಿ, ದೇಗುಲದ ಸೂಳೆಯೊಬ್ಬಳು ದಾನಕೊಟ್ಟ ವಿಷಯವಿದೆ. ಈ ಸಂಪ್ರದಾಯ' ಹಿಂದೂ ದೇವಾಲಯಗಳಿಗಷ್ಟೇ ಸೀಮಿತವಾಗುಳಿಯದೆ, ಜಿತೇಂದ್ರಿಯನಾದ ಜಿನನ ಮಂದಿರ ಗಳನ್ನೂ ವ್ಯಾಪಿಸಿಕೊಂಡಿರುವುದೊಂದು ಗಮನಾರ್ಹ ಸಂಗತಿಯೇ ಸರಿ. ಕ್ರಿ. ಶ. ೮೦೩ ರ ತಾಮ್ರಶಾಸನದಲ್ಲಿ ಜಿನಭವನದಲ್ಲಿ ನಡೆಯುವ '...ವಾರ ವಿಲಾಸಿನೀ ವಿರಚಿತ ನೃತ್ಯ ಸಂಗೀತ ಬಾದ್ಯ' ಮೊದಲಾದವುಗಳಿಗೆ ದಾನಕೊಟ್ಟ ವಿಷಯದ ಉಲ್ಲೇಖವಿದೆ.

ದೇವರಿಗೆಂದು ಆಕಳು ಹೋರಿಗಳನ್ನು ಬಿಡುವ ರೂಢಿ ಇಂದೂ ಜನಪದದಲ್ಲಿದೆ. ಅವಕ್ಕೆ 'ಗೂಳಿ' 'ಕಪಲಿ' ಎಂದು ಕರೆಯುತ್ತಾರೆ. ಅದರಂತೆ ದೇವರಿಗೆ ಕನ್ಯೆಯರನ್ನೂ ಬಿಡುವ ಸಂಪ್ರದಾಯವೊಂದು ರೂಢಿಯಲ್ಲಿತ್ತೆಂಬುದನ್ನು ಹತ್ತನೆಯ ಶತಮಾನದ ಶಾಸನವೊಂದು ಉಲ್ಲೇಖಿಸುತ್ತದೆ. ಕ್ರಿ. ಶ. ೯೭೪ ರ ಶಾಸನದಲ್ಲಿ, ದೇವರಿಗೆ ಇಬ್ಬರು ಕನ್ನೆಯರನ್ನೂ, ಹನ್ನೆರಡು ಹಸುಗಳನ್ನೂ ದಾನವಾಗಿ ಕೊಟ್ಟವಿಷಯವಿದೆ. ಅದರಂತೆ ಕ್ರಿ. ಶ. ೯೭೫ ರ ಶಾಸನದಲ್ಲಿ ಐವರು ಸೂಳೆಯರಿಗೆ, ಮತ್ತು ಒಂದು ಪಾತ್ರಕ್ಕೆ ಪ್ರತ್ಯೇಕ

---

೧. ಡಾ. ಎಂ.ಚಿದಾನಂದ ಮೂರ್ತಿ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, (ಪು. ೧೮೧).

೨. ಗುರುಮುಖರಾಮುದನ, Indian Social Problems.

೩. ಶಾಸನೋಕ್ತ 'ಸೂಳೆ' ಪದ ಬಹಳ ಪ್ರಾಚೀನವಾದುದು. ಇದು ಸಂಸ್ಕೃತದ 'ಶೂಳ' ಅಂದರೆ 'ನರ್ತಕಿ' ಎಂಬರ್ಥದಲ್ಲೇ ಬಳಸಲ್ಪಟ್ಟಿರಬೇಕು.

ವಾಗಿ ದಾನಮಾಡಿದ ವಿಷಯ ಪ್ರತಿಪಾದಿಸಲ್ಪಟ್ಟಿದೆ. ಇಲ್ಲಿ ಸೂಳೆ ಬೇರೆ, ಪಾತ್ರಬೇರೆ ಎಂಬರ್ಥ ಸ್ಪಷ್ಟವಿದೆ. ಪಾತ್ರವೆಂದರೆ ಪಾತರದವಳು, ದೇವದಾಸಿ ಎಂದು ಹೇಳಬಹುದು. 'ಪಾತ್ರಪಾಡಿದವಳು' ಎಂದರೆ 'ನೃತ್ಯ ಮಾಡಿದಳು' ಎಂಬರ್ಥ ರತ್ನಾಕರ ವರ್ಣಿಯ ಭರತೇಶವೈಭವದಲ್ಲಿ ಸಾಕಷ್ಟುಕಡೆ ಇದೆ. 'ಪಾತರ ಕುಣಿಸು' ಎಂಬ ದ್ವಿರುಕ್ತಿಯ ಪಡೆನುಡಿ ಜನಪದದಲ್ಲಿ ಇಂದೂ ಇದೆ.

ದಕ್ಷಿಣಕನ್ನಡ, ಧಾರವಾಡ, ಬೆಳಗಾವಿ, ವಿಜಾಪೂರ ಜಿಲ್ಹೆಗಳಲ್ಲಿ ಇಂದೂ ದೇವದಾಸಿಯರು ಇರುವುದಾಗಿ ತಿಳಿದು ಬರುತ್ತದೆ. ಪ್ರಭುಲಿಂಗಲೀಲೆಯ ಪ್ರಮುಖ ಪಾತ್ರ ಮಾಯೆ ಒಬ್ಬ ದೇವದಾಸಿಯೇ ಸರಿ. ಆ ಮಧುಕೇಶ್ವರ ದೇವಾಲಯದಲ್ಲಿ ಇಂದೂ ಸಹಿತ ದೇವದಾಸಿ ಇರುವುದನ್ನೂ ಕಾಣಬಹುದು. ಅದರಂತೆ ವಿಜಾಪುರ ಜಿಲ್ಹೆಯ ತೇರದಾಳದಲ್ಲಿ ಪ್ರಭುದೇವರ ಗುಡಿಯಲ್ಲಿ ಈರ್ವರು ದೇವದಾಸಿಯರಿದ್ದಾರೆ. ಜಮಖಂಡಿಯ ಸಮೀಪದ ಕಡಪಟ್ಟಿಯಲ್ಲಿಯೂ ಅವರ ಮನೆತನಗಳಿವೆ. ಮಹಾರಾಷ್ಟ್ರದ ಸಾಂಗಲಿಯಲ್ಲಿ ಅವರ ಮನೆತನಗಳು ಸಾಕಷ್ಟಿರುವುದಾಗಿ ತಿಳಿದುಬರುತ್ತದೆ. ಗೋವೆಯ ಮಂಗೇಶ ದೇವಾಲಯ, ಮಲ್ಯದ ವಿಷ್ಣು ದೇವಾಲಯಗಳಲ್ಲಿ ಈಗಲೂ ದೇವದಾಸಿಯರು ದೇವರ ಸೇವೆಯಲ್ಲಿ ನಿರತರಾಗಿರುವುದನ್ನು ಕಾಣಬಹುದು.

'ತಮ್ಮ ಸ್ಥಾನಕ್ಕೆ ಚ್ಯುತಿ ಬರಬಹುದೆಂಬ ಶಂಕೆಯಿಂದ ಪ್ರಾರಂಭದಲ್ಲಿ ಅರ್ಚಕವರ್ಗ ಈ ಪದ್ಧತಿಯನ್ನು ವಿರೋಧಿಸಿತಾದರೂ ಆಳರಸರ ಒತ್ತಾಯಕ್ಕೆ ಇವರು ಮಣಿಯಲೇ ಬೇಕಾಯ್ತು.'[೧] ಅರ್ಚಕರಂತೆ ಇವರು ದೇವಾಲಯದ ಅಂಗವಾದರು. ಇವರಿಗೆ ದೇವಾಲಯದ ಆಸ್ತಿಯಲ್ಲಿ ಪಾಲು, ಬದುಕಿಗೆ ಪೋಷಣೆ ಸಿಕ್ಕಿತು. ಹೀಗಾಗಿ ಭಾರತದ ಬಹುತೇಕ ಮಂದಿರಗಳಲ್ಲಿ ದೇವದಾಸಿಯರು ದೇವಾಲಯದ ಅನಿವಾರ್ಯ ಅಂಗವಾಗಿ ಉಳಿದುಕೊಂಡರು.

**ಈ ಪದ್ಧತಿಗೆ ಕಾರಣಗಳು :**

ಭಾರತೀಯರು ತಮ್ಮಂತೆ ದೇವರನ್ನೂ ಭೋಗಿಯಾಗಿ ಕಂಡವರು, ಅವನಿಗೂ ಸಂಸಾರ ಕಟ್ಟಿದವರು. ಹೀಗಾಗಿ ತಮಗೆ ಬೇಕಾದುದೆಲ್ಲ ದೇವರಿಗೂ ಬೇಕು. ಯಾವುದನ್ನೂ ತಾವು ಭೋಗಿಸುವ ಮೊದಲು, ಅದನ್ನು ಕೊಟ್ಟ ದೇವರಿಗೆ ಕೊಡಬೇಕೆನ್ನುವ ಸಂಕಲ್ಪವುಳ್ಳವರು.[೨] ಹೆಣ್ಣನ್ನೂ ದೇವರಿಗೆ ಅರ್ಪಿಸುವ ಈ ಸಂಪ್ರದಾಯಕ್ಕೆ ಈ ಮುಗ್ಧ ಭಾವನೆಯೂ ಕಾರಣವೆನ್ನಬೇಕು.

---

೧. Dr. A. S. Altekar, The position of Women in Hindu civilization p. 182–3.

೨. ಎಮ್ಮೆ ಆಕಳು ಈದರೆ ಅದರ ಹಾಲನ್ನು ದೇವರಿಗೆ ಅರ್ಪಿಸಿಯೇ ತಾವು ಉಣ್ಣುವುದು. ಹೊಸದಾಗಿ ಬೆಳೆದ ಕಾಳು ಕಡಿಗಳನ್ನು ದೇವರಿಗೆ ಸಲ್ಲಿಸಿಯೇ ಉಪಭೋಗಿಸುವುದು, ನಮ್ಮ ಜನಪದದಲ್ಲಿ ಇಂದೂ ಇದೆ.

ಎರಡನೆಯದಾಗಿ ದೇವರ ಹೆಸರಿನಲ್ಲಿ ಭೋಗಮಾಡುವ ಸ್ವಾರ್ಥಾಕಾಂಕ್ಷೆ. ದೇವರ ಹೆಸರಿನಲ್ಲಿ ಮಾಡಿದ್ದನ್ನು ವಿರೋಧಿಸುವ ಧೈರ್ಯ ಸಮಾಜಕ್ಕಿರಲಿಲ್ಲ. ದೇವರಿಗೆ ಅರ್ಪಿಸಿ ತಾವು ಬೇಕಾದ್ದನ್ನು ಮಾಡಬಹುದು; ಅದು ಪಾಪವಲ್ಲವೆಂಬ ತಿಳುವಳಿಕೆ ಸಮಾಜದಲ್ಲಿತ್ತು. ಆದಕ್ಕಾಗಿ ಹೆಣ್ಣನ್ನು ದೇವರಿಗೆ ಅರ್ಪಿಸುವ ನೆಪದಲ್ಲಿ ಸಮಾಜದ ಪ್ರತಿಷ್ಠಿತ ವ್ಯಕ್ತಿಗಳೆನ್ನಿಸಿಕೊಂಡ ಆಳರಸರು, ಅರ್ಚಕರು, ದೇವಾಲಯದ ಆಡಳಿತ ವರ್ಗದವರು ತಮ್ಮ ಭೋಗದ ಸಾಧನವನ್ನಾಗಿ ಮಾಡಿಕೊಂಡು, ಈ ಸಂಪ್ರದಾಯವನ್ನು ಪ್ರೋತ್ಸಾಹಿಸಿದರು.

ಮೂರನೆಯದಾಗಿ ಧರ್ಮ ಪ್ರಚಾರಕ್ಕಾಗಿ, ದೇವಾಲಯಗಳ ಆದಾಯವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಜನ ಸಮೂಹವನ್ನು, ತಮ್ಮ ತಮ್ಮ ಧಾರ್ಮಿಕ ಕೇಂದ್ರಗಳಾದ ಈ ಮಂದಿರಗಳ ಕಡೆಗೆ ಆಕರ್ಷಿಸುವ ಉದ್ದೇಶಕ್ಕಾಗಿ ಈ ಸಂಪ್ರದಾಯಕ್ಕೆ ಪೋಷಣೆಯನ್ನೊದಗಿಸಿದರು ಹೀಗೆ ಸ್ವಾರ್ಥಪರ ಗಂಡಿನ ಮನೋಭಾವದಿಂದಾಗಿ ದೇವದಾಸಿಯರ ಸಮೂಹ ಎಲ್ಲೆಡೆ ಬೆಳೆದು ಬಂತೆಂದು ಕಾಣುತ್ತದೆ.

**ಬದುಕಿನ ರೀತಿ :**

ಸಂಗೀತ ನೃತ್ಯ ಕಲೆ ಅಂಗಸೌಂದರ್ಯ ಇವು ದೇವದಾಸಿಯರ ಬದುಕಿನ ಆಕರ್ಷಣೆಗಳಾದವು. ಇವರನ್ನು ಆಯ್ಕೆ ಮಾಡುವಾಗ ಅವರ ಸೌಂದರ್ಯವನ್ನು ವಿಶೇಷವಾಗಿ ಗಮನಿಸುತ್ತಿರಬೇಕು. ಕಲೆ ಹಿಂದಿನಿಂದಲೂ ರೂಢಿಸಿಕೊಳ್ಳಬಹುದಾಗಿತ್ತು. ಇವರು ವಿಶೇಷವಾಗಿ ಗುಡಿಯ ಆವರಣದಲ್ಲೇ ವಾಸಿಸುತ್ತಿದ್ದರು. ನಿತ್ಯ ಪೂಜೆಯ ವೇಳೆಗೆ ಸ್ನಾನಮಾಡಿ ಒಂದು ಜರದ ಕೆಂಪು ಶಲ್ಲೆ ಉಟ್ಟುಕೊಂಡು, ಮತ್ತೊಂದನ್ನು ಹೊದ್ದುಕೊಂಡು, ಮೂಗಿನಲ್ಲಿ ಮೂಗುತಿಯನ್ನಿಟ್ಟುಕೊಂಡಿರುತ್ತಿದ್ದರು. ಹಣೆಗೆ ಕುಂಕುಮ ಇರಲೇಬೇಕು. ದೇವಾರ್ಚನೆಯ ಹೊತ್ತಿನಲ್ಲಿ ದೇವರಿಗೆ ಚವರಿ ಬೀಸುವುದು, ಆರತಿ ಎತ್ತುವುದು ಇವರ ಕೆಲಸ. ಆಮೇಲೆ ಸಂಗೀತ ನೃತ್ಯಗಳು. ಇವುಗಳನ್ನೆಲ್ಲ 'ರಂಗಭೋಗ'ಗಳೆಂದು ಕರೆದರು. ಆದರೆ ಸಂಗೀತ ನೃತ್ಯ ನಿತ್ಯ ನಡೆಯಬೇಕಾದ[೧] ಸೇವೆಗಳೇನೂ ಅಲ್ಲ. ವಾರದಲ್ಲೊಂದು ವಿಶೇಷವಾರದಂದು ಹುಣ್ಣಿಮೆ ಅಮಾವಾಸ್ಯೆಯ ವಿಶೇಷ ಪೂಜೆಯಲ್ಲಿ, ಜಾತ್ರೆ ಉತ್ಸವಗಳಲ್ಲಿ ಮಾತ್ರ ಕಾಲಲ್ಲಿ ಗೆಜ್ಜೆಕಟ್ಟಿಕೊಂಡು ನರ್ತಿಸುತ್ತಿದ್ದರು, ಹಾಡುತ್ತಿದ್ದರು, ಉತ್ಸವದಂದು ಪಾಲಕಿಯ ಮುಂದೆ ಇವರ ನೃತ್ಯ ಸಾಗುತ್ತಿತ್ತು.

ಮಂದಿರದ ಆಡಳಿತ ವರ್ಗದವರಿಂದ ಇವರು ನಿಯಮಿಸಲ್ಪಟ್ಟವರಾದ ಕಾರಣ, ಇವರ ಈ ಸೇವೆಗಾಗಿ ಮಂದಿರದ ಆದಾಯದ ಒಂದು ಭಾಗವನ್ನೊ, ಇಲ್ಲವೆ ಕೆಲವು

೧. ಮೂರ್ತಿಗೆ ಮಜ್ಜನ, ವಸ್ತ್ರ, ಗಂಧಲೇಪನ ಹೂವು ಪತ್ರೆ ಏರಿಸುವುದು ಇವು 'ಅಂಗಭೋಗ'ಗಳು. ಇದರಲ್ಲಿಯೂ ಇವರು ಪೂಜಾರಿಗೆ ನೆರವಾಗುತ್ತಿದ್ದರಂತೆ.

ಜಮೀನುಗಳನ್ನೊ ಇವರಿಗೆ ಬಿಟ್ಟುಕೊಡುತ್ತಿದ್ದರು. ತೇರದಾಳದಲ್ಲಿ ಈಗಿರುವ ಇಬ್ಬರು ದೇವದಾಸಿಯರಿಗೆ ಒಬ್ಬಳಿಗೆ ಆರು ಕೂರಿಗೆ, ಇನ್ನೊಬ್ಬಳಿಗೆ ಎಂಟು ಕೂರಿಗೆ ಹೊಲಗಳನ್ನು ಪ್ರಭುದೇವರ ಸೇವೆಗಾಗಿ ಬಿಟ್ಟುಕೊಟ್ಟಿದ್ದಾರೆ. ಆದರೆ ಸೇವಾ ಪರಂಪರೆ ಅವಳಲ್ಲಿ ಹುಟ್ಟಿದ ಹೆಣ್ಣಿಗೆ ಮಾತ್ರ. ಅದಕ್ಕಾಗಿ ಕೊಟ್ಟ ಆಸ್ತಿಯೂ ಅವಳಿಗೇ. ಗಂಡಿಗೆ ಮಾತ್ರ ಅದರಲ್ಲಿ ಯಾವ ಹಕ್ಕೂ ಇಲ್ಲ. ಅವರು ಬೇರೆ ಕಸಬು ಮಾಡಿಕೊಂಡೇ ಬದುಕಬೇಕು.

ಇವರ ವಿವಾಹ ಮೊದಲಾದ ಸಂಪ್ರದಾಯಗಳು ಹಿಂದೂ ಧರ್ಮದಲ್ಲಿಯಂತೇ ಇವೆ. ಅದರಲ್ಲಿಯೂ ಯಾವ ದೇವರ ಸೇವೆಯಲ್ಲಿರುವರೋ ಆ ದೇವರ ಭಕ್ತಾದಿಗಳು ಅನುಸರಿಸುವ ರೀತಿಯನ್ನೇ ಇವರೂ ಅನುಸರಿಸುತ್ತಾರೆ. ಹೆಣ್ಣು ಮೈನರೆದಾಗಲೇ ಅವಳನ್ನು ದೇವದಾಸಿಯನ್ನಾಗಿ ಮಾಡುವ ನಿಶ್ಚಿತಾರ್ಥದ ಕಾರ್ಯಗಳನ್ನು ಆ ದೇವರೆದುರೇ ಮಾಡುತ್ತಾರೆ. ಮುಂದೆ ದೊರೆಯನ್ನೊ, ಶ್ರೀಮಂತನನ್ನೋ ಹಿಡಿದು ಅವನಿಂದ ಲಗ್ನಕ್ಕೆ ಬೇಕಾಗುವ ಹಣವನ್ನು ಪಡೆದು ಒಂದು ತಬಲಾ, ಡಗ್ಗಾ ಇಲ್ಲವೆ ಹತಾರದ (ಖಡ್ಗ) ಜೊತೆ ಅವಳ ಮದುವೆ ಮಾಡುತ್ತಾರೆ. ಅರಿಷಿಣ, ಕುಂಕುಮ ಅರತಕ್ಷತೆ ಎಲ್ಲವೂ ನೆರವೇರುವುದು. ಈ ಮದುವೆಗೆ ದೈವದವರೆಲ್ಲ ಪಾಲ್ಗೊಳ್ಳುತ್ತಿದ್ದರು. ಮುಂದೆ ಅವಳು ಆ ಶ್ರೀಮಂತನೊಬ್ಬನ ಜೊತೆಗೇ ತನ್ನ ಸಂಬಂಧವಿಟ್ಟುಕೊಂಡಿರುತ್ತಿದ್ದಳು. ಅವನಿಗೆ ವಿಧೇಯಳಾಗಿರುತ್ತಿದ್ದಳು. ಆದರೂ ಅವಳ ಗಂಡನ ಹೆಸರು ಆ ಮಂದಿರದ ದೇವರ ಹೆಸರೆ. ಅವಳಿಗೆ ಮಾಂಗಲ್ಯ ಮೊದಲಾದ ಮುತ್ತೈದೆಯ ಲಕ್ಷಣಗಳೆಲ್ಲವೂ ಇರುತ್ತವೆ. ಅಲ್ಲದೆ ಅವಳನ್ನು ನಿತ್ಯ ಮುತ್ತೈದೆ, ಸದಾಸುಮಂಗಲೆ ಎಂದೇ ಗಣಿಸಲಾಗುತ್ತಿದೆ. ಕಾರಣ ಅವಳು ದೇವರ ಹೆಂಡತಿಯಲ್ಲವೆ? ಊರಿನ ಪ್ರಮುಖರ ಮದುವೆಗಳಲ್ಲಿ ಇವರಿಂದಲೇ ತಾಳಿ ಪೋಣಿಸಲಾಗುತ್ತಿತ್ತು. ಅಲ್ಲದೆ ಅವಳನ್ನು ಗೌರವದಿಂದ ಕಂಡು, ಹೆಣ್ಣು ಮಕ್ಕಳು ಅವಳ ಕಾಲಿಗೆ ನಮಸ್ಕರಿಸುವ ಪದ್ಧತಿಯೂ ರೂಢಿಯಲ್ಲಿತ್ತು. ದೀಪ ಹಚ್ಚಿದೊಡನೆ ಮುತ್ತೈದೆಯರು ಅವಳ ಕಾಲು ಬಿದ್ದು ತಮ್ಮ ಮುತ್ತೈದೆತನಕ್ಕೆ ರಕ್ಷೆ ಬಯಸುತ್ತಿದ್ದರು. ದೇವಾಲಯಗಳಲ್ಲಿರುವ ಇವರು ಅಲ್ಲಿ ಬರುವ ಅತಿಥಿ ಅಭ್ಯಾಗತರ ಜೊತೆಗೂ ಶರೀರ ಸಂಬಂಧ ಬೆಳೆಸಬಹುದಾಗಿತ್ತೆಂಬ ಹೇಳಿಕೆಯೂ ಇದೆ. ಆದರೆ ಅದನ್ನು ವ್ಯಭಿಚಾರವೆಂದು ಯಾರೂ ಪರಿಗಣಿಸುತ್ತಿರಲಿಲ್ಲವಂತೆ! ಇವರಿಗೆ ಸಂತತಿ ತೀರ ಕಡಿಮೆ. ಅದಕ್ಕೇನಾದರೂ ಮದ್ದು ಮಾಡಿಕೊಳ್ಳುತ್ತಿರಬಹುದೆಂಬ ಶಂಕೆಗಳೂ ಇವೆ. ಆದರೆ ಅದನ್ನು ಈಗಿನವರಾರೂ ದೃಢಪಡಿಸುವದಿಲ್ಲ.

ದೇವದಾಸಿಯರಲ್ಲಿ ಕೆಲವರಾದರೂ ಬ್ರಹ್ಮಚಾರಿಗಳಾಗಿದ್ದಿರಬಹುದಾದ ಸಾಧ್ಯತೆಯನ್ನು ಅಲ್ಲಗಳೆಯಲಾಗದು. ಲೈಂಗಿಕ ಸಂಬಂಧ ಇಟ್ಟುಕೊಳ್ಳದೆ ದೇವರನ್ನೇ ನಂಬಿ,

ಕಲಾರಾಧನೆಯಲ್ಲಿ ತಮ್ಮ ಜೀವನ ಸವೆಯಿಸಿದವರ ಉದಾಹರಣೆಗಳು ಕೆಲವಿವೆ. ಯಮುನವ್ವಾ ದಾಸರ ಬಲಕುಂದಿ, ಗೋಕಾಕ ತಾಲೂಕಿನ ಹೊನಕುಪ್ಪಿಯವಳು: ಕೌಜಲಗಿ ನಿಂಗಮ್ಮ ಮುಂದೆ ಮಹಲಿಂಗಪುರದ ಪ್ರಖ್ಯಾತ ಪಾರಿಜಾತದ ನಿಂಗಮ್ಮ ಎಂದು ಹೆಸರಾದಳು. ನೋಡಿದರೆ ಜಾತಿಯಿಂದ ಹರಿಜನಳು. ಕಲೆಗಾಗಿಯೇ ಇಡೀ ಬದುಕನ್ನು ಮೀಸಲಾಗಿಟ್ಟಳು. ಇವರೀರ್ವರೂ ದೇವದಾಸಿಯರಲ್ಲ. ದೇವರಿಗೆ ಬಿಟ್ಟವರು. ಬ್ರಹ್ಮಚಾರಿಗಳಾಗೇ ಬದುಕಿದರು. ಇದನ್ನು ನೋಡಿದರೆ ದೇವದಾಸಿಯರಲ್ಲಿಯೂ ನೃತ್ಯ ಸಂಗೀತಗಳ ಆರಾಧನೆಯಲ್ಲೇ ಬದುಕನ್ನು ಸವೆಸಿರುವವರು ಕೆಲವರಾದರೂ ಇದ್ದಿರಲೇಬೇಕು.

**ಜಾತಿ** : ಇಂಥ ಜಾತಿಯವರೇ ದೇವದಾಸಿಯರಾಗುತ್ತಿದ್ದರೆಂದು ಹೇಳಲಾಗದು. ಮೊದಮೊದಲು ಸುಂದರಿಯರನ್ನು, ಕಲಾವತಿಯರನ್ನು ಮಾತ್ರ ದೇವರ ಸೇವೆಗೆ ನೇಮಿಸಿಕೊಳ್ಳುತ್ತಿರಬೇಕು. ಮುಂದೆ ಅವರದೇ ಒಂದು ಪಂಗಡವಾಗಿರಬೇಕು. ಇಂದು ಪಾತರದವರೆಂದು ಅಷ್ಟು ಹೆಸರಿರುವವರು, ಬೇರೆ ಬೇರೆ ಜಾತಿಗೆ ಸೇರಿದವರುಂಟು. ಅಲ್ಲದೆ ಇಂದು ತೇರದಾಳದಲ್ಲಿರುವ ಈರ್ವರು ದೇವದಾಸಿಯರಲ್ಲಿ ಒಬ್ಬಳು ಮುಸಲ್ಮಾನಳು ಆದರೆ ಅವಳಿಗೆ ವೀರಶೈವ ದೀಕ್ಷೆ ಕೊಟ್ಟಿದ್ದಾರೆ. ಇನ್ನೊಬ್ಬಳಂತೂ ವೀರಶೈವಳು. ಇದರಿಂದ ತಿಳಿದುಬರುವದೇನಂದರೆ ಯಾವ ಜಾತಿಯವರನ್ನೇ ನಿಯಮಿಸಿಕೊಂಡರೂ ಅವರಿಗೆ ಆ ಧರ್ಮದ ದೀಕ್ಷೆ ಕೊಟ್ಟು, ಆ ದೇವರ ಭಕ್ತರ ಧರ್ಮಕ್ಕೆ ಸೇರಿಸಿಕೊಳ್ಳುತ್ತಿರಬೇಕು. ಆದರೆ ಹರಿಜನರನ್ನು ಹೀಗೆ ತೆಗೆದುಕೊಳ್ಳುತ್ತಿರಲಿಲ್ಲವೆಂದು ಕಾಣುತ್ತದೆ. 'ನಟುವ' ಎಂಬ ವರ್ಗದವರು ಒಂದುಕಾಲಕ್ಕೆ ದೇವದಾಸಿಯರನ್ನೂ ಒದಗಿಸುತ್ತಿದ್ದರಂತೆ[೧] ಎಂದು ಹೇಳಿದ ಡಾ. ಚಿದಾನಂದ ಮೂರ್ತಿಯವರು 'ದೇವದಾಸಿಯರು ಬಂಡಾರು (ಭಂಡಾರಿ) ಜಾತಿಗೆ ಸೇರಿದವರು'[೨] ಎಂದೂ ಹೇಳಿದ್ದಾರೆ. ಉತ್ತರ ಕರ್ನಾಟಕದಲ್ಲಿ ಈ ಜಾತಿಗಳೂ ಇಲ್ಲ. ಈ ಮಾತೂ ಈ ಕಡೆಗೆ ಅನ್ವಯಿಸುವುದಿಲ್ಲ. ಭರತೇಶ ವೈಭವದಲ್ಲಿ ಬರುವ ಚಿತ್ತಮೋಹಿನಿ, ನೇತ್ರಮೋಹಿನಿ ಎಂಬ ನೃತ್ಯಗಾರ್ತಿಯರು ಈ ನಿಟ್ಟುವ ಜಾತಿಗೆ ಸೇರಿದವರೆಂದು ತಿಳಿದುಬರುತ್ತದೆ.

## ಬಸವಿಯರು ದೇವದಾಸಿಯರಲ್ಲ:

ಜನಸಾಮಾನ್ಯರಷ್ಟೇ ಅಲ್ಲ, ಇತಿಹಾಸ, ಸಮಾಜಶಾಸ್ತ್ರ, ಮಾನವಿಕ ಶಾಸ್ತ್ರದ ಹಲವಾರು ಜನ ವಿದ್ವಾಂಸರೂ ದೇವದಾಸಿಯರಿಗೂ, ಬಸವಿಯರಿಗೂ ಇರುವ ವ್ಯತ್ಯಾಸ ವನ್ನು ಗುರುತಿಸದಿರುವುದೊಂದು ಅಚ್ಚರಿಯ ಸಂಗತಿಯೇ ಸರಿ.[೩] ಮೇಲಿನ ವರ್ಗದಲ್ಲಿಯ

೧. ಡಾ. ಚಿದಾನಂದಮೂರ್ತಿ : ಗ್ರಾಮೀಣ ಪುಟ ೮೦

೨. ಅದೇ, ಪುಟ ೭೧

೩. ಬಿ. ಎಸ್. ವೆಂಕಟಲಕ್ಷ್ಮಿ : ದೇವದಾಸಿ ಪದ್ಧತಿ (ಲೇಖನ) ಸಾಧನೆ. Vol. 1.4 Nc 4 Oct.–Dec. 1975. ಪುಟ 131

ದೇವದಾಸಿ ಪದ್ಧತಿಯೇ, ಕೆಳಗಿನ ವರ್ಗದವರಲ್ಲಿ ಬಸವಿ ಬಿಡುವ ಪದ್ಧತಿಗೆ ಪ್ರೇರಣೆಯಾದಂತಿದೆ.[೧] ಈ ಬಸವಿ ಬಿಡುವ ಪದ್ಧತಿ ಕೇವಲ ಹರಿಜನರಲ್ಲಿ ಮಾತ್ರ ದಟ್ಟವಾಗಿದೆ. ಇವರೆಲ್ಲರೂ ವಿಶೇಷವಾಗಿ ದೇವಿಯ ಆರಾಧಕರು. (ಸೌದತ್ತಿಯ ಎಲ್ಲಮ್ಮ, ತುಳಜಾಪುರದ ಅಂಬಾಭವಾನಿ) ಎಲ್ಲರಿಗೂ 'ಅಮ್ಮ' ಆದಂಥ ಎಲ್ಲಮ್ಮ (Universal Godess)ನಿಗೆ ಇವರನ್ನು ಬಿಡುತ್ತಾರೆ. ತಾಯಿ ತಂದೆ ವೈಯಕ್ತಿಕ ಕಾರಣಕ್ಕೆ ಎಲ್ಲಮ್ಮನಿಗೆ ಹನುಮಂತ ದೇವರಿಗೆ ಹರಕೆ ಹೊರುತ್ತಾರೆ. ಹುಟ್ಟಿದ ಹೆಣ್ಣು ಮಗುವಿಗೆ ರೋಗರುಜಿನಗಳಾದರೆ, ಈ ಮಗು ಬದುಕಿದರೆ 'ನಿನಗೆ' ಬಿಡುವುದಾಗಿ ಬೇಡಿಕೊಳ್ಳುತ್ತಾರೆ. ದೊಡ್ಡವಳಾದೊಡನೆ ಅಂದಂತೆ ಮಾಡುತ್ತಾರೆ. ವಿಚಿತ್ರವೆಂದರೆ ಗಂಡು ಮಗುವಿಗೂ ರೋಗರುಜಿನಗಳಾದರೂ ಅಥವಾ ತಮಗೆ ಗಂಡು ಮಗು ಹುಟ್ಟಬೇಕೆಂದಿದ್ದರೂ, ಇದ್ದ ಹೆಣ್ಣು ಮಗುವನ್ನು ದೇವರಿಗೆ ಬಿಡುವುದಾಗಿ ಹರಕೆ ಹೊತ್ತ ಹಲವಾರು ಉದಾಹರಣೆಗಳು ಜೀವಂತವಾಗಿವೆ. ಇದು ಬರಿಯ ಮುಗ್ಧ ಭಕ್ತಿಯಾಗಿದ್ದರೆ ಗಂಡು ಮಗುವನ್ನೂ ದೇವರಿಗೆ ಬಿಡಬಹುದಾಗಿತ್ತು. ಜನ-ಸಾಮಾನ್ಯರ ಅಂಧಶ್ರದ್ಧೆಯನ್ನು ಪೂಜಾರಿಗಳೋ ಪ್ರತಿಷ್ಠಿತರೋ ದುರುಪಯೋಗಪಡಿಸಿಕೊಂಡಿರಬಹುದಾದರೂ, ಆ ಕುಟುಂಬಕ್ಕೆ ಅದು ಬದುಕಿನ ಆಸರೆಯಾಯಿತು. ಅದಕ್ಕಾಗಿ ಬರಬರುತ್ತ ದೇವರಿಗೆ ಬಿಡುವುದೇ ಒಂದು ಕಾರಣವಾಗಿ, ಬಹಳಷ್ಟು ಜನರು ಈ ಪದ್ಧತಿಗೆ ಅಂಟಿಕೊಂಡರು. ಹೀಗೆ ದೇವರಿಗೆ ಬಿಟ್ಟುಕೊಂಡು ಬಸವಿಯಾದವಳು ಯಾರು ಬೇಕಾದವರೊಡನೆ ಸಂಪರ್ಕ ಇಟ್ಟುಕೊಳ್ಳಬಹುದಾದ್ದರಿಂದ ಅದು ಅವಳ ಗಳಿಕೆಯ ಕಸಬಾಯ್ತು. ಆದಕ್ಕಾಗಿಯೇ ಬಸವಿಯರನ್ನು 'ಕಸಬೆಯರು' 'ಗಳಿಸಲಿಕ್ಕೆ ಬಿಟ್ಟವರು' ಎಂದೂ ಕರೆಯುವ ರೂಢಿಯಾಯ್ತು. ಇವರಿಗೆ ಕಲೆಯ ಗಂಧವೂ ಇಲ್ಲ. ಆದರೆ ಊರಿನ ದುರಗವ್ವ ದ್ಯಾಮವ್ವರ ಜಾತ್ರೆಯಲ್ಲಿ ಜೋಗತಿಯರ ಜೊತೆ ಇವರೂ ಹಾಡುತ್ತಾರೆ. ಅವರ ಪ್ರದರ್ಶನಕ್ಕೆ ಅದೊಂದು ವೇದಿಕೆಯಷ್ಟೆ. ವರ್ಷಕ್ಕೊಮ್ಮೆಯಾದರೂ ಇವರು 'ಗುಡ್ಡ'ಕ್ಕೆ (ಸೌದತ್ತಿ) ಹೋಗಿ ಬರುತ್ತಾರೆ.

ಹೆಣ್ಣು ದೇವರುಗಳಿಗೇ ಬಿಟ್ಟುಕೊಂಡವರಿವರಾದರೆ, ಬ್ರಹ್ಮಚಾರಿಯಾದ ಹನುಮಂತ ದೇವರಿಗೆ ಬಿಟ್ಟುಕೊಂಡವರೂ ಹಲವರಿದ್ದಾರೆ. ದೇವಿಗೆ ಬಿಟ್ಟುಕೊಂಡವರಿಗೆ ಗಂಡಸಿಲ್ಲ. ಆದರೆ ಹನುಮಂತ ದೇವರಿಗೆ ಬಿಟ್ಟುಕೊಂಡವರಿಗೆ ಆ ಬ್ರಹ್ಮಚಾರಿಯೆ ಗಂಡನಾಗುತ್ತಾನೆ. ಅವನ ಪಾದಕ್ಕೆ ಪೂಜಾರಿ ಮುಟ್ಟಿಸಿಕೊಟ್ಟ ತಾಳಿ

---

೧. ದೇವರಿಗೆ ಬಸವನನ್ನು ಬಿಟ್ಟು 'ಗೂಳಿ' ಎಂದೂ, ಆಕಳನ್ನು ಬಿಟ್ಟು 'ಕಪಲಿ' ಎಂದೂ ಕರೆಯುತ್ತಾರೆ. ಅವು ಇಡೀ ಸಮಾಜಕ್ಕೇ ಸೇರುತ್ತವೆ. ಹಾಗೆಂದು ಗುರುತಿಸಲು ಅವರ ಹಿಂಗಾಲು ತೊಡೆಗೆ ಲಿಂಗದ ಗುರುತಿನ 'ಬರೆ' ಹಾಕುತ್ತಾರೆ. ಹನುಮಂತ ದೇವರಿಗೆ ಬಿಟ್ಟ ಬಸವಿಯರಿಗೂ ತೋಳಿಗೆ 'ಮುದ್ರೆ' ಹಾಕುತ್ತಾರೆ.

ಯನ್ನು ಇವರು ಕಟ್ಟಿಕೊಳ್ಳುತ್ತಾರೆ. ಇದರಿಂದ ಊರಿನ ಹೊಲಗಳ ರಾಶಿಯ ಕಾಲಕ್ಕೆ 'ಆಯ' ಪಡೆಯುವ ಹಕ್ಕು ಪಡೆಯುತ್ತಾರೆ. ಇವರು ಪ್ರತಿ 'ಕಣ'ದಲ್ಲಿ 'ಗೋಪಾಳ' ಬುಟ್ಟಿಯನ್ನಿಟ್ಟು ಬರುತ್ತಾರೆ. ರೈತರು ಅದರಲ್ಲಿ ಹಾಕಿಟ್ಟ ಕಾಳನ್ನು ಇವರು ಸಂಗ್ರಹಿಸಿ ಕೊಳ್ಳುತ್ತಾರೆ. ಈಗ ಅದೆಲ್ಲ ನಿಂತು ಹೋಗಿದೆ. ಅವರೀಗ ಸೂಳೆಯರಾಗಿ ಪಟ್ಟಣ ಸೇರಿ ಹಣಗಳಿಸುವ ಹಾದಿ ಮಾಡಿಕೊಂಡಿದ್ದಾರೆ. ಈಗ ಅವರನ್ನು 'ಎಲ್ಲಮ್ಮ'ನ ಆರಾಧಕರೆನ್ನುವುದಕ್ಕಿಂತ 'ಲಕ್ಷ್ಮಿ'ಯ ಆರಾಧಕರೆನ್ನುವುದು ಹೆಚ್ಚು ಸಮಂಜಸವಾದೀತು.

**ಇವರಲ್ಲಿಯ ವ್ಯತ್ಯಾಸ :**

ಇವರಲ್ಲಿರುವ ವ್ಯತ್ಯಾಸವನ್ನು ಹೀಗೆ ಹೇಳಬಹುದು :

೧) ದೇವದಾಸಿಯರು ಆಳರಸರಿಂದಲೊ ದೇವಾಲಯದ ಆಡಳಿತ ವರ್ಗ ದಿಂದಲೋ ನೇಮಿಸಲ್ಪಟ್ಟವರು. ಅದಕ್ಕಾಗಿ ದೇವಾಲಯದ ಆದಾಯದಲ್ಲಿ ಅವರಿಗೆ ಪಾಲು ಸಿಕ್ಕುತ್ತಿತ್ತು.* ಇಲ್ಲವೆ ದೇವಾಲಯದ ಕೆಲವು ಭೂಮಿಯನ್ನು ಅವರಿಗೆ ಬಿಟ್ಟುಕೊಡುತ್ತಿದ್ದರು. ಸಮಾಜ ಇದನ್ನು ಒಪ್ಪಿ ಅವರನ್ನು ಗೌರವದಿಂದ ಕಾಣುತ್ತಿತ್ತು.

ಬಸವಿಯರು ಯಾವುದೊ ಒಂದು ವೈಯಕ್ತಿಕ ಕಾರಣಕ್ಕಾಗಿ ಹರಕೆ ಹೊತ್ತ ಅವರ ತಂದೆತಾಯಿಗಳಿಂದ ದೇವರಿಗೆ ಬಿಟ್ಟವರು. ಇದಕ್ಕೆ ಸಾಮಾಜಿಕ ಒಪ್ಪಿಗೆಯ ಕಾರಣವಿಲ್ಲ. ಇವರಿಗೆ ಸೇವಾಭಾವಕ್ಕಿಂತ ಗಳಿಕೆಯ ಬುದ್ಧಿ ಅಧಿಕ.

೨) ದೇವದಾಸಿಯರು ನೃತ್ಯ ಸಂಗೀತ ಕಲೆಗಳನ್ನು ರೂಢಿಸಿಕೊಂಡವರು. ದೇವರಿಗೆ ಅದರ ನೈವೇದ್ಯ ಸಲ್ಲಿಸುತ್ತಿದ್ದರು.

ಬಸವಿಯರು ಕಲೆಯ ಸೋಂಕಿಲ್ಲದವರು, ಎನ್ನುವುದಕ್ಕಿಂತ, ಕಲೆಯ ಅವಶ್ಯಕತೆ ಇಲ್ಲದವರು.

೩) ಬೇರೆ ಬೇರೆ ಜಾತಿಯವರು ದೇವದಾಸಿಯರಿದ್ದ ಉದಾಹರಣೆಗಳಿವೆ. ಹರಿ ಜನರು ಮಾತ್ರ ಬಸವಿಯರಾಗಿದ್ದುದು ಕಂಡುಬರುತ್ತಿದೆ.

೪) ದೇವದಾಸಿಯರು ವಿಶೇಷವಾಗಿ ಒಬ್ಬನ ಜೊತೆಗೆ, ಅಥವಾ ಸೀಮಿತ ಸಂಬಂಧ ಇಟ್ಟುಕೊಂಡಿರುತ್ತಿದ್ದರು.

ಬಸವಿಯರು ಬೇಕಾದವರ ಜೊತೆ ಸಂಬಂಧವಿಟ್ಟುಕೊಂಡಿರುತ್ತಾರೆ. ಒಟ್ಟಿನಲ್ಲಿ ದೇವದಾಸಿ ಅಥವಾ ಪಾತರದವರು ಬೇರೆ, ಬಸವಿಯರು ಬೇರೆ ಎನ್ನುವುದು ಖಚಿತ.

[೧೧]

ಇವರೀರ್ವರ,– ಅಂದರೆ ದೇವದಾಸಿಯರ ಸಂಗೀತ ನೃತ್ಯ ಅನುಸರಿಸಿ. ಬಸವಿಯರ ವೇಶ್ಯಾವೃತ್ತಿಯನ್ನು ಕೈಕೊಂಡ ಮುಸಲ್ಮಾನ ಮಹಿಳೆಯರು ಈಗಲೂ ಹೈದರಾಬಾದ ಕರ್ನಾಟಕ ಮತ್ತು ಅದರ ಗಡಿ ಪ್ರದೇಶವಾದ ಆಂಧ್ರದ ಕೆಲವು ಪ್ರದೇಶಗಳಲ್ಲಿದ್ದಾರೆ. ಅವರಿಗೆ 'ನಾಚವಾಲಿ' ಎನ್ನುವರು. ಮದುವೆಗಳಲ್ಲಿ ಇವರನ್ನು ಕರೆಸಿ ಈಗಲೂ ನಾಚ (ನೃತ್ಯ) ಮಾಡಿಸುತ್ತಾರೆ. ಇದೆಲ್ಲ ದೇವದಾಸಿ ಪದ್ಧತಿಯ ತೀರ ವಿಕೃತಿ ರೂಪ. ಇವರನ್ನು ದೇವದಾಸಿಯರೆನ್ನುವರಿದ್ದಾರೆ. ಆದರೆ ಈ ಅಭಿಪ್ರಾಯ ತೀರ ತಪ್ಪು.

## ಬದಲಾದ ಸಮಾಜದಲ್ಲಿ :

ಕಾಲ ಬದಲಾಯ್ತು, ಧರ್ಮದಲ್ಲಿ ದೇವರಲ್ಲಿ ನಂಬುಗೆ ಕಡಿಮೆಯಾಯ್ತು. ಕಲೆಗೆ ಬೆಲೆ ಇಲ್ಲದಾಯ್ತು. ದೇವಾಲಯಗಳ ಆದಾಯ ನಿಂತು ಹೋಯ್ತು. ಎಷ್ಟೋ ದೇವಾಲಯಗಳ ದೇವರ ಪೂಜೆಯೂ ನಿಂತಿತು. ಇದರಿಂದಾಗಿ ದೇವದಾಸಿಯರಿಗೆ ಪೋಷಣೆ ತಪ್ಪಿ ಹೋಗಿ ಅವರ ಬದುಕು ದಾರುಣವಾಯ್ತು. ಪ್ರಾರಂಭದಲ್ಲಿ ಈ ಪದ್ಧತಿ ಯಾವ ಉದ್ದೇಶದ ಸಾಧನೆಗಾಗಿ ರೂಪುಗೊಂಡಿತ್ತೊ ಅಷ್ಟಕ್ಕೇ ಅದು ಸೀಮಿತವಾಗಿ ಉಳಿಯಲಿಲ್ಲ. ಪ್ರತಿಷ್ಠಿತರು–ದೇವಾಲಯದ ಆಡಳಿತಗಾರರು, ಅರ್ಚಕರು–ಇವರನ್ನು ದುರುಪಯೋಗಪಡಿಸಿಕೊಂಡರು. ಇವರನ್ನೆಲ್ಲ ತೃಪ್ತಿಪಡಿಸುವುದು ಅನಿವಾರ್ಯವಾಗಿರಬೇಕು. ಅವರ ಕೈಗೊಂಬೆಗಳಾದ ಇವರು ಸೂಳೆತನಕ್ಕಿಳಿಯುವುದೂ ಅನಿವಾರ್ಯವಾಗಿರಬೇಕು. ಆಗ ಇವರ ಕಲೆಗಿಂತ ಅಂಗ ಸೌಂದರ್ಯಕ್ಕೇ ಅಧಿಕ ಬೆಲೆಬರಹತ್ತಿತು. ದೇವರ ಹೆಣ್ಣುಗಳೆಂದು ಇವರನ್ನು ಮದುವೆಯಾಗಲು ಯಾರೂ ಮುಂದೆ ಬರಲಿಲ್ಲ. ಈ ಪಾತರದವರನ್ನು ಸಮಾಜ ಸೂಳೆಯರಿಗೆ ಸಮಾನವಾಗಿ ಕಂಡಿತು. ಮೊದಲಿನ ಗೌರವ ಮಣ್ಣುಗೂಡಿತು. ಇವರ ಕಾಲಲ್ಲಿಯ ಕಲೆ ಕರಗಿತು; ಕಂಠದಲ್ಲಿಯ ಸಂಗೀತ ಇಂಗಿತು. ಅದರೂ ಆಸಕ್ತಿಯುಳ್ಳವರು ಕಲೆಯ ಸಾಧನೆಯಲ್ಲಿ ನಿರತರಾಗಿ, ಸಂಗೀತ ವಿದುಷಿ, ನಾಟ್ಯರಾಣಿಯರಾಗಲು ಯತ್ನಿಸಿ ಕಲೆಯನ್ನು ಬದುಕಿಸಿದರು. ಇನ್ನು ಕೆಲವರು ನಾಟಕ ಕಂಪನಿ ಸೇರಿ, ಕಲೆಯ ನೆಪದಲ್ಲಿ ಬದುಕಿನ ಹೋರಾಟ ನಡೆಸಿದರು. ಇವರೆ ಬಹಳಷ್ಟು ಜನ ಊರಿನ ಶ್ರೀಮಂತರ ಉಪಪತ್ನಿಯರಾಗಿ ಬದುಕಹತ್ತಿದರು. ಅವನನ್ನು ಮದುವೆ ಗಂಡನಿಗಿಂತ ಪ್ರೀತಿ ಗೌರವದಿಂದ ಕಂಡರು. ಕಾನೂನು ಬಾಹಿರವಾದ ಈ ಸಂಬಂಧ ಹರಿದು ಹೋಗಬಾರದೆಂದು ಪಾತ್ರಿವ್ರತ್ಯ ವಹಿಸಿ ಬದುಕಿದರು. ಅಷ್ಟಾದರೂ ಕೂಡಿಕೊಂಡ ವ್ಯಕ್ತಿಯ ಆರ್ಥಿಕ ಸ್ಥಿತಿ ಕೆಟ್ಟು, ಇವರನ್ನು ಪೋಷಿಸಲು ಅಸಮರ್ಥನಾಗಿ ದೂರ ಸರಿದಾಗ ಅಥವಾ ತೀರಿಕೊಂಡಾಗ, ಇನ್ನೊಬ್ಬನನ್ನು ಕೂಡಿಕೊಂಡರೋ, ಅಥವಾ ಹಿಂದಿನ ಸಂಬಂಧವನ್ನು ಬಿಟ್ಟುಕೊಡದೋ ಗೌರವಸ್ಥರಾಗೇ ಬದುಕುವ ಹೋರಾಟ ನಡೆಸಿದ ಎಷ್ಟೋ ಉದಾಹರಣೆಗಳೂ ಸಿಕ್ಕುತ್ತವೆ. ಈ ಪಾತರ,

ಹಾದರವಾಗಿ ಇದಕ್ಕೆ ಕೀಳಾರ್ಥ ಅನ್ವರ್ಥಕವಾದಾಗ, ತಮ್ಮ ಅಷ್ಟ ಹೆಸರನ್ನೂ ಬದಲಿಸಿ ಕೊಂಡು ಪರಂಪರೆಯ ಕಲಂಕ ಕಳೆದುಕೊಳ್ಳಲೆತ್ನಿಸಿದರು.

## ದೇವದಾಸಿಯರು ಸುಸಂಸ್ಕೃತರು :

ಅವರ ಶೀಲ ಶಂಕಿಸುವಂತಾದರೂ ಸಂಸ್ಕೃತಿಯ ಮಟ್ಟಮಾತ್ರ ಕೆಳಗಿಳಿಯಲಿಲ್ಲ. ಅವರಲ್ಲಿ ಶಿಸ್ತು, ಸ್ವಚ್ಛತೆ ಮರ್ಯಾದಸ್ಥರಾಗಿಯೇ ಬದುಕಬೇಕೆಂಬ ಅವರ ಹೋರಾಟ ಇನ್ನೂ ನಿಂತಿಲ್ಲ. ಸಮಾಜ ಅವರನ್ನು ಸೂಳೆಯರಿಗೆ ಸರಿಸಮಾನವಾಗಿ ಕಂಡರೂ ಅವರು ಸೂಳೆಯರೆನ್ನಿಸಿಕೊಳ್ಳದಂತೆ ಬದುಕಲು ಶ್ರಮಿಸುತ್ತಿದ್ದಾರೆ. ಕಂಡವರ ಜೊತೆ ಸಂಬಂಧ ಇಟ್ಟುಕೊಳ್ಳುವುದನ್ನು ಅವರು ಈಗಲೂ ವಿರೋಧಿಸುತ್ತಾರೆ. ಆದರೆ ಬದುಕು ಅನಿವಾರ್ಯವಾದಾಗಿನ ಮಾತು ಬೇರೆ. ಅವರಲ್ಲಿ ನೃತ್ಯ ಸಂಗೀತಗಳ ಅಭಿರುಚಿ ಇನ್ನೂ ಸಂಪೂರ್ಣವಾಗಿ ಸತ್ತಿಲ್ಲ. ಆದರೆ ಅದಕ್ಕೆ ಸರಿಯಾದ ಪ್ರೋತ್ಸಾಹವಿಲ್ಲ. ಧರ್ಮದಲ್ಲಿ ಅಚಲ ವಿಶ್ವಾಸ, ದೇವರಲ್ಲಿ ಭಕ್ತಿ ಅವರಲ್ಲಿನ್ನೂ ಬತ್ತಿಲ್ಲ. ಅವರನ್ನು ಕಂಡಾಗ ಗೌರವ ಹುಟ್ಟು ವಂತೆ ಅವರು ಬದುಕಿದ್ದಾರೆ. ಸಮಾಜದ ದೃಷ್ಟಿಯಲ್ಲಿ ಅವರದು ಕಾನೂನು ಬಾಹಿರ ಸಂಬಂಧವಾದರೂ, ದೇವರೇ ಕೂಡಿಸಿಕೊಟ್ಟ ಸಂಬಂಧವಿದೆಂದು ಅವರು ಶ್ರದ್ಧೆಯಿಂದ ಬದುಕಿದ್ದಾರೆ ಒಲಿದು ಬಂದವನನ್ನು ಓಲೈಸುವುದೇ ಅವರ ಕರ್ತವ್ಯವೆಂದಾಗ, ಅವರ ಊಟ ಉಡಿಗೆಯಲ್ಲಿ ಉತ್ತಮ ಮಟ್ಟ ಕಾಯ್ದುಕೊಂಡು ಬಂದಿದ್ದಾರೆ. ಕೈಹಿಡಿದವನ ತೃಪ್ತಿಗಾಗಿ ಕೆಲವರು ಮಾಂಸಾಹಾರ ಮಾಡುತ್ತಿರುವರಾದರೂ ಅದು ಅವರಿಗೆ ನಿಷಿದ್ಧ ವೆಂದು ಹೇಳುತ್ತಾರೆ. ಅವರು ಬೇರೆ ಯಾವ ಉದ್ಯೋಗವನ್ನೂ ಮಾಡುವದಿಲ್ಲ, ಹೆಣ್ಣುಮಕ್ಕಳಿಗೆ ನೃತ್ಯ ಸಂಗೀತ ಕಲಿಸುವ ಹವ್ಯಾಸವುಳ್ಳವರಾಗಿದ್ದಾರೆ. ಅವಳನ್ನು ಕೂಡಿಕೊಂಡವ ಶ್ರೀಮಂತ, ಗೌರವಸ್ಥ ಎರಡೂ ಆಗಿದ್ದರೆ ಮಕ್ಕಳನ್ನು ತನ್ನ ಹೆಂಡತಿಯ ಮಕ್ಕಳ ಸರಿಸಮಾನವಾಗಿ ಬೆಳಿಸಿಕೊಂಡು ಬಂದ ಉದಾಹರಣೆಗಳೂ ಇವೆ. ಕೈ ಹಿಡಿದವ ಬಿಟ್ಟರೆ, ಸತ್ತರೆ ಅವನಿತ್ತ ಆಸ್ತಿಯಲ್ಲಿ. ಅವನ ಸ್ಮರಣೆಯೊಂದಿಗೇ ಬದುಕಿದವರೂ ಉಂಟು. ಒಟ್ಟಿನಲ್ಲಿ ಅವರು ವೇಶ್ಯೆಯರಲ್ಲ. ಆದರೆ ವೇಶ್ಯಾವೃತ್ತಿಗೆ ಈ ಪದ್ಧತಿಯೂ ಒಂದು ಕಾರಣವೆನ್ನುವ ಮಾತು ಮಾತ್ರ ಸತ್ಯ. ದೇವಾಲಯಗಳ ವಾತಾವರಣವನ್ನು ಕಲುಷಿತಗೊಳಿಸಲು ಕಾರಣವಾದ ಇನ್ನೊಂದು ಅಂಶ ದೇವದಾಸಿ ಪದ್ಧತಿ. ಹಿಂದಿ ನಿಂದಲೂ ಬೆಳೆದು ಬಂದ ಆ ಪರಂಪರೆ ರಾಷ್ಟ್ರಕೂಟರ ಕಾಲದಲ್ಲಿ ವಿಶೇಷವಾಗಿ ಪ್ರಚಲಿತ ವಾಗಿತ್ತು. ದೇವಾರ್ಚನೆಯ ವೇಳೆಯಲ್ಲಿ ಸಂಗೀತ ನೃತ್ಯಗಳ ನೈವೇದ್ಯವನ್ನೊಪ್ಪಿಸಬೇಕೆಂಬ ಕಲಾತ್ಮಕ ಭಾವನೆಯಿಂದ ಇದು ಪ್ರಾರಂಭವಾಗಿರಬಹುದು. ಆದರೆ ಅನಂತರ ಇದು ಬೇರೆಯ ದಿಕ್ಕನ್ನು ಹಿಡಿದು, ಧರ್ಮದ ಹೆಸರಿನಲ್ಲಿ ಅರ್ಚಕರ, ಮತ್ತೆ ಇತರ ಜನರ ನೈತಿಕ ಪತನಕ್ಕೆ ಕಾರಣವಾಯಿತು. ವೇಶ್ಯಾವೃತ್ತಿಗೆ ಇನ್ನೊಂದು ಹೆಸರಾಯಿತು.[೧]

---

೧. ಡಾ. ಎಚ್. ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಪುಟ ೨೦೦

**ಸೆರಗಿನ ಕೆಂಡದಲ್ಲಿ :**

ಇವರನ್ನೊಂದು ಜಾತಿ, ಜನಾಂಗವೆಂದು ಕರೆಯುವುದು ಹೇಗೆ? ಧರ್ಮದ ಹೆಸರಿನಲ್ಲಿ ಯಾವ ಯಾವ ಜಾತಿಯವರೂ ಈ ಪದ್ಧತಿಗೆ ಬಲಿಯಾದರು. ಅವರಿಗೇ ಆದ ರೀತಿ, ನೀತಿ, ಬದುಕಿನ ವಿಧಾನಗಳಿಲ್ಲ. ಬಹುಸಮಾಜದ ಕೆಲವರಿಗೆ ಇದೊಂದು ವೃತ್ತಿಯಾಯಿತಷ್ಟೆ.

ಧರ್ಮ ಸರ್ವಾಧಿಕಾರಿಯಾಗಿದ್ದಾಗ ಶಕ್ತಿಹೀನ ಸಮಾಜ ಇವರನ್ನು ಗೌರವಸ್ಥರ ಗದ್ದುಗೆಗೇರಿಸಿತು. ಸಾಮಾಜಿಕ ಪ್ರಜ್ಞೆ ಧರ್ಮಕ್ಕಿಂತ ಹಿರಿದಾಗಹತ್ತಲು, ಇವರ ವೃತ್ತಿಯನ್ನು ದುರುಪಯೋಗಪಡಿಸಿಕೊಳ್ಳಹತ್ತಿ ಇವರನ್ನು ತೀರ ಕೀಳಾಗಿ ಕಾಣುವ ಸೂಕ್ಷ್ಮತೆಯನ್ನು ಸಮಾಜ ಬೆಳೆಸಿಕೊಂಡಿತು. ಆಗ ಇವರಿಗೆ ಬದುಕು ಉಸುರುಗಟ್ಟುವಂತಾಗಿರಬೇಕು. ನಾವು ಧರ್ಮದ ಬಲಿಪಶುಗಳೆಂಬ ಪ್ರಜ್ಞೆಯೂ ಅವರಲ್ಲಿ ಮೂಡಹತ್ತಿತು. ಜೊತೆಗೆ ಧರ್ಮದ ಆಸರೆಯೂ ತಪ್ಪಿತು. ಸಮಾಜದಲ್ಲಿ ತಮ್ಮ ಗೌರವ ಕಳೆದುಕೊಳ್ಳದೆ ಬದುಕುವ ಹಲವಾರು ಮಾರ್ಗ ಹುಡುಕಹತ್ತಿದರು. ಪತ್ನಿಯರಾಗುವ ಅವಕಾಶ ಅವರಿಗಿರದಿದ್ದರೂ, ಉಪಪತ್ನಿಯರೆನ್ನಿಸಿಕೊಂಡಾದರೂ ಬದುಕುವ ನಿರ್ಧಾರ ಮಾಡಿದರು. ಆದರೂ ಇವರನ್ನು 'ಇಟಗೊಂಡವರು'[೧] ಎಂದು ಸಮಾಜ ಬೇರೆಯಾಗಿಯೇ ಗುರುತಿಸಿತು. ಕೆಲವರು ದೀಕ್ಷೆ ತೆಗೆದುಕೊಂಡು, ಸುಂದರಿಯರಾದವರು ಅಂತರ್‌ಜಾತಿಯ ವಿವಾಹವಾಗಿ ಸಾಮಾಜಿಕ ರಕ್ಷೆ ಹುಡುಕಿದರು. ಅವರಿಂದು ಸಮಾಜದಲ್ಲಿ ಬೆರೆತು ಬೇರ್ಪಡಿಸದ ಸ್ಥಿತಿಗೆ ಬಂದಿದ್ದಾರೆ. ಹಿಂದಿನ ತಲೆಮಾರಿನ ಕಹಿಯನ್ನು ಕನಸೆಂದು ಮರೆಯಲೆತ್ನಿಸುತ್ತಿದ್ದಾರೆ. ಅಂತೆಯೇ ಅವರ ಬದುಕನ್ನು ಬಹು ದೂರದವರೆಗೆ ನೋಡುವ ಅವಕಾಶಗಳಿಲ್ಲ. ಆ ಪದ್ಧತಿಗೆ ಸೇರಿದವರೆಂದೂ ಅವರೀಗ ಒಪ್ಪುತ್ತಿಲ್ಲ. ಆದರೂ ಸೆರಗಿನ-ಕೆಂಡ ಇನ್ನೂ ಆರಿಲ್ಲ. ಸಮಾಜ ಸಂಪೂರ್ಣವಾಗಿ ಅವರನ್ನು ಸ್ವೀಕರಿಸಿಲ್ಲ. ಎಲ್ಲೆಡೆ ವೇಶ್ಯಾವೃತ್ತಿ ಪ್ರಬಲವಾಗಿ ಹಬ್ಬಿರುವ ಇಂದು ಧಾರ್ಮಿಕ ಪೋಷಣೆಯ ಜೊತೆಗೆ ಸಾಮಾಜಿಕ ಪ್ರೋತ್ಸಾಹವೂ ಇವರಿಗೆ ನಿಂತುಹೋಗಿದೆ. ಒಮ್ಮೆ ಒಳ್ಳೆಯದೆಂದು ತುಳಿದ ದಾರಿ ಕಲ್ಮುಳ್ಳಿನದೆಂದು ಖಚಿತಪಡಿಸಿಕೊಂಡು, ಮೊದಲಿನ ದಾರಿಗೆ ಅವರು ಮರಳಿ ಬಂದು ಸೇರಿದ್ದಾರೆ. ಅವರನ್ನೂ ನಮ್ಮವರೆಂದು ಸಹಾನುಭೂತಿ ತೋರಿಸಿ, ನಾಗರಿಕ ಸಮಾಜದ ಎಲ್ಲ ಸಂಬಂಧಗಳಿಗೂ ಅವರು ಅರ್ಹರೆಂದು ತಿಳಿಯಲು ನಮ್ಮ ಸಾಮಾಜಿಕ ಪ್ರಜ್ಞೆಗೆ ಇನ್ನಷ್ಟು ವ್ಯಾಪಕತೆ ಬರಬೇಕಾಗಿದೆ.

---

೧. 'ಇಟಗೊಂಡವರು' ಎನ್ನುವ ಅಡ್ಡ ಹೆಸರಿನ ಮನೆತನಗಳಿವೆ. ಇವರನ್ನು ಇಟ್ಟುಕೊಂಡವರಿಗೂ ಈ ಹೆಸರು ಬಂದಿರುವ ಸಾಧ್ಯತೆಗಳಿವೆ.

# ದಾಸರು

ಬಿ. ವ್ಹಿ ಗುಂಜೆಟ್ಟಿ

**ಪೀಠಿಕೆ :**

ಕನ್ನಡ ಜಾನಪದ ಬದುಕು ವಿಸ್ತಾರವಾಗಿದೆ ಮತ್ತು ವೈವಿಧ್ಯಪೂರ್ಣವಾಗಿದೆ. ಅಂಥ ಜಾನಪದ ಜನಾಂಗದ ಸಂಸ್ಕೃತಿಯನ್ನು ಅಧ್ಯಯನ ಮಾಡುವಾಗ, ಆ ಜನಾಂಗಗಳ ಜೀವನವನ್ನು ಅಭ್ಯಾಸಮಾಡುವುದು ಅನಿವಾರ್ಯವಾಗಿದೆ. ಜಾನಪದದ ಹಲವು ಜನಾಂಗಗಳಲ್ಲಿ ದಾಸರು ಒಬ್ಬರು. ದಾಸರಾಟದಿಂದ ಜನತೆಯ ಹೃನ್ಮನಗಳನ್ನು ಸೂರೆಗೊಂಡ ಅವರ ಜೀವನ ಕುತೂಹಲಭರಿತವಾಗಿದೆ. ಅಭ್ಯಾಸಾರ್ಹವಾಗಿದೆ.

ದಾಸರೆನ್ನುವುದು ಒಂದು ಸಾಂಸ್ಕೃತಿಕ ಹಿನ್ನೆಲೆಯನ್ನು ಒಳಗೊಂಡ ಒಂದು ಜನಾಂಗವಾಗಿದೆ. ಉತ್ತರ ಕರ್ನಾಟಕ ಅನೇಕ ಕಡೆಗಳಲ್ಲಿ ಹಾಗೂ ದಕ್ಷಿಣದಲ್ಲೂ 'ದಾಸ'ರೆಂಬ ಜನಾಂಗದ ಅನೇಕ ಕುಟುಂಬಗಳುಂಟು. ಅವರ **ಮೂಲ** ಒಂದೇ ಆದರೂ ಪ್ರಾದೇಶಿಕ ಪ್ರಭಾವಗಳಿಂದ ಅವರ ಜೀವನ ವಿಧಾನಗಳಲ್ಲಿ ಹಲ-ಕೆಲವು ವ್ಯತ್ಯಾಸಗಳನ್ನು ಕಾಣುವೆವು.

**ದಾಸ ಮೂಲ :** ಯಾವುದೇ ಜನಾಂಗ ತನ್ನ ಹಿರಿಮೆ–ಗರಿಮೆಗಳನ್ನು ಪ್ರತಿಪಾದಿಸುವಾಗ ತನ್ನ ಮೂಲವನ್ನು ಶ್ರೇಷ್ಠ ಮುನಿಕುಲೋತ್ಪನ್ನರಿಂದ ಆಗಿದೆಯೆಂದು ಅಭಿಮಾನದಿಂದ ಬೀಗಿ ಹೇಳಿಕೊಳ್ಳುವುದು ಸಹಜಸ್ವಾಭಾವಿಕವಾಗಿದೆ.

ಅದಕ್ಕೆ ದಾಸರು ವ್ಯತಿರಿಕ್ತರಾಗಿಲ್ಲ. ದಾಸರ ಮೂಲಪುರುಷ ಅಜಾಮಿಳನೆಂದು ಒಂದು ಆಖ್ಯಾಯಿಕೆಯುಂಟು. ಅಜಾಮಿಳನೆಂಬ ಒಬ್ಬ ಕನ್ಯಾಕುಬ್ಜದಲ್ಲಿದ್ದ ಬ್ರಾಹ್ಮಣ ಮಾತಾಪಿತೃಗಳನ್ನು. ಧರ್ಮಪತ್ನಿಯನ್ನು ಪರಿತ್ಯಾಗಮಾಡಿ ಶೂದ್ರ ಸ್ತ್ರೀ ಸಂಪರ್ಕ ಮಾಡಿ ಅನೇಕ ಮಕ್ಕಳನ್ನು ಹೊಂದಿದನು. ಆ ಮಕ್ಕಳೇ 'ದಾಸಕುಲ'ದವರಾದರೆಂದು

ಹೇಳುವುದುಂಟು. ಇದರಂತೆಯೇ ಇನ್ನೂ ಒಂದು ಆಖ್ಯಾಯಿಕೆ ಇದ್ದು, ಅದರಲ್ಲಿ ವೈಷ್ಣವ ಸಂತನಾದ ಏಕಾಂಗರಂಗಸ್ವಾಮಿಯು ಬಣಜಿಗ ಶಿಷ್ಯ ಹಾಗೂ ಓರ್ವ ಕುರುಬರ ಹೆಂಗಳೆ ಇವರ ಸಂತತಿಯುವರೆಂದು ಹೇಳಲಾಗುತ್ತದೆ. ಕಂಚಿ ತಾತಾಚಾರ್ಯನೇ ತಮ್ಮ ಮೂಲಪುರುಷನೆಂದು ಹೇಳುವ ಒಂದು ಗುಂಪೂ ಉಂಟು.

**'ದಾಸರ' ಕುರಿತು ವಿವಿಧ ಅಭಿಪ್ರಾಯಗಳು :** ಸಂಸ್ಕೃತ ಗ್ರಂಥಗಳಲ್ಲಿ ದಾಸರನ್ನು ದಸ್ಯುಗಳೆಂದು ಕರೆಯಲಾಗಿದೆ. ಆರ್ಯರನ್ನು ಪ್ರತಿಭಟಿಸಿದ ದ್ರಾವಿಡರೇ ದಸ್ಯುಗಳು ಎಂಬ ವಿವರಣೆಯಿದೆ. ಇವರನ್ನು 'ನಟ್ಟು' ಜನಾಂಗವನ್ನು ಹೋಲುವ ಜನರೆನ್ನಲಾಗಿದೆ. ಕ್ರೂಕ್ ಎಂಬ ವಿದ್ವಾಂಸರು ಇವರು ಜಿಪ್ಸಿಯಂತಹ ಒಂದು ಜನಾಂಗ, ಇವರು ನೃತ್ಯಗಾರರು, ಆಟವಾಡುವ ರೂಪಜೀವಿಗಳಾದ ಜನಾಂಗ. ಈ ಜನಾಂಗದ ಉಗಮ ಎಲ್ಲಿಯದೆಂಬುದಕ್ಕೆ ಇನ್ನೂ ನಿಶ್ಚಿತ ಅಭಿಪ್ರಾಯವಿಲ್ಲವೆಂದು ಪ್ರಸ್ತಾಪಿಸಿದ್ದಾರೆ. ರಿಸ್ಲೇ ಎಂಬ ಇನ್ನೊಬ್ಬ ವಿದ್ವಾಂಸ ಇವರು ಒಂದು ಗುಡ್ಡಗಾಡು ಜನಾಂಗ. ಅಲೆಮಾರಿಗಳು ನೆಲೆಯೂರಿ ಹಿಂದುಗಳೆನಿಸಿಕೊಂಡಿರುವರೆಂದು' ಅಭಿಪ್ರಾಯಪಟ್ಟಿದ್ದಾರೆ.ಎಚ್.ಎ ಸ್ಟುವರ್ಟ ಎಂಬ ಇನ್ನೊಬ್ಬ ವಿದ್ವಾಂಸ, ದಾಸರು ಉತ್ತರ ಜಿಲ್ಲೆಗಳೊಂದರ ಸಿರಿವಂತ ಶೂದ್ರನಖ್ಯಾತ ವಂಶಜರು. ಅವನು ಮಕ್ಕಳಿಲ್ಲದ್ದರಿಂದ ತನಗೆ ಮಕ್ಕಳಾದರೆ ಅವರಲ್ಲಿ ಒಬ್ಬರನ್ನು ದೇವರ ಸೇವೆಗೆ ಅರ್ಪಿಸುವೆನೆಂದು ಬೇಡಿಕೊಂಡ. ಅನಂತರದಲ್ಲಿ ತನಗೆ ಹುಟ್ಟಿದ ಹಲವು ಮಕ್ಕಳಲ್ಲಿ ಒಬ್ಬನನ್ನು ದೇವರ ಸೇವೆಗೆಂದು 'ದಾಸನ'(ಸೇವಕ) ಎಂಬು ಹೆಸರಿಟ್ಟು ದೇವರ ಸೇವೆಗೆ ಒಪ್ಪಿಸಿದನು. ಅಂದಿನಿಂದ ದಾಸನ ತನ್ನ ತಂದೆಯ ಆಸ್ತಿಯಲ್ಲಿ ತನ್ನ ಪಾಲನ್ನು ಕಳೆದುಕೊಂಡನಲ್ಲದೆ, ಆತನ ಮಕ್ಕಳೂ ಆ ಹಕ್ಕಿಗೆ ಎರವಾಗಿ ಭಿಕ್ಷುಕರಾದರು. ಅವರೇ ದಾಸರೆಂದೆನಿಸಿದರು ಎಂದು ಅಭಿಪ್ರಾಯಪಟ್ಟಿರುವರು. ಎಂ. ಡಬ್ಲ್ಯು ಫ್ರಾನ್ಸಿಸ್ ಎಂಬವರು ಅನಂತಪುರ ಭಿಕ್ಷುಕರನ್ನು ಕುರಿತು ಬರೆಯುತ್ತ" ಒಡೆದು ಕಾಣುವ ಭಿಕ್ಷುಕರೆಂದರೆ ದಾಸರಿಗಳು. ಈ ಸಮಾಜ ಕಾಪು. ಬಲಿಜ. ಕುರುಬ, ಜೋಯ್ ಹಾಗೂ ಮಾಲ ಈ ಜಾತಿಗಳವರಿಂದ ಕೂಡಿ ಆಗಿದೆ. ದಾಸರಿಗಳೆಲ್ಲ ವೈಷ್ಣವರು. ಮನೆ-ಮನೆಯಲ್ಲಿ ಭಿಕ್ಷೆ ಬೇಡಿ ಬದುಕುವವರು. ಕೆಲ ಮನೆತನಗಳಲ್ಲಿ ಈ ವೃತ್ತಿ ಆನುವಂಶಿಕವಾಗಿರುವದೆಂದು ಪ್ರಸ್ತಾಪಿಸಿದ್ದಾರೆ.

೧೯೦೧ ರ ಮೈಸೂರು ಖಾನೇ ಸುಮಾರಿ ವರದಿಯಲ್ಲಿ ಮೈಸೂರು ಪ್ರದೇಶದೊಳಗಿನ ದಾಸರಿಗಳನ್ನು ಶೂದ್ರರ ವಿವಿಧ ವರ್ಗಗಳಿಗೆ ಸಂಬಂಧಿಸಿದ ಭಿಕ್ಷುಕರೆಂದು ಬಣ್ಣಿಸಲಾಗಿದೆ. ಯಾವುದೇ ಚಿಂತೆ ಅಥವಾ ಗಂಡಾಂತರ ಪ್ರಸಂಗದಲ್ಲಿ ಮಾಡಿದ ಪ್ರತಿಜ್ಞೆ ಬಲದಿಂದ ತಿರುಪತಿದೇವರಿಗೆ ಅರ್ಪಿತದಾಸರು ಸೇವಕರಾಗುತ್ತಾರೆ. ಅವನ ಹೆಸರಿನಿಂದ ಭಿಕ್ಷೆಬೇಡಿ ಬದುಕುತ್ತಾರೆ.

'Manual of Tanjore District' ಪ್ರಕಾರ, ಸಂಸ್ಕೃತ ದಾಸ ಎಂಬ ಶಬ್ದಕ್ಕೆ ತಮಿಳ ವಿಭಕ್ತಿ ಅನ್ ಸೇರಿ 'ದಾಸನ್' ಆಗುತ್ತದೆ ಎಂದು ಹೇಳಿ, ವೈಷ್ಣವ ಭಿಕ್ಷುಕರಿಗೆ

ಮಾತ್ರವೇ ಈ ಶಬ್ದ ಬಳಸಲಾಗುತ್ತದೆಂದು ಹೇಳಿದೆ. ಅವರು ಮುಂಜಾನೆ ಹಾಡ ಹೇಳುತ್ತ, ಬೀದಿಗುಂಟ ಸಾಗಿ ಬೆರಳಿಂದ ಚಿಕ್ಕಾದಮುಡಿ ಬಾರಿಸುತ್ತ ಶಂಖ ಊದುತ್ತ ಅಕ್ಕಿಕಾಳ ಭಿಕ್ಷೆಯನ್ನೆತ್ತುವರು ಎಂದಿದೆ.

ನೆಲ್ಲೂರು ಕೈಪಿಡಿಯಲ್ಲಿ ದಾಸರಿಪಂಥಗಳನ್ನು ತೆಲುಗುಪ್ರದೇಶ ಹಾಗೂ ಕರ್ನಾಟಕದ ಕಳ್ಳರೆಂದು ಬಣ್ಣಿಸಲಾಗಿದೆ. ಅವರು ವಾಡಿಕೆಯಾಗಿ ಕತ್ತರಿಕಳ್ಳತನ ಮಾಡುವರೆಂದಿದೆ. ಇ ಥರ್ಸ್ಟನ್‌ರ ಪ್ರಕಾರ ದಾಸರಿಗಳು ನಾನಾ ಜಾತಿಗಳಿಗೆ ಗುರುಗಳಾಗಿ ವರ್ತಿಸುವ ವೈಷ್ಣವ ಬ್ರಾಹ್ಮಣರ ಕೆಳಗಿನ ಸೇವಕರೆಂದಿದೆ. ಆರ್ಯರು ದಕ್ಷಿಣ ಭಾರತಕ್ಕೆ ಬಂದು ಇಲ್ಲಿಯವರನ್ನು ತಮ್ಮ ದಾಸರನ್ನಾಗಿ ಮಾಡಿಕೊಂಡ ಜನಾಂಗ ಇದ್ದರೂ ಇರಬಹುದು ಅಥವಾ ಆರ್ಯ–ದ್ರಾವಿಡರ ಸಂಗಮದ ಸಂತತಿಯಾದರೂ ಆಗಿರಬಹುದೆಂದು ಶ್ರೀಘೂಷದ ಅವರು ಅಭಿಪ್ರಾಯಪಡುವರು. ಶ್ರೀ ಎನ್. ತಪಸ್ವಿಕುಮಾರರು 'ದಾಸ' ಒಂದು ಬಗೆಯ ಶೂದ್ರ ಪುರೋಹಿತನೆಂದಿದ್ದಾರೆ.

**ಅಭಿಪ್ರಾಯಗಳ ತಾತ್ಪರ್ಯ :** ಈ ರೀತಿಯಾಗಿ ದಾಸರ ಮೂಲ ಮೊದಲಾದವನ್ನು ಕುರಿತ ಅನೇಕ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ವಿಚಾರಿಸಿದಾಗ ದಾಸರಿ ಎನ್ನುವದು ಯಾವುದೇ ಒಂದು ವಿಶಿಷ್ಟ ಜಾತಿಯನ್ನು ಸೂಚಿಸದೆ, ಬ್ರಾಹ್ಮಣೇತರ ಯಾವುದೇ ಜಾತಿಯವರು ದಾಸರಿಗಳಾಗಬಹುದು. ಬಣಜಿಗ, ಕುರುಬ, ಒಕ್ಕಲಿಗ, ಸಾಲ್ಯ, ತಿಗಳ, ಗೊಲ್ಲ, ಬೇಡ, ಬೆಸ್ತ, ಒಡ್ಡ, ಹೊಲೆಯ, ಮಾದಿಗ ಮೊದಲಾದ ಜಾತಿಗಳಿಂದ ಬಂದವರೂ ದಾಸರಿಗಳಾದುದಿದೆ. ಇವರು ಕೀಳುಕುಲದವರು, ಭಿಕ್ಷೆಯನ್ನು ಬೇಡಿ ಉಪಜೀವಿಸುವವರು. ಹಾಡುವುದು–ಬಾರಿಸುವುದು ಆದಿ ಕಲಾನಿಪುಣರು ಆಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಮೂಲದ ಬಗೆಗೆ ಆಖ್ಯಾಯಿಕೆಗಳಲ್ಲಿಯ ಸತ್ಯಾಂಶ ಎಷ್ಟೋ ತಿಳಿಯದು. ಆದರೂ ದೇವರ ಸೇವಕಾಕಾರ್ಯಗೈವ ಇವರು ದಾಸರಿಗಳು ಎಂದು ಖ್ಯಾತರಾಗಿರಲು ಸಾಕು.

**ದಾಸರ ಪಂಗಡಗಳು :** ಒಂದು ಜನಾಂಗ ಸ್ಥೂಲವಾಗಿ ಒಂದೇಯಾಗಿ ಕಾಣಿಸುತ್ತಿದ್ದರೂ, ಅದು ಅನೇಕ ದೃಷ್ಟಿಗಳ ಸಮಷ್ಟಿಯಾಗಿರುತ್ತದೆಂಬುದನ್ನು ಅಲ್ಲಗಳೆಯಲಾಗದು. ಜಾತಿಗಳಲ್ಲಿ ಮತ್ತೆ ಉಪಜಾತಿಗಳನ್ನು ಕಾಣುವ ಹಾಗೆ ದಾಸರಲ್ಲಿ ಹಲವು ಪಂಗಡಗಳನ್ನು ಕಾಣುತ್ತೇವೆ, ಅವು ಇಂತಿವೆ.

ಗಲ್ಲಿದಾಸರು, ಪೊಳ್ಳೀದಾಸರು, ತೆಲುಗುದಾಸರು, ಗಂಡುದಾಸರು, ತಿರುಮಲದಾಸರು, ಬ್ಯಾತದಾಸರು, ಹೊಲೆದಾಸರು, ದುಂಡಿಗೆದಾಸರು, ಗರುಡಗಂಬದದಾಸರು, ಡಂಗುರದಾಸರು, ಕಮಾರದಾಸರು, ಗೋಪಾಲಬುತ್ತಿದಾಸರು, ದೊಂಬಿದಾಸರು, ಜೆನದಾಸರು, ಅರಿದಾಸರು, ದಾಸರಿಗಳು, ಪೆದ್ದದಾಸರು, ಛತ್ರೆದಾಸರು.– ಹೀಗೆ ಹಲವಾರು

ಪಂಗಡಗಳನ್ನು ಹೆಸರಿಸಬಹುದು. ಈ ಪಂಗಡಗಳಲ್ಲಿ ಕೆಲವು ತೀರ ನಿಕಟವಾದ ಆಚಾರ-ವಿಚಾರಗಳನ್ನು ಒಳಗೊಂಡಿದ್ದು, ಎರಡೂ ಒಂದೆಯೋ ಎನ್ನುವ ಭ್ರಾಂತಿಯನ್ನು ಹುಟ್ಟಿಸುವಂತಿರುವವೆಂಬುದೂ ಕಂಡುಬರುತ್ತವೆ.

**ವಿವಿಧ ದಾಸರವೃತ್ತಿ** : ಗಲ್ಲದಾಸರು ಒಕ್ಕಲುತನವನ್ನುಮಾಡಿ ಉಪಜೀವಿಸುವರು. ಬ್ಯಾಡದಾಸರು ದೀವಿಗೆ, ಘಾಂಗಟಿ, ಶಂಖಗಳನ್ನು ಹೊಂದಿದ್ದು ಭಿಕ್ಷೆಯನ್ನು ಬೇಡಿ ಉಪಜೀವಿಸುವರು. ಹೊಲೆದಾಸರು ಗೋಪಾಳಬುಟ್ಟಿಯನ್ನು ಹಿಡಿದುಕೊಂಡು ದೇವರಪದಗಳನ್ನು ಹಾಡುತ್ತ ಭಿಕ್ಷೆಎತ್ತುವರು. ತೆಲುಗುದಾಸರು ತಮ್ಮ ಹೆಂಗಸರಿಗೆ ಗಾಯನ-ನರ್ತನಾದಿಗಳನ್ನು ಕಲಿಸಿ, ರಾತ್ರಿ ಬಯಲಿನಲ್ಲಿ ಆಟಮಾಡಿಸಿ ಆದಾಯ ಪಡೆದು ಜೀವಿಸುವರು. ಗಂಡುದಾಸರು ತೆಲುಗುದಾಸರಂತೆಯೆ ಆಟವಾಡುವರಾದರೂ ಹೆಂಗಸರನ್ನು ಬಣ್ಣಬಳಿದು ಬಯಲಿಗೆ ತರದೆ, ಗಂಡು ಹುಡುಗರಿಗೇ ಹೆಣ್ಣುಸೋಗು ಹಾಕಿ ಆಟವಾಡಿ ಆದಾಯ ಪಡೆಯುವರು. ಬ್ಯಾಡದಾಸ ಮತ್ತು ಹೊಲೆದಾಸರು ಊರಲ್ಲಿಯ ಹನುಮಂತದೇವರ ಪೂಜೆಯಕಾಲಕ್ಕೆ ಗುಡಿಗೆ ಹೋಗಿ ತಂಬೂರಿಯನ್ನು ಬಾರಿಸುತ್ತ ಹಾಡುವರು. ತಿರುಮಲದಾಸರು ರಾತ್ರಿ ಆಟಮಾಡುವರು. ಇವರ ಹೆಂಗಸರು ಪಾತರದವರ ಹಾಗೆ ನರ್ತನ-ಗಾಯನಾದಿಗಳನ್ನು ಕಲಿತು ಬೆಲೆಯುಳ್ಳವಸ್ತ್ರ ಅಲಂಕಾರಗಳನ್ನು ಧರಿಸಿ ಜಾರಕರ್ಮವನ್ನು ಮಾಡುವರು. ತೆಲುಗ ದಾಸರು ಮೂರು ನಾಮಗಳನ್ನು ಹಣೆಗೆ ಹಚ್ಚಿಕೊಂಡು, ಕರದೀಪ-ಶಂಖ, ಘಾಂಗಟೆ ತಕ್ಕೊಂಡು ವೆಂಕಟರಮಣನ ಹೆಸರು ನುಡಿಯುತ್ತ ಮನೆಮನೆ ಸುತ್ತಿ ಭಿಕ್ಷೆಯನ್ನು ಎತ್ತುವರು. ದಂಡಿಗೆ ದಾಸರು ಕಟ್ಟಿಲಗೇರ ಕುಲದವರು. ಇವರಲ್ಲಿ ಕೆಲವರು ಊರ ಹನುಮಂತದೇವರ ಪೂಜಾರಿಗಳಾಗಿರುತ್ತಾರೆ. ಇವರ ಮುಖ್ಯ ಕಸಬು ಭಿಕ್ಷೆಯನ್ನು ಬೇಡುವದಾಗಿದೆ. ದಂಡಿಗೆದಾಸರು ಹಗಲಿಗೆ ಗೋಪಾಳಬುಟ್ಟಿಯನ್ನು ತೂಗಹಾಕಿಕೊಂಡು 'ವೆಂಕಟರಮಣ ಗೋವಿಂದ ಗೋವಿಂದ' ಎಂದು ಕೂಗಿ ಭಿಕ್ಷೆಯನ್ನು ಪಡೆಯುವದುಂಟು. ದಂಡಿಗೆ ದಾಸರಿಗೆ ಎಲ್ಲಾ ಹೆಣ್ಣೇ ಹುಟ್ಟಿದರೆ ಅವರಲ್ಲಿ ಒಬ್ಬಳ ಲಗ್ನವನ್ನು ಮಾಡದೆ 'ಬಸವಿ' ಎಂದು ಬಿಡುವರು. ಅವಳು ಜಾರಕರ್ಮವಾಡಿ ಜೀವಿಸುವದುಂಟು. ಹೊಲೆದಾಸರಲ್ಲಿ ಕೆಲರು ಬ್ಯಾಡದಾಸರನ್ನು ಅನುಸರಿಸುತ್ತಿದ್ದರೂ ಬಹುಸಂಖ್ಯೆಯವರು ಯಲ್ಲಮ್ಮನ ಜೋಗತಿಗಳಂತೆ ಬುಟ್ಟಿಗೆ ಸೀರೆಸುತ್ತಿ ಅದರೊಳಗೆ ಮರಗವ್ವನ ಮುಖವಿಟ್ಟು ಭಿಕ್ಷೆ ಬೇಡುವರು. ಇವರಿಗೆ ಲಗ್ನವಿಲ್ಲ. ಹನಮಂತ ಹಾಗೂ ವೆಂಕಟರಮಣನ ದಾಸರೆಂದು ಭಿಕ್ಷೆಎತ್ತುವರು. ದಾಸರಿಗಳೆಲ್ಲ ವೈಷ್ಣವರು. ವೈಷ್ಣವ ಗುರುವಿನಿಂದ ಮುದ್ರೆಯೊತ್ತಿಸಿಕೊಂಡಾಗ ಮಾತ್ರ ಅವರಿಗೆ ಸಮಾಜದಲ್ಲಿ ದಾಸರಿಯೆಂದು ಪ್ರವೇಶಿಸಲು ಅವಕಾಶವಾಗುತ್ತದೆ. ದಾಸರಿ ಮನೆ-ಮನೆ ಭಿಕ್ಷೆಬೇಡಿ ಬದುಕುತ್ತಾನೆ. ದಾಸರಿಗೆ, ತನ್ನ ಬರವನ್ನು ಸೂಚಿಸಲು ಶಂಖ, ನಡೆದಾಗ ಬಾರಿಸುವ ಘಾಂಗಟೆ, ಎತ್ತರವಾದ ಲೋಹದ ದೀಪ, ಅದಕ್ಕೆ ಎಣ್ಣೆ ಹಾಕುವ ಪರಟೆ, ಹಗಲಿಗೆ ನೇತುಬಿಟ್ಟ ತಾಮ್ರ ಅಥವಾ

ಹಿತ್ತಾಳೆಯ ಪಾತ್ರೆ ಹೀಗೆ ಐದು ಲಾಂಛನಗಳಿರುತ್ತವೆ. ಕೊರಳಲ್ಲಿ ಚಿಕ್ಕದೊಂದು ಲೋಹದ ಮೂರ್ತಿ ಇರುತ್ತದೆ.

**ದಾಸರ ದೇವರು :** ದಾಸರು ವಿಷ್ಣು ಮತ್ತು ಹನಮಂತದೇವರ ಭಕ್ತರು. ಇವರಲ್ಲದೆ ತಿರುಪತಿ ವೆಂಕಟರಮಣ, ಪಾಂಡುರಂಗ, ಎಲ್ಲಮ್ಮ, ದುರಗವ್ವ, ಕಂಚಿತಾತ ಮುಂತಾದ ದೇವರ ಆರಾಧನೆಯನ್ನೂ ಅವರು ಮಾಡುವರು. ಕದರಮಂಡಗಿ ಹಾಗೂ ಹಂಸನೂರ ಹನಮಂತದೇವರಿಗೆ ಇವರು ಅತ್ಯಂತ ಭಕ್ತಿಯಿಂದ ನಡೆದುಕೊಳ್ಳುವರು.

ದಾಸರಿಗೆ ಅವರವೇ ಆದ ದೇವಸ್ಥಾನಗಳಿರುವದಿಲ್ಲ. 'ದಾಸ'ನೆಂದಮೇಲೆ ಎಲ್ಲ ದೇವಸ್ಥಾನಗಳೂ ನಮ್ಮವೆ, ಎಲ್ಲರಿಗೂ ದಾಸರೇ ಎಂದು ಹಲವು ದಾಸಪಂಗಡದವರು ಹೇಳುವುದುಂಟು. ಕೆಲಕಡೆಗೆ ದುರಗವ್ವನ ಗುಡಿಕಟ್ಟಿಕೊಂಡು ಯುಗಾದಿಗೊಮ್ಮೆ ಜಾತ್ರೆಯನ್ನುಮಾಡುವ ಪರಿಪಾಠವಿದ್ದುದೂ ಕಂಡುಬರುತ್ತದೆ.

**ಧರ್ಮ :** ದಾಸರೆಲ್ಲರು ವೈಷ್ಣವರು. ತಿರುಅಪ್ಪ, ನರಸಿಂಹ, ಹನಮಂತ ಮೊದಲಾದ ವೈಷ್ಣವ ದೇವರುಗಳನ್ನು ಪೂಜಿಸುತ್ತಾರೆ. ಬ್ರಾಹ್ಮಣರ ಅಥವಾ ಸಾತಾನಿಗಳ ವೈಷ್ಣವ ಮತೀಯರೇ ಇವರ ಗುರುಗಳು. ಅವರು ಇವರಿಗೆ ಅಷ್ಟಾಕ್ಷರಿ ಸ್ತೋತ್ರವನ್ನು ಪಠಿಸಲಿಕ್ಕೆ ಕಲಿಸುತ್ತಾರೆ. ಅಲ್ಲದೆ ಶಂಖ ಚಕ್ರಗಳ ಮುದ್ರೆಗಳನ್ನೊತ್ತುತ್ತಾರೆ. ತಮ್ಮ ದೇಹದ ಮೇಲೆ ತ್ರಿಶೂಲನಾಮವನ್ನು ಹಚ್ಚಿಕೊಳ್ಳಲಿಕ್ಕೆ ಅಧಿಕಾರವನ್ನೀಯುತ್ತಾರೆ. ತುಳಸಿಮಣಿ ಮಾಲೆಯನ್ನೂ ನೀಡುತ್ತಾರೆ. ಅವರು ಬ್ರಾಹ್ಮಣರಿಗೆ ಪ್ರಿಯವಾದ ಗರುಡ, ಜಿಂಕೆ, ಇಣಚಿ ಹಾಗೂ ಮಂಗಗಳನ್ನು ಆರಾಧಿಸುತ್ತಾರೆ. ಈ ಪ್ರಾಣಿಗಳ ಶವಗಳನ್ನು ಎಲ್ಲೀ ಕಂಡರೂ ಇವರು ಅವನ್ನು ಎತ್ತಿಕೊಂಡು ವಿಜೃಂಭಣೆಯಿಂದ ಅಂತ್ಯವಿಧಿಯನ್ನು ಮಾಡುತ್ತಾರೆ. ಇವರಿಗೆ ಶನಿವಾರ ಅತ್ಯಂತ ಪವಿತ್ರವಾದ ದಿನ. ಶನಿವಾರದಂದು ಶುಚಿರ್ಭೂತರಾಗಿ ದೇವರನ್ನು, ಗರುಡಗಂಬ ಹಾಗೂ ಇನ್ನುಳಿದ ಸಂಕೇತಗಳನ್ನು ಅರ್ಚಿಸಿ, ಅನ್ನದ ನೈವೇದ್ಯವನ್ನು ಸಮರ್ಪಿಸಿ ದಿನಕ್ಕೊಮ್ಮೆ (ಒಪ್ಪತ್ತು) ಊಟವನ್ನು ಮಾಡುವ ಪರಿಪಾಠ ಉಂಟು. ಶಂಖ, ಚಕ್ರ, ಗರುಡಗಂಬ ಹಾಗೂ ದೇವರಹೆಸರುಗಳ ಸಾಕ್ಷಿಯಾಗಿ ಪ್ರತಿಜ್ಞೆಗಳನ್ನು ಕೈಕೊಳ್ಳುವರು. ಶುಭೋತ್ಸವಗಳನ್ನು ನೆರವೇರಿಸುವಾಗ ಬ್ರಾಹ್ಮಣ ಪುರೋಹಿತ ಅವರಿಗೆ ನೆರವಾಗುವನು. ಅಂತ್ಯಕಾರ್ಯಗಳಲ್ಲಿ ಸಮಾರಯರು (ಪೂಜಾರಿಗಳು) ನೆರವಾಗುವರು. ದಾಸರ ಬೇಡಿಕೆಗಳನ್ನು ಪೂರೈಸುವ ಬ್ರಾಹ್ಮಣರು ಇತರ ಬ್ರಾಹ್ಮಣರಲ್ಲಿ ಸ್ಥಾನಮಾನದ ವಿಷಯವಾಗಿ ಯಾವುದೇ ಹಾನಿಗೊಳಗಾಗುವದಿಲ್ಲ.

**ವಿವಾಹ :** ಗುಡುಪು ದಾಸರುಗಳ ವಿವಾಹ ಪದ್ಧತಿಗಳು ವಕ್ಕಲಿಗಶಾಸ್ತ್ರ ಅಥವಾ ಬಿಷ್ಟಿಗಿ ಕಾರಣದಿಂದ ಆರಂಭವಾಗುತ್ತವೆ. ಆಗ ಕನ್ನೆಯ ಉಡಿಯಲ್ಲಿ ಕೆಲ

ಶುಭದಾಯಕವಾದ ವಸ್ತುಗಳನ್ನು ಹಾಕುತ್ತಾರೆ. ಜಾತಿಯ ಪುರೋಹಿತ ಮತ್ತು ಹಿರಿಯರು ವಧುವಿನ ಮನೆಯಲ್ಲಿ ಕೂಡಿ, ಶರೀರಸಂಬಂಧ ಹೊಂದಿತು ಎನ್ನುವ ಔಪಚಾರಿಕ ಒಡಂಬಡಿಕೆಯ ಸಾಕ್ಷಿಯಾಗಿ ತಾಂಬೂಲವನ್ನು ಸ್ವೀಕರಿಸುತ್ತಾರೆ. ಅದಕ್ಕೆ ಸಕಲು ಎಂದು ಕರೆಯುವದುಂಟು. ಒಂದುವೇಳೆ ಲಗ್ನದ ಒಪ್ಪಂದವನ್ನು (ನಿಶ್ಚಯ) ಮುರಿದುಕೊಳ್ಳಬೇಕಾದ ಪ್ರಸಂಗದಲ್ಲಿ ಅವರು ಪ್ರತಿಪಕ್ಷದವರ ಖರ್ಚನ್ನು ವಹಿಸಬೇಕಾಗುತ್ತದಲ್ಲದೆ ಮೇಲೆ ನಾಲ್ಕು ರೂಪಾಯಿ ದಂಡ ತೆರಬೇಕಾಗುತ್ತದೆ. ಲಗ್ನ ಯಾವಾಗಲೂ ವರನ ಮನೆಯಲ್ಲಿಯೇ ನಡೆಯುತ್ತದೆ. ಮತ್ತು ಸಾಮಾನ್ಯವಾಗಿ ಶನಿವಾರ ದಿನವೇ ದೇವಕಾರ್ಯದಿಂದ ಆರಂಭವಾಗುತ್ತದೆ. ವಧುವಿನ ಪಕ್ಷದ ನಿಬ್ಬಣವನ್ನು ಶುಭ ಮುಹೂರ್ತದಲ್ಲಿ ಎದುರುಗೊಂಡು ವಧುವಿಗೆ ಕೊಡ ಬೇಕಾದ ಲಗ್ನದ ವಸ್ತ್ರ, ಆಭರಣ ಹಾಗೂ ಇತರ ವಸ್ತುಗಳನ್ನು ನೀಡುತ್ತಾರೆ. ಎದುರು ಪಕ್ಷದವರು ಆ ವಸ್ತುಗಳನ್ನು ನೂರು ಎಳೆಗಳುಳ್ಳ ಹಳದಿ (ಅರಿಷಿಣದ) ನೂಲಿನ ಉಂಡೆಯೊಂದಿಗೆ ಸ್ವೀಕರಿಸುತ್ತಾರೆ. ವರನ ಪಕ್ಷದ ಒಂಬತ್ತುಜನ ಸದಸ್ಯರು ಅಂದು ಮೇಜವಾಣಿಯುನ್ನುಂಡು ಮರಳುತ್ತಾರೆ. ಮರುದಿನ ವರನ ಮನೆಯಲ್ಲಿ ವಧುವಿನ ನಿಬ್ಬಣದವರಿಗೆ ಮೇಜವಾಣಿಯುನ್ನು ಏರ್ಪಡಿಸಲಾಗುತ್ತದೆ. ಕಳಸ ಹಾಗೂ ಅರವೇಣಿ (ಐರಾಣಿ) ಗಡಿಗೆಗಳನ್ನು ತರಲಾಗುತ್ತದೆ. ವರನ ಸೋದರಮಾವನ ಮಗ ಹಾಲಗಂಬವನ್ನು ತರುತ್ತಾನೆ. ವಾಡಿಕೆಯಾಗಿ ಕುಂಬಾರನಿಗೆ ಐದುಸೇರ ಅಕ್ಕಿ, ಒಂದು ಸೇರ ಜೋಳ, ಮೇಲೆ ಒಂದು ರೂಪಾಯಿ ನಾಲ್ಕು ಆಣೆ ಎಂಟು ಪೈಗಳೊಡನೆ ಕೊಟ್ಟು ಐರಣಿಯುನ್ನು ತರುತ್ತಾರೆ. ಲಗ್ನದ ಹಂದರವನ್ನು ಹಾಲಗಂಬ ಸಹಿತವಾಗಿ ಹಾಕುತ್ತಾರೆ. ಅಷ್ಟು ಕಂಬಗಳಿಗೆ ಮಡಿವಾಳನಿಂದ ಪೂರೈಸಲಾದ ಹಳದಿಬಟ್ಟೆಯನ್ನು ಸುತ್ತಿರುತ್ತಾರೆ. ಸಾಯಂಕಾಲ ಮೂವರು ಮುತ್ತೈದೆಯರು ಐದು ಸೇರ ಅಕ್ಕಿ ಹಿಟ್ಟು ಹಾಗೂ ಅವರೇ ಕುಟ್ಟಿ ತಯಾರಿಸಿದ ಜೋಳದ ಅಕ್ಕಿಯಿಂದ ಹೋಳಿಗೆಮಾಡುತ್ತಾರೆ. ಅದರಲ್ಲಿ ಪ್ರತಿಯೊಬ್ಬರಿಗೆ ಹನ್ನೆರಡು ಹೋಳಿಗೆಗಳನ್ನು ಕೊಟ್ಟು ಮರುದಿನ ಭೋಜನಾನಂತರ ಸ್ತ್ರೀಯರೆಲ್ಲರಿಗೆ ಹಂಚುತ್ತಾರೆ. ಮಾರನೇದಿನ ಮುಂಜಾನೆ ವರನನ್ನು ಜಲಪ್ರವಾಹಕ್ಕೆ (ಸ್ನಾನಕ್ಕೆ) ಕರೆದುಕೊಂಡು ಹೋಗಲಾಗುತ್ತದೆ. ಅಲ್ಲಿ ಜಲದೇವತೆಯ ಪೂಜೆಯನ್ನು ಮಾಡುವರು. ಮನೆಗೆ ಮರಳುವಾಗ ಇಬ್ಬರು ಮುತ್ತೈದೆಯರು ಒಂದೊಂದು ನೀರಿನ ಪಾತ್ರೆಗಳನ್ನು ಹೊತ್ತುಕೊಂಡು ಹಾಸುಮಡಿಯ ಮೇಲೆ ನಡೆದುಕೊಂಡು ಬರುವರು. ಆ ಪಾತ್ರೆ (ಕೊಡ)ಗಳನ್ನು ಹಂದರದಲ್ಲಿರಿಸಿ ಅವುಗಳ ಮೇಲೆ ಮುಚ್ಚಳ ಮುಚ್ಚಿ ಅದರ ಮೇಲೆ ಹೋಳಿಗೆ ವೀಳ್ಯೆದೆಲೆ ಹಾಗೂ ಅಡಿಕೆಯ ಬೆಟ್ಟಗಳನ್ನು ಇಟ್ಟು ಪೂಜೆಯನ್ನು ಮಾಡುತ್ತಾರೆ.! ಅನಂತರ ಎರಡೂ ಪಕ್ಷದವರು ದೇವಸ್ಥಾನದಲ್ಲಿ ಕೂಡಿ ಕಲಶಗಳ ವಿನಿಮಯ ಮಾಡುತ್ತಾರೆ. ಅನಂತರ ವಧೂವರರನ್ನು ಹಂದರಕ್ಕೆ ಕರೆದೊಯ್ದು ಎದುರುಬದುರು ನಿಲ್ಲಿಸಿ ಮುತ್ತೈದೆಯರು ತಾಳಿಕಟ್ಟುತ್ತಾರೆ. ಹಿರಿಯರೆಲ್ಲ ಅಕ್ಷತೆಹಾಕಿ ಹರಸುತ್ತಾರೆ.

ಈ ರೀತಿಯಾಗಿ ಅವರಲ್ಲಿ ಐದುದಿನಗಳಕಾಲ ಸಂಭ್ರಮದ ಮದುವೆ ನಡೆಯುತ್ತದೆ. ಇವರ ಲಗ್ನಕಾರ್ಯಕ್ಕೆ ಒಬ್ಬ ಬ್ರಾಹ್ಮಣ ಪುರೋಹಿತ ಅವಶ್ಯ. ದೇವಕಾರ್ಯ, ಅಕ್ಷತೆ, ಭೂಮದಕಾರ್ಯ, ಮೆರವಣಿಗೆ, ಹಂದರ ಇಳಿಸುವುದು ಮೊದಲಾದ ವಿಶಿಷ್ಟ ಕ್ರಿಯೆಗಳನ್ನು ಆಚರಿಸುವರು. ಇವರಲ್ಲಿ ಹೆಣ್ಣಿಗೆ ತೆರವುಕೊಡುವ ಪದ್ಧತಿ ವಾಡಿಕೆಯಲ್ಲುಂಟು. ಲಗ್ನದ ಶುಭಮುಹೂರ್ತದಲ್ಲಿ ಎರಡು ಬ್ಯಾಟಿ ಮಾಡಿ ಭರ್ಜರಿಯಾದ ಊಟ ಹಾಕುವದುಂಟು.

ದಾಸರಲ್ಲಿ ತಮ್ಮ ಮಗಳನ್ನು ಹೊಸತಾಗಿ ಕಳಿಸಿಕೊಡಲು ಹೋಗುವ ರೂಢಿಯಿಲ್ಲ. ಅವಳ ಗಂಡನ ಮನೆಯವರೇ ಬಂದು ಓಣಿಯವರಿಗೆಲ್ಲ ಊಟಹಾಕಿಸಿ ಅತ್ತೆ ಸೊಸೆಯ ಉಡಿಯನ್ನು ತುಂಬಿ ಕರೆದುಕೊಂಡು ಹೋಗುವದುಂಟು. ಮೊದಲಸಲ ಅಳಿಯ ಬಂದಾಗ ಸೆರೆ-ಸಿಂದಿ-ಕೋಳಿ ಮೊದಲಾದವನ್ನು ಕೊಟ್ಟು ಆನಂದಿಸುತ್ತಾರೆ. ೪-೬ ದಿನಗಳನಂತರ ಅವನಿಗೆ ಉಡುಗೊರೆಕೊಟ್ಟು ಕಳಿಸುತ್ತಾರೆ.

**ಗರ್ಭಸಮಯ ಹಾಗೂ ಹೆರಿಗೆ :** ಹೆಂಗಳೆ ಗರ್ಭವತಿಯಾದಾಗ ಯಾವುದೇ ಕಾರಣಗಳನ್ನು ಮಾಡುವದಿಲ್ಲ. ಆದರೆ ಆಕೆಯ ಗಂಡ ಆಕೆ ಸುಖರೂಪದಿಂದ ಹಡೆಯಲೆಂದು ಮುಂಜಾಗ್ರತೆಯನ್ನು ವಹಿಸುತ್ತಾನೆ. ಹೆಂಡತಿ ಗರ್ಭವತಿಯಾದ ಸಮಯದಲ್ಲಿ ಗಂಡನಾದವನು ಪ್ರಾಣಿಹಿಂಸೆ ಅಥವಾ ಇನ್ನಾವುದೇ ಹಿಂಸೆಯಿಂದ ದೂರಿರುತ್ತಾನೆ. ಅಲ್ಲದೆ ಶವವನ್ನು ಹೊರುವದಿಲ್ಲ. ಸುರಕ್ಷಿತವಾದ ಹೆರಿಗೆಗೆ ವಿವಿಧ ಉಪಾಯಗಳು ಪರಿಣಾಮಕಾರಿಯೆಂದು ಅವನ್ನು ಕೈಕೊಳ್ಳುವರು. ತಾಯಿತ ಕಟ್ಟಿಸುವದು, ಆಕಾಶದಲ್ಲಿ ಬಂದೂಕು ಹಾರಿಸುವದು, ಹಸ್ತದಿಂದ ಹಸ್ತಕ್ಕೆ ನೀರಿನ ಪಾತ್ರೆಯನ್ನು ದಾಟಿಸುತ್ತ ತಂದು, ಆ ಸಾಲಿನಲ್ಲಿ ನಿಂತವಳು ಆ ನೀರನ್ನು ಗರ್ಭವತಿಯ ತಲೆಯಮೇಲೆ ಹಣಿಸುವದು ಇತ್ಯಾದಿ ಕ್ರಮಗಳನ್ನು ಅನುಸರಿಸುವರು. ಹೆರಿಗೆಯಾದೊಡನೆಯೆ ಬಾಳ-ಬಾಣಂತಿಯರಿಗೆ ನೀರು ಹಣಿಸಿ, ಚಾಪೆಯಮೇಲೆ ಹಾಸಿಗೆ ಹಾಸಿ ಅದರ ಮೇಲೆ ಮಲಗಿಸುವರು. ಬಾಣಂತಿಗೆ ಉತ್ತೇಜಕವೆಂದು ಶುದ್ಧ ಅಥವಾ ನೀರುಬೆರಸಿದ ಸ್ವಲ್ಪ ಸೆರೆಯನ್ನು ಕುಡಿಸುವರು. ಮಾಗೋಸಾ ಎಲೆ, ಹಳೆಯ ಚಪ್ಪಲಿ, ಕಸಬರಿಗೆ ಮೊದಲಾದವನ್ನು ಕಾಕದೃಷ್ಟಿ ತಾಗದಿರಲೆಂದು ನಿವಾಳಿಸಲೋಸುಗ ಜೋತುಬಿಡುವರು. ಸ್ಥಾನಿಕ ವಾಡಿಕೆಯಂತೆ ಬಾಣಂತಿಗೆ ಹೆರಿಗೆಯಾದ ಐದನೆಯ ಅಥವಾ ಏಳನೆಯ ಅಥವಾ ಒಂಭತ್ತನೆಯ ದಿನ ನೀರು ಹಣಿಸಿ ಮಡಿಗೊಳಿಸುವರು.

**ಚೇಲಕರ್ಮ :** ದಾಸರಲ್ಲಿ ಮಗು ಹುಟ್ಟಿದ ಐದನೇ ದಿನ ಹೆಸರಿಡುವರು. ಹೆಸರಿಡುವಾಗ ಜೋಗುಳಪದಗಳನ್ನು ಹೇಳುವರು. ಕಿವಿಚುಚ್ಚುವದು, ಮೈಲಿಹಾಕಿಸುವದು ಇತ್ಯಾದಿ ಅವರ ಗುರುಗಳು ಕೊಟ್ಟ ಸುಮುಹೂರ್ತದಲ್ಲಿ ನೆರವೇರಿಸುವರು. ಕೂಸು ಸುಮಾರ ಮುಹೂರ್ತದಲ್ಲಿ ಜನಿಸಿದ್ದರೆ ಅದರ ಕರ್ಮಕಳೆಯುವರು. ಮಗುವಿಗೆ

ಜೇಲಕರ್ಮ (ಜಡಿತೆಗೆಯುವ ಕಾರ್ಯ) ಮಾಡುವಾಗ ಹನಮಂತದೇವರ ಗುಡಿಯಲ್ಲಿ ಪೂಜಾರಿಯ ತೊಡೆಯಮೇಲೆ ಮಗುವನ್ನು ಮಲಗಿಸಿ ಅವನ ಕೈಯಿಂದಲೇ ಎರಡು ಕೂದಲನ್ನು ಕತ್ತರಿಸಿ ತೆಗೆಸುವರು. ಆನಂತರ ತಂದೆ ಅಥವಾ ಸೋದರಮಾವ ಮಗುವಿನ ಕೂದಲನ್ನು ಕತ್ತರಿಸುವನು. ೧೦–೧೧ ವರ್ಷದವರೆಗೆ ಮುಂಜಿವೆ ಎನ್ನುವ ಒಂದು ವಿಧಿಮುಗಿಯುವ ವರೆಗೆ ಬಳಗದವರೇ ಮಗುವಿನ ತಲೆಯಕೂದಲನ್ನು ಕತ್ತರಿಸುವರು. ಮುಂಜಿವಿನಂತರ ನಾವಿಂದನಿಂದ ಕೂದಲನ್ನು ತೆಗೆಸಬಹುದಾಗಿದೆ.

**ಮೈನೆರೆದಕಾರಣ :** ಗುಡುಮಿ ದಾಸರಲ್ಲಿ ಮೈನೆರೆದ ಕನ್ಯೆಯನ್ನು ಆಕೊಲೆ ಮತ್ತು ಮಾರ್ಗೊಸದ ಎಲೆಗಳನ್ನು ಹೊದಿಸಿದ ಮಳಿಗೆಯಲ್ಲಿ ಸುಮಾರು ಮೂರು ದಿನದಿಂದ ಐದುದಿನಗಳ ವರೆಗೆ ಇರಿಸುವರು. ಆಕೆಗೆ ಉಪ್ಪುಹಾಕಿದ ಹುಗ್ಗಿಯನ್ನು (ಅಕ್ಕಿಯೊಡನೆ ಯಾವುದಾದರೊಂದು ಬಗೆಯ ಬೇಳೆಧಾನ್ಯವನ್ನು ಕೂಡಿಸಿ ಮಾಡಿದುದೂ) ಮಾತ್ರ ಉಣಿಸುತ್ತಾರೆ. ಪ್ರತಿದಿನ ಸಾಯಂಕಾಲ ಆರತಿ ಮಾಡುತ್ತಾರೆ. ಮೊದಲನೇ ದಿನ ಇಡೀರಾತ್ರಿಯೆಲ್ಲ ಅವಳಿಗೆ ಜಾಗರಣೆ ಮಾಡಿಸುತ್ತಾರೆ. ನಾಲ್ಕು ಅಥವಾ ಆರನೇಯ ದಿನ ಮುಂಜಾನೆ ಮಳಿಗೆಯನ್ನು ಕೆಡವಿ ಅದಕ್ಕೆ ಹಾಕಿದ ವಸ್ತುಗಳನ್ನು ದೂರ ಒಯ್ದು ಸುಡುತ್ತಾರೆ. ಮೊದಲು ಮಳಿಗೆ ಹಾಕಿದ ಸ್ಥಳದಲ್ಲಿ ಒಂದು ಕೋಳಿಯ ಬಲಿ ಕೊಡುತ್ತಾರೆ. ಕನ್ಯೆಗೆ ಸ್ನಾನಮಾಡಿಸುತ್ತಾರೆ. ಆನಂತರ ಯಾವುದೇ ಶುಭದಿನ ದಂದು ವಿವಾಹಗೊಂಡ ಕನ್ಯೆ ನಿಷೇಕಪ್ರಸ್ತ ಮಾಡಿಕೊಳ್ಳಬಹುದು. ಮೈನೆರೆದ ನಂತರ ಲಗ್ನವಾದ ಕನ್ಯೆಯ ವಿಷಯದಲ್ಲಿ ಆಕೆ ಲಗ್ನವಾದ ಮೂರು ತಿಂಗಳ ನಂತರವೇ ಆ ಪ್ರಸ್ತಕಾರ್ಯ ನಡೆಯಬೇಕು. ಲಗ್ನಪೂರ್ವದಲ್ಲಿ ಮೈನೆರೆಯುವದು ಕನ್ಯೆಗೇನೂ ಅವಮಾನವಲ್ಲ.

**ವಿಧವಾ ವಿವಾಹ :** ದಾಸರಲ್ಲಿ ವಿಧವೆ ಉಡಿಕೆ (ಕುಡಿಕೆ)ಯ ರೂಪದಿಂದ ವಿವಾಹವಾಗಲು ಅನುಮತಿ ಇದೆ. ಅವಳು ತನ್ನ ಗಂಡನ ಸೋದರನನ್ನು ಬಿಟ್ಟು ಬೇಕಾದವರನ್ನು ಮೆಚ್ಚಿ ಲಗ್ನವಾಗಬಹುದು. ಬುದ್ದತಾಳಿ ಎಂಬುದನ್ನು ಕಟ್ಟುವರು. ಆನಂತರ ಅವಳಿಗೆ ತನ್ನ ಮೊದಲನೆ ಗಂಡನ ಆಸ್ತಿಯಮೇಲೆ ಯಾವುದೇ ಬಗೆಯ ಹಕ್ಕು ಉಳಿಯುವದಿಲ್ಲ.

**ವಿವಾಹ ವಿಚ್ಛೇದ :** ಗಂಡನು ಹೆಂಡತಿಯ ದುರ್ನಡತೆಯ ಆಧಾರದಮೇಲೆ ಅವಳೊಂದಿಗೆ ವಿವಾಹವಿಚ್ಛೇದ ಮಾಡಿಕೊಳ್ಳಬಹುದು. ಆಗ ಜಾತಿಯ ಹಿರಿಯರಿಗೆ ೨ ರೂಪಾಯಿ ದಂಡವನ್ನು ತೆರಬೇಕಾಗುತ್ತದೆ. ಆಕೆ ಮನಸ್ಸುಮಾಡಿದರೆ ಪುನರ್ವಿವಾಹ ಮಾಡಿಕೊಳ್ಳಬಹುದು. ಅವಳನ್ನು ಉಡಿಕೆಮಾಡಿಕೊಂಡಾತ ಅವಳ ಮೊದಲಿನ ಗಂಡನ ಲಗ್ನದ ವೆಚ್ಚವನ್ನು ಕೊಡಬೇಕಾಗುವದು. ಓರ್ವ ಕನ್ಯೆ ಆಯುಷ್ಯದ ಕೊನೆಯ ವರೆಗೆ ಉಡುಕಿ ಮಾಡಿಕೊಳ್ಳದೆಯೂ ಇರಬಹುದು. ವಿವಾಹಿತ ಸ್ತ್ರೀಯಿಂದ ಘಟಿಸಿದ

ಪಾದರವನ್ನು ಅಘುಧರ್ಮವೆನ್ನುವ ದಂಡವನ್ನು ಕೊಟ್ಟು ನಂತರ ಕ್ಷಮಿಸಬಹುದು. ಪಾದರ ಮಾಡಿದ ಕನ್ಯೆಯನ್ನು ಚಕ್ರಾಂಕಿತ, ತುಳಸೀತೀರ್ಥ ಸ್ವೀಕರಿಸಿ, ನಾಲಗೆಗೆ ಕಾಯಿಸಿದ ಚಿನ್ನದ ಚೂರನ್ನು ಸೋಂಕಿಸಿ ಶುದ್ಧಗೊಳಿಸಬಹುದು. ಲಗ್ನವಾದ ಸ್ತ್ರೀಯು ಜಾತೀಯ ವ್ಯಕ್ತಿಯಿಂದ ಗರ್ಭವತಿಯಾದರೆ ಆತ ಕನ್ಯಾಧರ್ಮವೆನ್ನುವ ದಂಡವನ್ನು ಕೊಟ್ಟು ಅವಳನ್ನು ಮದುವೆಯಾದರೆ ಅವಳು ಶುದ್ಧಿಯಾಗುತ್ತಾಳೆ. ಆತ ದಂಡ ಕೊಡಲಿಕ್ಕೆ ನಿರಾಕರಿಸಿದರೆ ಅವನನ್ನು ಕುಲದಿಂದ ಬಹಿಷ್ಕರಿಸಲಾಗುವದು. ಆಕೆ ಲಘು ಧರ್ಮವೆನ್ನುವ ದಂಡವನ್ನು ಕೊಟ್ಟರೆ ಅವಳನ್ನು ಕುಲದಲ್ಲಿರಿಸಿಕೊಳ್ಳಲಾಗುವದು. ಅವಳನ್ನು ಕೆಡಿಸಿದಾತ ಮೇಲ್ಜಾತಿಯುವನಾಗಿದ್ದರೆ ಅವಳನ್ನು ಗೋಷ್ಟಿಗೆ ಗುರಿಪಡಿಸ ಲಾಗುವದು.

**ಕುಲಪಂಚಾಯಿತಿ** : ದಾಸರಲ್ಲಿ ಕಟ್ಟೆಮನೆಗಳೆನ್ನುವ ಕುಲಪಂಚಾಯಿತಿಗಳಿರು ತ್ತವೆ. ಗುಡಿಮಿದಾಸರಲ್ಲಿ ಕಟ್ಟೆಮನೆಗೆ 'ಗುಡಿಗಾಡು' ಎನ್ನುವ ಅಧ್ಯಕ್ಷನಿರುತ್ತಾನೆ. ಅವನ ಕೆಳಗೆ ಪಿನ್ನಪೆದ್ದನೆನ್ನುವ ಹಿರಿಯ ಅಥವಾ ಕಿರಿಯನೊಬ್ಬನಿರುತ್ತಾನೆ. ಗುಡಿ ಗಾಡು ಅಧ್ಯಕ್ಷ ಜಾತಿಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ಗಮನಿಸುತ್ತಾನೆ. ಜನರನ್ನು ಕೂಡಿಸುವ ಪಿನ್ನಪೆದ್ದಿಗೆ ಶ್ರೀಮುಖ ಅಥವಾ ಆದೇಶಗಳನ್ನು ಹೊರಡಿಸು ತ್ತಾನೆ. ವಿವಾದಕ್ಕೊಳಗಾದ ವಿಷಯವನ್ನು ಮತಗಳಾಧಾರದಿಂದ ನಿರ್ಣಯಿಸಲಾಗು ವದು. ಇವರಲ್ಲಿ ಕೆಲವು ದಂಡಗಳನ್ನು ವಿಧಿಸುವರು.

**ಘೋಷ್ಟಿ** : ಬೇರೆ ಜಾತಿಯವನೊಬ್ಬ ದಾಸರಿ ಜಾತಿಗೆ ಸೇರಿಕೊಂಡಾಗ ಆ ಹೊಸ ಸದಸ್ಯ ಹನ್ನೆರಡು ರೂಪಾಯಿ ದಂಡ ಕೊಡಬೇಕು. ಅದರ ಅರ್ಧ ಗುರುಗಳಿಗೆ ಉಳಿದರ್ಧ ಜಾತಿಬಂಧುಗಳ ಊಟಕ್ಕೆ ಸಲ್ಲುತ್ತದೆ.

**ನೊಗನಾಲುಧರ್ಮ :** ಒಬ್ಬಾತ ಇನ್ನೊಬ್ಬನ ಪತ್ನಿಯನ್ನು ಓಡಿಸಿಕೊಂಡು ಹೋದರೆ ಆತನನ್ನು ಕುಲದಿಂದ ಹೊರಗೆ ಹಾಕಲಾಗುವದು. ಪುನಹ ಆತ ಪ್ರವೇಶ ಪಡೆಯಬೇಕಾದರೆ ನಾಲ್ವತ್ತೆಂಟು ರೂಪಾಯಿ ದಂಡ ಕೊಡಬೇಕು. ಅದರಲ್ಲಿ ಅರ್ಧ ಅನರ್ಥಕ್ಕೆ ಒಳಗಾದ ಗಂಡನಿಗೆ ಉಳಿದರ್ಧ ಗುರುವಿಗೆ ಸಲ್ಲುತ್ತದೆ.

ಈ ಜನರು ಕೋರ್ಟುಕಚೇರಿಗಳಿಗೆ ಹೋಗುವದಿಲ್ಲ. ಅವರ ಜಾತಿಯ ಗೌಡ ಅಥವಾ ಅಧ್ಯಕ್ಷ ಯಾವ ಕಾಲಕ್ಕೂ ಮುಖ್ಯಸ್ಥನೇ. ಅವರಲ್ಲಿ 'ಕಡ್ಡೀಮುರಿಯುವದು' ಎಂಬ ವಿಶಿಷ್ಟವಾದ ಪದ್ಧತಿಯಿದೆ. ದೈವದವರ ಮುಂದೆ ಗೌಡ ಅಥವಾ ಅಧ್ಯಕ್ಷ ಕಡ್ಡಿಮುರಿದು ಆದೇಶ ಮಾಡಿದರೆ ಅದನ್ನು ಯಾರೂ ಮೀರುವಂತಿಲ್ಲ. ಮೀರಿದರೆ ದಂಡವನ್ನು ತೆರಬೇಕಾಗುತ್ತದೆ.

**ಅಂತ್ಯ ವಿಧಿಗಳು :** ದಾಸರು ಶವಗಳನ್ನು ಬಾಳೆ ಮತ್ತು ಅಡಕೆ ಅಥವಾ ತಂಗಡಿ ಹಸಿರು ಎಲೆಗಳಲ್ಲಿ ಮುಚ್ಚಿ ಮೂರಡಿ ತಗ್ಗು ಕುಣಿಯಲ್ಲಿ ಹೂಳುವರು ಹೂಳಿದ ನಂತರ

ಗೋರಿಯ ಮೇಲೆ ತುಳಸಿಯ ಸಸಿಯನ್ನು ಇರಿಸಲಾಗುವದು. ಗೋರಿಯ ಮೇಲೆ ಸಮುದಾಯ ಅಥವಾ ಪೂಜಾರಿಯನ್ನು ನಿಲ್ಲಿಸಿ ಅವನ ಪಾದಗಳನ್ನು ತೊಳೆದು ಕಡಾವಿಗೆಗಳನ್ನು ಕಾಣಿಕೆಯಾಗಿ ಕೊಡಲಾಗುವದು. ಸೂತಕದ ಅವಧಿ ವಂಶಿಕರಿಗೆ ಅಥವಾ ಸಗೋತ್ರಿಗಳಿಗೆ ಹನ್ನೊಂದು ದಿನ. ಸಮೀಪದ ಸಂಬಂಧಿಕರಾದ ಅವರ ಮಕ್ಕಳಿಗೆ ಮೂರು ದಿನ. ಸೋದರಮಾವ, ಅತ್ತೆ, ಭಾವಮೈದುನ ಇಂಥ ಸಮೀಪದ ಆಪ್ತರು ಮಡಿದರೆ ಸೂತಕವನ್ನು ಪಾಲಿಸುವದಿಲ್ಲವೆಂದು ಹೇಳಲಾಗುತ್ತಿದೆ.

ಗುಡುಮಿದಾಸರಲ್ಲಿ ಶವವನ್ನು ತೊಳೆದು ಹಣೆಯ ಮೇಲೆ ಲಿಂಗಭೇದ ಮತ್ತು ಸ್ಥಿತಿಯನುಸಾರ ಗುರುತು ಹಚ್ಚಲಾಗುವದು. ಗಂಡಸಿಗೆ ನಾಮ ಮುತ್ತೈದೆಗೆ ಕುಂಕುಮ ವಿಧವೆಗೆ ಒಂಟಿತಿಲಕ ಹಚ್ಚುವರು. ಬಿದಿರಿನ ಚೌಕಟ್ಟದ ಮೇಲೆ ಕೂಡ್ರಿಸುವರು ಅದರ ಮುಂದೆ ಒಂದು ಸ್ಥಳ ಸ್ವಚ್ಛಮಾಡಿ ಆಮೆಯ ಆಕೃತಿಯನ್ನು ಬರೆಯಲಾಗುವದು ಅನ್ನ-ಬೇಳೆ ಅಲ್ಲಿ ಕುದಿಸಿ ಆಕೃತಿಯ ಮುಂದೆ ಇರಿಸಿ ಅದಕ್ಕೆ ತುಳಸಿಪತ್ರಿ, ಗುಗ್ಗಳದಿಂದ ಪೂಜೆ ಮಾಡಲಾಗುವದು. ಈ ಅರ್ಪಿತ ವಸ್ತುಗಳನ್ನು ಸತ್ತವನ ಪ್ರಸಾದವೆಂದು ಅವನ ವಂಶಿಕರು ತಗೆದುಕೊಳ್ಳುತ್ತಾರೆ. ಸಂಸ್ಕರಿಸಿ ಮರಳಿ ಬಂದು ಸತ್ತವನನ್ನು ಮೊದಲು ಕೂಡ್ರಿಸಿದಲ್ಲಿ ಹಚ್ಚಿಟ್ಟ ದೀಪದ ಸ್ಥಳಕ್ಕೆ ಬರುತ್ತಾರೆ. ನಂತರ ಕೋಳಿಕೊಂದು ಅಡಿಗೆ ಮಾಡಿ ಸಿಂದಿ, ಸೆರೆ ಕುಡಿದು ಗಾಂಜಿ ಸೇದುತ್ತಾರೆ. ಸಮಾಜದ ಹಿರಿಯರಿಗೆ ಪೂಜೆ ಸಲ್ಲಿಸುತ್ತಾರೆ.

ಸತ್ತ ಮೂರನೆಯ ದಿನ ಚಿಟಪಾಲಿಕೆ ಹತ್ತಿರ ಹಂದರ ಹಾಕಿ ಆಹಾರ ನೀರು ತಕ್ಕೊಂಡು ಹೋಗುವರು. ಸಾತನಿಪುರೋಹಿತ ಗೋರಿಯ ಮೇಲೆ ಚಕ್ರದ ಆಕೃತಿಯನ್ನು ಬರೆಯುವನು. ಆಹಾರವಸ್ತುಗಳನ್ನು ಎಲೆಗಳ ಮೇಲೆ ಬಡಿಸುವರು. ಪುರೋಹಿತ ಮಂತ್ರವನ್ನು ಹೇಳುತ್ತ ಅಷ್ಟಬಂಧನಕ್ರಿಯೆ ಮಾಡುತ್ತಾನೆ. ಆಹಾರವನ್ನು ಆಕೃತಿಗೆ ಅರ್ಪಿಸಿ ಹಾಜರಿರುವ ವಂಶಿಕರಿಗೆ ಹಂಚುವರು. ಪುರೋಹಿತನುಂಡು ಉಳಿದ ಆಹಾರವನ್ನು ಮಹಾಪ್ರಸಾದವೆಂದು ಹಂಚಿಕೊಳ್ಳುತ್ತಾರೆ. ಹನ್ನೆರಡನೆಯ ರಾತ್ರಿ ಮೂರನೇ ದಿನ ಮಾಡಿದ ಕರ್ಮವನ್ನೇ ದೊಡ್ಡ ಪ್ರಮಾಣದಲ್ಲಿ ಸತ್ತವನ ಮನೆಯಲ್ಲಿ ಆಚರಿಸಲಾಗುತ್ತದೆ. ಕುಲದೇವತೆಗೆ ಎಡೆ ಅರ್ಪಿಸಲಾಗುವದು. ಬರೆಯಲಾದ ಚಕ್ರಕ್ಕೂ ಅನ್ನ ಪಾನೀಯಗಳನ್ನು ಅರ್ಪಿಸಲಾಗುವದು. ಅರ್ಪಿತವಾದ ವಸ್ತುವನ್ನು ನೆರೆದೆಲ್ಲರಿಗೆ ಹಂಚಲಾಗುವದು.

ವಿವಾಹವಾಗದ ಸ್ತ್ರೀಯರು ಸತ್ತರೆ 'ಇರಗಾರ'ರಾಗುತ್ತಾರೆ. ಅವರಿಗೆ ಮೂರನೇಯ ದಿನ ಒಂದು ಸಂಸ್ಕಾರವಿಧಿಮಾಡುವದುಂಟು. ಕೆಲಸಲ ಇರಗಾರರುವಿನ ಹೆಸರಿನಲ್ಲಿ ಒಂದು ದೇವರನ್ನು ನಿರ್ಮಿಸಿ ಭಾದ್ರಪದ ಮಾಸದ ಕೃಷ್ಣಪಕ್ಷ ಅಥವಾ

ದಸರೆಯಲ್ಲಿ ವರ್ಷಕ್ಕೊಂದು ಸಲ ಕುಟುಂಬದ ದೇವರುಗಳೊಡನೆ ಪೂಜೆ ಮಾಡುತ್ತಾರೆ. ಗತಿಸಿದ ವಂಶಜರನ್ನು ಒಂದು ಕಲಶದ ಮುಖಾಂತರ ಸಂಕೇತಿಸಿ ಅದಕ್ಕೆ ಕುಂಕುಮ, ಅರಿಷಿಣ, ಖಣ ಹಾಗೂ ತಾಂಬೂಲಾದಿಗಳನ್ನು ಅರ್ಪಿಸುವರು. ಬ್ರಾಹ್ಮಣರಿಗೆ ಕೋರಾನ್ನದ ಸೀದಾ ಹಂಚಿ ಶ್ರಾದ್ಧವನ್ನು ಆಚರಿಸಲಾಗುವದು.

ಇವರಲ್ಲಿ ಹಡೆದ ಬಾಣಂತಿಯರು ಸತ್ತರೆ ಸುಡುತ್ತಾರೆ. ಹೆಣವನ್ನು ಮಲಗಿಸಿ ಒಯ್ಯುವದು ರೂಢಿ. ಬಾಂಬೆ ಗೆಝೆಟಿಯರ ಪ್ರಕಾರ ಸತ್ತ ಮನುಷ್ಯನ ಭುಜಗಳಿಗೆ ಶಂಖಚಕ್ರಗಳನ್ನು ಕಟ್ಟಿ ಸ್ಮಶಾನದಲ್ಲಿ ಕುಳಿನಮೇಲೆ ಹಾಕುವಾಗ ಅವುಗಳನ್ನು ಬಿಚ್ಚಿ ಕೊಳ್ಳುವರು. ಹತ್ತು ದಿನ ಸೂತಕ ಹಿಡಿಯುವರು. ೫-೬ ನೇ ದಿನ ಆ ಶಂಖ-ಚಕ್ರಗಳ ಪೂಜೆಯನ್ನು ಮಾಡುವರೆಂದು ತಿಳಿದುಬರುತ್ತದೆ.

**ವೇಷ ಭೂಷಣ :** ಶಂಖ, ಜಾಂಗಟೆ, ಗಂಟೆ, ಧಪನಾಳಿ, ಭಾಂಕಿ, ಗರುಡಗಂಬ ಆಂಜನೇಯನ ಮೂರ್ತಿ ಇರುವ ಅಂಗೈ ಅಗಲದ ಓತ್ತಾಳಿ ವಿಗ್ರಹ, ತಲೆಗೊಂದು ಪೇಟ, ಹಣೆಯಲ್ಲಿ ಮೂರು ಗೂಟನಾಮಗಳು ದಾಸರಿಯ ಮುಖ್ಯ ಲಕ್ಷಣಗಳು.

ದಾಸರ ಸ್ತ್ರೀಯರು ಇತರ ಹಿಂದು ಸ್ತ್ರೀಯರಂತೆಯೆ ಉಡುಪು ಧರಿಸುತ್ತಾರೆ. ಹಣೆಯಮೇಲೆ ಲಂಬವಾಗಿ ಇಲ್ಲವೆ ಅಡ್ಡಾಗಿ ಕುಂಕುಮವನ್ನು ಹಚ್ಚಿಕೊಳ್ಳುತ್ತಾರೆ. ಕಾಲುಂಗರ ಹಾಗೂ ಕಾಜಿನ ಬಳೆ ಅವರು ವಿವಾಹಿತರೆಂಬುದನ್ನು ಸೂಚಿಸುತ್ತದೆ. ಮೈಮೇಲೆ ಹಚ್ಚೆಬಟ್ಟು ಚುಚ್ಚಿಸಿಕೊಳ್ಳುವದು ಸಾಮಾನ್ಯ. ಚುಚ್ಚಿಸಿಕೊಂಡ ವಿನ್ಯಾಸ ಗಳು ಶಂಖ, ತುಳಸಿ, ಜಗಲಿಗೇರಿದ ಹೂ, ರಥ, ಬಾಳೆಯಗಿಡ ಮೊದಲಾದವಾಗಿರು ತ್ತವೆ. ಅಂಗೈ ಮೇಲ್ಭಾಗ, ಹಣೆ, ತೋಳು, ಗಲ್ಲ ಹಾಗೂ ಗದ್ದ ಮೊದಲಾದ ದೇಹಾಂಗಗಳ ಮೇಲೆ ಹಚ್ಚೆ ಹಾಕಿಸಿಕೊಳ್ಳುವರು. ಸತ್ತು, ಕಾಲ್ಗಡಗ, ಕಾಲುಂಗರ, ಡಾಬು, ತಾಳಿ ಮೊದಲಾದ ಆಭರಣಗಳನ್ನು ಧರಿಸುವರು.

ಗುಡುಮಿದಾಸ ಭಿಕ್ಷೆಬೇಡಲು ಹೊರಟರೆ ತಲೆಯಮೇಲೆ ರುಮಾಲು ಸುತ್ತಿ ಅದಕ್ಕೆ ಬಿದಿಗೆ ಚಂದ್ರಸಾಕಾರದ ವಸ್ತುವನ್ನು ಚುಚ್ಚಿರುತ್ತಾರೆ. ತೋಳಬಂದಿ, ನವಿಲು ಗರಿ, ತುಳಸಿಮಣಿ, ಶ್ರೀಚೂರ್ಣಮ್, ಉದ್ದಂಗಿ, ಬಿಗಿಪಂಜೆ ಧರಿಸಿರುತ್ತಾನೆ. ದಾಸರ ಸಾಮಾನ್ಯವಾಡಿಕೆಯ ಲಾಂಛನಗಳಲ್ಲದೆ ಗುಡುಮಿದಾಸರು ಇಪ್ಪತ್ತೆಂಟು ಇತರ ಲಾಂಛನಗಳನ್ನು ಹೊಂದಿರುವರೆಂದೂ ಅವುಗಳಲ್ಲಿ ಗಂಟೆ ಹುಲಿಚರ್ಮ ಹಾಗೂ ತುಳಸಿ ಮಣಿ ಇವು ಇರುತ್ತವೆಂದೂ ತಿಳಿದುಬರುತ್ತದೆ.

ದಾಸರಿಗಳು ಸಾಮಾನ್ಯವಾಗಿ ತಲೆಗೆ ಕೆಂಪು ಪೇಟ ಸುತ್ತಿ ಕಚ್ಚೆಪಂಜೆ ಉಟ್ಟು ಅಂಗೈ, ಮುಂಗೈ, ಹಣೆ, ಕೊರಳು, ಬೆನ್ನು ಹಾಗೂ ಎದೆ ಭಾಗಗಳಲ್ಲಿ ಮೂರು ನಾಮ

ಗಳನ್ನು ಬಳಿದಿರುತ್ತಾರೆ. ಎಡಗೈಯಲ್ಲಿ ಜಾಂಗಟಿ ಬಲಗೈಯಲ್ಲಿ ಗರುಡಗಂಬವನು ಹಿಡಿದಿರುತ್ತಾರೆ. ಹೆಗಲಲ್ಲಿ ತಾಮ್ರದ ಒಂದು ಪಾತ್ರೆ (ಬವನಾಸಿ) ಜೋತು ಬಿದ್ದಿರ್ರುತ್ತದೆ.

ಕೆಲವರು ಗೋಪಾಳಬುಟ್ಟಿಯನ್ನು ಹಿಡಿದುಕೊಂಡು ಭಿಕ್ಷೆಬೇಡುವದುಂಟು.

**ದಾಸರ ಕಸಬು :** ದಾಸರ ಮುಖ್ಯವಾದ ಕಸಬು ಶಂಖ, ಗಂಟೆ, ಜಾಗಟೆ ಮೊದಲಾದವನ್ನು ನುಡಿಸಿ ಮನೆಮನೆಗೆ ಹೋಗಿ ಭಿಕ್ಷೆಯನ್ನು ಬೇಡುವದಾಗಿದೆ. ದಾಸರಲ್ಲಿ ಕೆಲವರು ದನಗಳ ವ್ಯಾಪಾರವನ್ನು ಮಾಡುವರು. ಕೆಲವರು ತಬಲಾ ಮೊದಲಾದ ವಾದ್ಯಗಳ ರಿಪೇರಿಕಾರ್ಯ ಮಾಡುವರು. ಕೆಲವರು ಗಿಡಮೂಲಿಕೆ ಔಷಧಿಗಳನ್ನೂ ಕೊಡುವರು. ಹುಲ್ಲಿನಿಂದ ಚಾಪೆ, ಕೋಡುಗಳಿಂದ ಹಣಿಗೆ ಮೊದಲಾದವುಗಳನ್ನು ಮಾಡಿ ಮಾರುವದುಂಟು. ಕೆಲವರು ಇತ್ತೀಚೆ ಒಕ್ಕಲುತನಕ್ಕೂ ತೊಡಗಿರುವದು ಕಂಡು ಬರುತ್ತದೆ. ದಾಸರಾಟವನ್ನು ಮಾಡುವದು, ಬಗರೀ ಆಟ, ಜಾದೂ ಆಟಗಳನ್ನೂ ಮಾಡುವರು. ತುಟಿಯ ಮೇಲೆ ಮೂಗಿನ ಮೇಲೆ ಬಗರಿ ಆಡಿಸುವ ಅವರ ಹವ್ಯಾಸ ಸೋಜಿಗವನ್ನುಂಟು ಮಾಡುತ್ತದೆ. ದಾಸರ ಹೆಣ್ಣುಮಕ್ಕಳು ಕೂಲಿ ಮಾಡುವರು. ಕೆಲವರು ಕೌದಿಮೊದಲಾದವನ್ನು ಹೊಲಿಯುವರು. ಕೆಲವರು ಆಗಾಗ ಬರುವ ಆಮಂತ್ರಣಗಳನ್ನು ಸ್ವೀಕರಿಸಿ ಆಟಗಳಲ್ಲಿ ಪಾತ್ರವಹಿಸಿ ಬರುವರು. ಕೆಲವರು ಜಾರತನ ಮಾಡುವದುಂಟು.

**ದಾಸರ ಕಲೆ :** ದಾಸರು ಒಳ್ಳೇ ಕುಶಲ ಕಲೆಗಾರರು ಎಂಬುದನ್ನು ಅವರಾಡುವ ದಾಸರಾಟದಿಂದ ಅರಿಯಬಹುದಾಗಿದೆ. ದಾಸರು ಹಾಡುವದರಲ್ಲಿ ಒಳ್ಳೇ ನಿಷ್ಣಾತರು. ದಾಸರಾಟ ಕರ್ನಾಟಕದಲ್ಲಿ ಅತ್ಯಂತ ಪ್ರಸಿದ್ಧವಾಗಿದೆ. ಜಾನಪದ ರಂಗ ಭೂಮಿಗೆ ಸ್ತ್ರೀಯರು ಬಂದುದು ಮೊದಲು ದಾಸ ಜನಾಂಗದಿಂದಲೇ ಎಂದು ಶ್ರೀ ಧೂಪದ ಅವರು ವ್ಯಕ್ತಪಡಿಸಿದ ಅಭಿಪ್ರಾಯ ವಿಚಾರಾರ್ಹವಾಗಿದೆ. ಅವರು ಮುಂದುವರಿದು, 'ಶಿಲಪ್ಪದಿಗಾರಂ' ಕಾವ್ಯದಲ್ಲಿ ತಮಿಳಿನ ಚೇರ ದೊರೆ ಉತ್ತರಕ್ಕೆ ಹೋಗುವಾಗ ನೀಲಗಿರಿಯಲ್ಲಿ ತಂಗಿ, ಕನ್ನಡತಿಯರ ಕುಣಿತ ನೋಡಿದನೆನ್ನುವಲ್ಲಿ. ಅದು ದಾಸಸ್ತ್ರೀಯರ ಕುಣಿತವೇ ಆಗಿರಬಹುದೆಂದು ಹೇಳಿರುವ ವಿಚಾರವು ವಿಚಾರಣೀಯವಾಗಿದೆ. ದಾಸರಾಟದ ಜನಪ್ರಿಯತೆ ಎಷ್ಟಿತ್ತೆಂಬುದಕ್ಕೆ ಒಂದು ಕತೆಹೇಳುವದುಂಟು. ಕ್ರಿ. ಶ. ೧೦೨೧-೧೧... ವಿಜಾಪುರ ಜಿಲ್ಲೆಯಲ್ಲಿ ಅಕ್ಕಮ್ಮ ರಾಜ್ಯವಾಳುತ್ತಿದ್ದಳು. ಅನಂತರ ಹಾಳಾದ ಈ ಪಟ್ಟಣ ಅರಸೀಬೀದಿ, ಇಲ್ಲಿ ದೆವ್ವಗಳಿದ್ದವಂತೆ. ಒಮ್ಮೆ ಒಂದು ದಾಸರಾಟದ ತಂಡ ಅಲ್ಲಿಂದ ಹಾದುಹೋಗುವಾಗ ಅಲ್ಲಿಯವರು ಆ ತಂಡದವರನ್ನು ಆಟವಾಡಲು ವಿನಂತಿಸಿದರಂತೆ. ಆದರಂತೆಯೇ ದಾಸರಾಟದವರು ಒಳ್ಳೇ ಸಂಭ್ರಮದಿಂದ ಆಟವಾಡಿದರಂತೆ. ಬೆಳಗಾಗುತ್ತಲೇ ನೋಡುತ್ತ ಕುಳಿತ ವಿಕಾರ ಮುಖಗಳನ್ನು

ಕಂಡು ಕೆಲ ಆಟದವರು ಮಡಿದರಂತೆ. ಆದರೆ ಅಲ್ಲಿಂದ ದಾಸರಾಟದ ಮುಂದಾಳು ಹಾಗೂ ಒಬ್ಬ ನಟ ಬದುಕಿ ಉಳಿದು ಬಂದರಂತೆ. ಆಟ ಆಡಲು ಕೇಳಿದವರು, ಆಟ ನೋಡಿದವರು ಮನುಷ್ಯರಾಗಿರದೆ ಭೂತಗಳಾಗಿದ್ದುವಂತೆ. ಅಂದರೆ ಭೂತಪ್ರಪಂಚಕ್ಕೂ ದಾಸರಾಟ ಇಷ್ಟವಾಗಿತ್ತೆಂಬುದು ಇದರಿಂದ ವೇದ್ಯವಾಗುತ್ತದೆ.

ದಾಸರಾಟದ ನೇರವಾದ ಪ್ರಭಾವ ಮಹಾರಾಷ್ಟ್ರದ ಜಾನಪದ ರಂಗಭೂಮಿಯ ಮೇಲಾಗಿ 'ತಮಾಶಾ' ಎನ್ನುವ ಜಾನಪದ ರೂಪಕ ಪದ್ಧತಿ ಬೆಳೆಯಲು ಕಾರಣವಾಗಿದೆ ಎಂಬುದನ್ನು ಅಭಿಮಾನದಿಂದ ನೆನೆಯಬಹುದು.

ದಾಸರು ದೇವತಾಸ್ತುತಿಯನ್ನು ಮಾಡುವಾಗ ವಿಶೇಷವಾಗಿ ಪುರಂದರ ದಾಸರ ಹಾಡುಗಳನ್ನು ಹೇಳುವುದು ಕೆಲಕಡೆಗೆ ವಾಡಿಕೆ ಇದೆ. ಕೆಲವು ಉದಾಹರಣೆಗಳು, 'ರಾಮರಾಮ ರಾಮ ಸೀತಾ ರಾಮ ಎನ್ನಿರೊ । ಪ್ರೇಮದಿಂದ ಭಜಿಸಿ ಅವನ ಮುಕ್ತಿ ಪಡಿಯಿರೋ ॥ ಪಲ್ಲ ॥ ಎಂದು, 'ದೇವಕಿನಂದನ ಮುಕುಂದ । ನಿಗಮೋದ್ಧಾರ ನವನೀತ ಚೋರ । ಖಗಪತಿವಾಹನ ಜಗದೋದ್ಧಾರ ॥' ಎಂದು ಹಾಡು ಹೇಳುವರು. ತಾಯಿ ಮಗುವನ್ನು ಆಡಿಸುವಾಗ– 'ಪಡದ ಬಾಣತಿ ಒಳಗೇನ ಮಾಡತಿ । ಬಂದ ಬಂದವರಿಗೆ ಗಂಧವ ಕೊಡುತಿ ಜೋ ಜೋ ॥ ಬಂದ ಬಂದವರಿಗೆ ಗಂಧವ ಕೊಡುತಿ । ಕಣ್ಣಿಗಿ ಕಾಡಿಗಿ ಹಚ್ಚಿ ಕಂದಗ ಮಲಿ ಕುಡಸ್ತಿ ।... ಅವರಾಯಿ ತಂದಾಳ ಚಾಯದ ಮುರಗಿ । ಅಪರ ಮುತ್ಯಾ ತಂದಾನೊಂದು ಮುತ್ತಿನ ಟೊಪ್ಪಿಗಿ ಜೋ...ಜೋ' ॥... ಎಂದು ಜೋಗುಳ ಹಾಡುವರು. ಲಗ್ನದ ಸಮಯದಲ್ಲಿ– "ಸುರಗಿ ಸುತ್ತು ಅಣ್ಣ ನೋಡೊ ನಿನ್ನ ಗಡೆಗಣ್ಣ । ಚಾಯದ ಉಂಗುರ ತೆಗೆಯಬೇಕು ॥ ಚಾಯದ ಉಂಗುರ ತೆಗೆಯಬೇಕು । ಎಳೆಯ ಹಾರ್‍ಯಾವು ಜತನಾವ । ಬಿಳಿಯ ಕಂಡಿಕಿ ಕೈಯಾಗ ಹಿಡಕೊಂಡು। ಬಿಳಿಗಣ್ಣ ನೋಟ ತಿರುವುತ । ಬಿಳಿಗಣ್ಣ ನೋಟ ತಿರುವುತ ಮದಿಮಗನ ಸೋದರ ಮಾವ ಸುತ್ತ್ಯಾನ ಸುರಗಿಯ" ॥ ಹಾಗೆಯೆ ಕುಬಸದ ಕಾಲಕ್ಕೆ ತವರವರ ಹೊಲದಾಗ ಎಳೆಯ ಸವತಿಯ ಕಾಯಿ । ತಿಂದಿನಂದೀತ ಎನ್ನ ಜೀವ ತಾಯವ್ವ ॥ ಹಪ್ಪಳ ಶಂಡಿಗಿ ಉಪ್ಪಿನಕಾಯವ । ತಿಂದಿನಂದೀತ ಎನ್ನಜೀವ ತಾಯವ್ವ । ಹಸರ ಕಡ್ಡಿಯ ಬಿಳಿಯ ಮಲ್ಲಿಗೆ ಹೂವಿನ ದಂಡೆ ಕಟ್ಟಿನಂದೀತ ಎನ್ನ ಜೀವಾ ತಾಯವ್ವ ॥ ಇಲಕಲ್ಲ ದಡಿಯ ಸೀರಿ ಗಿಣಿಯ ಬಣ್ಣದ ಕುಬಸ ತೊಟ್ಟಿನಂದೀತ ಎನ್ನ ಜೀವ ತಾಯವ್ವ ॥ ಗಂಗವ್ವ ಗೌರವನಂಥ ಹೇಮರಡ್ಡಿ ಮಲ್ಲಮ್ಮನಂಥ ಮಗಳ ಬೇಡೀತ ಎನ್ನ ಜೀವ ತಾಯವ್ವ॥... ಎಂದು ಹೀಗೆಯೇ ಹಾಡಿಕೊಂಡು ಹೋಗುವರು.

**ಉಪಸಂಹಾರ :** ಇಲ್ಲಿಯವರೆಗಿನ ವೃತ್ತಾಂತದಿಂದ ದಾಸರು ಶೂದ್ರ ಜಾತಿಗಳಿಂದ ಬಂದ ಧಾರ್ಮಿಕ ಭಿಕ್ಷುಕರೆಂಬುದು ಕಂಡುಬರುತ್ತದೆ. ಅವರು ಹಿಂದು, ಇಂದೂ

ವಿಷ್ಣುವಿನ ಉಪಾಸಕರು. ನಾಗರಿಕತೆಯು ಬೆಳೆದಂತೆ, ಸರಕಾರದ ವಿಶೇಷವಾದ ಸಹಾಯ ಸೌಲಭ್ಯಗಳು ದೊರಕುತ್ತಿರುವಂತೆ ಅವರ ಬದುಕಿನ ಆಚಾರ-ವಿಚಾರಗಳಲ್ಲಿ ಇಂದು ಹೊಸತನ ಕಾಣಿಸಿಕೊಳ್ಳುತ್ತಿರುವುದು ಅನಿವಾರ್ಯವಾಗಿದೆ. ಇಂದು ದಾಸರನ್ನು ಸಂದರ್ಶಿಸಿ ಅವರು ವಿವಿಧವಾದ ಆಚಾರ-ವಿಚಾರಗಳ ಬಗ್ಗೆ ವಿವರ ಕೇಳಬಯಸಿದರೆ ಅವರು 'ಎಲ್ಲಾ ಆಚಾರ ನಿಮ್ಮಂಗನ ಮಾಡತೀವರ್ರಿ' ಎಂದು ಹೇಳುವದನ್ನು ಕಾಣುತ್ತಿದ್ದೇವೆ. ಅವರಲ್ಲಿಯೂ ಇಂದು ವಿದ್ಯಾಭ್ಯಾಸವನ್ನು ಪಡೆದುಕೊಂಡವರು ಸಿಗುವರಾದರೂ ಗಣನೀಯವಾದ ಸಂಖ್ಯೆಯಲ್ಲಿ ಇಲ್ಲವೆಂದೇ ಹೇಳಬೇಕು. ವಿವಿಧ ಸಂಪ್ರದಾಯ ಕಂದಾಚಾರಗಳಿಂದ ಬಿಡುಗಡೆಪಡೆದು ಮೇಲೇಳಬೇಕೆಂಬ ಪ್ರಜ್ಞೆಯನ್ನು ಹೊರುತ್ತಿರುವುದು ಶುಭಸೂಚನೆಯಾಗಿದೆ.

---

[ಲೇಖನ ಸಿದ್ಧಗೊಳಿಸುವಾಗ ಕ್ಷೇತ್ರಕಾರ್ಯದಲ್ಲಿ ಸಹಾಯಕರಾದ ಮಿತ್ರ ಶ್ರೀ ಸಿದ್ಧಾಂತಿ, ವಿದ್ಯಾರ್ಥಿ ಮಿತ್ರ ಶ್ರೀ ಮೇಟಿ, ಮಿತ್ರ ಕಿಲ್ಲೇದಾರರ ಸಹಾಯವನ್ನು ಸ್ಮರಿಸುವೆ. ಶ್ರೀ ಎಸ್. ಎಂ. ಅಂಗಡಿ ಅವರಿಗೂ ಋಣಿಯಾಗಿರುವೆ.]

## ಸಹಾಯಕ ಗ್ರಂಥಗಳು :

1. Caster and Tribes of Southern India-by E. Thurston.
2. The Mysore Tribes and Castes Vol. III- L. K. Ananta Krishna Iyar.
3. ಕರ್ನಾಟಕ ಜಾನಪದ ರಂಗಭೂಮಿ— ಶ್ರೀ ಎಂ. ಟಿ. ಧೂಪದ.
4. ಕನ್ನಡ ವಿಶ್ವಕೋಶ.
5. ಗ್ಯಾರೆಘೀಟಿಯರ ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕಭಾಗದ್ದು— ವೆಂಕಟರಂಗೋ ಕಟ್ಟಿ.
6. ದಿ. ಎಥನೋಗ್ರಾಫಿಕ್ ಸರ್ವೆ ಆಫ್ ಬಾಂಬೆ.
7. ಮಹಾರಾಷ್ಟ್ರ ಜ್ಞಾನಕೋಶ— ಶ್ರೀ ಕೇತಕರ.

# ಸಾರುವಯ್ಯನವರು

**ಎಸ್. ಜಿ. ಹುಬ್ಬಳ್ಳಿ**

ಜಾನಪದ ಸಾಹಿತ್ಯ ವೈವಿಧ್ಯಪೂರ್ಣವೂ, ವೈಶಿಷ್ಟ್ಯಪೂರ್ಣವೂ ಆಗಿರುವಂತೆ ಜಾನಪದ ಕಲೆಗಳು ಕೂಡ ವೈವಿಧ್ಯ ಹಾಗೂ ವೈಶಿಷ್ಟ್ಯಪೂರ್ಣವಾಗಿವೆ. ಜಾನಪದ ಕಲೆಗಳಲ್ಲಿ ಕೆಲವು ಹವ್ಯಾಸಿ ಕಲೆಗಳಾಗಿದ್ದರೆ ಕೆಲವು ವೃತ್ತಿ ಕಲೆಗಳಾಗಿವೆ. ಈ ಕಲೆಗಳ ಉದ್ದೇಶ ಧರ್ಮಪ್ರಸಾರದ ಜೊತೆಗೆ ದಣಿದು ಬಂದ ಜನರಿಗೆ ತಣಿವನ್ನೀಯುವ ಮನರಂಜನೆಯನ್ನುಂಟು ಮಾಡುವದಾಗಿದೆ. ಆದರೆ ಇಲ್ಲಿ ಧರ್ಮ–ನೀತಿಬೋಧನೆ ಮುಖ್ಯ; ಮನರಂಜನೆ ಗೌಣ. ಜನರ ಆಸರ–ಬೇಸರವನ್ನು ಕಳೆದು ಅವರಲ್ಲಿ ಆನಂದದ ಅಲೆಗಳು ಏಳುವಂತೆ ಮಾಡುವದೆ ಈ ಕಲೆಗಳ ಬಳಕೆಗೆ ಕಾರಣ. ಶಿಷ್ಟ–ವಿಶಿಷ್ಟ ವಿಚಾರಗಳನ್ನಾಗಲಿ, ಧರ್ಮ–ಆಚರಣೆಗಳನ್ನಾಗಲಿ ಜನಸಾಮಾನ್ಯರಿಗೆ ಅರ್ಥವತ್ತಾಗಿ ತಿಳಿಸುವದಕ್ಕೆ ಈ ಜಾನಪದ ಕಲೆ ಒಂದು ಸಾರ್ಥಕ ಸಾಧನವಾಗಿದೆ ಎಂದು ಹೇಳಬಹುದು. ಅದಕ್ಕಾಗಿಯೇ ಈ ಜಾನಪದ ಕಲೆಗೆ ಪ್ರಾಚೀನತೆಯಿದೆ, ಅಷ್ಟೇ ಅಲ್ಲ ಪರಂಪರೆಯೂ ಇದೆ.

ಕರಪಲ್ಲವ ಇದೊಂದು ಜಾನಪದ ಕಲೆ. ಕರಪಲ್ಲವದ ಬಗೆಗೆ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಪ್ರಸ್ತಾಪ ಬರುವದರಿಂದ ಈ ಕಲೆ ಅಷ್ಟೊಂದು ಅಥವಾ ಅದಕ್ಕಿಂತ ಪ್ರಾಚೀನವೆಂದು ಪರಿಗಣಿಸಲಾಗುತ್ತದೆ. ಕನ್ನಡ ಸಾಹಿತ್ಯದಲ್ಲಿ ಕರಪಲ್ಲವದ ಪ್ರಸ್ತಾಪ ಬರುವದು ಮಂಗರಾಜನ (ಮಂಗರಾಜ II, ಕಾಲ ೧೩೯೮) "ಅಭಿನವಾಭಿಧಾನ" ಎಂಬ ಗ್ರಂಥದಲ್ಲಿ. ಇದೊಂದು ನಿಘಂಟು. ಇದರಲ್ಲಿ ಕರಪಲ್ಲವವನ್ನು ಕುರಿತು ಒಂದು ಪದ್ಯದಲ್ಲಿ ಹೀಗೆ ಬರೆಯಲಾಗಿದೆ.

ಕಿಱುವೆರಳ ಮೂರೇಖೆ ತುದಿವೆರಳ ಮಿಡಿತ ಸಹ ।
ಬೆರಳೈದಱಿಂ ೞು ಕಕಾರಾದ್ಯಯ್ದು ವರ್ಗಮಂ ।
ಬೆರಳೈದು ಮಡಿದು ಬಿಟ್ಟೊಡೆ ಯಕಾರಾದಿ ಹಿಡಿಕಿಸಿ ಬಿದುರೆ
ಲಕ್ಷಮುಕ್ಕುಂ ॥

ಬೆರಳಿಗಡವರೆಯುಲಿಳಿ ಸುಟ್ಟುಂಬೆಯಾದಿ ।
ಮರೆಗುಡಿಸು ಕೊಂಬು (ಬಿ) ವೊತ್ತೋಳಿರ್ದುಂ ದೀರ್ಘ ।
ಬೆರಳ ಚಕ್ರಿಸೆ ಸೊನ್ನೆ ಬಿಸಲೊತ್ತಿನಿತು ಕರಪಲ್ಲವಂ ॥

ಇಂಥ ಜಾನಪದ ಕಲೆಯಾದ ಕರಪಲ್ಲವವನ್ನು ಬಳಸಿಕೊಂಡು, ಬೆಳೆಯಿಸಿಕೊಂಡು ಇಂದು ಜಾನಪದ ವೃತ್ತಿಕಲಾವಿದರು ಅದನ್ನು ಉಳಿಸಲು ಹೆಣಗುತ್ತಿದ್ದಾರೆ. ಈ ಜಾನಪದ ಕಲೆಗೆ ಸಾಕಷ್ಟು ಪ್ರೋತ್ಸಾಹವಿಲ್ಲದಿದ್ದರೂ ಜಾನಪದ ವೃತ್ತಿಕಲಾವಿದರು ತಮ್ಮ ಉತ್ಸಾಹವನ್ನು ಕುಗ್ಗಿಸಿಕೊಂಡಿಲ್ಲ. ವೃತ್ತಿಗಾಗಿಯೊ, ಪ್ರವೃತ್ತಿಗಾಗಿಯೋ ರೂಢಿಸಿಕೊಂಡು ಸಾಗಿದ್ದಾರೆ.

ಜಾನಪದ ವೃತ್ತಿಕಲಾವಿದರಲ್ಲಿ ಕರಪಲ್ಲವದವರು ಮತ್ತು ಸಾರುವಯ್ಯನವರು ಸೇರುತ್ತಾರೆ. ಈ ವೃತ್ತಿಗಳು ಕೆಲವರಿಗೆ ವಂಶಪರಂಪರಾಗತವಾಗಿ ಬಂದದ್ದಾದರೆ. ಕೆಲವರಿಗೆ ಉಪಜೀವನಕ್ಕೆ ಒಂದು ಸಾಧನವಾಗಿಯೂ ಬಂದಿವೆ. ಕರಪಲ್ಲವದವರು ಎಂಬ ಈ ಜಾನಪದ ವೃತ್ತಿಕಾರರನ್ನು ಕುರಿತು ಹೇಳುವದಕ್ಕಿಂತ ಮೊದಲು ಇಲ್ಲಿ ಕರಪಲ್ಲವ ಶಬ್ದದ ವಿವೇಚನೆಯನ್ನು ಸ್ಥೂಲವಾಗಿ ನೋಡಬಹುದು. ಕರಪಲ್ಲವ ಎಂಬ ಶಬ್ದದ ಅರ್ಥವನ್ನು ನಿಘಂಟುಗಳು ಹೀಗೆ ನೀಡುತ್ತವೆ.

ಕರಪಲ್ಲವ = ಚಿಗುರಿನಂತಹ ಕೈ, ಬೆರಳು, ಕೈಯಿಂದ ಮಾಡುವ ಸಂಜ್ಞೆ [ಕಿಟೆಲ್ ನಿಘಂಟಿನಲ್ಲಿ– **Finger, hand, Conversation with fingers**],

ಪಲ್ಲವ = ಚಿಗುರೆಲೆ, ತಳಿರು, ಮೊಳಕೆ, ವಿನೋದದ ಆಟ, [ಕಿಟೆಲ್ ನಿಘಂಟು– **A sprout, a shoot, spreading, a collection of words**] (ಶಬ್ದಸಮೂಹ)

ಈ ತೆರನಾದ ಅರ್ಥಗಳನ್ನು ಕಂಡಾಗ ಕರಪಲ್ಲವ ಎಂಬುದಕ್ಕೆ ಕೈಯಿಂದ ಮಾಡುವ ಸಂಜ್ಞೆ, **conversation with hands,** ವಿನೋದದ ಆಟ, **collection of words** (ಶಬ್ದಸಮೂಹ) ಎಂಬ ಅರ್ಥಗಳನ್ನು ಅನ್ವಯಿಸಿಕೊಂಡು ಕರಪಲ್ಲವದವರು ಅಂದರೆ ಕೈಯಿಂದ ಸಂಜ್ಞೆಮಾಡುವವರು, ವಿನೋದದ ಆಟ ಮಾಡುವವರು ಎಂದು

ಸ್ಥೂಲವಾಗಿ ಗ್ರಹಿಸಬಹುದು. ಈ ಶಬ್ದದ ಬಳಕೆ ರೂಢಿಯಲ್ಲಿ ಕರಪಲ್ಲ, ಕರ್ಪಲ್ಲ, ಕರಪಲ ಎಂದೂ ಇದೆ.

ಕರಪಲ್ಲವ ಒಂದು ಕಲೆಯಾಗಿರುವಂತೆ ಶಾಸ್ತ್ರವೂ ಆಗಿದೆ. ಕರಪಲ್ಲವದಲ್ಲಿ ಸಂಕೇತಭಾಷೆಯನ್ನು ಬಳಸಲಾಗುವುದು. ಒಂದು ಹಸ್ತಪ್ರತಿಯಲ್ಲಿ ದೊರೆತ 'ಕರಪಲ ಸವೃಜ್ಞಕಂ' ಎಂಬ ಸೂತ್ರಗಳನ್ನು ಆಧರಿಸಿ ಕರಪಲ್ಲವದ ವಿಷಯವಾಗಿ ಕೆಲವೊಂದು ವಿವರಗಳನ್ನು ಶ್ರೀ ಜಿ. ಜಿ. ಮಂಜುನಾಥನ್ ಅವರು ಪ್ರಬುದ್ಧ ಕರ್ನಾಟಕ ಪತ್ರಿಕೆಯಲ್ಲಿ ನೀಡಿದ್ದಾರೆ. ಡಾ. ಎಂ. ಚಿದಾನಂದ ಮೂರ್ತಿಯವರು ತಮ್ಮ 'ಸಂಶೋಧನತರಂಗ' (ಸಂಪುಟ ಎರಡು) ಎಂಬ ಕೃತಿಯಲ್ಲಿ ಕರಪಲ್ಲವ ವಿಷಯವಾಗಿ ವಿವರಗಳನ್ನು ಕೊಟ್ಟಿದ್ದಾರೆ. ಕರಪಲ್ಲವದಲ್ಲಿ ಕನ್ನಡ ವರ್ಣಮಾಲೆಗೆ ಅನುಗುಣವಾಗಿ ಸಂಕೇತಗಳನ್ನು ಮಾಡಿಕೊಳ್ಳಲಾಗುವುದು. ಸಂಕೇತಗಳಿಗೆ ಮುಖ್ಯವಾಗಿ ಬೆರಳುಗಳನ್ನು ಬಳಸಿಕೊಳ್ಳುತ್ತಾರೆ ಬೆರಳುಗಳ ಚಲನವಲನದ ಮೂಲಕ ಅನೇಕ ಸಂಕೇತಗಳನ್ನು ಮಾಡಿದಾಗ ಅದರಲ್ಲಿ ಅಡಕಗೊಂಡ ಧ್ವನಿಯನ್ನು ಬಿಚ್ಚಿ ಹೇಳಲಾಗುವುದು.

ಉದಾಹರಣೆ: ಅ – ಐದು ಬೆರಳುಗಳನ್ನು ಅಂಗೈ ಮೇಲಾಗಿ ಚಾಚುವದು.
ಆ – ಐದು ಬೆರಳುಗಳನ್ನು ಅಂಗೈ ಮೇಲಾಗಿ ಚಾಚುವದು, ಬಲಗಿವಿಯ ಕೆಳಭಾಗ ಮುಟ್ಟುವದು.

ಹೀಗೆ ಕನ್ನಡ ಅಕ್ಷರಗಳಿಗೆ ಕೆಲವೊಂದು ಆಂಗಿಕ ಸಂಜ್ಞೆಗಳನ್ನು ಮಾಡಿಕೊಂಡುದು ಕಂಡುಬರುತ್ತದೆ. ಕರಪಲ್ಲವ ಇದೊಂದು ಚತುರಕಲೆ ಮತ್ತು ವ್ಯವಸ್ಥಿತ ಶಾಸ್ತ್ರ. ಆದರೂ ಇದನ್ನು ಬಳಸಿಕೊಳ್ಳುವವರು ಯಾವುದೇ ನಿರ್ದಿಷ್ಟ ಪದ್ಧತಿಯನ್ನು ಅನುಸರಿಸದೆ ತಮ್ಮ ತಮ್ಮಲ್ಲಿಯೆ ಕೆಲವೊಂದು ಸಂಕೇತಗಳನ್ನು ನಿರ್ಧರಿಸಿಕೊಂಡು ಬಳಸುವ ರೂಢಿಯೂ ಇದೆ. ಈ ಸಂಕೇತಗಳು ಆ ಗುಂಪಿನಲ್ಲಿದ್ದವರಿಗೆ ಮಾತ್ರ ತಿಳಿಯುತ್ತವೆ. ಒಂದೊಂದು ಗುಂಪಿನವರು ತಮ್ಮ ಸಂಕೇತಗಳ ರಹಸ್ಯವನ್ನು ಕಾಪಾಡಿಕೊಂಡು ಹೋಗುತ್ತಾರೆ.

ಈ ರೀತಿ ಶಾಸ್ತ್ರೀಯ ರೂಪದಲ್ಲಿರುವ ಕರಪಲ್ಲವ ಕಲೆಯನ್ನು ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡ ಕಲಾವಿದರನ್ನು ಕರಪಲ್ಲವದವರು ಎಂದು ಕರೆಯುತ್ತಾರೆ.

ಕರಪಲ್ಲವದವರನ್ನು 'ಕರಪಲ್ಲದ ಐಗಳು' ಎಂದೂ ಕರೆಯುತ್ತಾರೆ. ವಿಶೇಷವಾಗಿ ಜಂಗಮರೆ ಈ ಕರಪಲ್ಲವ ಕಲೆಯನ್ನು ಬಳಸಿಕೊಳ್ಳುತ್ತಾರೆ. ಜಂಗಮರಿಗೆ ಮೀಸಲಾದ ಕಲೆಯಿದು. ಕರಪಲ್ಲವ ಮೇಳದಲ್ಲಿ ಸಾಮಾನ್ಯವಾಗಿ ಮೂವರು ಇರುವದುಂಟು. ಒಬ್ಬ ಗುರು ಇಬ್ಬರು ಶಿಷ್ಯರು. ದಮ್ಮಡಿ–ತಾಳ ಬಾರಿಸುತ್ತ ದೂರದಲ್ಲಿ ನಿಂತಿರುವ ಶಿಷ್ಯರಿಗೆ ಗುರುವು ಬೆರಳಲ್ಲಿ ಸಂಜ್ಞೆಮಾಡಿ ರಹಸ್ಯವಾಗಿ ವಿಷಯ ತಿಳಿಸುವುದು, ಅದನ್ನು ಶಿಷ್ಯರು ಎಲ್ಲರಿಗೂ ತಿಳಿಸುವಂತೆ ಒಡೆದು ಹೇಳುವದು ಇದೇ ಕರಪಲ್ಲವ ಕಲೆ.

ಜಾನಾಂಗಿಕ ಅಧ್ಯಯನದ ಮೇರೆಗೆ ಕರಪಲ್ಲವ ವೃತ್ತಿಕಲಾವಿದರನ್ನು ಕುರಿತು ವಿಚಾರಿಸಿದಾಗ ಕೆಲವೊಂದು ಸಂಗತಿಗಳು ಹೀಗೆ ತಿಳಿದು ಬರುತ್ತವೆ. 'ಈ ವೃತ್ತಿ ಅಲ್ಲಮಪ್ರಭು-ಬಸವೇಶ್ವರರ ಕಾಲದಿಂದಲೂ ನಡೆದು ಬಂದುದು. ಹನ್ನೆರಡನೆಯ ಶತಮಾನದ ಶಿವಶರಣರ ಕಾಲದಿಂದಲೂ ಈ ವೃತ್ತಿಯನ್ನು ವಂಶಪಾರಂಪರಾನುಗತ ವಾಗಿ ಮಾಡುತ್ತ ಬಂದಿದ್ದಾರೆ. ಇದು ವಿಶೇಷವಾಗಿ ಹಿರೇಮಠದ ಅಯ್ಯನವರ ಕಾಯಕ. ಕಲ್ಯಾಣಕ್ರಾಂತಿಯ ನಂತರ ಧರ್ಮಪ್ರಚಾರ ಕಾರ್ಯನಿರ್ವಹಿಸುವ ಪಾತ್ರ ಇವರದಾಗಿತ್ತು. ಹಳ್ಳಿ-ಹಳ್ಳಿಗಳಲ್ಲಿ ಸಂಚರಿಸಿ ವೀರಶೈವ ಧರ್ಮದ ತತ್ವ, ಆಚಾರ-ವಿಚಾರಗಳನ್ನು ಜನಸಾಮಾನ್ಯರಿಗೆ ತಿಳಿಸಿ ಹೇಳುವದು ಈ ವೃತ್ತಿಯ ಉದ್ದೇಶ ವಾಗಿತ್ತು'- ಎಂದು ತಮ್ಮ ವೃತ್ತಿ ಪರಂಪರೆಯ ವಿಷಯವಾಗಿ ಈ ವೃತ್ತಿಕಾರರು ಹೇಳಿಕೊಳ್ಳುತ್ತಾರೆ.

ಬಹುಶಃ ಹನ್ನೆರಡನೆಯ ಶತಮಾನದಿಂದ ಅವಿಚ್ಛಿನ್ನವಾಗಿ ಈ ಪರಂಪರೆ ಬೆಳೆದು ಬಂದಿರಬೇಕು. ಏಕೆಂದರೆ ೧೩೯೮ ರಲ್ಲಿ ಬಾಳಿದ ಅಭಿನವ ಮಂಗರಸನ (ಮಂಗರಸ II) 'ಅಭಿನವಾಭಿಧಾನ' ಎಂಬ ಕೃತಿಯಲ್ಲಿ ಕರಪಲ್ಲವದ ಪ್ರಸ್ತಾಪ ಮಾಡಿರುವದು ಮೇಲಿನ ಅಭಿಪ್ರಾಯವನ್ನು ಪುಷ್ಟಿಗೊಳಿಸುತ್ತದೆ.

ಈ ವೃತ್ತಿಯ ಉದ್ದೇಶವನ್ನು ಕೆಲವರು ಹೀಗೂ ಹೇಳುತ್ತಾರೆ. ಶಿವನಾಮ ಸ್ಮರಣೆಮಾಡದ, ಅವಿಚಾರ-ಅನಾಚಾರಗಳಲ್ಲಿ ತೊಡಗಿದವರ ಬಗೆಗೆ ರಹಸ್ಯವಾಗಿ ಕರಪಲ್ಲವಸಂಜ್ಞೆಯ ಮೂಲಕ ಶಿಷ್ಯರು ಗುರುಗಳಿಗೆ ಸೂಚಿಸುವದು. ಗುರುಗಳು ಅಂಥವರನ್ನು ಕರೆಯಿಸಿ ಅವರ ತಪ್ಪನ್ನು ತಿಳಿಸಿ ತಪ್ಪುದಂಡ ಹಾಕುವದು. ಆ ಹಣ ವನ್ನು ಸಮಾಜದ ಸತ್ಕಾರ್ಯಗಳಿಗೆ ವಿನಿಯೋಗಿಸುವದು. ತನ್ಮೂಲಕ ಧರ್ಮ ಸಂರಕ್ಷಣೆ ಮತ್ತು ಧರ್ಮಪ್ರಸಾರ ಮಾಡುವುದು.

ಕರಪಲ್ಲವದವರು ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿಯೇ ವಾಸಿಸುತ್ತಾರೆ. ಈ ವೃತ್ತಿಕಲಾವಿದರ ಮೂಲಸ್ಥಳ ಉತ್ತರಕರ್ನಾಟಕವೆಂದೇ ಹೇಳಬಹುದು. ಈ ಕರಪಲ್ಲವಕಲೆ ಉತ್ತರ ಕರ್ನಾಟಕದಿಂದಲೆ ದಕ್ಷಿಣಕರ್ನಾಟಕಕ್ಕೆ ಸಾಗಿ ಬಂದಿತು ಎಂದು ಹೇಳುತ್ತಾರೆ. ಆದರೂ ದಕ್ಷಿಣ ಕರ್ನಾಟಕದ ಕರಪಾಲಮೇಳಕ್ಕೂ ಉತ್ತರ ಕರ್ನಾಟಕದ ಕರಪಲ್ಲವಮೇಳಕ್ಕೂ ಅನೇಕ ರೀತಿಯಲ್ಲಿ ವ್ಯತ್ಯಾಸಗಳು ಕಂಡುಬರುತ್ತದೆ. ಕರಪಾಲ ಮೇಳದಲ್ಲಿ ಹಾಡು-ಕುಣಿತ ವಿಶೇಷ; ಆಂಗಿಕಸಂಜ್ಞೆ ಗೌಣ. ಕರಪಲ್ಲವ ಮೇಳದಲ್ಲಿ ಆಂಗಿಕಸಂಜ್ಞೆಯೆ ಪ್ರಧಾನ; ಹಾಡು-ಕುಣಿತ ಗೌಣ.

ಮೊದಲಲ್ಲಿ ಈ ವೃತ್ತಿ ಕೆಲವರಿಗೆ ಮುಖ್ಯ ಕಾಯಕವೆ ಆಗಿತ್ತು. ಈ ಕಾಯಕ ಒಂದೊಂದು ಹಿರೇಮಠದವರ ಮನೆತನದಲ್ಲಿ ಪರಂಪರಾನುಗತವಾಗಿ ನಡೆದುಕೊಂಡು

ಬಂದಿದೆ. ಮುಂದೆ ಕೆಲವರಿಗೆ ಇದು ಉಪಕಾಯಕವಾದರೆ ಇನ್ನುಕೆಲವರಿಗೆ ಉಪ ಜೀವನಕ್ಕಾಗಿ ಒಂದು ವೃತ್ತಿ ಎನ್ನುವಂತಾಯಿತು. ಈಗಲೂ ಈ ವೃತ್ತಿಯನ್ನು ವಂಶ ಪರಂಪರೆಯಿಂದಲೂ ಮಾಡುತ್ತ ಬಂದ ಜಂಗಮರು ವಿರಳವಾಗಿ ದೊರೆಯುತ್ತಾರೆ. ಜಂಗಮರಲ್ಲದವರೂ ಈ ಕಾಯಕದಲ್ಲಿ ಸೇರಿಕೊಂಡಿದ್ದಾರೆ.

ಈ ವೃತ್ತಿಕಲಾವಿದರ ಜೀವನವಿಧಾನ–ಸಂಸಾರಗಳೆಲ್ಲ ವೀರಶೈವರಂತೆಯೆ. ಅಂದರೆ ಶಿವನೇ ಪರದೈವ. ಇಷ್ಟಲಿಂಗಧಾರಿಗಳು, ಜನನ ಕಾಲಕ್ಕೆ ಗುರುವಿನ ಹಸ್ತದಿಂದ ಲಿಂಗಧಾರಣೆ, ಅಯ್ಯಾಚಾರ (ದೀಕ್ಷೆ) ಈ ಮುಂತಾದವು ವಿಶಿಷ್ಟ ಧಾರ್ಮಿಕ ವಿಧಿ ಗಳಾಗಿವೆ. ವಿವಾಹ ಕಾಲಕ್ಕೆ ಪಂಚಕಲಶ ಹೂಡುವ ಪದ್ಧತಿ, ವಿವಾಹ ಸಂಬಂಧದಲ್ಲಿ ಧಾರ್ಮಿಕ ಹಿನ್ನೆಲೆಯಲ್ಲಿ ತಮಗೆ ಸಮಾನರಾದವರೊಡನೆ ಮಾತ್ರ ಸಂಬಂಧ ಮಾಡುವದು ಕಂಡುಬರುತ್ತದೆ. ಶವಸಂಸ್ಕಾರ ಪದ್ಧತಿ ಹೂಳುವದಾಗಿದೆ. ಇವರು ಸಸ್ಯಾಹಾರಿಗಳು ಭವಿಗಳ ಸಂಗವನ್ನು ನಿಷೇಧಿಸಲಾಗಿದೆ.

ಕರಪಲ್ಲವದವರು ವಿಶಿಷ್ಟ ವೇಷಭೂಷಣಗಳನ್ನು ಧರಿಸಿರುತ್ತಾರೆ. ಕರಪಲ್ಲವ ಮೇಳದ ಗುರು ತಲೆಯ ಮೇಲೆ ಕಾವಿರುಮಾಲು, ಕಿವಿಯಲ್ಲಿ, ಕೊರಳಲ್ಲಿ, ಮುಂಗೈ ಯಲ್ಲಿ ರುದ್ರಾಕ್ಷಿ, ಹಣೆಯ ಮೇಲೆ ಭಸ್ಮಧಾರಣೆ, ಕಾವಿಅಂಗಿ, ಬಿಳಿಯ ಧೋತರ, ಕಾವಿ ನಡಪಟ್ಟಿ, ಶಲ್ಲೆ, ಕಾಲಲ್ಲಿ ಹಾವುಗೆ, ಬಗಲಲ್ಲಿ ಜೋಳಿಗೆ, ಕೈಯಲ್ಲಿ ಕೊಡೆ ಮತ್ತು ಕಂದೀಲು ಹಿಡಿದಿರುತ್ತಾರೆ. ಇಲ್ಲಿ ಕೊಡೆ ಗೌರವದ ಸಂಕೇತವಾದರೆ ಕಂದೀಲು ಜ್ಯೋತಿಯ ಸಂಕೇತ. ಶಿಷ್ಯರು ತಲೆಯಮೇಲೆ ಕಾವಿರುಮಾಲು ಇಲ್ಲವೆ ಕಾವಿ ಟೊಪ್ಪಿಗೆ, ಕಾವಿಯ ಅಂಗಿ, ಬಿಳಿಯ ಧೋತರ, ಕೊರಳಲ್ಲಿ ರುದ್ರಾಕ್ಷಿ, ಭಸ್ಮಧಾರಣೆ, ನಡಪಟ್ಟಿ, ಕೈಯಲ್ಲಿ ದಮ್ಮಡಿವಾದ್ಯ ಮತ್ತು ತಾಳಗಳು ಇರುತ್ತವೆ.

ಇಂಥ ವೇಷಭೂಷಣಗಳಿಂದ ಅಲಂಕೃತರಾಗಿ ಊರೂರು ಅಲೆಯುವದೇ ಇವರ ಕಾಯಕ. ಆ ಊರ ಮಠದಲ್ಲಿ ವಾಸ. ಸಂತೆ–ಜಾತ್ರೆಗಳಲ್ಲಿ ಭಿಕ್ಷಾಟನೆಗಾಗಿ ಹಗಲಿನಲ್ಲಿ ಸಂಚರಿಸುತ್ತಾರಾದರೂ ರಾತ್ರಿಯಲ್ಲಿ ಮಾತ್ರ ಧರ್ಮಪ್ರಸಾರಕಾರ್ಯದ ಜೊತೆಗೆ ಕರಪಲ್ಲವ ಮಾಡುತ್ತಾರೆ.

ಸುವ್ವಿ ಬಾ ಸಂಗಯ್ಯ । ಸುವ್ವಿ ಬಾ ಲಿಂಗಯ್ಯ ।
ಸುವ್ವಿ ಬಾ ಚನ್ನಬಸವಯ್ಯ ಸುವ್ವಿ ॥ ಎಂಬ ಪಲ್ಲವಿಯ ಜೊತೆಗೆ–
ಈಶಾನ ದಿಕ್ಕೀಲಿ ಬೀಸೀತು ಬಿರುಗಾಳಿ
ದೇಶಮಂಡಲವ ಮುಸುಕೀತು ಸುವ್ವಿ
ದೇಶಾಸೀ ಮಂಡಲವ ಮುಸುಕೀತು ಕೆಂಧೂಳ
ಮೋಸವಾದಾವು ಮಳೆಗಾಲ ಸುವ್ವಿ ॥

ಎಂಬ ಮುಂತಾದ ಕಾಲಜ್ಞಾನ ಹಾಡುಗಳನ್ನು ಹಾಡುತ್ತ ಬೀದಿ ಅಥವಾ ಪೇಟೆಗಳಲ್ಲಿ ಸಾಗುತ್ತಾರೆ. ಭಕ್ತಾದಿಗಳಿಂದ ಹಣ ಪಡೆದು ಅವರು ಹೇಳಿದ ಯಾವುದೇ ಹೆಸರ ನ್ನಾಗಲಿ ಕರಪಲ್ಲವ ಸಂಜ್ಞೆಯ ಮೂಲಕ ತಿಳಿಸಿ, ಶಿಷ್ಯರ ಮೂಲಕ ಒಡೆದು ಹೇಳಿಸಿ ಕೇಳಿದವರಿಗೆ ಅಚ್ಚರಿಯೊಂದಿಗೆ ಸಂತೋಷಪಡಿಸುತ್ತಾರೆ. ಕೇಳಿದವರ ಹೆಸರು ಒಡೆದು ಹೇಳುವ ರೀತಿ ಹೀಗಿದೆ.

ಮಲ್ಲಪ್ಪ ಹೌದೇನ್ರಿ ಮತ್ತಿನ್ನಾರ ಹೇಳಯ್ಯ
ಸುವ್ವಿ ಬಾ ಚನ್ನಬಸವಯ್ಯ ಸುವ್ವಿ ||

ಇವರು ಮನೆ ಮನೆಗೂ ಭಿಕ್ಷೆಗಾಗಿ ಬರುವದುಂಟು. ಭಕ್ತರು ಕೊಟ್ಟ ಕಾಣಿಕೆಯನ್ನು ಸ್ವೀಕರಿಸಿ ಅವರ ಮನೆದೇವರ ಹೆಸರನ್ನು ಕೇಳಿ– 'ಹಾಲು ಹೈನವಾಗಿ, ಬೆಳ್ಳಿ ಬಟ್ಟಲ ವಾಗಿ, ತೂಗುತೊಟ್ಟಿಲವಾಗಿ, ರೊಕ್ಕ ವೆಗ್ಗಳವಾಗಿ, ಮಕ್ಕಳ ಫಲವಾಗಿ, ಗುರು-ಲಿಂಗ-ಜಂಗಮರಿಗೆ ತವರುಮನೆಯಾಗಿ– ಗುರುವಿನ ಪಾದಕ್ಕೆ ಮುಟ್ಟಲಿ–ಎಂದು ಹರಸುತ್ತಾರೆ.

ಕರಪಲ್ಲವದವರಿಗೆ ನೆಲೆಯಾಗಿ ಒಂದು ಊರಿದ್ದರೂ ತಮ್ಮ ವೃತ್ತಿಗಾಗಿ ಊರೂರು ಅಲೆಯುತ್ತಲಿರುತ್ತಾರೆ. ಈ ವೃತ್ತಿಗೆ ಒಂದು ಧಾರ್ಮಿಕ ಸ್ಥಾನವಿದೆ; ಗೌರವವಿದೆ. ಮೊದಲು ಈ ವೃತ್ತಿಯನ್ನು ಪವಿತ್ರಕಾರ್ಯವೆಂದೂ ಧಾರ್ಮಿಕ ಹಾಗೂ ಸಾಮಾಜಿಕ ಸೇವೆಯೆಂದೂ ಮಾಡುತ್ತಿದ್ದರು. ಈಗ ಅವರಿವರು ಈ ವೃತ್ತಿಯಲ್ಲಿ ಸೇರಿ ವೃತ್ತಿಯ ಪಾವಿತ್ರ್ಯವನ್ನು ಕಾಯ್ದುಕೊಳ್ಳದೆ ಉಪಜೀವನಕ್ಕಾಗಿ ಒಂದು ಉಪಾಯ ಎಂಬ ಹಾಗೆ ಬಳಸಿಕೊಳ್ಳುತ್ತಿದ್ದಾರೆ.

ಪ್ರಾಚೀನ ಕಾಲದಿಂದಲೂ ಕರಪಲ್ಲವ ಒಂದು ವ್ಯವಸ್ಥಿತವಾದ, ಶಾಸ್ತ್ರೀಯವಾದ ಚತುರ ಕಲೆಯಾಗಿದ್ದು ರಾಜ–ಮಹಾರಾಜರು ಕೂಡ ಗೂಢಚಾರತನಕ್ಕಾಗಿ ಈ ಕಲೆ ಯನ್ನು ಸಾಧನವಾಗಿ ಬಳಸಿಕೊಳ್ಳುತ್ತಿದ್ದರು ಎಂಬುದಕ್ಕೆ ಕೆಲವೊಂದು ಆಧಾರಗಳು ದೊರೆಯುತ್ತವೆ. ಆದರೂ ಕರಪಲ್ಲವ ವೃತ್ತಿಕಲಾವಿದರು ಇದನ್ನು ಬಳಸಿಕೊಂಡದ್ದು ಧರ್ಮ ಮತ್ತು ಸಮಾಜ ಸೇವೆಗೆ ಒಂದು ಸಾಧನವೆಂದು. ಇಂಥ ವೃತ್ತಿಕಲಾವಿದರಿಗೆ ಸರಿಯಾದ ಸಹಾಯ–ಪ್ರೋತ್ಸಾಹನೆ ತೋರಿ, ಅವರ ಯೋಗಕ್ಷೇಮದ ಜವಾಬ್ದಾರಿ ಯನ್ನು ಇಂದಿನ ಸಮಾಜ ಹೊತ್ತುಕೊಂಡರೆ ಈ ಕಲೆ ಉಳಿದೀತು. ಅಷ್ಟೆ ಅಲ್ಲ ಬೆಳೆದೀತು.

**ಸಾರುವಯ್ಯನವರು :**

ಸಾರುವಯ್ಯನವರನ್ನು ಜಾನಪದ ವೃತ್ತಿಕಲಾವಿದರು ಎಂದು ಗುರುತಿಸುತ್ತಾರೆ. ಇವರ ಕಾಯಕ ಕಾಲಜ್ಞಾನವನ್ನು ಸಾರುವದು. ಇಲ್ಲಿ ಸಾರುವಯ್ಯನವರು ಎಂಬ

ಶಬ್ದದ ವಿವೇಚನೆಯನ್ನು ಸ್ಥೂಲವಾಗಿ ನೋಡಬಹುದು. ಇದು ಒಂದು ಸಮಸ್ತಪದ. ಸಾರು ಎಂಬ ಶಬ್ದಕ್ಕೆ ನಿಘಂಟುಗಳಲ್ಲಿ ಈ ಅರ್ಥಗಳು ದೊರೆಯುತ್ತವೆ :

ಸಾರು = ಹೇಳು, ಗಟ್ಟಿಯಾಗಿ ಹೇಳು, ಕೂಗಿ ಹೇಳು, ಪ್ರಕಟಪಡಿಸು.

ಇದರಿಂದ ಲೋಕ ಭವಿಷ್ಯವನ್ನು ಕುರಿತು ಹೇಳಿಕೆ ಸಾರುವವರನ್ನು ಸಾರುವಯ್ಯನವರು ಎಂದು ಕರೆಯುತ್ತಾರೆ. ಗುಲಬುರ್ಗಾ ಜಿಲ್ಲೆಯ ಕೊಡೇಕಲ್ಲಮಠದ ಬಸವಣ್ಣನವರ ಕಾಲಜ್ಞಾನವನ್ನು ಸಾರುವ ಇವರಿಗೆ ಕೊಡೇಕಲ್ಲ ಜಂಗಮರು, ಬಾಲಬಸವಗಳು ಎಂದೂ ಕರೆಯುತ್ತಾರೆ.

ಹನ್ನೆರಡನೆಯ ಶತಮಾನದ ಶಿವಶರಣರ ಕಾಲದಿಂದಲೂ ಈ ವೃತ್ತಿಯು ಸಾಗಿ ಬಂದಿದೆ ಎಂಬುದು ಈ ವೃತ್ತಿಕಲಾವಿದರ ಹೇಳಿಕೆ. ಅಲ್ಲಮಪ್ರಭು–ಬಸವಣ್ಣ–ಚೆನ್ನಬಸವಣ್ಣ ಮುಂತಾದ ಶಿವಶರಣರಲ್ಲಿ ಅಪಾರ ಭಕ್ತಿಯುಳ್ಳ ಇವರು ತಾವು ಹೇಳುವ ಕಾಲಜ್ಞಾನವು ಬಸವಣ್ಣನವರ ಕಾಲಜ್ಞಾನವೆಂದೇ ಹೇಳುತ್ತಾರೆ. ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣ ಮುಂತಾದ ವಚನಕಾರರು ಕಾಲಜ್ಞಾನ ವಚನಗಳನ್ನು ರಚಿಸಿರುವುದು ಸರ್ವವಿದಿತವಾಗಿದೆ. ಶಿಷ್ಟ ಸಾಹಿತ್ಯದಲ್ಲಿರುವ ಈ ವಚನಗಳನ್ನು ಸಾರುವಯ್ಯನವರು ಸಾರುವಾಗ ಅವು ಜಾನಪದ ಸ್ವರೂಪವನ್ನು ಪಡೆಯುತ್ತವೆ.

ಅಲ್ಲಮಪ್ರಭು–ಬಸವಣ್ಣನವರ ಕಾಲದಿಂದಲೂ ಈ ವೃತ್ತಿ ನಡೆದು ಬಂದುದು ಎಂದು ತಮ್ಮ ವೃತ್ತಿಪರಂಪರೆಯನ್ನು ಈ ಸಾರುವಯ್ಯನವರು ಹೇಳಿಕೊಳ್ಳುತ್ತಾರೆ. ವೀರಶೈವಧರ್ಮದ ತತ್ವಗಳ ಹಿನ್ನೆಲೆಯಲ್ಲಿ ಜನತೆಗೆ ನೀತಿಬೋಧನೆ ಮಾಡುವದೆ ಈ ವೃತ್ತಿಯ ಮುಖ್ಯ ಉದ್ದೇಶ. ಮುಂದಿನ ಕಾಲಮಾನದ ಆಗು–ಹೋಗುಗಳ ಬಗೆಗೆ ಜನರಿಗೆ ಮುನ್ನೆಚ್ಚರಿಕೆಯನ್ನು ನೀಡಿ, ಅವರು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುವದೂ ಈ ವೃತ್ತಿಯ ಉದ್ದೇಶವಾಗಿದೆ. ಜನತೆಯಲ್ಲಿ ದೈವೀಭಕ್ತಿಯನ್ನು ಪ್ರೇರೇಪಿಸಿ, ಅನೀತಿ–ಅನಾಚಾರಗಳಿಂದ ದೂರವಿದ್ದು, ಪಾಪಭೀರುಗಳಾಗಿದ್ದು, ಪಾರಮಾರ್ಥಿಕ ಒಲವನ್ನು ಬೆಳೆಯಿಸಿಕೊಂಡು ಮುಕ್ತಿಯನ್ನು ಪಡೆಯಿರಿ ಎಂದು ಸಾರುತ್ತ ಸಾಗುವದು ಇವರ ಕಾರ್ಯ.

ಜಂಗಮರಿಗೆ ಈ ವೃತ್ತಿ ಮೀಸಲಾದುದು. ಸಾಮಾನ್ಯವಾಗಿ ಹಿರೇಮಠದ ಅಯ್ಯನವರು ಈ ಕಾಯಕವನ್ನು ವಂಶಪರಂಪರೆಯಿಂದಲೂ ನಡೆಯಿಸಿಕೊಂಡು ಬರುತ್ತಾರೆ. ಈ ವೃತ್ತಿಕಲಾವಿದರು ವಿಶೇಷವಾಗಿ ಉತ್ತರಕರ್ನಾಟಕದಲ್ಲಿಯೆ ವಾಸಿಸುತ್ತಾರೆ. ಕೊಡೇಕಲ್ಲು, ಬಬಲಾದಿ, ಸಾರವಾಡ ಈ ಮುಂತಾದ ಊರುಗಳಲ್ಲಿ ಈ ವೃತ್ತಿಕಲಾ

ವಿದರ ಮನೆತನಗಳು ಕಂಡು ಬರುತ್ತವೆ. ಇವರಿಗೆ ನೆಲೆಯಾಗಿ ಒಂದು ಊರು ಇದ್ದರೂ ತಮ್ಮ ಈ ವೃತ್ತಿಗಾಗಿ ಊರೂರು ಅಲೆಯುತ್ತಿರುತ್ತಾರೆ.

ಈ ಸಾರುವಯ್ಯನವರು ವಿಶೇಷವಾಗಿ ಕೆಲವು ಮಠದ ಪರಂಪರೆಗಳನ್ನು ಅನುಸರಿಸಿ ಕಾಲಜ್ಞಾನವನ್ನು ಹೇಳುವ ಪದ್ಧತಿ ಇದೆ. ಇವರು ಕೊಡೇಕಲ್ಲುಮಠದ ಬಸವಣ್ಣನವರ ಕಾಲಜ್ಞಾನ, ಬಬಲಾದಿ ಸದಾಶಿವ ಚಿಕ್ಕಯ್ಯನವರ ಕಾಲಜ್ಞಾನ, ರುದ್ರಮುನಿಸ್ವಾಮಿಗಳ ಕಾಲಜ್ಞಾನ ಹೀಗೆ ಬೇರೆ ಬೇರೆ ಕಾಲಜ್ಞಾನಗಳನ್ನು ಅನುಸರಿಸಿ ಕೊಂಡು ಕಾಲಜ್ಞಾನವನ್ನು ಸಾರುವರು.

ಶಿವರಾತ್ರಿಯಿಂದ ಶಿವರಾತ್ರಿಯುವರೆಗೆ ಒಂದು ವರ್ಷಕಾಲದ ಮಳೆ-ಬೆಳೆ, ಆಗು-ಹೋಗುಗಳ ಭವಿಷ್ಯವನ್ನು ಇವರು ಸಾರುತ್ತಾರೆ. ಸಾರುವಯ್ಯನವರು ಲೋಕಭವಿಷ್ಯ ವನ್ನು ಕಂಡುಕೊಳ್ಳುವ ರೀತಿ ವಿಶಿಷ್ಟವಾಗಿದೆ. ಶಿವರಾತ್ರಿಯ ದಿನ ಬಬಲಾದಿ ಇಲ್ಲವೆ ಕೊಡೇಕಲ್ಲು ಮಠದಲ್ಲಿ ರಾತ್ರಿಯೆಲ್ಲಾ ಜಾಗರಣೆ ಮಾಡುತ್ತಾರೆ. ಬೆಳಗಿನಲ್ಲಿ ತಾಳೆಗರಿ ಗ್ರಂಥವೊಂದರಲ್ಲಿ ಭಕ್ತಿಯಿಂದ ಲೋಹದ ಕಡ್ಡಿಯನ್ನು ಇಡುತ್ತಾರೆ. ಆಗ ತೆರೆದ ಪುಟದಲ್ಲಿ ಬರೆದಿರುವ ವಿಷಯವನ್ನು ಸಂಗ್ರಹಿಸಿ ಕಾಲಜ್ಞಾನವನ್ನು ಹೇಳುವ ಪದ್ಧತಿ ಈಗಲೂ ರೂಢಿಯಲ್ಲಿದೆ.

ಸಾಮಾನ್ಯವಾಗಿ ಒಬ್ಬರೆ ಈ ಕಾಲಜ್ಞಾನ ಹೇಳುವ ಕಾರ್ಯ ಮಾಡುತ್ತಾರೆ. ಸಾರುವಯ್ಯನವರ ಮೇಳ ಎಂದು ಇರುವದಿಲ್ಲ. ಇವರ ಆಡುಭಾಷೆ ಕನ್ನಡ. ಇವರು ಮನೆ ಮನೆಗೂ ಹೋಗಿ ಭಿಕ್ಷೆ ಬೇಡುವದಿಲ್ಲ. ಊರಿನ ಬೀದಿಯಲ್ಲಿ ಇಲ್ಲವೆ ಕೂಟದಲ್ಲಿ ನಿಂತು ರಾತ್ರಿಯಲ್ಲಿ ಮಾತ್ರ ಕಾಲಜ್ಞಾನ ಹೇಳುತ್ತಾರೆ. ಸಾರುವಯ್ಯನವರು ಜೀವನ ಮತ್ತು ಧಾರ್ಮಿಕ ವಿಧಿ-ವಿಧಾನಗಳು ಹೆಚ್ಚು ಕಡಿಮೆ ಕರಪಲ್ಲವದವರಂತೆಯೆ. ಸಾರು ವಯ್ಯನವರೂ ಜಂಗಮರೆ ಆಗಿರುವದರಿಂದ ಅವರ ಆಚಾರ--ವಿಚಾರ-ಸಂಪ್ರದಾಯ ಗಳು, ಹುಟ್ಟು ಸಾವು, ಮದುವೆ ಮುಂತಾದವುಗಳಲ್ಲಿಯ ವಿಧಿ-ನಿಷೇಧಗಳು, ಆಹಾರ-ವಿಹಾರ, ಆರಾಧಿಸುವ ದೈವ- ಕರಪಲ್ಲವದವರಂತೆಯೆ ಇವೆ. ಈ ವೃತ್ತಿಕಲಾವಿದರ ಕಾಯಕ ವಿಭೂತಿ ತಯಾರಿಸುವದು ಮತ್ತು ಇಷ್ಟಲಿಂಗಕ್ಕೆ ಕಂತಿಯನ್ನಿಡುವುದು. ಇದೇ ಇವರ ಉಪಜೀವನದ ಮಾರ್ಗ. ಅದರ ಜೊತೆಗೆ ಲೋಕಭವಿಷ್ಯವನ್ನು ಸಾರುವದು.

ಸಾರುವಯ್ಯನವರ ವೇಷ-ಭೂಷಣಗಳು ವಿಶಿಷ್ಟವಾಗಿರುತ್ತವೆ. ತಲೆಗೆ ಕಾವಿಯ ರುಮಾಲು, ಕಿವಿಯಲ್ಲಿ, ಕೊರಳಲ್ಲಿ, ಮುಂಗೈಯಲ್ಲಿ ರುದ್ರಾಕ್ಷಿ, ಹಣೆಯಲ್ಲಿ ಭಸ್ಮ, ಕಾವಿ ಅಂಗಿ, ಜರಿಯ ಧೋತರ, ಕಾಸೆ ಪಂಚೆ, ನಡಪಟ್ಟಿ, ಕಾಲಲ್ಲಿ ಹಾವುಗೆ, ಶಲ್ಲೆ, ಬಗಲಲ್ಲಿ ಎಡದು ಜೋಳಿಗೆ, ಕೈಯಲ್ಲಿ ಕಂದೀಲು, ಕಾವಿಕೊಡೆ ಹಿಡಿದಿರುವದುಂಟು. ಕಂದೀಲು ರಾತ್ರಿ ಸಂಚಾರದಲ್ಲಿ ಮಾರ್ಗದರ್ಶಿಯಷ್ಟೆ ಅಲ್ಲದೆ ಜ್ಯೋತಿಯ ಸಂಕೇತವೆಂದು ಹೇಳು

ತ್ತಾರೆ. ಕಾವಿಕೊಡೆಯಿಲ್ಲದೆ ಕಾಲಜ್ಞಾನ ಹೇಳಬಾರದು ಎಂಬುದು ಇವರ ನಂಬುಗೆ. ರಾಜ–ಮಹಾರಾಜರಿಗೆ ಗೌರವದ ಲಾಂಛನವಾಗಿ ಬೆಳ್ಗೊಡೆಗಳು ಇರುವಂತೆ ತಮಗೆ ಗೌರವದ ಸಂಕೇತವಾಗಿ ಈ ಕಾವಿಕೊಡೆ ಇರಬೇಕಾಗುತ್ತದೆ ಎಂಬುದು ಇವರ ಅಭಿಪ್ರಾಯ.

ಈ ತೆರನಾದ ವೇಷಭೂಷಣಗಳಿಂದ ಅಲಂಕೃತರಾಗಿ ಊರೂರು ಅಲೆಯುತ್ತ ಕಾಲಜ್ಞಾನ ಹೇಳುವದೆ ಇವರ ಕಾಯಕ. ಈ ವೃತ್ತಿಕಲಾವಿದರಿಗೆ ಶಬ್ದಸಂಪತ್ತು, ಮಾತಿನಚಾತುರ್ಯ, ಧೈರ್ಯ–ಸ್ಥೈರ್ಯ, ವಿಷಯವನ್ನು ಸ್ವಾರಸ್ಯವಾಗಿ ಸಾರುವಕಲೆ ಕರಗತವಾಗಿರಬೇಕು. ಇವರು ರಾತ್ರಿಯಲ್ಲಿ ಮಾತ್ರ ಕಾಲಜ್ಞಾನ ಹೇಳುವ ಕಾರ್ಯ ಆರಂಭಿಸುತ್ತಾರೆ. ಮೊದಲಲ್ಲಿ ದೇವತಾಸ್ತುತಿ ನಂತರ ಕಾಲಜ್ಞಾನ ಸಾರುವದು.

ಮುಂದಿನಾ ದಿನಗಳ ಬರುವ ಅಂದದಲಿ ದೇಳುವೆ । ತಂದೆ ಪ್ರಭುವಿನ ಒಲವಿಂದ । ತಂದೆ ಪ್ರಭುವಿನಾ ಒಲವಿಂದ ನುಡಿಸುವೆ । ಅಂದದಾ ಶರಣರು ಬರುತಾರೆ ॥

ಕಾಣಬಾರದ್ದನ್ನು ಕಂಡೀರಣ್ಣಾ ! ಕೇಳಬಾರದ್ದನ್ನು ಕೇಳೀರಣ್ಣಾ । ಮುಂದಿನ ದಿನಮಾನ ಬಹುಕಷ್ಟ ಬರುತಾವೆ ಕೇಳಿರಣ್ಣಾ । ಅಂದು ಇಂದು ಮುಂದು ಎನಬೇಡಿ ಧರ್ಮಮಾರ್ಗದಲ್ಲಿ ನಡೆಯಿರಣ್ಣಾ ॥ ಹಾಲು ಮೊಸರುಗಳೆಲ್ಲ ಹಾಲು ಗಡಿಗ್ಯಾಗಿಲ್ಲ । ದೂರಣಾ ಮಾತು ಎನಬೇಡ । ದೂರಣಾ ಮಾತು ಎನಬೇಡ । ಕೊಡೇಕಲ್ಲ ಪ್ರಭುವು ಸಾರಿ ಹೇಳುವನು ಮನಿಮನಿಗೆ ॥

ಸತ್ಯವಿಲ್ಲವು ಜಗದಿ ಹೆತ್ತಪ್ಪ ಮರುಗಿದಳು । ಬಿತ್ತಿದಾ ಬೀಜವು ಒತ್ತಿ ತಾ ಬರದು । ಆಗತ್ತಳೊ ಭೂಮಿದೇವತೆಯು ॥

ಹೊಟ್ಟೆಕಿಚ್ಚಿಗಾಗಿ ಕಟ್ಟಿದ ನುಡಿಯಲ್ಲ ಕೇಳಿರಣ್ಣ । ಶ್ರೇಷ್ಠ ಸದ್ಗುರು ಕೊಡಿಯ ಕಲ್ಲ ಬಸವ ಸಾರಿದ ಕೇಳಿರಣ್ಣ ॥

ಹೀಗೆ ಕಾಲಜ್ಞಾನವನ್ನು ಸಾರುತ್ತ ಜನರಲ್ಲಿ ನೀತಿಬೋಧನೆಯನ್ನುಂಟು ಮಾಡುವದೇ ಈ ಸಾರುವಯ್ಯನವರ ಕಾಯಕ. ಇದೊಂದು ಪವಿತ್ರ ಕಾಯಕ. ಧರ್ಮ ಮತ್ತು ಸಮಾಜಕಾರ್ಯ ಎರಡನ್ನೂ ಮಾಡಿದಂತಾಯಿತು ಎಂಬ ಭಾವನೆಯಿಂದ ಇವರು ಈಗಲೂ ಈ ಕಾಯಕ ಮಾಡುತ್ತಿದ್ದಾರೆ. ಈ ವೃತ್ತಿಗೆ ಒಂದು ಧಾರ್ಮಿಕ ಸ್ಥಾನ ಮತ್ತು ಮಾನ್ಯತೆ ಇದೆ. ಸಾರುವಯ್ಯನವರ ಮಾತು ಸುಳ್ಳಾಗುವದಿಲ್ಲ ಎಂಬ ನಂಬಿಕೆ ಜನರಲ್ಲಿದೆ. ಜೀವನದ ಜಂಜಡಗಳಲ್ಲಿ ಇವರ ಕಾಲಜ್ಞಾನ ಹೇಳಿಕೆ ಕೆಲವರಿಗೆ ಅಭಯವಾಣಿಯಾಗಿ ಪರಿಣಮಿಸಿದರೆ ಕೆಲವರಿಗೆ ಭಯವಾಣಿ ಅನಿಸಬಹುದು. ಇದು ಅವರವರ ನಂಬಿಕೆಯನ್ನು ಅವಲಂಬಿಸಿದೆ.

"ನಾಗರಿಕತೆಯ ಕಾಲದಲ್ಲಿ ಇತಿಹಾಸ ಪುರಾಣಗಳ ಸಾರವನ್ನು ಜನರ ಮಟ್ಟಕ್ಕಿಳಿಸುವದೂ, ಚರಿತ್ರೆಯಲ್ಲಿ ನಡೆದ ಮರೆಯಲಾಗದ ಸಂಗತಿಗಳನ್ನು ಜನರ ನೆನಪಿನಲ್ಲಿ ನಿಲ್ಲಿಸುವುದೂ, ಭಕ್ತಿಜ್ಞಾನ ವೈರಾಗ್ಯಗಳನ್ನು ಮನೆಮನೆಗೂ ಬೀರುವುದೂ ಈ ಜಾನಪದ ಸಾಹಿತ್ಯದ ಕೆಲಸ"– ಎಂದು ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಸಾಹಿತ್ಯವನ್ನು ಕುರಿತು ಹೇಳಿದ ಮಾತು ಇಂಥ ವೃತ್ತಿಕಲಾವಿದರಿಗೂ ಅನ್ವಯಿಸುತ್ತದೆಯೆಂದು ಹೇಳಬಹುದು. ಧರ್ಮ ಹಾಗೂ ಮಾನವಜನಾಂಗದ ಸೇವೆಯನ್ನು ಮಾಡುತ್ತಿರುವ ಇಂಥ ವೃತ್ತಿಕಲಾವಿದರಿಗೆ ಸಮಾಜದಲ್ಲಿ ಯೋಗ್ಯ ಸ್ಥಾನ–ಮಾನ ದೊರೆತಲ್ಲಿ ಕಲಾವಿದರು ಬದುಕುತ್ತಾರೆ, ಕಲೆಯೂ ಉಳಿಯಬಲ್ಲದು.

● ●

## ಗ್ರಂಥಋಣ

೧) ಸಂಶೋಧನ ತರಂಗ–ಸಂಪುಟ ೨; ಡಾ. ಎಂ. ಚಿದಾನಂದಮೂರ್ತಿ.

೨) ಒಂದು ಸಂಕೇತಭಾಷೆ–ಕರಪಲ ಸವೃಜ್ಞಕಂ,– ಜಿ. ಜಿ. ಮಂಜುನಾಥನ್ ಪ್ರಬುದ್ಧ ಕರ್ನಾಟಕ, ಸಂಪುಟ ೫೫, ಸಂಚಿಕೆ ೪, ೧೯೭೪.

೩) ಉತ್ತರ ಕರ್ನಾಟಕದ ಜನಪದ ಪದ್ಯಸಾಹಿತ್ಯ– ಡಾ. ಎಂ. ಎಂ. ಕಲಬುರ್ಗಿ.

೪) ಕರ್ನಾಟಕದ ಜನಪದ ಕಲೆಗಳು– ಕನ್ನಡ ಸಾಹಿತ್ಯಪರಿಷತ್ತು ಬೆಂಗಳೂರು.

೫) 'ಅಭಿನವಾಭಿದಾನಂ'– ಮಂಗರಾಜ II.

ವಿಷಯಸಂಗ್ರಹಣೆಯಲ್ಲಿ ಸಹಾಯ ಮಾಡಿದವರು :

೧) ಶ್ರೀ ಸಂಗಯ್ಯ ಹಿರೇಮಠ ಹುಬ್ಬಳ್ಳಿ.

೨) ಶ್ರೀ ಕಲ್ಲಯ್ಯ ಹಿರೇಮಠ, ಗದಗ.

೩) ಶ್ರೀ ಚನವೀರಯ್ಯಸ್ವಾಮಿ, ಬಾಗಲಕೋಟ.

೪) ಶ್ರೀ ಚನ್ನಯ್ಯ, ಶಿವಯ್ಯ, ದಾವಣಗೇರೆ.

# ಪುಳ್ಳಾವಿಗೆ ಅಯ್ಯನವರು

ಬಿ. ಸಿ. ಜವಳಿ

ನಗರದಲ್ಲಿ ಪ್ರಮುಖ ಬೀದಿಗಳ ಕೂಟಗಳಲ್ಲಿ. ಗ್ರಾಮಗಳಲ್ಲಿ ಪ್ರಮುಖ ಸ್ಥಳಗಳಲ್ಲಿ, ಇಲ್ಲವೆ ಯಾವುದೋ ಗಿಡಕ್ಕೆ ಕಟ್ಟಿದ ಕಟ್ಟೆಯಮೇಲೆ, ಆಗೊಮ್ಮೆ ಈಗೊಮ್ಮೆ ಒಬ್ಬ ವ್ಯಕ್ತಿಯು ಒಂದು ಕೈಯಲ್ಲಿ ಗಂಟೆ ಇಲ್ಲವೆ ಕೊಡೆ ಮತ್ತೊಂದು ಕೈಯಲ್ಲಿ ತ್ರಿಶೂಲ ಹಿಡಿದು ಕೊಂಡು, ಪುಳ್ಳಾವಿಗೆಯ ಮೇಲೆ ನಿಂತುಕೊಂಡು ಬರಹೋಗುವರ ಗಮನ ಸೆಳೆಯುವು ದನ್ನು ನಾವು ಆಗಾಗ ಕಾಣುತ್ತೇವೆ. ತಲೆಯೊಳು ಕಾವಿಬಣ್ಣದ ರುಮಾಲು, ಹಣೆಯೊಳು ಭಸಿತ, ಕೊರಳೊಳು ರುದ್ರಾಕ್ಷಿಮಾಲೆ, ಕಾವಿಯ ಬಣ್ಣದ ಶರ್ಟು, ಕಾವಿಬಣ್ಣದ ಇಲ್ಲವೆ ಬಿಳಿಯವರ್ಣದ ಧೋತರ– ಅವನು ಹೊಂದಿದ ವೇಷ ಭೂಷಣ. ಆಗಾಗ ಕಾವೀ ವರ್ಣದ ಛತ್ರಿಯನ್ನೂ ಹಿಡಿದಿರುತ್ತಾನೆ. ಇವನು ಕಾಣಿಸಿಕೊಳ್ಳುವುದಕ್ಕೆ ಇಂತಹದೇ ದಿನ, ವೇಳೆ, ಮಾಸ, ಋತುಮಾನವೆಂಬ ಕಟ್ಟು ಕಟ್ಟಳೆಯಿಲ್ಲ. ವರ್ಷದಲ್ಲಿ ಯಾವಾ ಗಲೂ ಕಾಣಿಸಿಕೊಳ್ಳುವುದು ಇವನಿಗೆ ಒಗ್ಗಿದ್ದರೂ ಬೇಸಿಗೆ ಕಾಲದಲ್ಲಿಯ ಬಿರುಬಿಸಿಲು, ಮಳೆಗಾಲದ ತುಂತುರು ಇಲ್ಲವೆ ಧಾರೆ ಈತನಿಗೆ ಸಾಮಾನ್ಯವಾಗಿ ತೊಂದರೆಯುಂಟು ಮಾಡುವುದರಿಂದ, ಚಳಿಗಾಲವು ಈತನ ಕಾಯಕಕ್ಕೆ ಹೆಚ್ಚು ಅನುಕೂಲವೆಂದು ಕಾಣು ತ್ತದೆ. ಮಳೆ-ಬಿಸಿಲುಗಳಿಂದ ರಕ್ಷಿಸಿಕೊಳ್ಳುವುದಕ್ಕಾಗಿಯೇ ಕೆಲಬಾರಿ ಈತನು ಛತ್ರೀ ಧರಿಸಿರುವಂತೆ ತೋರುತ್ತದೆ. ಛತ್ರಿ ಇಲ್ಲದ ಕಾಲದಲ್ಲಿ ಒಂದು ಕೈಯಲ್ಲಿ ಗಂಟೆ ಇಲ್ಲವೆ ಡಬ್ಬಣದ ಆಕಾರದ ಪುರವಂತರು ಬಳಸುವ ಶಸ್ತ್ರವನ್ನು ಧರಿಸಿರುತ್ತಾನೆ. ಕೆಲವು ವೇಳೆ ಇವನ ವೇಷಕ್ಕೂ ಪುರವಂತರು ರುದ್ರಾವತಾರವನ್ನು ಪ್ರದರ್ಶಿಸುವ ಕಾಲಕ್ಕೆ ಧರಿಸುವ (ವೇಷಕ್ಕೂ) ಸಾಮ್ಯ ಕಂಡುಬರುತ್ತದೆ. ಸ್ಥಳಿಕವಾಗಿ ಅವನ ವೇಷಭೂಷಣ ಗಳಲ್ಲಿ ವ್ಯತ್ಯಾಸಗಳು ಕಂಡುಬರುವುದು ಸಾಧ್ಯವಿರುವುದಾದರೂ, ಬಹಳ ಅಂಶಗಳಲ್ಲಿ ಸಾಮ್ಯವನ್ನು ಕಾಣುತ್ತೇವೆ. ಇವನು ಕರ್ನಾಟಕದ ತುಂಬೆಲ್ಲ ಕಂಡುಬರುತ್ತಾನೆ.

ಅವನು ತಳೆದ ವೇಷವು ಅವನು ಜಂಗಮವರ್ಗಕ್ಕೆ ಸೇರಿದವನೆಂಬುದನ್ನು ಸೂಚಿಸು ತ್ತಿದ್ದರೆ, ಅವರು ತಳೆದ ತ್ರಿಶೂಲ ಅಥವಾ ಶಸ್ತ್ರ ಅವನು ಶಿವಸ್ವರೂಪ ಎಂಬುದನ್ನು ಸೂಚಿಸುತ್ತವೆ, ಭಸ್ಮ-ರುದ್ರಾಕ್ಷಿಗಳು ಅವನು ಶಿವಭಕ್ತನೆಂಬುದನ್ನು ತೋರಿಸುತ್ತವೆ. ಅವನು ಗೃಹಸ್ಥನಾಗಿರಬಹುದು ಇಲ್ಲವೆ ವಿರಕ್ತನಾಗಿರಬಹುದು. ಇದಕ್ಕೆ ಯಾವ ನಿರ್ಬಂಧವೂ ಇದ್ದಂತಿಲ್ಲ. ಈತನ ಬಗೆಗೆ ನಮಗೆ ಹಿಂದಿನ ವಾಙ್ಮಯದಲ್ಲಿ ಎಂದರೆ ಹರಿಹರ, ರಾಘವಾಂಕ, ಭೀಮಕವಿಗಳ ಕೃತಿಗಳಲ್ಲಿ ಇಲ್ಲವೆ ಅನೇಕ ಕಾಯಕಗಳನ್ನು ಅವಲಂಬಿಸಿದ ಶರಣರೆಂದೆನಿಸಿಕೊಂಡವರ ಉಲ್ಲೇಖಮಾಡುವ ಲಕ್ಕಣ್ಣದಂಡೇಶನ 'ಶಿವತತ್ವ ಚಿಂತಾಮಣಿ'ಯಲ್ಲಾಗಲಿ, ಅನೇಕ ಶರಣರ ಕಥೆಗಳನ್ನೊಳಗೊಂಡ ಕಥಾಸಾಗರ ದಂತಿರುವ 'ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ'ದಲ್ಲಾಗಲಿ, ಈ ವೃತ್ತಿ ಯವನ ಉಲ್ಲೇಖಗಳಿಲ್ಲದುದು ಆಶ್ಚರ್ಯಕರವೇ ಸರಿ. ಅಲ್ಲಿ ಅನೇಕ ಕಾಯಕದವರ ಉಲ್ಲೇಖವಿದ್ದುದು ಗಮನಾರ್ಹ. ಹೀಗಾಗಿ ಹಿಂದಿನಿಂದ ನಡೆದುಬಂದ ಈ ಕಾಯಕದ ಪುರಾತನತೆಯನ್ನು ಕಂಡುಹಿಡಿಯುವುದು ದುಸ್ತರವೆನಿಸುತ್ತದೆ.

'ಮುಳ್ಳಾವಿಗೆ' ಎಂಬ ಪದವು 'ಮುಳ್ಳ ಹಾವುಗೆ' ಎಂಬ ಪದದಿಂದ ನಿಷ್ಪನ್ನ ವಾಗಿದೆ. ಆವಿಗೆ ಎಂಬುದು ಪಾದುಕೆಯ ತದ್ಭವರೂಪ-ಹಾವುಗೆಯಿಂದ ನಿಷ್ಪನ್ನ ವಾಗಿದೆ. ಡಾ. ಎಫ್. ಕಿಟೆಲ್ಲರು ಕನ್ನಡ-ಇಂಗ್ಲೀಷ ನಿಘಂಟಿನಲ್ಲಿ ಈ ಪದವನ್ನು ಬಳಸಿ ಅದಕ್ಕೆ ಕೆಳಗೆ ತಿಳಿಸಿದಂತೆ ಅರ್ಥ ಬರೆದಿದ್ದಾರೆ: "A wooden shoe in the inside of which thornlike nails are fixed, worn by devotees of Shiva and Vishnu" (ಪುಟ ೧೨೮೦, ೧೮೯೪ ಪ್ರಕಟನೆ) ಕಟ್ಟಿಗೆಯ ಪಾದುಕೆ ಯಲ್ಲಿ ಮುಳ್ಳಿನಾಕಾರದ ಮೊಳೆಗಳನ್ನು ಜೋಡಿಸಲಾಗಿರುತ್ತದೆ. ಆ ಮೊಳೆಯ ತುದಿ ಗಳು ಅಷ್ಟೊಂದು ಮೊನಚಾಗಿರುವುದಿಲ್ಲವೆಂಬುದು ಸುಸ್ಪಷ್ಟ. ಡಾ. ಕಿಟೆಲ್ಲರು ಕೊಟ್ಟಿರುವ ಈ ಅರ್ಥವನ್ನು ನೋಡಿದರೆ ಈ ರೀತಿಯ ಕಾಯಕದವರು ಶೈವರಲ್ಲಿ ಮಾತ್ರವಲ್ಲ, ವೈಷ್ಣವರಲ್ಲಿಯೂ ಉಂಟೆಂಬುದು ತಿಳಿದುಬರುತ್ತದೆ. ಯಾವುದೋ ಒಂದುಕಾಲದಲ್ಲಿ ವೈಷ್ಣವರಲ್ಲಿಯೂ ಈ ಕಾಯಕದವರು ಇದ್ದಿರಬಹುದು. ಆದರೆ ಇಂದು ಇವರು ಶೈವರಲ್ಲಿ ಮಾತ್ರ ಇರುವುದು ಒಂದುವಿಶೇಷ: ಶೈವ ವೈಷ್ಣವ ಈ ಇಬ್ಬರಲ್ಲಿಯೂ ಈ ಕಾಯಕದವರಿರುತ್ತಾರೆಂಬ ಕಿಟೆಲ್ಲರ ಉಲ್ಲೇಖದಿಂದ, ಈ ಕಾಯಕ ಗಳು ಬಹು ಹಿಂದಿನಿಂದಲೂ ನಡೆದುಬಂದವು ಎನ್ನುವುದನ್ನು ನಾವು ಮನಗಾಣ ಬಹುದಾದರೂ, ಈ ಪದವು ದೊರೆತುದುದರ ಸಾಹಿತ್ಯ ಕೃತಿಯನ್ನು ಕಿಟೆಲ್ಲರು ಸೂಚಿಸ ದಿರುವುದರಿಂದ, ಈ ಪದವನ್ನು ಮಾತಿನ ಕನ್ನಡದಿಂದ ತೆಗೆದುಕೊಂಡಿದ್ದಾರೆಂಬುದೂ ಸುಸ್ಪಷ್ಟ. ಈ ಕಾಯಕದವರ ಗುರುವಾರು, ಪರಂಪರೆ ಮನು, ಉದ್ದೇಶಗಳಾವುವು ಎಂಬುದನ್ನು ನಿರ್ಧರಿಸಲು ಐತಿಹಾಸಿಕ ದಾಖಲೆಗಳು ಇಲ್ಲದಿರುವಾಗ 'ಇದಮಿತ್ಥಂ' ಎಂದು ಹೇಳಲಾಗದು.

ಹನ್ನೆರಡನೆಯ ಶತಮಾನದಲ್ಲಿ ಅನೇಕ ಶರಣರು ಕಾಯಕಗಳಿಂದಲೇ ಪ್ರಸಿದ್ಧ ರಾಗಿದ್ದಾರೆ. ಮಾದಾರ ಚನ್ನಯ್ಯ, ಡೋಹರ (ತೊಗಲಕಾಯಕ) ಕಕ್ಕಯ್ಯ, ಜೇಡರ ದಾಸಿಮಯ್ಯ (ನೆಯ್ಗೆ), ಮಡಿವಾಳ ಮಾಚಯ್ಯ (ಅಗಸ), ಹಡಪದ ಅಪ್ಪಣ್ಣ (ಕ್ಷೌರಿಕ), ಆಯ್ದಕ್ಕಿ ಮಾರಯ್ಯ (ಬಿದ್ದಕಾಳು ಆಯ್ದುಕೊಂಡು ತರುವದು), ಗಾಣದ ಕನ್ನಪ್ಪ (ಎಣ್ಣೆ ತೆಗೆಯುವುದು), ತುರುಗಾಹಿ ರಾಮಣ್ಣ (ದನಕಾಯುವವ)– ಇವರೇ ಮೊದ ಲಾದವರು ಮತ್ತು ಇನ್ನಿತರರನ್ನು ನೆನೆದರೆ, ಅವರಲ್ಲಿ ಶರಣತ್ವಕ್ಕೆ ಕಾಯಕ ಅಡ್ಡಿಯಲ್ಲ ಎಂದು ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದರೆ ಮುಳ್ಳಾವಿಗೆಯ ಕಾಯಕವೂ ಅಂದಿನಿಂದಲೇ ನಡೆದುಬಂದಿರಬಹುದಾಗಿದೆ. ಶಿವಶರಣರು ಯಾವುದೇ ಕಾಯಕ ಮಾಡಲಿ ಅದರ ಉದ್ದೇಶಮಾತ್ರ ಪವಿತ್ರವಾಗಿರಬೇಕೆಂದೂ ಅದು ಗುರುಲಿಂಗಜಂಗಮ ತೃಪ್ತಿಗಿರಬೇಕೆಂದೂ ತಿಳಿಸಿದ್ದಾರೆ. ವ್ಯಕ್ತಿ, ಕುಟುಂಬ, ಸಮಾಜ ಮತ್ತು ರಾಷ್ಟ್ರದ ಕಲ್ಯಾಣವನ್ನೂ ಸಾಧಿಸುವುದು ಶಿವಶರಣರ ಕಾಯಕದ ಉದ್ದೇಶ. ದೇವರು ವ್ಯಕ್ತಿಗೆ ಕೊಟ್ಟಿರುವ ಸಾಮರ್ಥ್ಯವು ಕಾಯಕದಮೂಲಕ ಸದ್ವಿನಿಯೋಗವಾಗುತ್ತದೆ. ವ್ಯಕ್ತಿಯ ಬದುಕಿಗೆ ಕಾಯಕವು ಸಂತಸವನ್ನುಂಟುಮಾಡಿ, ಸಾರ್ಥಕ್ಯವನ್ನು ಪಾವಿತ್ರ್ಯವನ್ನೂ, ಕೈಲಾಸವನ್ನೂ ಒದಗಿಸುತ್ತದೆ; ಕಾಯಕದಿಂದ ವ್ಯಕ್ತಿಗೆ ದುರಾಸೆ ತೊಲಗಿ, ಪ್ರಾಮಾಣಿಕತೆ ಮೂಡಿ, ಶರೀರಶುದ್ಧಿ, ಮನಶುದ್ಧಿಯುಂಟಾಗುತ್ತದೆ. ಈ ಹಿನ್ನೆಲೆಯಲ್ಲಿ ಕಾಯಕ ಗಳನ್ನು ವಿಶ್ಲೇಷಿಸಿದಾಗ, ಅವು ಹಲವಾರು ಇದ್ದು, ರಾಷ್ಟ್ರದ ಬೆಳವಣಿಗೆ, ಸಮಾಜದ ಸರ್ವಾಂಗ ಸುಂದರ ಬೆಳವಣಿಗೆಗೆ ಕಾರಣವಾಗುತ್ತವೆ. ಎರಡನೆಯದಾಗಿ ಕಾಯಕಗಳು ವ್ಯಕ್ತಿಗೆ ಉದ್ಯೋಗವನ್ನೊದಗಿಸಿ, ಶರೀರದ ಪೋಷಣೆಗೆ ಸಹಾಯಕಾರಿಯಾಗಿವೆ. ಮೂರನೆಯದಾಗಿ ಕಾಯಕಗಳು ಭಿಕ್ಷೆಯನ್ನು ತೊಲಗಿಸಿ, ರಾಷ್ಟ್ರದ ಸಂಪತ್ತನ್ನು ಹೆಚ್ಚಿಸಲು ಸಹಾಯವಾಗುತ್ತವೆ. ಕೊನೆಯದಾಗಿ ಕಾಯಕಗಳು ಧಾರ್ಮಿಕ ನೀತಿ ಯನ್ನೂ ಮತ್ತು ಪೌರನೀತಿಯನ್ನೂ ಹೆಚ್ಚಿಸುತ್ತವೆ. ಕೊನೆಯದಾದ ಧಾರ್ಮಿಕನೀತಿ ಮತ್ತು ಪೌರನೀತಿಯ ಹಿನ್ನೆಲೆಯಲ್ಲಿ ವೀರಶೈವರು ಕೆಲವು ಕಾಯಕಗಳನ್ನು ಬೆಳೆಸಿ ಕೊಂಡಿರುವಂತೆ ಕಂಡುಬರುತ್ತದೆ. ಮುಳ್ಳಾವಿಗೆಯ ಕಾಯಕವು ಇಂತಹ ಕಾಯಕ ಗಳಲ್ಲೊಂದು. ತೆಕ್ಕೆಯಕಾಯಕ, ಕಂಬದಕಾಯಕ, ಶೂಲದ ಕಾಯಕಗಳೂ ಈ ವರ್ಗಕ್ಕೇ ಸೇರಿದುವೆನ್ನಬಹುದು.

ಹಿಂದೆ ವೀರಶೈವ ಮಠಗಳು ವೀರಶೈವ ಸಮಾಜದ ವ್ಯಕ್ತಿಗೆ ಅಕ್ಷರಾಭ್ಯಾಸ, ಶಾಸ್ತ್ರಾದಿಗಳ ಅಭ್ಯಾಸಗಳ ಜೊತೆಗೆ, ಅನೇಕ ಕಾಯಕಗಳನ್ನೂ ಕಲಿಸುತ್ತಿದ್ದವು. ಒಂದು ದೃಷ್ಟಿಯಿಂದ ವೀರಶೈವ ಮಠಗಳು ವೀರಶೈವರ ಕೋರ್ಟುಗಳಂತೆ ಕೆಲಸಮಾಡು ತ್ತಿದ್ದವು. ವೀರಶೈವ ಸಮಾಜದ ವ್ಯಕ್ತಿಗಳ ಯೋಗಕ್ಷೇಮದ ಬಗೆಗೆ ಹೆಚ್ಚಿನ ಆಸಕ್ತಿ ತಳೆದಿರುತ್ತಿದ್ದವು. ವ್ಯಕ್ತಿಯ ಪ್ರತಿದಿನದ ತಾಪತ್ರಯಕ್ಕೂ ಮಠಾಧೀಶರಿಂದ ಪರಿಹಾರ ದೊರೆಯುತ್ತಿತ್ತು. ಮಠಾಧೀಶರು ವೀರಶೈವರ ವೃದ್ಧಿ ಹಾನಿ, ತಪ್ಪು ಒಪ್ಪುಗಳಿಗೆ

ಕಾರಣರಾಗಿರುತ್ತಿದ್ದರು. ಮಠಗಳ ಹತೋಟಿ ವ್ಯಕ್ತಿಗಳಮೇಲೆ ಸಾಕಷ್ಟಿದ್ದಿತು. ಅಂತಹ ಕಾಲದಲ್ಲಿ ಮುಳ್ಳಾವಿಗೆಯ ಅಯ್ಯನವರು ಮಠದ ಆಶ್ರಯದಲ್ಲಿದ್ದು, ಯಾವುದೇ ವ್ಯಕ್ತಿಯು ಸಮಾಜದಲ್ಲಿ ತಪ್ಪಾಗಿ ವರ್ತಿಸಿದ್ದರೆ ಆತನ ವರ್ತನೆಯನ್ನು ಸುಧಾರಿಸಲು ಮತ್ತು ಅವನಿಗೆ ಧಾರ್ಮಿಕ ನೀತಿಯನ್ನು ಕಲಿಸಲು, ಈ ಅಯ್ಯನವರು ಹೋಗಿ, ಆ ವ್ಯಕ್ತಿಯ ಮನೆಯಮುಂದೆ ಮುಳ್ಳಾವಿಗೆಯಮೇಲೆ ನಿಂತು, ಆ ವ್ಯಕ್ತಿಯು ತಾನು ಮಾಡಿದ ತಪ್ಪೊಪ್ಪಿಕೊಂಡು, ಮುಂದೆ ಹಾಗೆ ನಡೆಯುವುದಿಲ್ಲವೆಂದು ಭರವಸೆ ನೀಡುವ ವರೆಗೂ ಮೌನವಾಗಿ ನಿಂತುಕೊಂಡು, ವೇದನೆಯನ್ನು ಅನುಭವಿಸುತ್ತಿದ್ದರೆಂದೂ, ಇದೊಂದು ರೀತಿಯ ಸತ್ಯಾಗ್ರಹವೆಂದೂ, ಮಠಮಾನ್ಯಗಳಲ್ಲಿ ಕೀರ್ತನಕಾರರು, ಪುರಾಣ ಪ್ರವಚನಕಾರರು ಹೇಳುತ್ತಬಂದಿದ್ದಾರೆ. ಅವರು ಹೀಗೆ ತಪ್ಪುಗಾರರ ಮನಪರಿವರ್ತನೆ ಯಾಗುವವರೆಗೂ ನಿಲ್ಲುತ್ತಿದ್ದರು. ಇದು ನಿಜವಿದ್ದರೆ ವೀರಶೈವಮಠಗಳು ಇಂತಹ ದೊಂದು ವಿಧಾನವನ್ನು ಕಂಡುಹಿಡಿದುದು ಸ್ತುತ್ಯವೇ ಸರಿ. ಆದರೆ ಈ ಕಾಯಕದ ಅಯ್ಯನವರು ಕೆಲವೆಡೆ ತಮ್ಮ ಕಾಯಕ ಪ್ರಾರಂಭಮಾಡುವ ಮುನ್ನ 'ರೇವಣಸಿದ್ಧೇಶ್ವರ ಮಹಾಪ್ರಭೋ' ಎಂದು ಉದ್ಘೋಷಿಸಿ ಘಂಟೆ ಬಾರಿಸುವುದನ್ನು ನೋಡಿದರೆ, ಪುರಾತನ ಸಿದ್ಧರ ಪರಂಪರೆಯವರಾಗಿರಬೇಕೆಂದೆನಿಸುತ್ತದೆ. ಇದು ನಿಜವಿದ್ದರೆ ಇವರೇ ಮುಂದೆ ಕೆಲವರು ಮಠಗಳನ್ನು ಆಶ್ರಯಿಸಿ ಈ ಕಾಯಕದ ಅಯ್ಯನವರೆಂದೆನಿಸಿಕೊಂಡಿರಬೇಕು. ಒಂದುವೇಳೆ ಅವರು ಸಿದ್ಧಪಂಥದವರಾಗಿದ್ದರೆ ಅವರ ಈ ವೃತ್ತಿಯು ಯಾವಕಾರಣ ಕ್ಕಾಗಿತ್ತೋ ತಿಳಿಯದು; ಪ್ರಾಯಶಃ ಉದರ ಪೋಷಣೆಗಾಗಿಯೇ ಇರಬೇಕು. ಇದರ ಪಳೆಯುಳಿಕೆಯನ್ನುವಂತೆ ಇಂದು ಈ ಕಾಯಕವನ್ನು ಕೈಕೊಳ್ಳುವವ ಹಲವರು ಭಿಕ್ಷೆ ಯೆಂದು ಕೈಕೊಂಡುದುದನ್ನು ನಾವು ಕಾಣುತ್ತೇವೆ. ಇಂದು ಕಾಯಕದ ಅಯ್ಯನವರು ಯಾವುದೋ ಜನಸಂದಣಿಇರುವ ಸ್ಥಳಕ್ಕೆ ಆಗಮಿಸುತ್ತಾರೆ. ಅಲ್ಲಿ ಮುಳ್ಳಾವಿಗೆಯ ಮೇಲೆ ನಿಲ್ಲಲು ತಿಳಿಸುತ್ತಾರೆ. ಕಂಡ ಜನರು ಅವರ ಗಂಟೆಗಟ್ಟಲೆ ನಿಲ್ಲುವುದನ್ನು ನೋಡಲಾರದೆ, ತಮ್ಮ ಕೈಲಾದಮಟ್ಟಿಗೆ ಹಣಸಂಗ್ರಹಿಸಿ ನಿಡುತ್ತಾರೆ. ಅದಕ್ಕೊಪ್ಪ ದಿದ್ದರೆ ಬೇಕಾದಷ್ಟುವೇಳೆ ನಿಂತುಕೊಳ್ಳುತ್ತಾರೆ. ಮುಳ್ಳಾವಿಗೆಯ ಕೆಳಗೆ ಒಂದು ಬಟ್ಟೆ ಯನ್ನು ಹಾಸಿರುವುದರಿಂದ 'ಅಯ್ಯೊಪಾಪ' ಎಂದುಕೊಂಡ ಜನ, ತಮಗೆ ತಿಳಿದಷ್ಟು ಹಣ ಬಟ್ಟೆಯಲ್ಲಿ ಹಾಕುತ್ತಾರೆ. ಇದು ಅವರು ಹಣಸಂಗ್ರಹಿಸುವರೀತಿ. ಇಂದು ಈ ಹಣವನ್ನು ಅವರು ತಮ್ಮ ಕುಟುಂಬದ ವ್ಯಯಕ್ಕೆ ವಿನಿಯೋಗಿಸುತ್ತಾರೆಯೇ ವಿನಾ ಇದರಲ್ಲಿ ಸಾಮಾಜಿಕ ಹಿತವಿಲ್ಲ. ಇದನ್ನು ನೋಡಿದರೆ, ಇದರಲ್ಲಿ ಭಿಕ್ಷೆಯ ಲಕ್ಷಣವೇ ಹೆಚ್ಚಾಗಿ ಗೋಚರಿಸುತ್ತದೆ. ಈ ಕಾಯಕದವರು ಹಿಂದೆ ಸಾಮಾಜಿಕ ಹಿತಕ್ಕಾಗಿ ದುಡಿಯುತ್ತಿದ್ದರೆ ಅವರು ಸಂಪಾದಿಸಿದ ಆಯವು ಮಠಕ್ಕೆ ಸಲ್ಲುತ್ತಿದ್ದು ಸಾಮಾಜಿಕ ಹಿತವು ಪ್ರಧಾನವಾಗಿತ್ತು. ಸಮಾಜದಲ್ಲಿ ತಪ್ಪು ಮಾಡುವ ವ್ಯಕ್ತಿಗಳು ಹಲವಾರು ಇರುವುದರಿಂದ ಇವರನ್ನು ತಿದ್ದಲಿಕ್ಕೆ ಈ ಕಾಯಕದ ವ್ಯಕ್ತಿಗಳೇ ಬೇಕಾಗುತ್ತಿತ್ತು. ಬದಲಾದ ಪರಿಸ್ಥಿತಿಗನುಗುಣವಾಗಿ ಈ ಕಾಯಕದ ಅಯ್ಯನವರಿಗೆ ಈ ಕಾಯಕ

ಕೈಕೊಳ್ಳಲು ಆಗುವುದಿಲ್ಲ; ಯಾಕೆಂದರೆ ಸಮಾಜದಮೇಲೆ ಮಠಗಳಿಗಿದ್ದ ಪ್ರಭಾವವೇ ಕಡಿಮೆಯಾದುದರಿಂದ ಈ ಕಾಯಕದವರ ಪ್ರಭಾವವೂ ಸಹಜವಾಗಿಯೇ ಕಡಿಮೆಯಾಗಿದೆ. ಆದರೂ ಬಹುಕಾಲದಿಂದ ಈ ಕಾಯಕವನ್ನು ನಡೆಸಿಕೊಂಡು ಬಂದವರಿಗೆ ಇದನ್ನು ಬಿಡಲು ಮನಸಿಲ್ಲದೆಯೋ ಅಥವಾ ಭಿಕ್ಷಾವೃತ್ತಿಗಿಳಿದೋ, ಇಂದು ಈ ಕಾಯಕವನ್ನು ಹಲವರು ಮುಂದುವರಿಸಿಕೊಂಡು ಬಂದಿದ್ದಾರೆ; ಇದಕ್ಕೆ ಪ್ರೋತ್ಸಾಹವೂ ಇಲ್ಲದುದರಿಂದ ಈ ಕಾಯಕವು ಇನ್ನು ಕೆಲವೇ ವರುಷಗಳಲ್ಲಿ ಕಣ್ಮರೆಯಾಗಬಹುದು. ಈ ಕಾಯಕವನ್ನು ಮುಂದುವರಿಸಿಕೊಂಡು ಬರಬೇಕೆನ್ನುವವರು ವರುಷದಲ್ಲಿ ಕೆಲವೊಂದು ದಿವಸ ನೇಮಕ್ಕೆಂದು ಈ ಕಾಯಕ ಕೈಕೊಳ್ಳುತ್ತಾರೆ. ಅವರು ಉಪಜೀವನಕ್ಕೆ ಬೇರೊಂದು ವೃತ್ತಿಯನ್ನು ಕೈಕೊಂಡಿರುತ್ತಾರೆ. ಇನ್ನು ಇದನ್ನು ಭಿಕ್ಷೆಗಾಗಿಯೇ ಕೈಕೊಂಡವರು ಜನರನ್ನು ಹೆದರಿಸಿ ಇಪ್ಪತ್ತೈಯಿದೋ ಮೂವತ್ತು ರೂಪಾಯಿ ಕೇಳುತ್ತಾರೆ; ಅದು ಜನರಿಂದ ಬರುವವರೆಗೆ ಮುಳ್ಳಾವಿಗೆಯುಮೇಲಿಂದ ಇಳಿಯುವುದಿಲ್ಲ, ಜನರು ನೋಡಲಾರದೆ ಕೆಲವೊಂದು ಹಣ ಕೊಡುತ್ತಾರೆ; ಅದೂ ಸಾಕಷ್ಟು ಸಂಗ್ರಹವಾಗದಿದ್ದರೆ ಈ ಕಾಯಕದ ಅಯ್ಯನವರು ತಾವಾಗಿಯೇ ಆವಿಗೆಯಿಂದ ಇಳಿದು ಹೋಗುತ್ತಾರೆ. ಭಿಕ್ಷೆಗಾಗಿಯೇ ಈ ವೃತ್ತಿಯನ್ನು ಕೈಕೊಂಡವರು ಈ ವೃತ್ತಿಯನ್ನು ಬಹು ಪುರಾತನ ಕಾಲದಿಂದಲೇ ನಡೆಸಿಕೊಂಡು ಬಂದು, ಆನುವಂಶಿಕವಾಗಿ ಪೋಷಿಸುತ್ತ ಬಂದಿರಬೇಕು; ಕೆಲವರು ಇವರಲ್ಲಿ ಮೂಲತಃ ಜಂಗಮರಿಲ್ಲದಿರಬಹುದು. ನಂತರ ಜಂಗಮರೆಂದು ಹೇಳಿಕೊಂಡರೆ ಭಿಕ್ಷೆ ಸುಲಭವಾಗಿ ಸಿಗುತ್ತದೆಯೆಂಬುದನ್ನರಿತು, ಜಂಗಮರಂತೆಯೇ ವೇಷ ಧರಿಸಿ, ಭಿಕ್ಷೆ ಪಡೆಯುತ್ತಿರಬೇಕು. ಶಿವಶರಣರು ಮುಳ್ಳಾವಿಗೆಯ ಕಾಯಕವನ್ನು ಒಂದು ಕಾಯಕವೆಂದು ಸ್ವೀಕರಿಸಿದ್ದರೆ, ಅನ್ಯರಿಗಾಗಿ ಈ ಕಾಯಕದ ಅಯ್ಯನವರು ಪಡೆಯುವ ಶರೀರ ಬಾಧೆ, ಸಮಾಜವನ್ನು ತಿದ್ದುವುದಕ್ಕೆ ಶರಣರು ಕಂಡುಕೊಂಡ ಈ ಕಾಯಕ ವಿಧಾನವು ಅತ್ಯಂತ ಸ್ತುತ್ಯವಾದುದು.

# ಅಧ್ಯಕ್ಷರ ಭಾಷಣ

ಜೀ. ಶಂ. ಪರಮಶಿವಯ್ಯ

ಜನಪದ ಸಂಸ್ಕೃತಿಯಲ್ಲಿ ವೃತ್ತಿಕಾರರ ವ್ಯಾಪ್ತಿ ದೊಡ್ಡದು. ಜೀವನಾಧಾರವಾದ ವ್ಯವಸಾಯದಿಂದ ಆರಂಭಿಸಿ ಎಲ್ಲ ಬಗೆಯ ಕಸಬುಗಳು ಈ ವ್ಯಾಪಕವಾದ ಶಬ್ದದ ಕೆಳಗೇ ಬರಬೇಕಾಗುತ್ತದೆ. ವ್ಯವಸಾಯವೂ ಒಂದು ವೃತ್ತಿ. ಅದಕ್ಕೆ ಪೂರಕ ವೃತ್ತಿಗಳು ಹತ್ತು ಹಲವು. ಬಡಗಿ, ಕಮ್ಮಾರ, ಕುಂಬಾರ, ಕೊರಮ, ವಡ್ಡ, ಗೊಲ್ಲ, ಕುರುಬ, ಬಳೆಗಾರ, ಬಣಜಿಗ, ಅಕ್ಕಸಾಲಿ, ನೇಯ್ಗೆಯವ, ಅಗಸ, ತಳವಾರ, ಚಿಪ್ಪಿಗ, ಚಮ್ಮಾರ, ಗಾಣಿಗ, ಉಪ್ಪಾರ, ಮುಂತಾದವರು ಒಕ್ಕಲುಮಗನನ್ನು ಅವಲಂಬಿಸಿ ಅವನಿಗೆ ಸಹಾಯಕವಾದ ಒಂದೊಂದು ವೃತ್ತಿಯನ್ನು ಹಿಡಿದು ಗ್ರಾಮಸಮಾಜವನ್ನು ಕಟ್ಟಿದವರು. ಸದಾ ಕಾಯಕನಿಷ್ಠವಾದ ಗ್ರಾಮೀಣಜನತೆ ತನ್ನ ದುಡಿಮೆಯ ಶ್ರಮವನ್ನು ಮರೆಯಲು ಮನಸ್ಸಿಗೆ ಆನಂದ ನೆಮ್ಮದಿಗಳನ್ನು ತಂದುಕೊಳ್ಳಲು ಅನೇಕ ಬಗೆಯ ಜನಪದ ಕಲೆಗಳನ್ನು ಅವಲಂಬಿಸುತ್ತದೆ. ಈ ಕಲೆಗಳು ಎರಡು ತೆರನಾಗಿರುವುದು ಕಂಡುಬರುತ್ತದೆ. ಜನಪದ ತನ್ನ ಸಂತೋಷಕ್ಕಾಗಿ ತಾವೇ ಕಂಡುಕೊಂಡ ಹಾಡು, ಕುಣಿತ, ನಾಟಕ, ಕ್ರೀಡೆ, ವಿನೋದ, ಮುಂತಾದವು ಸಾಮಾನ್ಯವರ್ಗಕ್ಕೆ ಸೇರುತ್ತವೆ. ಇದು ಅವರ ವಿರಾಮದ ವೇಳೆಯ ಹವ್ಯಾಸವಾಗಿ ಬೆಳೆದುಬರುತ್ತದೆ. ಅವರಲ್ಲಿ ಪ್ರತಿಭಾಶಾಲಿಗಳಾದವರೂ ಚತುರರಾದವರೂ ಈ ಕಲೆಗಳನ್ನು ಕರಗತಮಾಡಿಕೊಂಡು ನಿಪ್ಣಾತರೆನಿಸುತ್ತಾರೆ. ಜನಪದ ಕಲೆಗಳ ಎರಡನೆಯ ವರ್ಗ ಒಂದು ವಿಶೇಷ ವೃತ್ತಿಯನ್ನಾಗಿ ಮಾಡಿಕೊಂಡವರಿಗೆ ಸಂಬಂಧಪಡುತ್ತದೆ. ಗ್ರಾಮೀಣ ಜನತೆಗೆ ಅವರದೇ ಆದ ಕಲೆಗಳ ಜೊತೆಗೆ ಇವರು ತಮ್ಮ ವೈಶಿಷ್ಟ್ಯಪೂರ್ಣ ಕಲೆಗಳ ಮೂಲಕ ಮನರಂಜನೆಯನ್ನು ಒದಗಿಸುತ್ತಾರೆ. ಇದು ಅವರಲ್ಲಿ ಒಂದು ವೃತ್ತಿಯಾಗಿ ಬೆಳೆದುಬರುತ್ತದೆ.

ಇವರೇ ಜನಪದ ಕಲಾಪ್ರಪಂಚಕ್ಕೆ ಸಂಬಂಧಿಸಿದ ಜನಪದ ವೃತ್ತಿಕಲಾವಿದರು. ಕರ್ನಾಟಕ ದಲ್ಲಿ ವೃತ್ತಿ ಕಲೆಯ ವಿಪುಲ ಬಗೆಗಳನ್ನು ಕಾಣಬಹುದಾಗಿದೆ.

ಜನಪದ ವೃತ್ತಿಕಾರರನ್ನು ಅನೇಕ ಬಗೆಗಳಲ್ಲಿ ವರ್ಗೀಕರಿಸಿಕೊಳ್ಳಬಹುದು. ಇಲ್ಲಿ ಏಳು ಮುಖ್ಯ ಪ್ರಕಾರಗಳನ್ನು ಮಾತ್ರ ಸೂಚಿಸಲಾಗಿದೆ :

೧) ಕಥಾಪ್ರಧಾನ ಜನಪದ ಮೇಳಗಳ ವೃತ್ತಿಗಾಯಕರು.

೨) ಜನಪದ ಮನೋರಂಜಕ ವೃತ್ತಿಕಲಾವಿದರು.

೩) ಧಾರ್ಮಿಕ ವೃತ್ತಿಕಾರರು.

೪) ನೃತ್ಯಪ್ರಧಾನ ಮೇಳಗಳ ಅರೆವೃತ್ತಿಕಲಾವಿದರು.

೫) ಗೀತಪ್ರಧಾನ ಮೇಳಗಳ ಅರೆವೃತ್ತಿ ಕಲಾವಿದರು.

೬) ಜನಪದ ಭವಿಷ್ಯವಾಚಕರು.

೭) ವಾದ್ಯಪ್ರಧಾನ ಮೇಳದವರು.

೮) ಸಂಕೀರ್ಣ ವೃತ್ತಿಕಾರರು.

೧) ಕಥಾ ಪ್ರಧಾನ ಜನಪದ ಮೇಳಗಳ ವೃತ್ತಿಕಲಾವಿದರು ಅನೇಕ ಬಗೆಯಲ್ಲಿ ಕಂಡುಬಂದಿದ್ದಾರೆ. ಕಂಸಾಳೆಯವರು, ನೀಲಗಾರರು, ಚೌಡಿಕೆಯವರು, ಗೊಂದಲಿಗರು, ಗೊರವರು, ಗಣೆಯವರು, ದೊಂಬಿದಾಸರು, ಕರಪಾಲದವರು, ಹೆಳವರು, ಲಾವಣಿ ಕಾರರು, ತಂಬೂರಿಯವರು, ತೆಲಗು ಜಂಗಮರು, ಕಿನ್ನರಿ ಜೋಗಿಗಳು, ಸ್ತ್ರೀಗಾಯಿಕಿ ಯರು, ಮುಂತಾದವರು ಪ್ರಮುಖವಾಗಿ ಈ ವರ್ಗದಲ್ಲಿ ಬರುತ್ತಾರೆ. ಜನಪದ ರಂಗ ಭೂಮಿಗೆ ಸಂಬಂಧಿಸಿದ ಕಲಾವಿದರಲ್ಲಿ ಮರಾಠಿಯವರು, ಕಿಳ್ಳೀಕ್ಯಾತರು, ದೊಂಬಿ ದಾಸರು, ಸಣ್ಣಾಟದವರು ಪ್ರಮುಖರಾದವರು.

ಜನಪದ ಮನೋರಂಜಕರ ವ್ಯಾಪ್ತಿ ಬಹಳ ದೊಡ್ಡದು. ಕೀಲುಗೊಂಬೆಯಾಟ, ದೊಂಬರಾಟ, ಹಾವಾಡಿಗರ ಪ್ರದರ್ಶನ, ಕೋತಿಯಾಟ, ಕರಡಿಯಾಟ, ಕೋಲೆಬಸವನ ಆಟ, ಮೊಂಡರು, ವೇಷಗಾರರು ಮೊದಲಾದ ಅನೇಕ ಬಗೆಗಳನ್ನು ಚಮತ್ಕಾರಗಳನ್ನೂ ಕಲೆಗಳನ್ನೂ ಗುರುತಿಸಬಹುದು.

ಧಾರ್ಮಿಕ ವೃತ್ತಿಕಾರರದೇ ಒಂದು ವಿಶಿಷ್ಟ ವರ್ಗವಾಗುತ್ತದೆ. ಇವರಲ್ಲಿ ಜುಂಜಪ್ಪನ ಗಣೆಯವರು, ಸುಡುಗಾಡು ಸಿದ್ಧರು, ಮುಳ್ಳಾವಿಗೆಯವರು, ಎಣ್ಣೆಜೋಗಿ ಗಳು, ಜೋಗಜೋಗತಿಯವರು, ಉರಿಮಾರಿಯವರು, ಬೀದಿಮಾರಿಯವರು, ತತ್ತ್ವ ಪದದವರು, ಅಸಾದಿಯವರು ಮುಂತಾದವರನ್ನು ಹೆಸರಿಸಬಹುದು.

ನೃತ್ಯಪ್ರಧಾನ ಮೇಳಗಳ ಅರೆವೃತ್ತಿ ಕಲಾವಿದರಲ್ಲಿ ಡೊಳ್ಳುಮೇಳದವರು, ವೀರಗಾಸೆ ಮೇಳದವರು, ಕೋಲಾಟದವರು, ಪುರವಂತಿಕೆಯುವರು ಮುಂತಾದವರನ್ನು ಗಮನಿಸಬಹುದು. ಇವರು ತಂಡಗಳನ್ನು ರಚಿಸಿಕೊಂಡರೂ ಅದನ್ನು ಪೂರ್ಣವೃತ್ತಿಯನ್ನಾಗಿ ಮಾಡಿಕೊಂಡವರಲ್ಲ.

ಗೀತಪ್ರಧಾನ ಮೇಳಗಳಲ್ಲಿ ಭಾಗವಂತಿಕೆ ಮೇಳ, ಅಂಟಿಕೆ–ಪೆಂಟಿಕೆ ಮೇಳದವರು, ಕೋಲಾಟದವರು, ಪುರವಂತಿಕೆಯುವರು, ಮುಂತಾದವರನ್ನು ಗಮನಿಸಬಹುದು. ಇವರು ಕಲಾತಂಡಗಳನ್ನು ರಚಿಸಿಕೊಂಡರೂ ಅದನ್ನು ಪೂರ್ಣವೃತ್ತಿಯನ್ನಾಗಿ ಮಾಡಿಕೊಂಡವರಲ್ಲ.

ಭವಿಷ್ಯ ವಾಚಕರಲ್ಲಿ ಕಣಿಯುವರು, ಕೊರವಂಜಿ, ಕುರುಮಾವುಗಳು, ಕಾಲಜ್ಞಾನದವರು, ಬುಡುಬುಡಿಕೆಯವರು ಮುಂತಾದವರು ಸೇರುತ್ತಾರೆ.

ವಾದ್ಯಪ್ರಧಾನ ಮೇಳಗಳಲ್ಲಿ ಪ್ರಮುಖವಾಗಿ ಕರಡುಮಜಲು, ಚಿಟಮೇಳ, ಹಲಗೆ ಮೇಳ, ವಾದ್ಯಮೇಳ, ಮೊದಲಾದವು ಕಂಡುಬರುತ್ತವೆ.

ವಿವಿಧ ವೃತ್ತಿಕಾರರ ಸಾಲಿನಲ್ಲಿ ಕಥಾಪ್ರಧಾನ ಮೇಳಗಳನ್ನು ಮಾತ್ರ ಆರಿಸಿಕೊಂಡು ಕೆಲವು ಪ್ರಮುಖ ವಿಷಯಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಕಥಾಪ್ರಧಾನ ಜನಪದ ಮೇಳಗಳು ಎಲ್ಲ ಸಂಸ್ಕೃತಿಗಳಲ್ಲೂ ಕಂಡುಬಂದಿವೆ ಪರಂಪರಾನುಗತವಾಗಿ ಬಂದ ಜನಪದ ಕಾವ್ಯಗಳನ್ನು ಅಭ್ಯಾಸಮಾಡಿಕೊಂಡು ವಾದ್ಯಗಳ ಹಿನ್ನೆಲೆಯಲ್ಲಿ ಮೇಳಗಳನ್ನು ನಡೆಸುವ ಜನಪದ ಗಾಯಕರನ್ನೂ ಈ ಸಂಪ್ರದಾಯವಲ್ಲಿ ಕಾಣಬಹುದು. ಇವರು ತಮ್ಮದೇ ಆದ ಸಂಪ್ರದಾಯವನ್ನು ಬೆಳೆಸಿಕೊಂಡು ಈ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ತಂದೆಯಿಂದ ಮಗ, ಗುರುವಿನಿಂದ ಶಿಷ್ಯ, ಹಿರಿಯರಿಂದ ಕಿರಿಯರು ಹೀಗೆ, ಈ ಸಂಪ್ರದಾಯ ತಲೆಮಾರಿನಿಂದ ತಲೆಮಾರಿಗೆ ನಿರ್ದಿಷ್ಟವಾದ ಗುಂಪುಗಳಲ್ಲಿ ಬೆಳೆದುಕೊಂಡು ಬಂದಿದೆ. ಈ ಕಲಾವಿದರಲ್ಲಿ ಕೆಲವರಿಗೆ ವಿಶಿಷ್ಟ ವೇಷಭೂಷಣಗಳು ಈಗಲೂ ಉಳಿದುಬಂದಿವೆ. ಕೆಲವರಲ್ಲಿ ಅವು ಕೈಬಿಟ್ಟು ಹೋಗಿವೆ. ಒಂದೊಂದು ಸಂಪ್ರದಾಯಕ್ಕೇ ವಿಶಿಷ್ಟವಾದ ವಾದ್ಯಗಳನ್ನು ಬಳಸುವ ಬಗೆಯೂ ಇಲ್ಲಿ ಗಮನಾರ್ಹವಾದುದು. ಆಹ್ವಾನದ ಮೇಲೆ ಈ ಕಲಾವಿದರು ಹಬ್ಬಹರಿದಿನಗಳಲ್ಲಿ ಮದುವೆ ಜಾತ್ರೆಗಳಲ್ಲಿ ಉಳಿದ ವಿಶೇಷ ಸಂದರ್ಭಗಳಲ್ಲಿ ಕಾವ್ಯಗಳನ್ನು ಹಾಡುತ್ತಾರೆ. ಕೆಲವರು ಹಾಡಿ ಕುಣಿಯುತ್ತಾರೆ. ಕೆಲವರು ನಾಟಕೀಯವಾಗಿಯೂ ಅಭಿನಯಿಸುತ್ತಾರೆ. ಪದ್ಯದಲ್ಲಿ ಹಾಡಿದುದನ್ನು ಗದ್ಯದಲ್ಲಿ ವಿವರಿಸುತ್ತಾರೆ. ಗೊತ್ತಾದ ಆಸಕ್ತರ ಗುಂಪೊಂದು ಕುಳಿತು, ಇವರ ಕಥೆಗಳನ್ನು ಆಸ್ವಾದಿಸುತ್ತದೆ. ಇಬ್ಬರಿಗೂ ಹೆಚ್ಚಾಗಿ ಈ ಮೇಳಗಳಲ್ಲಿ ಕಲಾವಿದರು ಭಾಗವಹಿಸುತ್ತಾರೆ. ಪರಿಣತ

ಕಲಾವಿದ ಮುಮ್ಮೇಳವನ್ನು ನಿರ್ವಹಿಸಿದರೆ ಶಿಷ್ಯರು ಅಥವಾ ಸಹಕಲಾವಿದರು ಹಿಮ್ಮೇಳವನ್ನು ಹಾಡುತ್ತ ಸಾಗುತ್ತಾರೆ. ಈ ಹಿಮ್ಮೇಳ ಪಲ್ಲವಿಯಾಗಿರಬಹುದು. ಅಥವಾ ಆ ಕಾವ್ಯದ ಪಾದಗಳೇ ಆಗಿರಬಹುದು. ಮುಖ್ಯ ಕಥೆಯನ್ನು ನಡೆಸುವಾಗ ನಡುನಡುವೆ ಏಕತಾನತೆಯನ್ನು ನಿವಾರಿಸಿಕೊಳ್ಳುವ ದೃಷ್ಟಿಯಿಂದ ಉಪಕಥೆಗಳೂ ಬರುತ್ತವೆ. ಮುಖ್ಯ ಕಥೆ ಗಂಭೀರಸ್ವರೂಪದ ಶೈಲಿಯಲ್ಲಿ ಸಾಗಿದರೆ ಉಪಕಥೆ ಹಾಸ ಪ್ರಧಾನವಾಗಿರುತ್ತದೆ. ಅಲ್ಲಲ್ಲಿ ಆಡುನುಡಿಯಲ್ಲಿ, ಗ್ರಾಮ್ಯಶೈಲಿಯಲ್ಲಿ ನಿರೂಪಿಸಲ್ಪಟ್ಟು ನಗೆಯ ಬುಗ್ಗೆಯನ್ನು ಚಿಮ್ಮಿಸಿ ಪ್ರೇಕ್ಷಕರಲ್ಲಿ ಉಲ್ಲಾಸವನ್ನು ತುಂಬುತ್ತವೆ. ಸಮಗ್ರ ರಾತ್ರಿ ಈ ಮೇಳಗಳು ನಡೆಯಬೇಕಾದುದರಿಂದ ಕಾವ್ಯಗಳೂ ಸಾಕಷ್ಟು ವಿಸ್ತಾರವಾಗಿಯೇ ಇರುತ್ತವೆ. ಕಲಾವಿದರ ಕಂಠಶ್ರೀ ಸಂಗೀತದ ಗುಂಗಿನಲ್ಲಿ ಯಾವುದೋ ರಸಲೋಕಕ್ಕೆ ಕೇಳುಗರನ್ನು ಕೊಂಡೊಯ್ಯುತ್ತವೆ. ವಾದ್ಯಗಳ ಮೋಜು, ಪುಳಕವನ್ನು ತರುತ್ತದೆ. ಸಂಗೀತ, ಸಾಹಿತ್ಯ, ನೃತ್ಯಗಳು ಸಮರಸವಾಗಿ ಬೆರೆತಾಗಲಂತೂ ವೃತ್ತಿಗಾಯಕರ ಮೇಳಗಳು ಅತ್ಯಂತ ಆಕರ್ಷಕವಾಗಿ ಅಪೂರ್ವವೆನಿಸುತ್ತವೆ. ಜನಪದ ಜೀವನದ ಜೀವ ನಾಡಿಗಳೆನಿಸಿ ಈ ವೃತ್ತಿಗಾಯಕರು ಜನಾದರಣೆಗೆ ಪಾತ್ರರಾಗಿದ್ದ ಕಾಲ ಈಗ ದೂರ ವಾಗುತ್ತಿದ್ದರೂ ಇವರು ಇನ್ನೂ ತಮ್ಮ ಸತ್ವಪೂರ್ಣ ಸಂಪ್ರದಾಯಗಳನ್ನು ಕಾಪಾಡಿ ಕೊಂಡು ಬಂದಿದ್ದಾರೆ. ಉಡುಗೊರೆ ಸಂಭಾವನೆ, ದವಸ ಧಾನ್ಯಗಳಿಗೆ ಮೇಳಗಳನ್ನು ನಡೆಸುತ್ತಿದ್ದ ಇವರು ಭಿಕ್ಷಾಟನೆಯನ್ನು ನಡೆಸುವ ಕಾಲ ಬಂದಿದ್ದರೂ ತಮ್ಮ ಸಂಪ್ರ ದಾಯವನ್ನು ಸಂಪೂರ್ಣವಾಗಿ ಕೈಬಿಡದೆ ಸಾವು ಬದುಕಿನೊಡನೆ ಸೆಣಸಾಡುತ್ತಿದ್ದಾರೆ.

ವೃತ್ತಿಗಾಯಕರ ಕಾವ್ಯಗಳು ನಮ್ಮ ಜನಪದ ಸಾಹಿತ್ಯದ ಶ್ರೀಮಂತ ಭಂಡಾರಕ್ಕೆ ಸಾಕ್ಷಿಯಾಗಿವೆ. ಮಹಾಕಾವ್ಯಗಳೂ, ಕಿರುಕಾವ್ಯಗಳೂ, ಲಾವಣಿಗಳೂ, ಬಿಡಿಹಾಡು ಗಳೂ ಇವರ ಕಾವ್ಯಗಳಲ್ಲಿ ಕಂಡುಬರುತ್ತವೆ ಶುದ್ಧ ಪದ್ಯರೂಪದ ರಚನೆಗಳು ಗದ್ಯ ಪದ್ಯ ಮಿಶ್ರಿತ ಚಂಪೂರೀತಿಯ ಕಾವ್ಯಗಳೂ ಗದ್ಯವೇ ಎನಿಸಿದರೂ ಪದ್ಯಗಂಧಿಯಾದ ಶೈಲಿಯ ಕೃತಿಗಳೂ ಕಾಣಬರುತ್ತವೆ. ಆಯಾ ಪ್ರಾದೇಶಿಕ ಹಿನ್ನೆಲೆಯಲ್ಲಿ ಈ ಕಾವ್ಯಗಳ ಭಾಷೆ ವಿಶಿಷ್ಟವಾದ ಸೊಗಡಿನಿಂದ ತುಂಬಿ ರಂಜಿಸುತ್ತದೆ. ಸಾಮಾನ್ಯ ಲಾವಣಿಯ ಗುಣಕ್ಕೆ ಭಿನ್ನವಾದ ವರ್ಣನೆಗಳೂ ಪಾತ್ರಪರಿಪೋಷಣೆ, ಸನ್ನಿವೇಶ ರಚನೆ, ವೈಶಿಷ್ಟ್ಯ ಗಳು, ಸಂಕೀರ್ಣತೆಯ ವೈವಿಧ್ಯಗಳು ಇವುಗಳಲ್ಲಿ ಕಂಡುಬರುತ್ತವೆ. ಶುದ್ಧ ಜನಪದ ಮೂಲದ ಕಾವ್ಯಗಳಂತೆಯೇ ಶಿಷ್ಟಮೂಲದ ಕಾವ್ಯಗಳೂ ಜನಪದ ಕಾವ್ಯಗಳಾಗಿ ಪರಿವರ್ತಿತವಾಗಿರುವುದು ಇಲ್ಲಿ ಗೋಚರಿಸುತ್ತದೆ. ಶಿಷ್ಟ ಮತ್ತು ಜನಪದಗಳ ನಡುವೆ 'ಕೊಳುಕೊಡುಗೆ' ಧಾರಾಳವಾಗಿ ನಡೆದಿರುವುದು ಈ ವೃತ್ತಿಗಾಯಕ ಕಾವ್ಯಸಂಪ್ರದಾಯ ದಲ್ಲಿ.

ವೃತ್ತಿಗಾಯಕ ಕಾವ್ಯಗಳ ವಸ್ತು ವೈವಿಧ್ಯವೂ ಗಮನಾರ್ಹವಾದುದು. ಪೌರಾ ಣಿಕ, ಚಾರಿತ್ರಿಕ, ವಾಸ್ತವಿಕ, ರಮ್ಯ ಅದ್ಭುತ ಕಾವ್ಯಗಳು ಇಲ್ಲಿ ಹೇರಳವಾಗಿವೆ. ಅತಿ

ಮಾನುಷ ಕಾವ್ಯಗಳೂ ವಿರಳವಾಗಿ ಬರಬಹುದು. ಪ್ರೇಮಕಾವ್ಯಗಳು ದೊರೆಯುತ್ತವೆ. ವೀರಕಾವ್ಯಗಳು ಹೇರಳವಾಗಿವೆ. ತ್ಯಾಗ, ಬಲಿದಾನ, ಸತ್ಯ, ಶೀಲ, ನ್ಯಾಯ, ನೀತಿ, ಧರ್ಮ ಮುಂತಾದ ಆದರ್ಶಗುಣಗಳಿಂದ ಜನರ ಮನಸ್ಸಿನಲ್ಲಿ ನಿಂತ ಮಾನವಶ್ರೇಷ್ಠರು ಈ ಕಾವ್ಯಗಳ ನಾಯಕ ಅಥವಾ ನಾಯಿಕಿಯರಾಗುತ್ತಾರೆ. ಸುಖಾಂತ ಹಾಗೂ ದುರಂತ ಕಾವ್ಯಗಳೂ ಇಲ್ಲಿ ಇವೆ. ವೈವಿಧ್ಯಪೂರ್ಣವಾದ ಮಟ್ಟುಗಳು, ಛಂದಸ್ಸು, ಅಭ್ಯಸನೀಯವಾಗಿವೆ. ಎಲ್ಲ ದೃಷ್ಟಿಯಿಂದಲೂ ವೃತ್ತಿಗಾಯಕರು ಹಾಡುವ ಜನಪದ ಕಾವ್ಯಗಳು ನಮ್ಮ ಜನಪದ ಸಂಸ್ಕೃತಿ ಏಟಕಿಸಿಕೊಂಡಿದ್ದ ಉನ್ನತ ಶಿಖರದ ದಾಖಲೆ ಗಳಾಗಿ ಉಳಿಯುತ್ತವೆ.

ವೃತ್ತಿಗಾಯಕ ಪರಂಪರೆಯನ್ನು ಕುರಿತು ೧೮ನೆಯ ಶತಮಾನದ ಅಂತ್ಯಭಾಗ ದಲ್ಲಿ ಬಿಷಪ್ ಪರ್ಸಿ ಇಂಗ್ಲೆಂಡಿನಲ್ಲಿ ಮೊಟ್ಟಮೊದಲ ಬಾರಿಗೆ ಚರ್ಚಿಸಿದನು.

ಅವರ ಭವ್ಯ ಪರಂಪರೆ, ಕಾವ್ಯಗಳು, ವಾದ್ಯಗಳು ಮುಂತಾದವನ್ನು ಆವನು ಚರ್ಚಿಸಿ, ಅವರ ಸಾಹಿತ್ಯದ ಕಡೆ ವಿಶೇಷ ಗಮನವನ್ನು ಸೆಳೆದನು. ಅವರ ಕಾವ್ಯಗಳನ್ನು ಜನಪದ ಕಾವ್ಯಗಳು ಎಂದೂ ಪ್ರತ್ಯೇಕಿಸಿ ನೋಡದೆ 'ರೆಲಿಕ್ಸ್ ಆಫ್ ಏನಸಿಯಂಟ ಇಂಗ್ಲಿಷ್ ಪೊಯಿಟ್ರಿ' (ಪ್ರಾಚೀನ ಇಂಗ್ಲಿಷ್ ಕಾವ್ಯದ ಪಳೆಯುಳಿಕೆ ಗಳು) ಎಂದು ಕರೆದ. ಅವನಿಂದ ಸ್ಫೂರ್ತಿಗೊಂಡ ಅನೇಕರು ವೃತ್ತಿಗಾಯಕರ ಶೋಧ ದಲ್ಲಿ ತೊಡಗಿ ಅತ್ಯುತ್ತಮ ಸಾಧನೆಯನ್ನು ತೋರಿದರು. ಸ್ಕಾಟ್ಲೆಂಡಿನ ಗಡಿಯ ವೃತ್ತಿ ಗಾಯಕ ಪರಂಪರೆಯನ್ನು ಕುರಿತು 'ಸರ್ ವಾಲ್ಟರ್ ಸ್ಕಾಟ್' ಅಧ್ಯಯನವನ್ನು ನಡೆಸಿದ. ಮುಂದೆ ವಿಶ್ವದ ನಾನಾ ಭಾಗಗಳಲ್ಲಿ ವೃತ್ತಿಗಾಯಕರು ಬೆಳಕಿಗೆ ಬಂದರು. ಸ್ಲಾವಿಕ್ ದೇಶಗಳ ಸ್ಕೊಮೊರಾಕ್ಷೆ, ಸ್ಪೆಯ್ನಿನ 'ಕಾಂಟಿಡೋರ್ಸ್' ಮುಂತಾದ ವೃತ್ತಿ ಗಾಯಕ ಪರಂಪರೆಗಳು ಜನಪದ ಕಾವ್ಯಗಳ ಸಂಶೋಧಕರಿಗೆ ಅಪಾರ ಸಾಮಗ್ರಿಯನ್ನು ಒದಗಿಸಿದವು.

ಭಾರತದಲ್ಲಿ ವೃತ್ತಿಗಾಯಕರು ಅನೇಕ ಕಡೆಗಳಲ್ಲಿ ಕಂಡುಬರುತ್ತಾರೆ. ಇವರ ಪರಿವೀಕ್ಷಣೆ ಕ್ರಮವಾಗಿ ನಡೆಯದೆ ಇನ್ನೂ ಸ್ಪಷ್ಟ ಚಿತ್ರ ಲಭ್ಯವಾಗದಿದ್ದರೂ ಅತ್ಯು ತ್ತಮ ಸಂಪ್ರದಾಯಗಳು ಅಲ್ಲಲ್ಲಿ ಬೆಳಕಿಗೆ ಬಂದಿವೆ. ಬಂಗಾಳದ 'ಬಾವುಲ್' ಮೇಳ ಅತ್ಯಂತ ಆಕರ್ಷಕವಾದುದು. ಕರ್ನಾಟಕದ ಚೌಡಿಕೆ ಮೇಳವನ್ನು ಹೋಲುವ ಈ ಸಂಪ್ರ ದಾಯದಲ್ಲಿ ಚೌಡಿಕೆಯಂಥದೇ ವಾದ್ಯವನ್ನು ಹಿಡಿದು ಒಬ್ಬ ಗಾಯಕ ಹಾಡಿಕೊಂಡು ನರ್ತಿಸುತ್ತಾನೆ. ನಾಲ್ಕು ಮಂದಿ ಹಿಮ್ಮೇಳದವರು ಕುಳಿತು ವಿವಿಧ ವಾದ್ಯಗಳನ್ನು ನುಡಿಸಿ ಹಿಮ್ಮೇಳ ಹಾಡುತ್ತಾರೆ. ಇಲ್ಲಿನ ಚೌಡಿಕೆಯಂಥ ವಾದ್ಯಕ್ಕೆ ಒಳಗೆ ಒಂದು ದಾರಕ್ಕೆ ಬದಲಾಗಿ ಎರಡು ದಾರಗಳನ್ನು ಅಳವಡಿಸಲಾಗುತ್ತದೆ. ಅದರ ನಾದವೂ ಅಪೂರ್ವವಾಗಿರುತ್ತದೆ. ಭಾವಪೂರ್ಣವಾಗಿ ಅಭಿನಯಿಸುತ್ತ ಹಾಡುತ್ತಾ, ಕಥೆಯನ್ನು ನಿರೂಪಿಸುತ್ತಾ ಬಾವುಲ್ ಸಭಿಕರನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತಾನೆ.

ಬಾವುಲ್ ಸಂಪ್ರದಾಯದಂತೆಯೇ ಇನ್ನೂ ಅನೇಕ ವೈವಿಧ್ಯಪೂರ್ಣ ವೃತ್ತಿ ಗಾಯಕ ಸಂಪ್ರದಾಯಗಳು ಬಂಗಾಳದಲ್ಲಿ ಕಂಡುಬಂದಿವೆ. ಕಥಕರು, ಪಾಟಕರು, ಕಟ ವಾಲಲು ಇಲ್ಲಿ ಮುಖ್ಯರಾದವರು.

ಭಾರತದ ಬೇರೆಬೇರೆ ಭಾಗಗಳಲ್ಲಿ ಕಂಡುಬಂದಿರುವ ಇನ್ನೂ ಕೆಲವು ಸಂಪ್ರದಾಯಗಳಿವೆ. ರಾಜಸ್ಥಾನದ 'ಭೋಪ' ಸಂಪ್ರದಾಯ ಗಮನಾರ್ಹವಾದುದು. ಬಟ್ಟೆಯ ಮೇಲೆ ಚಿತ್ರಗಳನ್ನು ಬಿಡಿಸಿ, ಅವುಗಳನ್ನು ನಿರ್ದೇಶಿಸಿ, ಕಥೆಯನ್ನು ಮಾಡುವ ಇಲ್ಲಿನ ತಂತ್ರ ವಿಶಿಷ್ಟವಾದುದು. ಪಂಜಾಬಿನಲ್ಲಿ 'ಭಟ್ಟರು', 'ದಾಧಿಗಳು' ಎಂಬ ಕಲಾವಿದರು ಕಂಡುಬರುತ್ತಾರೆ. ಒರಿಸ್ಸಾದ ಯೋಗಿಗಳ ಸಂಪ್ರದಾಯ ಕರ್ನಾಟಕದ 'ಜೋಗಿ' ಸಂಪ್ರದಾಯದಂತೆಯೆ ಇದೆ. ಅಸ್ಸಾಮಿನ ವೃತ್ತಿಗಾಯಕರಲ್ಲಿ 'ಬರಾಗಿ' ಸಂಪ್ರದಾಯ ಮುಖ್ಯವಾದುದು. ಈ 'ಬರಾಗಿಯು' ಇತರ ಜೋಗಿ ಸಂಪ್ರದಾಯದ ಕಲಾವಿದರಂತೆ ಸದಾ ಸಂಚಾರಶೀಲನಾದವನು.

ದಕ್ಷಿಣಭಾರತದಲ್ಲಿ ತಮಿಳುನಾಡು ಮತ್ತು ಕೇರಳದಲ್ಲಿ ವೃತ್ತಿಗಾಯಕರ ಬಗ್ಗೆ ಇನ್ನೂ ಹೆಚ್ಚು ಅಧ್ಯಯನ ನಡೆಯಬೇಕಾಗಿದೆ. ಆಂಧ್ರಪ್ರದೇಶದ ವಿದ್ವಾಂಸರು ಅಲ್ಲಿನ ಜನಪದ ಕಾವ್ಯಗಳ ಕ್ಷೇತ್ರದಲ್ಲಿ ಸಾಕಷ್ಟು ಕೆಲಸ ಮಾಡಿದ್ದಾರೆ. ಅನೇಕರು ವ್ಯಾಪಕವಾದ ಕ್ಷೇತ್ರಕಾರ್ಯವನ್ನು ಮಾಡಿ ಅಲ್ಲಿನ ಕಾವ್ಯಗಳನ್ನು ಅಭ್ಯಸಿಸಿದ್ದಾರೆ.

ಆಂಧ್ರ ಮತ್ತು ಕರ್ನಾಟಕದಲ್ಲಿ ಜಾನಪದ ಸಂಬಂಧ ಅತ್ಯಂತ ನಿಕಟವಾಗಿ ಇದ್ದಂತೆ ತೋರುತ್ತದೆ. ಕರ್ನಾಟಕದ ಕಾವ್ಯಸಂಪ್ರದಾಯಗಳಿಗೆ ಸಂವಾದಿಯಾದ ಅನೇಕ ಸಂಪ್ರದಾಯಗಳು ಆಂಧ್ರದಲ್ಲಿಯೂ ಗುರುತಿಸಲ್ಪಟ್ಟಿವೆ. ಭಾಷೆಯ ಮಾಧ್ಯಮ ಬೇರೆಯಾದರೂ ಸಂಪ್ರದಾಯ ಒಂದೇ ರೀತಿಯದಾಗಿದೆ. ಹೆಳವರು, ತಂಬೂರಿಯವರು, ದೊಂಬಿದಾಸರು, ಚೌಡಿಕೆಯವರು, ಕಿಂದರಿಜೋಗಿಗಳು, ಜಂಗಮರು, ಬುರ್ರಕಥೆಯವರು ಮುಂತಾದ ಪ್ರಕಾರಗಳು ಆಂಧ್ರದಲ್ಲಿಯೂ ವ್ಯಾಪಕವಾಗಿ ತೋರಿ ಬರುತ್ತವೆ. ಆಶ್ಚರ್ಯದ ವಿಷಯವೆಂದರೆ ದಕ್ಷಿಣ ಕರ್ನಾಟಕದ ತೆಲುಗು ಜಂಗಮರು, ದೊಂಬಿದಾಸರು, ಹೆಳವರು ಮುಂತಾದವರು ತೆಲುಗನ್ನು ಮನೆಮಾತಾಗಿ ಉಳ್ಳವರು. ಬಹುಶಃ ಯಾವುದೋ ಕಾಲದಲ್ಲಿ ಇವರು ಕರ್ನಾಟಕಕ್ಕೆ ವಲಸೆ ಬಂದು ಇಲ್ಲಿಯೇ ನೆಲೆ ನಿಂತು ಜೀವನೋಪಾಯಕ್ಕಾಗಿ ಕನ್ನಡ ಜನಪದ ಕಾವ್ಯಗಳನ್ನು ಅಭ್ಯಾಸ ಮಾಡಿಕೊಂಡಿರಬೇಕು. ಕರ್ನಾಟಕದ ಗೋಂದಲಿಗರು ಮರಾಠಿ ಮೂಲಕ್ಕೆ ಸಂಬಂಧಪಟ್ಟಂತೆ ತೋರುತ್ತಾರೆ. 'ಬಾಳ ಸಂತೋಷದವರು' ಆಂಧ್ರ ಮೂಲದವರಾಗಿ ತೋರುತ್ತಾರೆ.

ಕರ್ನಾಟಕದಲ್ಲಿ ವೃತ್ತಿಗಾಯಕರ ಶೋಧ ಶಾಸ್ತ್ರೀಯವಾಗಿ ಆರಂಭವಾದುದು ಈ ದಶಕದಲ್ಲಿ. ಈ ಕ್ಷೇತ್ರದಲ್ಲಿ ಈಗಾಗಿರುವ ಸಾಧನೆ ಹೆಮ್ಮೆಪಡುವಂಥದ್ದು. ಅನೇಕ ಅಜ್ಞಾತ ವೃತ್ತಿ ಗಾಯಕ ಸಂಪ್ರದಾಯಗಳು ಕಳೆದ ಒಂದೂವರೆ ದಶಕದಲ್ಲಿ ಬೆಳಕಿಗೆ

ಬಂದಿವೆ. ಆಶ್ಚರ್ಯಕರ ರೀತಿಯ ಸಂಖ್ಯೆಯಲ್ಲಿ ಅವು ಕಾಣಬಂದಿವೆ. ಈ ಸಂಪ್ರದಾಯಗಳನ್ನು ಕ್ರಮವಾಗಿ ಈಗ ಗುರುತಿಸಲಾಗುತ್ತಿದ್ದರೂ ಇವುಗಳ ಸುಳುಹು ೧೯೬೦ ರ ಹಿಂದಿನ ಕೆಲವು ಸಂಕಲನಗಳಲ್ಲಿ ಲೇಖನಗಳಲ್ಲಿ ಲಭ್ಯವಾಗುತ್ತವೆ. ಗೋವರ, ಫ್ಲೀಟ್, ಮೊದಲಾದ ಪಾಶ್ಚಾತ್ಯ ವಿದ್ವಾಂಸರ ಕೃತಿಗಳಲ್ಲಿ 'ದಾಸ' ಎಂಬ ಒಂದು ವರ್ಗದ ಗಾಯಕರ ಪ್ರಸ್ತಾಪವಿದೆ. ಅವರು ವಾದ್ಯಗಳನ್ನು ಬಳಸಿ ಹಾಡುತ್ತಿದ್ದರು. ಗೊತ್ತಾದ ಸಭಿಕರು ಈ ಹಾಡುಗಾರಿಕೆಯನ್ನು ಕೇಳಲು ಸೇರುತ್ತಿದ್ದರು- ಎಂಬ ವಿವರಣೆಗಳು ಇವೆ. ಮುಂದೆ ಮಾಸ್ತಿಯವರ ಲೇಖನವೊಂದರಲ್ಲಿ ಕಿನ್ನರಿ ಜೋಗಿಗಳ ಚೌಡಿಕೆಯವರ, ಸಂಪ್ರದಾಯಗಳಿಗೆ ಸಂಬಂಧಿಸಿದ ಕೆಲವು ಪ್ರಾಸಂಗಿಕ ಪ್ರಸ್ತಾಪಗಳು ಇವೆ. ದೇವುಡು, ಅರ್ಚಕ, ಬಿ. ರಂಗಸ್ವಾಮಿ, ಡಾ. ಗದ್ದಗಿಮಠ, ಕ. ರಾ. ಕೃ., ಸಾ. ಚ. ಮಹದೇವ ನಾಯಕ, ದೊಡ್ಡಭಾವೆಪ್ಪ ಮೂಗಿ, ಮತಿಘಟ್ಟ ಕೃಷ್ಣಮೂರ್ತಿ ಮುಂತಾದವರ ಸಂಕಲನಗಳಲ್ಲಿ ವೃತ್ತಿಗಾಯಕರ ಹಾಡುಗಳ ತುಣುಕುಗಳು ಲಭ್ಯವಾಗುತ್ತವೆ. ವಿವರಗಳೂ ಬರುತ್ತವೆ. ಆದರೆ ಇವರ್‍ಯಾರು ವೃತ್ತಿಗಾಯಕರ ಮಹಾಪರಂಪರೆಯ ಬಗ್ಗೆ ಸ್ಪಷ್ಟವಾದ ಕಲ್ಪನೆಯನ್ನು ಹೊಂದದೆ ಇದ್ದುದರಿಂದ ಈ ಸಂಪ್ರದಾಯಗಳ ಖಚಿತವಾದ ನಿರ್ದೇಶನ ಲಭ್ಯವಾಗುವುದಿಲ್ಲ.

೧೯೬೦ ರ ಈಚಿಗಿನ ದಿನಗಳನ್ನು ಕರ್ನಾಟಕ ಜನಪದ ಕಾವ್ಯಗಳ ಮಹಾಪೂರಗಳ ದೃಷ್ಟಿಯಿಂದ ಒಂದು ಸುವರ್ಣಯುಗ ಎಂದು ಕರೆಯಬಹುದು. ದಕ್ಷಿಣ ಕರ್ನಾಟಕದ ಕಡೆಯಿಂದ ಈ ಕಾರ್ಯಕ್ಕೆ ಚಾಲನೆ ದೊರೆತುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ.

ಕರ್ನಾಟಕದ ವೃತ್ತಿಗಾಯಕ ಪರಂಪರೆಗಳನ್ನು ಧಾರ್ಮಿಕ ಹಾಗೂ ಲೌಕಿಕ ಎಂದು ವಿಂಗಡಿಸಿಕೊಳ್ಳಲಾಗಿದೆ. ಧಾರ್ಮಿಕ ವೃತ್ತಿಗಾಯಕರನ್ನು ಪ್ರತ್ಯೇಕವಾಗಿ ವಿಂಗಡಿಸಿಕೊಳ್ಳುವಾಗ ಅವರು ನಡೆದುಕೊಳ್ಳುವ ದೈವಗಳನ್ನೂ ಪುಣ್ಯಕ್ಷೇತ್ರಗಳನ್ನೂ ಗಮನದಲ್ಲಿ ಇಟ್ಟುಕೊಳ್ಳಲಾಯಿತು.

ಧಾರ್ಮಿಕ ವೃತ್ತಿಗಾಯಕ ಸಂಪ್ರದಾಯ ಕರ್ನಾಟಕದಲ್ಲಿ ಅತ್ಯಂತ ಸತ್ವಶಾಲಿಯಾದ ಜನಪದ ಕಾವ್ಯ ಸಂಪ್ರದಾಯವಾಗಿದೆ. ದಕ್ಷಿಣ ಕರ್ನಾಟಕದ ಕಂಸಾಳೆಯವರು, ನೀಲಗಾರರು, ಚೌಡಿಕೆಯವರು, ಗೊರವರು, ಗೊಂದಲಿಗರು, ಗಣೆಯವರು ಮುಂತಾದ ತಂಡಗಳಲ್ಲಿ ಕಂಸಾಳೆಯವರು ಹಾಗೂ ನೀಲಗಾರರನ್ನು ಬಿಟ್ಟರೆ ಉಳಿದ ಗಾಯಕರು ಉತ್ತರ ಕರ್ನಾಟಕದಲ್ಲಿಯೂ ಕಂಡು ಬರುತ್ತಾರೆ. ದಕ್ಷಿಣ ಕರ್ನಾಟಕದಲ್ಲಿ ಈ ಗಾಯಕ ಸಂಪ್ರದಾಯಗಳ ಬಗ್ಗೆ ಅಧ್ಯಯನ ನಡೆದಿರುವಂತೆಯೇ ಉತ್ತರ ಕರ್ನಾಟಕದಲ್ಲಿಯೂ ಈಗ ಆರಂಭವಾಗಿರುವುದು ಶುಭ ಸೂಚನೆಯಾಗಿದೆ. ಚೌಡಿಕೆ, ಗೊಂದಲಿಗ ಹಾಗೂ ಗೊರವ ಸಂಪ್ರದಾಯಗಳು ಉತ್ತರ ಕರ್ನಾಟಕದ ಕ್ಷೇತ್ರಗಳಿಗೇ ಸಂಬಂಧಪಡುತ್ತವೆ. ಆಯಾ ಪ್ರದೇಶಗಳಲ್ಲಿ ಹರಡಿಕೊಂಡಿರುವ ವೃತ್ತಿಗಾಯಕರಲ್ಲಿ ಈ ಸಾಹಿತ್ಯ ತನ್ನ ನೈಜ

ಸ್ವರೂಪದಲ್ಲಿ ಲಭ್ಯವಾಗುವ ಸಾಧ್ಯತೆ ಇದೆ. ಹಿರಿಯ ಮೈಲಾರ ಹಾಗೂ ಸವದತ್ತಿ ಗಳು ವೃತ್ತಿಗಾಯಕರನ್ನು ಪಡೆದ ಪುಣ್ಯಕ್ಷೇತ್ರಗಳಾಗಿವೆ. ಈ ಕ್ಷೇತ್ರಗಳ ಸುತ್ತಿನಲ್ಲಿ ಉತ್ತಮ ಕಲಾವಿದರನ್ನು ಶೋಧಿಸಿ ವಿವರವಾಗಿ, ಸಮಗ್ರವಾಗಿ ಈ ಪರಂಪರೆಯ ಕಾವ್ಯ ಗಳನ್ನು ಸಂಗ್ರಹಿಸುವ ಕಾರ್ಯ ನಡೆಯಬೇಕಾದುದು ಮುಂದಿನ ಅಧ್ಯಯನದ ದೃಷ್ಟಿ ಯಿಂದ ಅತ್ಯವಶ್ಯಕ. ದಕ್ಷಿಣ ಕರ್ನಾಟಕದಲ್ಲಿ ಈ ಸಂಪ್ರದಾಯದ ಕಾವ್ಯಗಳ ಬಗ್ಗೆ ಸ್ವಲ್ಪ ಮಟ್ಟಿನ ಕೆಲಸ ನಡೆದಿದ್ದರೂ ಅವುಗಳ ಸರಿಯಾದ ರೂಪಗಳು ಇನ್ನೂ ಲಭ್ಯ ವಾಗಬೇಕಾಗಿದೆ. ಏಕೆಂದರೆ ತಮ್ಮ ಕೇಂದ್ರ ನೆಲೆಯಿಂದ ಬಹು ದೂರದ ಪ್ರದೇಶದಲ್ಲಿ ಲಭ್ಯವಾಗುವ ಕಾವ್ಯಗಳು ಎಷ್ಟೇ ಎಚ್ಚರಿಕೆಯಿಂದ ಸಂಗ್ರಹಿತವಾಗಿದ್ದರೂ ಅವುಗಳಲ್ಲಿ ಎಷ್ಟೋ ಭಾಗಗಳು ನಷ್ಟವಾಗಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಆಯಾ ಕ್ಷೇತ್ರಗಳಿಗೆ ಸಮೀಪದ ಪ್ರದೇಶಗಳಲ್ಲಿ ದೊರೆಯುವ ಕಾವ್ಯಗಳು ತಮ್ಮ ಮೂಲ ಸ್ವರೂಪವನ್ನು ಮುಕ್ಕಾಗದಂತೆ ಕಾಪಾಡಿಕೊಂಡು ಬಂದಿರುತ್ತವೆ. ಕಲಾವಿದರ ಧಾರ್ಮಿಕ ಶ್ರದ್ಧೆ ದೈವಭಯ ಇದಕ್ಕೆ ಮುಖ್ಯ ಕಾರಣವಾಗಿರುತ್ತದೆ.

ಹೊಸ ಕಾವ್ಯಗಳ ಸಂಗ್ರಹ ಕಾರ್ಯದ ಜೊತೆಗೆ ಹೆಚ್ಚು ಸಾಮ್ಯವನ್ನು ಪಡೆದಿರುವ ಕೆಲವು ಸಂಪ್ರದಾಯಗಳ ತೌಲನಿಕ ಅಧ್ಯಯನವೂ ನಡೆಯಬೇಕಾಗಿದೆ. ಗೊಂದಲಿಗರು ಹಾಗೂ ಚೌಡಿಕೆಯವರು ಒಂದೇ ವಾದ್ಯ ಸಂಪ್ರದಾಯದವರು ಒಂದೇ ದೈವದ ಮೂಲವೂ ಸಾಮಾನ್ಯವಾಗಿ ಇಲ್ಲಿ ಕಂಡು ಬರುತ್ತದೆ. ಈ ಎರಡು ಸಂಪ್ರದಾಯಗಳ ಸಾಮ್ಯ ವೈಷಮ್ಯಗಳ ವಿಶ್ಲೇಷಣೆಗಳಿಂದ ಎಷ್ಟೋ ಹೊಸ ವಿಷಯಗಳು ಬೆಳಕಿಗೆ ಬರ ಬಹುದು. ಇಂಥ ತೌಲನಿಕ ಅಧ್ಯಯನಗಳು ಒಂದು ಕಡೆ ನಡೆದರೆ ಇನ್ನೂ ಲಭ್ಯ ವಾಗಬೇಕಾಗಿರುವ ಜನಪದ ಮಹಾಕಾವ್ಯಗಳ'ಶೋಧವೂ ಇನ್ನೊಂದು ನಡೆಯಬೇಕು. ಮೈಲಾರಲಿಂಗನಿಗೆ ಸಂಬಂಧಿಸಿದ ಉತ್ಕೃಷ್ಟ ಜನಪದ ಮಹಾಕಾವ್ಯವೊಂದು ಉತ್ತರ ಕರ್ನಾಟಕದ ಕಲಾವಿದರ ಪರಿವೀಕ್ಷಣೆಯಿಂದ ಬೆಳಕಿಗೆ ಬರಬಹುದು. ಜಾತ್ರೆಗಳಲ್ಲಿ ಧಾರ್ಮಿಕ ವಿಧಿಗಳಲ್ಲಿ ವಿಶೇಷ ಸಂದರ್ಭಗಳಲ್ಲಿ ಚಿಕ್ಕ ಚಿಕ್ಕ ತಂಡಗಳಲ್ಲಿ ಕಾಣಿಸಿಕೊಳ್ಳುವ ಗೊರವರು ಮೈಲಾರಲಿಂಗನ ಮಹಿಮೆಗಳನ್ನು ಪ್ರಸಾರ ಮಾಡುವ ದೈವ ಪ್ರತಿನಿಧಿ ಗಳು ಮಾತ್ರ ಅಲ್ಲ. ಅತ್ಯುತ್ತಮ ಕಾವ್ಯಗಳನ್ನು ಹಾಡುವ ಸಮರ್ಥರೂ ಆಗಿರುತ್ತಾರೆ. ಕಂಬಳಿಯ ನಿಲುವಂಗಿ, ಕತ್ತರಿ ಆಕಾರದ ಕವಡೆಯ ಎದೆಹಾರ, ತಲೆಯ ಮೇಲಿನ ಬಣ್ಣದ ರುಮಾಲು, ಹೆಗಲಲ್ಲಿ ಇಳೆಬಿದ್ದ ದೋಣಿ, ಕೈಯ್ಯ ಕೊಳಲು, ಢಮರುಗ, ಇವುಗಳಿಂದ ಗೊರವರು ಸುಲಭವಾಗಿ ಗುರುತಿಸಲ್ಪಡುತ್ತಾರೆ. ಮೈಲಾರನ ಗೊರವರನ್ನು ಕಾಣದವ ರಿಲ್ಲ, ಅವರ ಬಂಢಾರವನ್ನು ಪಡೆಯದವರಿಲ್ಲ. ಗೊರವರು ಸಂಚರಿಸದ ಜಾಗವೂ ಇಲ್ಲ. ಈ ಕಲಾವಿದರ ಸಂದರ್ಶನವನ್ನು ನಡೆಸಿ ಅವರ ಕಾವ್ಯಗಳ ರಾಶಿಯನ್ನು ಹೊರ ತೆಗೆಯಬೇಕಾದುದು ಅತ್ಯಗತ್ಯ.

ಚೌಡಿಕೆಯವರೂ ಗೊಂದಲಿಗರೂ ತಮ್ಮ ಮುಖ್ಯವಾದ್ಯ ಚೌಡಿಕೆಯಿಂ ಸುಲಭವಾಗಿ ಗುರುತಿಸಲ್ಪಡುತ್ತಾರೆ. ಉತ್ತರ ಕರ್ನಾಟಕದ ಭಾಗದಲ್ಲಿ ಇವರ ಮೇ ಗಳು ಸಾಕಷ್ಟು ಜನಪ್ರಿಯವಾಗಿವೆ. ಈ ಕಲಾವಿದರಲ್ಲಿ ಸ್ತ್ರೀದೇವತೆಗೆ ಸಂಬಂಧಿಸಿ ವಿರಳ ಜನಪದ ಕಾವ್ಯವೊಂದು ಪರಂಪರೆಯಿಂದ ಉಳಿದುಕೊಂಡು ಬಂದಿದೆ. ಈ ಸಂಪ್ರದಾಯದ ಕಲಾವಿದರಿಂದ ಸಕ್ರಮವಾಗಿಯೇ ಕಾವ್ಯಸಂಗ್ರಹ ಇನ್ನು ನಡೆಯ ಬೇಕಾಗಿದೆ. ಧಾರವಾಡ, ಬಿಜಾಪುರ, ಗುಲ್ಬರ್ಗ, ರಾಯಚೂರು, ಬಳ್ಳಾರಿ ಜಿಲ್ಲೆಗ ಪಾಠಗಳನ್ನು ದೊರಕಿಸಿಕೊಂಡು ಈಗಾಗಲೇ ದಕ್ಷಿಣ ಕರ್ನಾಟಕದಲ್ಲಿ ಪ್ರಕಟವಾಗಿರುವ ರೂಪವನ್ನು ಗಮನಿಸಿ ಎಲ್ಲಮ್ಮನ ಕಾವ್ಯದ ಮೂಲ ಚೌಕಟ್ಟನ್ನು ನಿರ್ಧರಿಸಬಹು ದಾಗಿದೆ.

ಎಲ್ಲಮ್ಮನ ಸಂಪ್ರದಾಯದಲ್ಲಿ ಅನೇಕ ಬಗೆಯಲ್ಲಿ ಹಂಚಿಹೋದ ಜನಪದ ಗದ್ಯ ಕಥೆಗಳು ಹೇರಳವಾಗಿವೆ. ಈ ಸಂಪ್ರದಾಯದಲ್ಲಿ ಜೋಗತಿಯರೂ ಕಂಡು ಬರುತ್ತಾರೆ. ಹಾಡುಗಾರಿಕೆಯಲ್ಲಿ ಇವರ ಪಾತ್ರವೇನು ಎಂಬುದು ನಿರ್ಧಾರವಾಗಬೇಕು. ವಾದ್ಯ ಗಳನ್ನು ಹಿಡಿದು ಹಾಡುಗಾರಿಕೆ ಸಂಪ್ರದಾಯವೊಂದನ್ನು ಉಳಿಸಿಕೊಂಡು ಬಂದ ಸ್ತ್ರೀ ವೃತ್ತಿಗಾಯಕ ಸಂಪ್ರದಾಯವೇನಾದರೂ ಕರ್ನಾಟಕದಲ್ಲಿ ಇರಬಹುದೇ ಎಂಬುದಕ್ಕೆ ಇಲ್ಲಿ ಸೂಚನೆ ಸಿಗಬಹುದು.

ಧಾರ್ಮಿಕ ವೃತ್ತಿಗಾಯಕರು ಪ್ರಧಾನವಾಗಿ ತಮ್ಮ ದೇವತೆಯನ್ನುಕುರಿತು ಹಾಡುವುದರ ಜೊತೆಗೆ ವ್ಯಾವಹಾರಿಕ ಉದ್ದೇಶದ ದೃಷ್ಟಿಯಿಂದ ಕೆಲವು ಲೌಕಿಕ ಕಾವ್ಯ ಗಳನ್ನು ಕಲಿಯುವುದು ಅವರಲ್ಲಿ ಅನಿವಾರ್ಯ. ಈ ಕಾವ್ಯಗಳೂ ಸಹ ಧಾರ್ಮಿಕ ಕಾವ್ಯಗಳಷ್ಟೇ ಮಹತ್ವಪೂರ್ಣವಾದವು. ದಕ್ಷಿಣ ಕರ್ನಾಟಕದಲ್ಲಿ ಲಭ್ಯವಾಗುವ ಚನ್ನಿಗ ರಾಮನ ಕಥೆ ಧನಪತಿರಾಮನ ಕಥೆ, ಮೈದುನ ರಾಮಣ್ಣನ ಕಥೆ, ಸಂರಂಗಧರನ ಕಥೆ, ನೀಲವೇಣಿಯ ಕಥೆ ಮುಂತಾದ ದೀರ್ಘ ಲೌಕಿಕ ಕಾವ್ಯಗಳ ಉತ್ತಮ ಪಾಠಗಳು ಉತ್ತರ ಕರ್ನಾಟಕದಲ್ಲಿಯೂ ಲಭ್ಯವಾಗಬಹುದು. ಇದರ ಜೊತೆಗೆ ಆಯಾ ಪ್ರದೇಶದ ವೃತ್ತಿಗಾಯಕರು ತಮ್ಮ ಪ್ರದೇಶಕ್ಕೆ ಸಂಬಂಧಿಸಿದ ಐತಿಹಾಸಿಕ ವೀರನೊಬ್ಬ ನನ್ನು ಕೇಂದ್ರವಾಗಿಸಿಕೊಂಡು ಕಾವ್ಯಗಳನ್ನು ಹಾಡುವ ಬಗೆ ಕಂಡುಬರುತ್ತದೆ. ಇವು ಬಹುಮಟ್ಟಿಗೆ ಒಂದೊಂದು ಪ್ರದೇಶಕ್ಕೆ ಸೀಮಿತವಾಗಿರುತ್ತವೆ. ಪಿರಿಯಾಪಟ್ಟಣದ ಕಾಳಗ, ಮೈಸೂರು, ಮಂಡ್ಯ, ಜಿಲ್ಲೆಗಳಲ್ಲಿ ಕಂಡುಬಂದರೆ ಸರ್ಜಪ್ಪನಾಯಕನ ಕಾವ್ಯ ತುಮಕೂರು, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಕಾಣಬರುತ್ತದೆ. ಮದಕರಿನಾಯಕನ ಕಾವ್ಯ ಚಿತ್ರದುರ್ಗ ಜಿಲ್ಲೆಗೆ ಸೀಮಿತವಾಗಿದೆ. ಉತ್ತರ ಕರ್ನಾಟಕದ ಧಾರ್ಮಿಕ ವೃತ್ತಿ ಗಾಯಕರು ತಮ್ಮ ಸಂಪ್ರದಾಯದಲ್ಲಿ ಹೀಗೆ ಒಂದೊಂದು ವೀರ ಕಾವ್ಯಗಳನ್ನು ಉಳಿಸಿ ಕೊಂಡು ಬಂದಿರಲು ಸಾಧ್ಯ. ಇದರ ಜೊತೆಗೆ ಮೈಸೂರು ಭಾಗದಲ್ಲಿ ಶಿವಶರಣರನ್ನು

ಕುರಿತ ಕಾವ್ಯಗಳನ್ನು ಧಾರ್ಮಿಕ ವೃತ್ತಿಗಾಯಕರು ಹಾಡುತ್ತಾರೆ. ಚನ್ನಬಸವಣ್ಣ, ಮಡಿವಾಳ ಮಾಚಯ್ಯ, ಭಾವನಮ್ಮ, ಅಕ್ಕನಾಗಮ್ಮ, ಇವರನ್ನು ಕುರಿತಂಥ ಕಾವ್ಯಗಳು ದೊರೆಯುತ್ತವೆ. ಉತ್ತರ ಕರ್ನಾಟಕದಲ್ಲಿ ವೃತ್ತಿಗಾಯಕರಲ್ಲಿ ಇಂಥ ಕಾವ್ಯಗಳು ಹೆಚ್ಚು ಸಂಖ್ಯೆಯಲ್ಲಿ ದೊರೆಯಬೇಕು. ಪ್ರಸಿದ್ಧ ಶಿವಶರಣರನೇಕರು ಜನಪದ ಕವಿಗಳ ದೃಷ್ಟಿ ಯಿಂದ ವಂಚಿತರಾಗಿರಲಾರರು. ಹರಿಹರನ ರಗಳೆಗಳ ಬಂದುಳ್ಳವನ್ನು ಗಮನಿಸಿದರೆ ರಾಘವಾಂಕನ ಕಾವ್ಯಗಳ ಚೌಕಟ್ಟನ್ನು ಪರಿಶೀಲಿಸಿದರೆ ಜನಪದ ಕಾವ್ಯಗಳ ಪರಿವೀಕ್ಷಣೆ, ಸಂಗ್ರಹ, ಹಾಗೂ ಅಧ್ಯಯನ ಅತ್ಯಗತ್ಯ. ಡಾ. ಬಿ. ಎಸ್. ಗದ್ಗೀಮಠ ಅವರು ಈ ನಿಟ್ಟಿನಲ್ಲಿ ಒಳ್ಳೆಯ ಕೆಲಸವನ್ನು ಮಾಡಿದ್ದಾರೆ. ಅವರ ಕಾವ್ಯಗಳೆಲ್ಲಾ ಹೆಚ್ಚಾಗಿ ಹಂತಿಯ ಸಂಪ್ರದಾಯವನ್ನು ನಿರ್ದೇಶಿಸುತ್ತವೆ. ಅವುಗಳ ಸ್ವರೂಪ, ವೈವಿಧ್ಯಗಳನ್ನು ಗಮನಿಸಿ ದರೆ ವೃತ್ತಿಗಾಯಕ ಪರಂಪರೆ ಮಾತ್ರ ಈ ಮಟ್ಟದಲ್ಲಿ ಕಾವ್ಯಗಳನ್ನು ಕಾಪಾಡಿಕೊಂಡು ಬರಲು ಸಾಧ್ಯ ಎನಿಸುತ್ತದೆ. ಅವರು ತಮ್ಮ "ಕನ್ನಡ ಜಾನಪದ ಗೀತೆಗಳು" ಮಹಾ ಪ್ರಬಂಧದ ಅನುಬಂಧದಲ್ಲಿ ನೀಡಿರುವ ಶಿವಶರಣರ ಕಾವ್ಯಗಳು ಗಮನಾರ್ಹವಾಗಿವೆ. ಇವು ವೃತ್ತಿಗಾಯಕರ ಕಾವ್ಯಗಳೇ ಆಗಿದ್ದು ಹಂತಿಯ ಸಂಪ್ರದಾಯವನ್ನು ಪ್ರವೇಶಿಸಿದ್ದರೆ ಆಶ್ಚರ್ಯವಿಲ್ಲ. ಡಾ. ಗದ್ಗೀಮಠ ಅವರು ಅರ್ಜುನ ಜೋಗಿಯ ಹಾಡೊಂದನ್ನು ಇಲ್ಲಿ ನೀಡಿದ್ದಾರೆ. ಕಿನ್ನರಿ ಜೋಗಿ ಸಂಪ್ರದಾಯದ ಈ ಹಾಡು ವೃತ್ತಿಗಾಯಕರ ಕೊಡುಗೆ ಇರಬೇಕು. ಇಷ್ಟೆಲ್ಲಾ ವೈವಿಧ್ಯ ಪೂರ್ಣವಾದ ಕಾವ್ಯಗಳನ್ನು ಗಮನಿಸಿದಾಗ ವೃತ್ತಿಗಾಯಕರ ಸಂಬಂಧ ಇಲ್ಲಿ ಸ್ಪಷ್ಟವಾಗಿ ಕಂಡು ಬರುತ್ತದೆ. ಆದರೆ ಡಾ. ಗದ್ಗೀಮಠ ಅವರು ನಿರ್ಧಿಷ್ಟ ವೃತ್ತಿಗಾಯಕರನ್ನು ಇಲ್ಲಿ ಹೆಸರಿಸಿಲ್ಲ.

ಒಟ್ಟಿನಲ್ಲಿ ಧಾರ್ಮಿಕ ವೃತ್ತಿಗಾಯಕ ಸಂಪ್ರದಾಯವು ಸತ್ವಪೂರ್ಣ ಜನಪದ ಕಾವ್ಯಗಳನ್ನು ಉಳಿಸಿಕೊಂಡು ಬಂದಿರುವ ಪ್ರಮುಖ ಸಂಪ್ರದಾಯವಾಗಿದೆ. ಧಾರ್ಮಿಕ ಶ್ರದ್ಧೆ ಇಲ್ಲಿ ಕೆಲಸ ಮಾಡುವುದರಿಂದ ಆ ಕಾವ್ಯಗಳು ಹೆಚ್ಚು ಚಲಾವಣೆಯನ್ನು ಪಡೆದು ಕೊಳ್ಳುವ ಅವಕಾಶಗಳು ಬರುವುದರಿಂದ ಅವುಗಳ ನಾಶ ಅಷ್ಟು ಸುಲಭವಾಗಿ ಆಗುವು ದಿಲ್ಲ. ಇವುಗಳ ನೆರಳಿನಲ್ಲಿ ಲೌಕಿಕ ಕಾವ್ಯಗಳನ್ನು ಅವರು ಕಾಪಾಡಿಕೊಂಡು ಬರುತ್ತಾರೆ. ಧಾರ್ಮಿಕ ಶ್ರದ್ಧೆ ಇರುವವರೆಗೆ ಈ ಕಾವ್ಯಗಳೂ ಬದುಕಿರುತ್ತವೆ. ಬೇರೆಬೇರೆ ಕಾರಣ ಗಳಿಂದ ಧಾರ್ಮಿಕ ಶ್ರದ್ಧೆ ಅಳಿದುಹೋದರೆ ಈ ಕಾವ್ಯಗಳೂ ಲೌಕಿಕ ಕಾವ್ಯಸಂಪ್ರದಾಯ ಗಳ ಕ್ಷೇತ್ರವನ್ನು ಪ್ರವೇಶಿಸಿ ಪೇಲವವಾಗುತ್ತವೆ.

ಧಾರ್ಮಿಕ ಕಲಾವಿದರೂ ಲೌಕಿಕ ಕಲಾವಿದರಾಗಿ ಪರಿವರ್ತನೆಗೊಂಡ ಸ್ಪಷ್ಟ ನಿದರ್ಶನಗಳು ಅಲ್ಲಲ್ಲಿ ಕಂಡುಬರುತ್ತವೆ. ದಕ್ಷಿಣ ಕರ್ನಾಟಕದ ತಂಬೂರಿಯವರು, ದೊಂಬಿದಾಸರು, ಕಿನ್ನರಿ ಜೋಗಿಗಳು, ತೆಲುಗು ಜಂಗಮರು, ಕರಪಾಲದರು ಮುಂತಾದ ಲೌಕಿಕ ಸಂಪ್ರದಾಯದ ಕಲಾವಿದರು ಒಂದು ಕಾಲಕ್ಕೆ ಧಾರ್ಮಿಕ ಕಲಾ

ವಿದರೇ ಆಗಿರಲು ಸಾಧ್ಯ. ಆಯಾ ಸಂಪ್ರದಾಯದ ಹೆಸರುಗಳೂ, ವಾದ್ಯಗಳೂ. ವೇಷಭೂಷಣಗಳೂ ಹಾಗೂ ಆ ಪರಂಪರೆಯ ಹಿನ್ನೆಲೆಗಳು ಈ ಅಂಶಗಳನ್ನು ಸಾದರ ಪಡಿಸುತ್ತವೆ. ಒಂದು ಕಾಲಕ್ಕೆ ದೊಂಬಿದಾಸರು ತಿರುಪತಿ ಕ್ಷೇತ್ರಕ್ಕೆ ನಡೆದುಕೊಳ್ಳು ತ್ತಿದ್ದ ದಾಸರು. ಅವರು ಆ ಕ್ಷೇತ್ರಕ್ಕೆ ಸಲ್ಲಿಸುತ್ತಿದ್ದ ವಾರ್ಷಿಕ ಕಾಣಿಕೆಗಳನ್ನು ಕಾರ ಣಾಂತರದಿಂದ ನಿಲ್ಲಿಸಿ ಕರ್ನಾಟಕದ ಕಡೆಗೆ ವಲಸೆ ಬಂದರು. ತಮ್ಮ ಕ್ಷೇತ್ರಕ್ಕೆ ಹಣವನ್ನು ಕೊಡಲು ಅವರು ಕದ್ದದ್ದರಿಂದ 'ದೊಂಗ' ದಾಸರಾದರು—ಎಂಬ ಊಹೆ ಒಂದಿದೆ. ಇದು ನಿಜಕ್ಕೂ ವಿಚಾರಾರ್ಹವಾದ ಅಂಶವಾಗಿದೆ. 'ದಾಸ' ಎಂಬ ಹೆಸರೇ ಸ್ಪಷ್ಟ ವಾಗಿ ಇವರ ಧಾರ್ಮಿಕ ಮೂಲವನ್ನು ಸೂಚಿಸುತ್ತದೆ.

'ತೆಲುಗು ಜಂಗಮು' ಎಂಬ ಹೆಸರೂ ಧಾರ್ಮಿಕ ಪರಂಪರೆಯ ಕುರುಹಾಗಿದೆ. ಶೈವ ಮೂಲದ ಈ ಕಲಾವಿದರು ಈಗ ಯಾವುದೇ ರೀತಿಯ ಧಾರ್ಮಿಕ ವಿಧಿಯನ್ನು ತಮ್ಮ ಸಂಪ್ರದಾಯದಲ್ಲಿ ಉಳಿಸಿಕೊಂಡಿಲ್ಲ. ಇವರಂತೆಯೇ ಕಿನ್ನರಿ ಜೋಗಿಗಳು ಶೈವ ಮೂಲದ ಕಲಾವಿದರೇ ಆಗಿದ್ದಾರೆ. ಇವರು ಭೈರವನ ಆರಾಧಕರು. ಭೈರೇ ಜೋಗಿ ಗಳು ಎಂಬ ಹೆಸರು ಇವರಿಗೆ ಪ್ರಚಲಿತವಾಗಿದೆ. ಅರ್ಜುನ ಜೋಗಿಯ ಹಾಡು ಒಂದು ಕಾಲಕ್ಕೆ ಇವರ ಧಾರ್ಮಿಕ ಕಾವ್ಯವಾಗಿದ್ದಿರಬಹುದು. ನಾಥಪಂಥದ ಪ್ರಭಾವ ಇವರ ಮೇಲೆ ಸ್ಪಷ್ಟ ಮುದ್ರೆಯನ್ನು ಒತ್ತಿದೆ. ನಾಥಪಂಥದ ಧಾರ್ಮಿಕ ಕೇಂದ್ರಗಳಿಗೆ ಇವರು ಈಗಲೂ ನಡೆದುಕೊಳ್ಳುತ್ತಾರೆ. ಶ್ರೀ ಆದಿಚುಂಚನಗಿರಿ ಇವರ ಮುಖ್ಯ ಕ್ಷೇತ್ರಗಳಲ್ಲಿ ಒಂದು. ನಾಥಪಂಥ ಕರ್ನಾಟಕದಲ್ಲಿ ಶೈವ ಹಾಗೂ ವೀರಶೈವಗಳ ಪ್ರಭಾವದಿಂದ ಮಸುಕಾದ ಮೇಲೆ ಕಿನ್ನರಿ ಜೋಗಿಗಳು ತಮ್ಮ ಧಾರ್ಮಿಕ ಸಂಪ್ರದಾಯವನ್ನು ಸಡಿಲ ಗೊಳಿಸಿ ಲೌಕಿಕ ಸಂಪ್ರದಾಯದ ವೃತ್ತಿಗಾಯಕರಾಗಿ ಬದಲಾದಂತೆ ತೋರುತ್ತದೆ. ಈಗ ಇವರು ಎಲ್ಲೆಡೆಯೂ ಲೌಕಿಕ ಗಾಯಕರಾಗಿ ಮಾತ್ರ ಕಂಡುಬರುತ್ತಾರೆ.

ತಂಬೂರಿ ಸಂಪ್ರದಾಯದ ಕಲಾವಿದರು, ಮಂಟೇಸ್ವಾಮಿ ಸಂಪ್ರದಾಯದ ನೀಲಗಾರರ ತಂಬೂರಿಯನ್ನೇ ಹೋಲುವ ವಾದ್ಯವನ್ನು ಬಳಸುತ್ತಾರೆ. ಅವರ ಮೇಳ ಗಳಲ್ಲಿ ಮುಖ್ಯ ಕಥೆಯ ಜೊತೆಗೆ ನೀಲಗಾರ ಸಂಪ್ರದಾಯದ ಉಪಕಥೆಗಳನ್ನೇ ಅಳವಡಿಸಿ ಕೊಂಡಿದ್ದಾರೆ. ಹಾಸನ ಜಿಲ್ಲೆಯಲ್ಲಿ ಮಾತ್ರ ಕಂಡುಬರುವ ಈ ಕಲಾವಿದರು ಹರಿಜನ ರಾಗಿದ್ದು ಅವರಲ್ಲಿ ಎಡಗೈ ವರ್ಗದವರು, ನೀಲಗಾರ ಸಂಪ್ರದಾಯದ ಮೈಸೂರು ಮಂಡ್ಯ ಜಿಲ್ಲೆಯ ಕಲಾವಿದರಲ್ಲಿ ಬಲಗೈ ವರ್ಗದ ಹರಿಜನರು ಹೆಚ್ಚಾಗಿ ಕಂಡುಬರು ತ್ತಾರೆ. ಈ ಕಲಾವಿದರು ಎಂದೋ ಬೇರ್ಪಟ್ಟು ಹಾಸನದತ್ತ ಬಂದು ಅಲ್ಲಿ ನೆಲೆಯೂರಿ ದಂತೆ ತೋರುತ್ತದೆ. ಮೂಲತಃ ಇವರು ಮಂಟೇಸ್ವಾಮಿ ಸಂಪ್ರದಾಯದ ಕಲಾವಿದ ರಾಗಿದ್ದರೇ ಎಂಬುದರ ಬಗ್ಗೆ ಸಾಕಷ್ಟು ಅನುಮಾನಗಳು ಬರುತ್ತವೆ.

ಕರಪಾಲ ಮೇಳ ಜಂಗಮು ಕಥೆ ಎಂಬ ಹೆಸರಿನಲ್ಲಿ ಗುರುತಿಸಲ್ಪಟ್ಟಿದೆ. ಇಂದಿಗೂ ಈ ಮೇಳದಲ್ಲಿ ಮುಖ್ಯ ನಿರೂಪಕ ಒಬ್ಬ ಜಂಗಮನೇ ಆಗಿರುತ್ತಾನೆ. ಅಥವಾ

ಜಂಗಮನಂತೆ ವೇಷ ಧರಿಸಿದವನಾಗಿರುತ್ತಾನೆ. ಈ ಜಂಗಮ ಕಥೆ ಆಂಧ್ರದಲ್ಲಿ "ಬುರ್ರ ಕಥಾ" ಸಂಪ್ರದಾಯವಾಗಿ ಈಗ ರೂಪಾಂತರ ಹೊಂದಿದೆ. ಶರಣಧರ್ಮ ಹಾಗೂ ಶಿವಭಕ್ತಿಯ ಪ್ರಸಾರದಲ್ಲಿ ಕರಪಾಲದಯ್ಯಗಳು ಪ್ರಮುಖ ಪಾತ್ರವಹಿಸಿದ್ದಿರಬಹುದು. ಈ ಹಿನ್ನೆಲೆಯಲ್ಲಿ ಧಾರ್ಮಿಕ ಸಂಪ್ರದಾಯದ ಸ್ಪಷ್ಟ ಹಿನ್ನೆಲೆಯನ್ನು ಇಲ್ಲಿ ಕಾಣಬಹುದು.

ಮೇಲಿನ ಸಮಸ್ಯೆಗಳ ಹಿನ್ನೆಲೆಯಲ್ಲಿ ಈ ಸಂಪ್ರದಾಯಗಳ ಬಗ್ಗೆ ನಿಖರವಾದ ತೀರ್ಮಾನಕ್ಕೆ ಬರಲು ಉತ್ತರ ಕರ್ನಾಟಕ ಹಾಗೂ ದಕ್ಷಿಣ ಕರ್ನಾಟಕಗಳ ಎಲ್ಲ ವೃತ್ತಿ ಗಾಯಕ ಸಂಪ್ರದಾಯಗಳು ಸಮಗ್ರವಾಗಿ ಕ್ರಮಬದ್ಧವಾಗಿ ಅಧ್ಯಯನಕ್ಕೆ ಒಳಗಾಗ ಬೇಕಾಗಿದೆ.

ಉತ್ತರ ಕರ್ನಾಟಕದಲ್ಲಿ ವೈವಿಧ್ಯಪೂರ್ಣವಾದ ವೃತ್ತಿಗಾಯಕ ಮೇಳಗಳು, ದಕ್ಷಿಣ ಕರ್ನಾಟಕದಂತೆಯೇ ಇವೆ ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ಇಲ್ಲಿನ ಈ ಪರಂಪರೆಯನ್ನು ಧಾರ್ಮಿಕ ಹಾಗೂ ಲೌಕಿಕ ಕಲಾವಿದರೆಂದು ವಿಂಗಡಿಸಿಕೊಂಡು ನೋಡಲು ಸಾಧ್ಯವಾಗುವಂತೆ ತೀವ್ರವಾಗಿ ಅವರ ಸಾಹಿತ್ಯ ಸಂಗ್ರಹಗೊಳ್ಳಬೇಕು. ಅವರ ಸಂಪ್ರದಾಯದ ಅಭ್ಯಾಸ ನಡೆಯಬೇಕು. ವೇಷ–ಭೂಷಣ, ವಾದ್ಯ ವಿಶೇಷ ಗಳು, ಕಾವ್ಯಗಳು, ಇವುಗಳ ನಿಖರವಾದ ಅಭ್ಯಾಸ ಶಾಸ್ತ್ರೀಯರೀತಿಯಲ್ಲಿ ನಡೆಯಬೇಕು. ಈ ಕಲಾವಿದರ ನೆಲೆಬೆಲೆಗಳನ್ನು ನಿರ್ಧರಿಸುವುದರ ಜೊತೆಗೆ ಅವರ ಕಾವ್ಯಗಳ ಸ್ವರೂಪವೂ ಇದರಿಂದ ಬೆಳಕಿಗೆ ಬರುತ್ತದೆ.

ತೆರೆಮರೆಯಲ್ಲಿಯೇ ಉಳಿದು ಹೋಗಿರುವ ಉತ್ತರ ಕರ್ನಾಟಕದ ವೃತ್ತಿ ಗಾಯಕರ ಮೇಲೆ ವಿದ್ವಾಂಸರ ದೃಷ್ಟಿ ಈಗ ಹೊರಳುತ್ತಿರುವುದು ಸಂತೋಷದ ವಿಷಯವಾಗಿದೆ. ಈ ಗೋಷ್ಠಿಯನ್ನು ವೃತ್ತಿಗಾಯಕರ ಸಂಪ್ರದಾಯದ ಅಧ್ಯಯನ ಕ್ಕಾಗಿಯೇ ಮೀಸಲಿಟ್ಟಿರುವುದು ಸಕಾಲಿಕವೂ ಸಮಯೋಚಿತವೂ ಆಗಿದೆ. ಇಲ್ಲಿನ ಪ್ರಬಂಧಗಳು ಕರ್ನಾಟಕದ ಇತರ ಭಾಗದ ಸಂಸ್ಕೃತಿಯ ಎಳೆಯೊಂದನ್ನು ಬಿಡಿಸಿ ತೋರಿಸಲು ಸಮರ್ಥವಾಗಲೆಂದು ಹಾರೈಸುತ್ತೇನೆ.



## ಗೋಷ್ಠಿ : ೨

| | | |
|---|---|---|
| ಹೆಳವರು | : | ಪ್ರೊ. ಬಿ. ಎಂ. ತೆಳಗಡಿ |
| ಮೋಡಿಕಾರರು | : | ಪ್ರೊ. ಬಸವರಾಜ ಮಲಶೆಟ್ಟಿ |
| ದುರುಗಮುರುಗಿಯವರು | : | ಪ್ರೊ. ಚೆನ್ನಣ್ಣ ವಾಲೀಕಾರ |
| ಬುಡುಬುಡುಕೆಯವರು | : | ಶ್ರೀ ಸಿ. ಸಿ. ಪೈ. |
| ಜನಪದ ವೈದ್ಯ ಮತ್ತು ಮಾಟ ಮಂತ್ರ ತಂತ್ರದವರು | : | ಡಾ. ಜಯವಂತ ಕುಳ್ಳಿ |
| ಕೊರವಂಜಿ | : | ಡಾ. ಬಿ. ವ್ಹಿ. ಮಲ್ಲಾಪುರ |

ಅಧ್ಯಕ್ಷರ ಭಾಷಣ :

ಪ್ರೊ. ಶಾಂತರಸ, ರಾಯಚೂರ

# ಹೆಳವರು

ಬಿ. ಎಂ. ತೆಳಗಡಿ

ಜಾನಪದ ವೃತ್ತಿಕಾರರ ಜೀವನ-ವಿಧಾನ ಕುರಿತು ಇತ್ತೀಚೆಗೆ ಕೆಲವರು ಜಾನಪದ ವಿದ್ವಾಂಸರು ವ್ಯವಸ್ಥಿತವಾಗಿ ಅಧ್ಯಯನ ನಡೆಸಿರುವುದು ಗಮನಾರ್ಹ. ಆದರೆ ಉತ್ತರಕರ್ನಾಟಕಕ್ಕೆ ಮಾತ್ರ ಸೀಮಿತವಾಗಿ, ಅಲ್ಲಿಯ ಜಾನಪದ ವೃತ್ತಿಕಾರರನ್ನೇ ಉದ್ದೇಶಿಸಿ, ಸಮಗ್ರವಾದ ಅಧ್ಯಯನ ಈ ಮೊದಲು ನಡೆದಿಲ್ಲವೆಂದೇ ಹೇಳಬಹುದು. ಈ ದಿಶೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಆರನೆಯ ಜಾನಪದ ಸಾಹಿತ್ಯ ಸಮ್ಮೇಳನದಲ್ಲಿ, ಉತ್ತರ ಕರ್ನಾಟಕದ ಜಾನಪದ ವೃತ್ತಿಕಾರರ, ಜನಾಂಗಿಕ ಅಧ್ಯಯನಕ್ಕೆ ಪೂರ್ಣಾವಕಾಶ ಕಲ್ಪಿಸಿರುವುದು, ಪ್ರಪ್ರಥಮವಾದ. ಫಲಪ್ರದವಾದ ಮಹತ್ವದ ಹೆಜ್ಜೆಯೆಂದೇ ಹೇಳಬಹುದು.

**ಪೂರ್ವೇತಿಹಾಸ :**

ಹೆಳವರು ಜಾನಪದ ವೃತ್ತಿಕಾರರಲ್ಲಿ ಪ್ರಮುಖರಾದವರು. ಲೌಕಿಕವೃತ್ತಿ ಗಾಯಕರ ಗುಂಪಿಗೆ ಸೇರುವ ಇವರು ಜನಸಂಖ್ಯಾದೃಷ್ಟಿಯಿಂದ ಕಡಿಮೆ ಪ್ರಮಾಣದಲ್ಲಿದ್ದರೂ, ವಿಶಿಷ್ಟ ಸಂಪ್ರದಾಯದ ದೃಷ್ಟಿಯಿಂದ ಮಹತ್ವ ಪಡೆದಿದ್ದಾರೆ. ಒಕ್ಕಲು ಮನೆಗಳ ವಂಶಾವಳಿಯನ್ನು ಹಾಡಿ, ಹೇಳುವುದೇ ಇವರಿಗೆ ವಂಶಪಾರಂಪರ್ಯವಾಗಿ ಬಂದ ವೃತ್ತಿ. ವರ್ಷಕ್ಕೊಮ್ಮೆ ಊರೂರು ಸಂಚರಿಸಿ, ಎತ್ತಿನ ಮೇಲೆ ಕುಳಿತು ರೈತರ ಮನೆಮನೆಗೆ ಹೋಗಿ. ಅವರ ವಂಶದ ಗತವೈಭವವನ್ನು ಹಾಡಿ ಹೊಗಳಿ, ಅವರು ಕೊಡುವ ಕಾಳುಕಡಿಗಳನ್ನು ಸ್ವೀಕರಿಸಿ ಬರುತ್ತಾರೆ. "ರೈತರ ವಂಶಾವಳಿಯನ್ನು ಕೊಂಡಾಡುವುದೂ. ರೈತರಿಂದ ಪ್ರತಿವರ್ಷವೂ ತಮ್ಮ ಹಕ್ಕಿನ ಮಾಮೂಲನ್ನು ಪಡೆದು

ಕೊಂಡು ಹೋಗುವುದೂ, ಸನಾತನ ಸಂಪ್ರದಾಯದ ಹಳ್ಳಿಗಳಲ್ಲಿ ಇಂದಿಗೂ ನಿ
ಜೀವಂತವಾಗಿದೆ."[೧] "ಪ್ರಸಿದ್ಧ ಮನೆತನಗಳ ಇತಿಹಾಸ, ಕಳ್ಳುಬಳ್ಳಿಗಳ ವಿವರಗಳನ್ನ
ಅವರ ಬಾಯಿಂದಲೇ ಕೇಳಬೇಕು. ಹೆಳವರನ್ನು ಅಂತಹ ವಿವರಗಳ 'ಸಂಚಾ
ನಿಘಂಟೆಂದು' ಹೇಳಬಹುದು."[೨] Caste and Tribes of Southern Indi
ಗ್ರಂಥದಲ್ಲಿ ಹೆಳವರ ಬಗ್ಗೆ ಬರುವ ಉಲ್ಲೇಖ ಈ ಅಭಿಪ್ರಾಯವನ್ನೇ ಪುಷ್ಟೀಕರಿಸ
ತ್ತದೆ :

"Helava meaning lame person, is the name of class o
mendicants, who, in Bellary mysore and other localities, are the
custodians of village histories. They generally arrive at villages
mounted on a bullock, and with their legs concealed by woollen
blankets. They go from house to house, giving the history of
the different families, the name of heroes, who died in war, and
so forth."[೩]

ಹೆಳವ, ಹೆಳವಯ್ಯ, ಒಕ್ಕಾಲ ಭೃಂಗಿ, ನಂದಿವಾಲ ಮೊದಲಾದ ಹೆಸರುಗಳಿಂದ ಇವರನ್ನು ಕರೆಯುತ್ತಾರೆ. 'ಹೆಳವ' ಶಬ್ದಕ್ಕೆ ಕಾಲಿಲ್ಲದವ, ಕುಂಟ, ಅಂಗಹೀನ ಎಂಬ ಅರ್ಥವಿದೆ. ಕಿಟ್ಟೆಲ್ ಶಬ್ದಕೋಶದಲ್ಲಿಯೂ ಈ ಒಂದೇ ಅರ್ಥವನ್ನು ಸೂಚಿಸ ಲಾಗಿದೆ. ಬೇರಾವ ಅರ್ಥದಲ್ಲಿಯೂ ಈ ಪದ ಬಳಕೆಯಾಗಿಲ್ಲ. ಹೆಳವರ ಮೂಲ ಪುರುಷ ಒಬ್ಬ ಕಾಲಿಲ್ಲದವನಾದ್ದರಿಂದ ಅವನ ವಂಶಜರಿಗೆ ಈ ಹೆಸರು ಬಂದಿರಬೇಕು. ಇವರು ವಂಶಾವಳಿಯನ್ನು ಹೇಳುವವರಾದ್ದರಿಂದ, 'ಹೇಳುವವರು' ಎಂಬುದು ಪ್ರಚಲಿತವಾಗಿ ಕಾಲಕ್ರಮೇಣ 'ಹೆಳವ'ರಾಗಿರಬೇಕೆಂಬ ಊಹೆಗೂ ಆಸ್ಪದವಿದೆ. ಕೆಲವರು ಇವರನ್ನು 'ಹೆಳವಯ್ಯ' ಎಂದು ಕರೆಯುವರು. 'ಸಾರೂವಯ್ಯ'ನಂತೆ 'ಹೇಳುವ ಅಯ್ಯ'ನೇ 'ಹೇಳುವಯ್ಯ'ನಾಗಿ, 'ಹೆಳವ'ನಾಗಿರುವ ಸಾಧ್ಯತೆಯೂ ಇದೆ. ಶಿವಗಣ ದಲ್ಲಿರುವ ಒಕ್ಕಾಲಭೃಂಗಿ ಹೆಳವರ ಮೂಲಪುರುಷನೆಂಬ ಒಂದು ದಂತಕತೆ ಇರುವುದ ರಿಂದ ಇವರನ್ನು 'ಒಕ್ಕಾಲಭೃಂಗಿ' ಎಂದೂ, ನಂದಿಯೇ ಇವರ 'ವಾಹನ'ವಾಗಿರುವುದ ರಿಂದ 'ನಂದಿವಾಲ' ಎಂದೂ ಕರೆಯುತ್ತಿರಬೇಕು. ಕಾಲಿಲ್ಲದ ಮೂಲಪುರುಷನಿಂದಾಗಿ 'ಹೆಳವ' ಎಂಬ ಹೆಸರು ಬಂದಿರಬೇಕೆಂಬುದೇ ಹೆಚ್ಚು ಸಮಂಜಸ, ಔಚಿತ್ಯಪೂರ್ಣ ಆಗಿದೆ.

೧. ಜಾನಪದ ಸಾಹಿತ್ಯ ದರ್ಶನ– ಡಾ. ಎಂ. ಎಸ್. ಸುಂಕಾಪುರ– ಭಾಗ ೪, ಪುಟ ೧೯೯.
೨. ಕರ್ನಾಟಕ ಜನಪದ ಕಲೆಗಳು– ಗೊ. ರು. ಚನ್ನಬಸಪ್ಪ– ಪುಟ ೧೯೩.
೩. Caste and Tribes of Southern India– by Edgar Thurston– Vol. II page 328.

ಈ ಹೆಸರು ಒಂದು ಜಾತಿಯ, ಜನಾಂಗದ ಹೆಸರಾಗಿ ಪರಿಣಮಿಸಿರುವುದು ಗಮನಾರ್ಹ ಸಂಗತಿ.

ಹೆಳವರಲ್ಲಿ ಗಂಟೆಹೆಳವರು, ಎತ್ತಿನ ಹೆಳವರು, ಹಾಗೂ ಚಾಪೆಹೆಳವರು ಎಂಬ ಮೂರು ಪಂಗಡಗಳಿವೆ. ಹೆಳವರು ತಮ್ಮ ಮೂಲದ ಬಗ್ಗೆ ಹೇಳುವ ಒಂದು ದಂತ ಕತೆ ಹೀಗಿದೆ: "ಹಿಂದೆ ವಿಜಯನಗರದ ಸುತ್ತ ಮುತ್ತ ಆಳುತ್ತಿದ್ದ ಅರಸು ಮಕ್ಕಳಾದ ಏಳು ಜನ ಅಣ್ಣ ತಮ್ಮಂದಿರಲ್ಲಿ ಕೊನೆಯವನು 'ಹೆಳವ'. ಅವನಿಗೆ ಕೈಕಾಲುಗಳು ಊನವಾಗಿದ್ದುದರಿಂದ ಅವನ ಅಣ್ಣಂದಿರು ಆಸ್ತಿಯಲ್ಲಿ ಸಮಭಾಗ ಕೊಡದೆ, 'ನೀನು ಬಂದು ಒಂದೊಂದು ದಿನ ಒಬ್ಬೊಬ್ಬರ ಮನೆಯಲ್ಲಿ ಊಟ ಮಾಡಿಕೊಂಡು ಹೋಗು ಎಂದು ಹೇಳುತ್ತಾರೆ. ಅದರಂತೆ ಅವನು ಅಣ್ಣಂದಿರ ಮನೆಗಳಲ್ಲೇ ಊಟ ಮಾಡಿ ಕೊಂಡು ಜೀವನ ಸಾಗಿಸುತ್ತಾನೆ. ಅದೇ ವೃತ್ತಿಯಾಗುತ್ತದೆ."[೧] ವಂಶಾವಳಿ ಹೇಳಲು ಹೋಗುವ ಹೆಳವರು, ಈಗಲೂ ತಮ್ಮ ಅಣ್ಣಂದಿರ ಮನೆಗೆ ಹೋಗುತ್ತೇವೆಂದೇ ಹೇಳುತ್ತಾರೆ. ಒಕ್ಕಲು ಮನೆಯವರು ತಮ್ಮನೆಂಬ ಅಭಿಮಾನವನ್ನೇ ತೋರುತ್ತಾರೆ.

ಮೈಸೂರಿನ ಸುತ್ತಮುತ್ತಲಿನ ಪ್ರದೇಶದಲ್ಲಿರುವ 'ಗಂಟೆ ಹೆಳವ'ರ ಬಗ್ಗೆ ಡಾ. ಜೀ. ಶಂ. ಪರಮಶಿವಯ್ಯನವರು ಆಳವಾದ ಅಧ್ಯಯನ ನಡೆಸಿ, ಅವರ ಹಾಡು ಗಳನ್ನು, ಕಥೆಗಳನ್ನು ಸಂಗ್ರಹಿಸಿದ್ದಾರೆ. ಅವರ ಬದುಕಿನ ನೆಲೆ ಬೆಲೆಗಳನ್ನು ಗುರುತಿಸಿ ದ್ದಾರೆ. "ಹೆಳವರು ಹಾಡುವ 'ಕುಲದಕತೆ' ವಿಜಯನಗರದ ಕಾಲಕ್ಕೆ ಅವರ ಇತಿಹಾಸ ವನ್ನು ಒಯ್ಯುತ್ತದೆ. ವಿಜಯನಗರ ಸಾಮ್ರಾಜ್ಯ ಅಳಿದ ಮೇಲೆ ಅವರು ದಕ್ಷಿಣಕ್ಕೆ ವಲಸೆ ಬಂದಿರಬೇಕು." 'ದಿಳ್ಳಿ–ವಿಜಯನಗರ' ಎಂದು ಅವರು ಪ್ರಸ್ತಾಪಿಸಿ, ಮಹಮ್ಮ ದೀಯ ಸುಲ್ತಾನನೊಬ್ಬನ ಕಾಲದಲ್ಲಿ ದಕ್ಷಿಣಕ್ಕೆ ಬಂದಂತೆ ಸೂಚಿಸುತ್ತಾರೆ. ಅಲ್ಲಿಂದ ಹೊರಟ 'ಮುದ್ದುರಾಜೇಗೌಡ'ನೆಂಬ ಒಕ್ಕಲು ಮಗನಿಗೆ ಇರುವ ಹದಿನೆಂಟು ಮಕ್ಕಳಲ್ಲಿ ಕೊನೆಯವನು 'ಕುಂಟ ಹೆಳವ.' ಇವನು ತನ್ನ ಭಾಗದ ಆಸ್ತಿಯನ್ನೆಲ್ಲ ಉಳಿದ ಸೋದರರಿಗೆ ಹಂಚಿ, 'ಧರ್ಮದ ಪಾಲಿ'ಗೆ ತಾನು ಬರುವುದಾಗಿ ಹೇಳಿದ. ಒಬ್ಬೊಬ್ಬ ಗೌಡನೂ ಒಂದೊಂದು ದಿಕ್ಕಿಗೆ ಚದುರಿ ಹೋದರು. ಈ ಹೆಳವ ಊಟವಿಲ್ಲದೆ ಸೊರಗಿ, ಪ್ರಾಣ ಕಳೆದುಕೊಳ್ಳುವ ಪ್ರಯತ್ನದಲ್ಲಿದ್ದಾಗ ಶಿವಪಾರ್ವತಿಯರು ಕಾಣಿಸಿ ಕೊಂಡು ಅವನನ್ನು ಹರಸಿದರು. ಅವನ ಕೈಗೆ 'ಶಿವಧ್ಯಾನ'ದ ಗಂಟೆ ಕೊಟ್ಟರು. ಚನ್ನಬಸವೇಶ್ವರನನ್ನು ಸೃಷ್ಟಿಮಾಡಿ, ಅವನ ಮೇಲೆ ಕುಳಿತು ಸಂಚಾರ ಮಾಡುವಂತೆ ಹೇಳಿದರು. ಹೆಳವ ಗೌಡ ಶ್ರೀಶೈಲಕ್ಕೆ ಬಂದ. ಅಲ್ಲೊಬ್ಬ ಗುರುವನ್ನು ಆಶ್ರಯಿಸಿದ. ಅವನ ಲಗ್ನವೂ ಆಯಿತು. ಮಡದಿ ಮಕ್ಕಳನ್ನು ಪಡೆದ, ಶ್ರೀಶೈಲ ಮಲ್ಲಿಕಾರ್ಜುನ ಗುರುಗಳಲ್ಲಿ ಒಕ್ಕಲ ಗೌಡರ ವಿವರಗಳೆಲ್ಲ ಇದ್ದವು. ಆ ಕುಲಗಳ ಮೇಲೆ ತನ್ನ ೧೮

೧. ಕರ್ನಾಟಕ ಜನಪದ ಕಲೆಗಳು– ಗೊ. ರು. ಚನ್ನಬಸಪ್ಪ– ಪುಟ ೧೯೩.

ಮಕ್ಕಳನ್ನು ಹಂಚಿ, ಧರ್ಮದ ಪಾಲು ಕೇಳಲು ಬಿಟ್ಟೆಳ್ಕೊಟ್ಟ."೧ ಈ ಕತೆ ಗಂಟೆ ಹೆಳವರ ಮೂಲ ಹಾಗೂ ಮೂಲಪುರುಷನ ಬಗ್ಗೆ ವಿವರಗಳನ್ನು ಕೊಡುತ್ತದೆ. ಹೆಳವನೂ 'ಒಕ್ಕಲು ಮಗ'ನೆಂಬುದನ್ನು ಸ್ಪಷ್ಟಪಡಿಸುತ್ತದೆ. ಇಲ್ಲಿ ಬರುವ 'ಶ್ರೀಶೈಲ'ದ ಪ್ರಸ್ತಾಪ, ಇವರನ್ನು ಶೈವಮೂಲಕ್ಕೆ ಸೇರಿಸುತ್ತದೆ. 'ಹೆಳವರ ಕಾವ್ಯಗಳು' ಪುಸ್ತಕದಲ್ಲಿ ಪ್ರಕಟವಾದ 'ಹೆಳವೇಗೌಡ' ಎಂಬ 'ಕುಲಪುರಾಣ'ವೂ ಈ ಸಂಗತಿಗಳನ್ನೇ ದೃಢಪಡಿಸುತ್ತದೆ.೨ ಇವರು ಬಳಸುವ ವಾದ್ಯವಿಶೇಷ, ಗಂಟೆ, ಅದರ ತಾಳಕ್ಕನುಗುಣವಾಗಿ ಹಾಡುಗಳನ್ನು ಹಾಡುತ್ತಾರೆ. ವಂಶಪಾರಂಪರ್ಯವಾಗಿ ಬಂದ ಗಂಟೆ ಇವರ ಬದುಕಿನಲ್ಲಿ ಮಹತ್ವದ ಪಾತ್ರವಹಿಸಿದ್ದರಿಂದ ಇವರು 'ಗಂಟೆ ಹೆಳವ'ರೆಂದು ಪ್ರಸಿದ್ಧಿ ಪಡೆದರು.

ಉತ್ತರ ಕರ್ನಾಟಕದ 'ಎತ್ತಿನ ಹೆಳವ'ರು ತಮ್ಮ ವಂಶದ ಬಗ್ಗೆ, ಪೌರಾಣಿಕ ಕಲ್ಪನೆಯ ಅನೇಕ ದಂತಕತೆಗಳನ್ನು ಹೇಳುತ್ತಾರೆ. ಅವರ ಮೂಲದ ಮೇಲೆ, ಬೆಳಕು ಚೆಲ್ಲಬಹುದಾದ ಒಂದೆರಡನ್ನು ಮಾತ್ರ ಇಲ್ಲಿ ನೋಡಬಹುದು : "ನಾರದನಿಗೆ ಅರವತ್ತು ಮೂರು ಮಕ್ಕಳಂತೆ. ಅವರಲ್ಲಿ ಒಬ್ಬ ಕುಂಟ ಹುಟ್ಟಿದನಂತೆ. ನಾರದನು ಭಕ್ತಿಯಿಂದ ಶಿವನನ್ನು ಪ್ರಾರ್ಥಿಸಿ, ಕುಂಟ ಮಗನಿಗೆ ಜೀವನೋಪಾಯವನ್ನು ಕಲ್ಪಿಸಿಕೊಡು ಎಂದು ಕೇಳಿದನಂತೆ, ಆಗ ಶಿವನು ಒಂದು ನಂದಿಯನ್ನು ಕೊಟ್ಟು, ಅದರಮೇಲೆ ಕೂತು ಅರವತ್ತುಮೂರು ಜನ ಪುರಾತನರ ವಂಶಾವಳಿಯನ್ನು ಹೇಳಿಕೊಂಡು ಜೀವಿಸು ಎಂದು ಹೇಳಿದನಂತೆ. ಅಂದಿನಿಂದ ಎತ್ತು ಇವರಿಗೆ ಬಳುವಳಿಯಾಗಿ ಬಂದು, 'ಎತ್ತಿನ ಹೆಳವರು' ಎಂದು ಹೆಸರಾಯಿತಂತೆ."೩

ಎತ್ತಿನ ಹೆಳವರ ಬಗ್ಗೆ ಇನ್ನೊಂದು ಕತೆ ಹೀಗಿದೆ : "ಶಿವನ ಒಡ್ಡೋಲಗದಲ್ಲಿ ವಿರಾಜಿಸುವ ಶಿವಗಣದಲ್ಲಿ ಶೃಂಗಿ ಹಾಗೂ ಒಕ್ಕಾಲ ಭೃಂಗಿ ಪ್ರಮುಖರು. ಶೃಂಗಿ ಶಿವಪಾರ್ವತಿಯರನ್ನು ಸಮಾನವಾಗಿ ಗೌರವಿಸುತ್ತಿದ್ದ, ಭಕ್ತಿಯಿಂದ ಇಬ್ಬರಿಗೂ ಕೈಮುಗಿಯುತ್ತಿದ್ದ, ಒಕ್ಕಾಲಭೃಂಗಿಯ ಸ್ವಭಾವ ವಿಚಿತ್ರವಾಗಿತ್ತು. ಅವನು ತನ್ನ ಒಲವನ್ನೆಲ್ಲ ಶಿವನಿಗೆ ಮಾತ್ರ ಮೀಸಲಾಗಿಟ್ಟಿದ್ದ. ಪಾರ್ವತಿಗೆ ನಮಸ್ಕಾರವನ್ನು ಮಾಡುತ್ತಿರಲಿಲ್ಲ. ಈ ಸೋಜಿಗದ ಸಂಗತಿಯನ್ನರಿತ ನಾರದ, ಭೃಂಗಿಯ ಭಕ್ತಿಯ ರೀತಿಯನ್ನು ಒಮ್ಮೆ ಪಾರ್ವತಿಗೆ ತಿಳಿಸಿದ. ಸ್ವಾಭಿಮಾನಿಯಾದ ಪಾರ್ವತಿ ಇದನ್ನು ಸೂಕ್ಷ್ಮವಾಗಿ ಗಮನಿಸಿ, ಭೃಂಗಿಯನ್ನುದ್ದೇಶಿಸಿ- 'ನಿನ್ನ ದೇಹದಲ್ಲಿ ಪ್ರವಹಿಸುವ ಶಕ್ತಿಯ ಸಂಚಯವೆಲ್ಲ ನನ್ನದಾಗಿದ್ದರೂ ನೀನು ನನಗೇಕೆ ನಮಸ್ಕರಿಸುವುದಿಲ್ಲ, ಗೌರವಿಸುವುದಿಲ್ಲ.' ಎಂದು ಪ್ರಶ್ನಿಸಿದಳು. ನಿರ್ವಿಕಾರ ಮನಸ್ಸಿನಿಂದ ಭೃಂಗಿ 'ದೇವಿ, ಶಿವನೇ ನನ್ನ ಪರಮ

೧. ಹೆಳವರ ಕಾವ್ಯಗಳು- ಡಾ. ಜೀ. ಶಂ. ಪರಮಶಿವಯ್ಯ- ಪ್ರಸ್ತಾವನೆ ಪುಟ ೫.
೨. ,, ,, ,, ,, ,, ,, - ಪುಟ ೩೨.
೩. ಕರ್ನಾಟಕ ಜನಪದ ಕಲೆಗಳು- ಗೊ. ರು. ಚೆನ್ನಬಸಪ್ಪ- ಪುಟ ೧೯೩.

ದೈವ, ಅವನೊಬ್ಬನೇ ಸರ್ವಶಕ್ತ, ಸಂರಕ್ಷಕ. ಆದ್ದರಿಂದ ನನ್ನ ಭಕ್ತಿ ಅವನೊಬ್ಬನಿಗೇ ಮೀಸಲಾಗಿದೆ' ಎಂದು ಉತ್ತರಿಸಿದ. ಅವನ ಮಾರುತ್ತರ ಕೇಳಿ, ಪಾರ್ವತಿ ಕೆರಳಿ ಕೆಂಡವಾದಳು. ಅವನ ದೇಹದಲ್ಲಿರುವ ತನ್ನ ಶಕ್ತಿಯನ್ನೆಲ್ಲ ಸೆಳೆದುಕೊಂಡಳು, ಭೃಂಗಿ ನಿಶ್ಚೇಷ್ಟಿತ ಮಾಂಸದ ಮುದ್ದಿಯಾಗಿ ಬಿದ್ದ. ತನ್ನ ಪರಮ ಭಕ್ತನಿಗೊದಗಿದ ದುರಂತ ವನ್ನು ಕಂಡು ಪರಮಾತ್ಮನ ಹೃದಯ ಕರಗಿತು. ಕರುಣೆಯಿಂದ ಭೃಂಗಿಗೆ ತನ್ನ ಶಕ್ತಿಯನ್ನೇ ಧಾರೆಯೆರೆದ. ಆದರಿಂದ ಭೃಂಗಿ ಸ್ವಲ್ಪ ಚೇತರಿಸಿಕೊಂಡನಾದರೂ, ಸರಿಯಾಗಿ ಚಲಿಸುವ ಶಕ್ತಿ ಬರಲಿಲ್ಲ. ಬೇರಾವ ಕೆಲಸ ನಿರ್ವಹಿಸಲು ಅವನು ಅಸಮರ್ಥನಾದ. ಅದರಿಂದ ಅನುಕಂಪಗೊಂಡ ಪರಮಾತ್ಮ ಅವನಿಗೆ ನಂದಿವಾಹನ ಕೊಟ್ಟ. ಅದರ ಮೇಲೆ ಕುಳಿತು ಭಕ್ತರ ವಂಶಾವಳಿಯನ್ನು ಹೇಳಿ, ಜೀವಿಸೆಂದು ಆಶೀರ್ವದಿಸಿದ. ಆ ಒಕ್ಕಾಲ ಭೃಂಗಿಯ ವಂಶಜರೇ ಮುಂದೆ ಹೆಳವರಾದರು."[೧]

ಉತ್ತರ ಕರ್ನಾಟಕದ ಎತ್ತಿನ ಹೆಳವರು ತಮ್ಮ ಮೂಲವನ್ನು ಕುರಿತು ಹೇಳುವ ಈ ದಂತಕತೆ, ಊರೂರಿಗೆ ಬೇರೆ ಬೇರೆ ರೂಪ ತಾಳಿರುವುದನ್ನು ಮರೆಯುವಂತಿಲ್ಲ. ಅದರ ಒಂದು ರೂಪ ಹೀಗಿದೆ: "ಶಿವನ ಆಸ್ಥಾನದಲ್ಲಿರುವ ೬೩ ಪುರಾತನರಲ್ಲಿ ಒಕ್ಕಾಲ ಭೃಂಗಿಯೂ ಒಬ್ಬ. ಅವನಿಗೆ ಬಲಗಾಲು, ಅವನ ಹೆಂಡತಿಗೆ ಎಡಗಾಲು ಇದ್ದಿರಲಿಲ್ಲ. ಆದರೂ, ಅವನು ಭಕ್ತಿಯಿಂದ ನರ್ತನ ಮಾಡಿ, ಶಿವನಿಗೆ ಬಲಗೈಯಿಂದ, ಪಾರ್ವತಿಗೆ ಎಡಗೈಯಿಂದ ನಮಸ್ಕರಿಸುತ್ತಿದ್ದ. ಅವನು ನಮಸ್ಕರಿಸುವ ವಿಚಿತ್ರ ರೀತಿಯನ್ನು ಕಂಡು, ಪಾರ್ವತಿ ಅವನನ್ನೊಮ್ಮೆ 'ಹೀಗೇಕೆ'? ಎಂದು ವಿಚಾರಿಸಿದಳು. ಅದಕ್ಕೆ ಭೃಂಗಿ, 'ನಮ್ಮಪ್ಪನ ಎಡಕ್ಕೆ ಕುಳಿತು ಮದುವೆ ಆಗಿರುವುದರಿಂದ ನೀನು ಎಡ, ನಮ್ಮಪ್ಪ ಬಲ, ಆದ್ದರಿಂದ ನಿನಗೆ ಎಡಗೈಯಿಂದ ಎಡಕ್ಕೆ ನಮಸ್ಕರಿಸುವೆನು.' ಎಂದು ನುಡಿದ. ಕುಪಿತಳಾದ ಪಾರ್ವತಿ, ಅವನಲ್ಲಿರುವ ತನ್ನ ಶಕ್ತಿ ಸಂಚಯದ 'ರೋಮ'ಗಳನ್ನು ಕೇಳಿದಳು. ಅದರಿಂದ ಸ್ವಲ್ಪೂ ಧೃತಿಗೆಡದ ಅವನು, ಹೆಬ್ಬೆರಳಿನಿಂದ ಹಿಡಿದು ತನ್ನ ಇಡೀ ದೇಹದ ತ್ವಚವನ್ನು ಸುಲಿದುಕೊಟ್ಟನು. ಕಳವಳಗೊಂಡ ಸಕಲ ಪುರಾತನರು, ಭೃಂಗಿಯನ್ನುದ್ಧರಿಸಲು ಪರಮಾತ್ಮನಲ್ಲಿ ಪ್ರಾರ್ಥಿಸಿದರು. ಪ್ರಸನ್ನನಾದ ಶಿವನು, ಅವನನ್ನು ಮುನ್ನಿನಂತೆ ಮಾಡಿ, ನಂದಿವಾಹನ ಕೊಟ್ಟನು. ಅದರ ಮೇಲೆ ಕುಳಿತು, ೬೩ ಪುರಾತನರ ವಂಶಾವಳಿ ಹೊಗಳುತ್ತಾ ಜೀವಿಸೆಂದು ಆಶೀರ್ವದಿಸಿದ. ಆ ಒಕ್ಕಾಲ ಭೃಂಗಿಯ ವಂಶಜರೇ ಹೆಳವರಾದರು."[೨] ಈ ಕಾರಣಕ್ಕಾಗಿಯೇ, ಹೆಳವರನ್ನು 'ಒಕ್ಕಾಲ ಭೃಂಗಿ' ಎಂದು ಕರೆಯುತ್ತಿರಬೇಕು. ಹೆಳವರು ಎತ್ತಿನ ಮೇಲೆ ಕುಳಿತು, ಬಲಗಾಲು ಮಡಿಚಿ, ಅದರ ಮೇಲೆ ಕಂಬಳಿ ಹೊದೆದುಕೊಂಡು ಹೋಗುವ ಸಂಪ್ರದಾಯದಲ್ಲಿ ತಮ್ಮ ಮೂಲ ಪುರುಷನಿಗೆ ಬಲಗಾಲು ಇಲ್ಲವೆಂಬುದರ ಸೂಚನೆ ಅಡಗಿರಬೇಕು.

---

೧. ಬೀಳಗಿಯಲ್ಲಿ ಶಾಲಾ ಶಿಕ್ಷಕರಾಗಿರುವ, ಭೀಮಪ್ಪ ಹೆಳವರ ಅವರು ಈ ಕತೆ ಹೇಳಿದರು.

೨. ಕೆಲೂರ ಗ್ರಾಮವಾಸಿ, ಸಿಂಗಬಸಪ್ಪ, ಹನಮಪ್ಪ, ಹೆಳವರ ಅವರಿಂದ ಕೇಳಿದ ಕತೆ ಇದು.

ಡಾ. ಎಸ್. ಶೆಟ್ಟರ ಅವರು ಹೇಳುವಂತೆ, ಕರ್ನಾಟಕದ ಹೆಳವರು ತೆಲುಗು ದೇಶದ 'ಪಿಚ್ಚಿಗುಂಟಲ' ಜಾತಿಗೆ ಸೇರಿದವರು.[೧] ಬಹು ಪುರಾತನ ಕಾಲದಿಂದ ಆಂಧ್ರ ಪ್ರದೇಶದಿಂದ ಬಂದು, ಕನ್ನಡ ನಾಡಿನಲ್ಲಿ ನೆಲೆಸಿರಬೇಕು.[೨] ಇಂದಿಗೂ, ಕೆಲವೆಡೆಯ ಹೆಳವರು, ಮನೆಯಲ್ಲಿ ತೆಲಗು ಭಾಷೆಯನ್ನು ಮಾತನಾಡುತ್ತಿರುವುದೇ ಇದಕ್ಕೆ ಸಾಕ್ಷಿ. ವಿಜಯನಗರದ ವಿನಾಶದ ನಂತರ, ದಕ್ಷಿಣದ ಕಡೆಗೆ ವಲಸೆ ಹೋದವರು 'ಗಂಟೆಹೆಳವ'ರಾಗಿ, ಉತ್ತರ ಕರ್ನಾಟಕದಲ್ಲಿ ಉಳಿದವರು 'ಎತ್ತಿನ ಹೆಳವ'ರಾಗಿ ಪರಿಣಮಿಸಿರಬೇಕು.[೩] ಈ ಎರಡೂ ಪಂಗಡಗಳು ಒಂದೇ ಬುಡಕಟ್ಟಿಗೆ ಸಂಬಂಧಿಸಿವೆ ಎಂಬುದರಲ್ಲಿ ಸಂದೇಹವಿಲ್ಲ. ಪ್ರಾದೇಶಿಕ ಭಿನ್ನತೆಯಿಂದ ಕೆಲವು ವೈದೃಶ್ಯಗಳು ಕಾಣಿಸಿಕೊಂಡರೂ, ಸಾದೃಶ್ಯಗಳಿಗೇನೂ ಕೊರತೆಯಿಲ್ಲ.

**ವಾಸಿಸುವ ಪ್ರದೇಶ :**

ಹೇಳವರು ಕರ್ನಾಟಕದ ಕೆಲವೆಡಗಳಲ್ಲಿ ಮಾತ್ರ ವಾಸಿಸಿದ್ದಾರೆ. ಮೈಸೂರಿನ ಸುತ್ತಮುತ್ತಲಿನ ಪ್ರದೇಶದಲ್ಲಿ ಹಾಗೂ ನಾಗಮಂಗಲ ತಾಲೂಕಿನಲ್ಲಿ ಅವರು ಅಧಿಕ ಸಂಖ್ಯೆಯಲ್ಲಿದ್ದಾರೆ. ಉತ್ತರ ಕರ್ನಾಟಕದ ಹಲವಾರು ಹಳ್ಳಿಗಳಲ್ಲಿಯೂ ಹರಡಿಕೊಂಡಿದ್ದಾರೆ. ಅವರು ನೆಲೆಸಿರುವ ಉತ್ತರ ಕರ್ನಾಟಕದ ಕೆಲವು ಪ್ರಮುಖ ಊರುಗಳನ್ನು ಇಲ್ಲಿ ಸೂಚಿಸಬಯಸುತ್ತೇನೆ.[೪]

ವಿಜಾಪೂರ ಜಿಲ್ಲೆ– ಬಾಗಲಕೋಟೆ, ಬೀಳಗಿ, ಮುಗಳಳ್ಳಿ, ಶೆಲ್ಲಿಕೇರಿ, ಕೆಲೂರ, ಗಂಜಿಹಾಳ, ಗೊಳಸಂಗಿ, ಸುರಗಿಹಳ್ಳಿ, ಖಾನಾಪೂರ, ಹುಂಬನಾಳ, ಗಬಸಾವಳಗಿ, ಕೂಚಬಾಳ, ಸೋಮನಾಳ, ಮಲಗಲದಿನ್ನಿ, ನಿಂಗನೂರ.

ರಾಯಚೂರ ಜಿಲ್ಲೆ– ಮಾನಬಾವಿ, ಮುಂಡಿಗಂಟನಾಳ, ಚಿತ್ತರನಾಳ, ಮುದಗಲ್ಲ, ಆನೆಹೊಸೂರ.

ಧಾರವಾಡ ಜಿಲ್ಲೆ– ಸೋಮಸಾಗರ, ಮಾಗಡಿ, ಶಿರಹಟ್ಟಿ, ರಿತ್ತಿ.

---

೧. ಜಾನಪದ ಸಾಹಿತ್ಯ ದರ್ಶನ– ಭಾಗ ೪ ರಲ್ಲಿ ಉದ್ಧರಿಸಿದೆ– ಪುಟ ೧೯೫ ಹಾಗೂ ೨೦೦.

೨. ಜನ್ನನ ಅನಂತನಾಥ ಪುರಾಣದಲ್ಲಿ 'ಹೇಳವರ ಎತ್ತಿನ' ಉಲ್ಲೇಖ ಬಂದಿರುವುದನ್ನು ಡಾ. ಎಂ. ಎಂ. ಕಲಬುರ್ಗಿಯವರು ನೆನಪಿಸಿದ್ದಾರೆ. ಇದರಿಂದ ಹೇಳವರು ಜನ್ನನಿಗಿಂತ ಹಿಂದೆ ನಮ್ಮ ನಾಡಿನಲ್ಲಿ ಹಳವರಿದ್ದರೆಂದು ಸ್ಪಷ್ಟವಾಗುವುದು.

೩. ಚಾಪೆ ಹೇಳವರ ಬಗ್ಗೆ ಹೆಚ್ಚಿನ ಸಂಗತಿಗಳು ತಿಳಿದುಬಂದಿಲ್ಲ. ಡಾ. ಜೀ. ಶಂ. ಪರಮಶಿವಯ್ಯನವರು ತಮ್ಮ 'ಹೇಳವರ ಕಾವ್ಯಗಳು' ಪುಸ್ತಕದಲ್ಲಿ ಇವರ ಬಗ್ಗೆ ಪ್ರಸ್ತಾಪಿಸಿದ್ದಾರೆ. (ಪ್ರಸ್ತಾವನೆ– ಪುಟ ೭.) ಉತ್ತರ ಕರ್ನಾಟಕದಲ್ಲಿ ಇವರು ಇದ್ದುದು ಕಂಡು ಬಂದಿಲ್ಲ. 'ಶಿಂಗಿ ಹೇಳವರು' ಎಂಬ ಇನ್ನೊಂದು ಹೇಳವರ ಪಂಗಡವಿದೆಯಂತೆ. ತ್ರಿಭುಜಾಕಾರದ ತೊಗಲಿನ ಚಿಕ್ಕ ವಾದ್ಯವನ್ನು ಬಗಲಿಗೆ ಹಾಕಿಕೊಂಡು ಅವರು ಕತೆ ಹೇಳುವರಂತೆ. ಈ ಬಗ್ಗೆ ಶೋಧನೆ ಇನ್ನೂ ನಡೆಯಬೇಕಾಗಿದೆ.

೪. ಉತ್ತರ ಕರ್ನಾಟಕದ ಇಷ್ಟೇ ಊರುಗಳಲ್ಲಿ ಹೇಳವರಿದ್ದಾರೆಂದಲ್ಲ. ನನ್ನ ಗಮನಕ್ಕೆ ಬಾರದ ಕಡೆಗಳೂ ಇರಬಹುದು.

ಬೆಳಗಾವಿ ಜಿಲ್ಲೆ– ಗೋಕಾಕ,[೧] ಚಂದರಗಿ, ಚಿಕ್ಕೋಡಿ, ಜಕನಟ್ಟಿ, ಗುಜನಟ್ಟಿ, ಪರಮಾನಟ್ಟಿ, ಖಾನಾಪೂರ, ಶಿವಾಪೂರ, ಮಮದಾಪೂರ, ಘಟಪ್ರಭಾ. ಇತ್ಯಾದಿ.

ಮೇಲ್ಕಾಣಿಸಿದ ಊರುಗಳಲ್ಲಿ ಕೆಲವು ಕಡೆ ಅಲ್ಪ ಸಂಖ್ಯೆಯಲ್ಲಿ, ಇನ್ನು ಕೆಲವು ಕಡೆ ಅಧಿಕ ಸಂಖ್ಯೆಯಲ್ಲಿ ಹೆಳವರಿದ್ದಾರೆ. ಅವರೆಲ್ಲರೂ ಇಂದು 'ವಂಶಾವಳಿ' ಹೇಳುವ ವೃತ್ತಿಯನ್ನೇ ಅವಲಂಬಿಸಿಲ್ಲ. ಬೇರೆ ಬೇರೆ ಉದ್ಯೋಗಗಳನ್ನು ಕೈಕೊಂಡು ಜೀವಿಸಿದ್ದಾರೆ. ಮೊದಮೊದಲು ಸಾಮಾನ್ಯವಾಗಿ, ಹಳ್ಳಿಯ ಅಂಚಿನಲ್ಲಿ ನಾಲ್ಕಾರು ಗುಡಿಸಲುಗಳನ್ನು ಹಾಕಿಕೊಂಡು ಹೆಳವರು ವಾಸಿಸುತ್ತಿದ್ದರು. ಮುಂದೆ, ಅವರ ಬದುಕಿಗೆ ಸ್ಥಿರತೆ ಮೂಡಿದಂತೆ, ಸಾಂಪತ್ತಿಕ ಸ್ಥಿತಿ ಸುಧಾರಿಸಿದಂತೆ ಮನೆಗಳನ್ನು ಕಟ್ಟಿಕೊಂಡಿದ್ದಾರೆ. ಇಂದಿಗೂ, ಹೆಳವರ ಮನೆಗಳ ಗುಂಪು, ಊರಿನ ಅಂಚಿನಲ್ಲಿರುವುದನ್ನು ಗುರುತಿಸಬಹುದು.

**ವೇಷಭೂಷಣ :**

ಜಾನಪದ ವೃತ್ತಿಕಾರರ ವೇಷಭೂಷಣಗಳು ಸಾಮಾನ್ಯವಾಗಿ, ವೈಶಿಷ್ಟ್ಯಪೂರ್ಣವಾಗಿರುತ್ತವೆ. ಅವರು ಧರಿಸುವ ಉಡಿಗೆ–ತೊಡಿಗೆಗಳ ಆಧಾರದಿಂದಲೇ ಅವರ ವೃತ್ತಿ ವಿಶೇಷವನ್ನು ಸುಲಭವಾಗಿ ಗುರುತಿಸಲು ಸಾಧ್ಯವಾಗುವುದು. ಬುಡಬುಡಕೆ, ದುರಗಮುರಿಗಿ, ಸುಡಗಾಡಸಿದ್ಧ ಮೊದಲಾದ, ಜಾನಪದ ವೃತ್ತಿನಿರತರನ್ನು ಇಲ್ಲಿ ಸ್ಮರಿಸಬಹುದು. ಈ ಮಾತಿಗೆ ಹೆಳವರೂ ಹೊರತಾಗಿಲ್ಲ. ತಮ್ಮ ವಿಶಿಷ್ಟ ವೇಷಭೂಷಣಗಳಿಂದ ಅವರು ಸುಪರಿಚಿತರಾಗಿದ್ದಾರೆ.

ಉತ್ತರ ಕರ್ನಾಟಕದಲ್ಲಿರುವ ಹೆಳವರು, ಧೋತ್ರ, ಶರ್ಟು, ಕೋಟು ಹಾಕಿರುವುದರ ಜೊತೆಗೆ ತಲೆಗೆ ವಿಶೇಷವಾಗಿ ಜರಧಂಚಿನ ಕೆಲವು ಬಣ್ಣದ ರುಮಾಲು ಸುತ್ತಿರುವರು. ಕೋಟು ಸಾಮಾನ್ಯವಾಗಿ ಕಪ್ಪು ಇಲ್ಲವೆ ನಾಸಿ ಬಣ್ಣದ್ದಿರುತ್ತದೆ. ಕೊರಳಲ್ಲಿ ಲಿಂಗ ಅಥವಾ ಜನಿವಾರ ಹಾಕದಿದ್ದರೂ ಹಣೆಯಲ್ಲಿ ವಿಭೂತಿ ಧರಿಸಿರುವರು, ಹೆಗಲ ಮೇಲೆ ಕೆಂಪುಬಣ್ಣದ ಶಾಲು ಹಾಕಿರುವುದು ವಿಶೇಷ. ಅವರು, ಅದಕ್ಕೆ ಬನಾತ ಮತ್ತು ಬುರ್ನಾಸ ಎಂದು ಕರೆಯುತ್ತಾರೆ. ಶಾಲು ಇಲ್ಲವೆ ಕಂಬಳಿ ಖಂಡಿತವಾಗಿ ಹೆಳವನ ಹೆಗಲಮೇಲಿರುತ್ತದೆ. ಎತ್ತಿನ ಮೇಲೆ ಕುಳಿತು, ಬಲಗಾಲು ಮಡಿಚಿಕೊಂಡು, ಅದರ ಮೇಲೆ ಕಂಬಳಿ ಹಾಕಿ, ಕಾಲು ಮಡಿಚಿಕೊಂಡಿರುತ್ತಾರೆ. ಇದು ತಮ್ಮ ಮೂಲಪುರುಷ ಹೆಳವನೆಂಬುದರ ಸೂಚನೆ. 'ಕಾಲಿನಲ್ಲಿ ಬೂಟು ಧರಿಸಬಾರದು, ಕುದುರೆಯ ಮೇಲೆ ಕುಳಿತುಕೊಳ್ಳಬಾರದು.'[೨] ಎನ್ನುವ ಹೆಳವರ ನಂಬಿಕೆಯಲ್ಲಿ, ಕಾಲಿಲ್ಲದ ತಮ್ಮ ಮೂಲ

---

೧. ಗೋಕಾಕ ಸುತ್ತಲಿನ ಹೆಳವರನ್ನು 'ಗ್ವಾಕಾನಾಡ ಹೆಳವರು' ಎಂದು ಕರೆವರು.

* ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಳವರು ನೆಲೆಸಿದ್ದಾರೆ. ವಂಶಾವಳಿ ಹೇಳುವ ಹೆಚ್ಚು ಜನರಿದ್ದಾರೆ.

೨. ಗೊಳಸಂಗಿಯ ಗುರುಪಾದಪ್ಪ ಹವಾಲ್ದಾರರಿಂದ ತಿಳಿದದ್ದು.

ಪುರುಷನ ಬಗೆಗಿರುವ ಗೌರವ, ಶಿವನಿಂದ ಪಡೆದ ನಂದಿವಾಹನದ ಬಗೆಗಿರುವ ಅಭಿಮಾನ ಅಡಗಿರಬೇಕು. ಎತ್ತಿನ ಮೇಲೆ ಸಬರ (ಥಡಿ) ಹಾಕಿ, ಅದರ ಮೇಲೆ ಹಳೆಯ ಬಟ್ಟೆಯಿಂದ ಹೊಲೆದ ಚೀಲವನ್ನು ಎರಡೂ ಕಡೆಗೆ ಹಾಕುವರು. ಇದನ್ನು 'ಬುಂಗಿ' ಎಂದು ಕರೆಯುವರು.[೧] ಇದರಲ್ಲಿಯೇ ಒಕ್ಕಲು ಮನೆಯವರು ಕೊಟ್ಟ ವಸ್ತು–ವಡವೆಗಳನ್ನೆಲ್ಲ ತುಂಬುವರು. ಕೆಲವರು, ಬಗಲಿಗೆ ಹಾಕಿದ ದೊಡ್ಡ ಜೋಳಿಗೆಯಲ್ಲಿ, ವಂಶಾವಳಿ ಕೇಳಿದವರು ಕೊಟ್ಟ ಕಾಣಿಕೆ, ಬಟ್ಟೆಗಳನ್ನು ಹಾಕಿಕೊಳ್ಳುವ ಪದ್ಧತಿಯೂ ಇದೆ. ಆ ಜೋಳಿಗೆಯಲ್ಲಿ ಇಲ್ಲವೆ ಅವರ ಕೈಯಲ್ಲಿ, ಕೆಂಪು ಕವರಿನ, ಹಳೆಯದಾದ ಒಂದು ಕಿರ್ದಿ ಪುಸ್ತಕವಿರುತ್ತದೆ. ಅದರಲ್ಲಿ, ತಮ್ಮ ಹಕ್ಕಿನ ಮನೆಯ ವಂಶಾವಳಿಯ ಸ್ಥೂಲ ಕಥೆಯನ್ನು ಬರೆದಿಟ್ಟುಕೊಂಡಿರುತ್ತಾರೆ. ಗಂಟೆಹೆಳವರ ಕೈಯಲ್ಲಿ 'ಶಿವಧ್ಯಾನದ ಗಂಟೆ' ಇರುವುದು ಗಮನಾರ್ಹ. ಅದು ದೇವಾಲಯದ ಗಂಟೆಗಿಂತ ಸ್ವಲ್ಪ ಚಿಕ್ಕದಾಗಿರುತ್ತದೆ. ಎತ್ತಿನ ಹೆಳವರಲ್ಲಿಯೂ ಇಂತಹ 'ವಿಶೇಷ ಗಂಟೆ' ಇರುವುದು ಮಹತ್ವದ ಅಂಶ. ಅವರು, ಅದನ್ನು ಕೈಯಲ್ಲಿ ಹಿಡಿದಿರುವುದಿಲ್ಲ. ವಂಶಾವಳಿಯನ್ನು ಹೇಳಲು ಹೊರಡುವಾಗ ಮಾತ್ರ ಎತ್ತಿನ ಕೊರಳಿನಲ್ಲಿ ಕಟ್ಟುವರು. ಹೆಳವರ ಹೆಣ್ಣುಮಕ್ಕಳು ಸಾಮಾನ್ಯವಾಗಿ ಸೀರೆ, ಕುಪ್ಪಸ ಧರಿಸುವರು. ಪರಂಪರಾಗತವಾಗಿ ಬಂದ ಹೆಳವರ ಈ ವೇಷ ಭೂಷಣಗಳಲ್ಲಿ ನಾಗರಿಕತೆಯ ಪ್ರಭಾವದಿಂದ ಇಂದು ಸಾಕಷ್ಟು ಬದಲಾವಣೆಗಳಾಗಿವೆ.

## ವೃತ್ತಿ ವಿಶೇಷ :

ವಂಶಾವಳಿ ಕಥನವನ್ನೇ ಜೀವನವೃತ್ತಿಯನ್ನಾಗಿ ಕೈಕೊಂಡ ಹೆಳವರು ವರ್ಷಕ್ಕೊಮ್ಮೆ ತಮ್ಮ ಹಕ್ಕಿನ ಹಳ್ಳಿಗಳಿಗೆ, ಒಕ್ಕಲು ಮನೆಗಳಿಗೆ ಹೋಗಿ ಬರುವರು. ಒಬ್ಬೊಬ್ಬ ಹೆಳವನೂ ಕೆಲವು ಹಳ್ಳಿಗಳನ್ನು ಇಲ್ಲವೆ ಮನೆಗಳನ್ನು ಹಂಚಿಕೊಂಡು, ವಂಶಪಾರಂಪರ್ಯವಾಗಿ ತನ್ನ ಹಕ್ಕನ್ನು ಉಳಿಸಿಕೊಂಡು ಬಂದಿರುವನು. ಹೀಗೆ ಹಂಚಿಕೊಳ್ಳುವುದರ ಮೂಲ ಉದ್ದೇಶ, ಆ ವಂಶದ ಸಕಲ ಮಾಹಿತಿಯನ್ನು ಸಂಗ್ರಹಿಸಿಟ್ಟುಕೊಂಡು, ತಾವು ಆ ಮನೆಯ ಹೆಳವರೆಂದು ಭಾವಿಸುವುದೇ ಆಗಿದೆ.

ಹೆಳವರು, ಒಂದು ತಾಸು ರಾತ್ರಿ ಇರುವಾಗಲೇ ಎದ್ದು, ಮುಖ ತೊಳೆದು, ವಿಭೂತಿ ಧರಿಸಿ, ಬಟ್ಟೆಹಾಕಿಕೊಂಡು ಸಿದ್ಧರಾಗುತ್ತಾರೆ. ಎತ್ತಿನ ಹಣೆ, ಕೊಂಬು, ಪಾದ ತೊಳೆದು, ವಿಭೂತಿ ಹಚ್ಚಿ ಪೂಜೆ ಮಾಡಿ, ಅದರ ಕೊರಳಲ್ಲಿ ವಿಶೇಷ ಗಂಟೆ ಕಟ್ಟಿ, ಸಬರ ಹಾಕುತ್ತಾರೆ. ಆ ಎತ್ತಿನ ಮೇಲೆ ಕುಳಿತು ರೈತರ ಮನೆ ಬಾಗಿಲ ಮುಂದೆ ಬಂದು, ಎತ್ತಿನ ಮೇಲೆ ಕುಳಿತೇ ವಂಶಾವಳಿ ಹೇಳಲು ಆರಂಭಿಸುವುದು ಮೊದಲಿ

---

೧. ಇದು 'ಭೃಂಗಿ'ಯ ತದ್ಭವವಿರಬಹುದೆ ? ಹೆಳವನ ಸಂಪಾದನೆ ಎಲ್ಲಾ ಇದರಲ್ಲಿರುತ್ತದೆ. ಆದುದರಿಂದ ಭೃಂಗಿಗೆ ಸಲ್ಲಿಸಿದ್ದು ಎಂಬ ಅರ್ಥವಿರಬಹುದು. ಭೃಂಗಿ ಹೆಳವರ ಮೂಲಪುರುಷನೆಂಬ ಹಿನ್ನೆಲೆಯಲ್ಲಿ ಇದು, ಆಲೋಚನಾರ್ಹ.

ನಿಂದಲೂ ಬಂದ ಸಂಪ್ರದಾಯ. ಮೊಟ್ಟ ಮೊದಲು ಶಿವಸ್ತುತಿ ಮಾಡುವುದು ವಾಡಿಕೆ. ಅದು ಹೀಗಿದೆ :

ಏಳು ಗಂಗಾಧರನೆ
ಏಳು ಉರಗಾಭರಣನೆ
ಏಳು ಗೌರೀ ವರನೆ
ಏಳು ಬೋಳೆ ಶಂಕರನೆ
ಏಳು ಮನ್ಮಥ ಹರಣನೆ
ಏಳು ಪನ್ನಗ ಧರನೆ
ಏಳು ಭಸ್ಮವನು ಧರಿಸಿದಾತನೆ
ಏಳು ನೂರಾ ಎಪ್ಪತ್ತು ಅಮರಗಣಂಗಳು
ನಿಮ್ಮ ಓಲಗಕ್ಕೆ ಬಂದರೇಳಯ್ಯಾ ಏಳು[೧]



ಇದಾದ ಮೇಲೆ ಅವರ ಮನೆದೇವರು, ಬೆಡಗ, ಆ ಮನೆತನದ ಮೂಲಸ್ಥಳ, ಮೂಲ ಪುರುಷನ ಹೆಸರು, ಮೂಲಸ್ಥಳ ಬಿಟ್ಟುಬರಲು ಕಾರಣವಾದ ರಾಜಕೀಯ, ಸಾಮಾಜಿಕ ವಿಪ್ಲವದ ಸೂಚನೆ, ಅದರಲ್ಲಿ ಆ ಹಿರಿಯ ತೋರ್ಪಡಿಸಿದ ಶೌರ್ಯ ಸಾಹಸ ಮುಂತಾದ ಎಲ್ಲ ವಿವರಗಳನ್ನು ಹಾಡುತ್ತಾರೆ. ನಂತರ ಆ ವಂಶದ ಹಿರಿಯರ ವೈಭವ, ಸತ್ತವರ ಹುಟ್ಟಿದವರ ಮಹಿಮೆಯ ಬಣ್ಣನೆಗಳನೆಲ್ಲ ರಂಜಕವಾಗಿ ಹೇಳಿ, ಹೊಗಳುತ್ತಾರೆ. ಅದನ್ನು ಕೇಳಿ ಮೆಚ್ಚಿಕೊಂಡ ಮನೆಯವರು ಹೆಳವನಿಗೆ ತೃಪ್ತಿಯಾಗುವಂತೆ ಕಾಳು ಕಡಿ, ಕಾಣಿಕೆ ಕೊಟ್ಟು ಎತ್ತಿನಿಂದ ಅವನನ್ನು ಇಳಿಸಬೇಕಾಗುತ್ತಿತ್ತು. ಒಂದು ವೇಳೆ ಮನೆಯವರು ಅನಾದರದಿಂದ ಕಂಡು, ಏನೂ ಕೊಡದಿದ್ದರೆ– ತಾನು ಕುಳಿತ ಎತ್ತನ್ನು ಅವರ ಮನೆಯ ಮುಂದೆ ಮಲಗಿಸಿದರೆ, ಆ ಮನೆತನಕ್ಕೆ ಅಳಿಗಾಲ, ಬಡತನ ಬರುವ್ರದೆಂಬ ನಂಬಿಕೆ ಇತ್ತು. ಆದ್ದರಿಂದ ಹೆಳವರನ್ನು ನಮ್ಮ ಜನರು ಗೌರವದಿಂದ ಕಂಡು, ಔದಾರ್ಯದಿಂದ ಕಾಣಿಕೆ ಕೊಡುತ್ತಿದ್ದರು.

ಹೆಳವರ ಸ್ಮರಣಶಕ್ತಿ ಅಸಾಧಾರಣವಾದುದು. ಜನಸಾಮಾನ್ಯರ ವಂಶಾವಳಿ ಅವರ ನಾಲಿಗೆಯ ಮೇಲಿರುತ್ತದೆ. ಒಂದೊಂದು ಮನೆತನದ ಹಲವು ತಲೆಮಾರುಗಳ ಇತಿಹಾಸವನ್ನು ಅವರು ರಮಣೀಯವಾಗಿ ಹೇಳುತ್ತಾರೆ. ಜೊತೆಗೆ ಆ ಮನೆಯಲ್ಲಿನ ಇತ್ತೀಚಿನ ಬೆಳವಣಿಗೆಗಳನ್ನು, ಹುಟ್ಟು–ಸಾವುಗಳ ವಿವರಗಳನ್ನು ತಮ್ಮಲ್ಲಿರುವ 'ವಂಶಾ

೧. ಮುನವಳ್ಳಿಯ ಬಾಲಪ್ಪ ರಾಮಪ್ಪ ಹೆಳವರ ಹೇಳಿದ ಸ್ತುತಿಪದ್ಯ.

ವಳಿ' ಪುಸ್ತಕ'ದಲ್ಲಿ ಗುರುತಿಸಿಕೊಳ್ಳುತ್ತಾರೆ. ಆ ಮನೆಯವರು ಯಾರಾದರೂ ಬೆ
ಊರಿಗೆ ಹೋಗಿ ನೆಲೆಸಿದ್ದರೆ, ಬೇರೆ ಮನೆಗೆ ದತ್ತು ಹೋಗಿದ್ದರೆ, ಅದನ್ನು ಬರೆ
ಕೊಳ್ಳುತ್ತಾರೆ. ಇವು, ಸರಕಾರಿ ಶಾನುಭೋಗರ ದಾಖಲೆಗಳಿಗಿಂತ ಹೆಚ್ಚು ಅಧಿಕೃ
ದಾಖಲೆಗಳೆಂದು ಪರಿಗಣಿಸಲಾಗುವುದು. ಅಣ್ಣ-ತಮ್ಮಂದಿರ ಆಸ್ತಿ ಒಡೆತನಕ್
ಸಂಬಂಧಿಸಿದ ನ್ಯಾಯಗಳು ಕೋರ್ಟಿನಲ್ಲಿ ಸಮಸ್ಯಾತ್ಮಕವೆನಿಸಿದಾಗ, ಆ ಮನೆಯ
ಹೆಳವರ ಸಾಕ್ಷಿ ಪಡೆದು, ವಂಶಾವಳಿ ಗ್ರಂಥದ ಆಧಾರದಿಂದ ನ್ಯಾಯ ನಿರ್ಣಯಿಸಿದ
ಅನೇಕ ಘಟನೆಗಳನ್ನು ಹೇಳುತ್ತಾರೆ.[1] ಹೀಗೆ ಒಂದು ವಂಶದ ಹಿಂದು-ಮುಂದಿನ
ಪೀಳಿಗೆಯ ಐತಿಹಾಸಿಕ ಸತ್ಯಸಂಗತಿಗಳ ಸಂರಕ್ಷಣೆ ಹೆಳವರಿಂದ ನಡೆಯುತ್ತದೆ. ಈ
ಹಿನ್ನೆಲೆಯಲ್ಲಿ "ಇವರು ಹಿಂದಿನ ಮತ್ತು ಮುಂದಿನ ಪೀಳಿಗೆಗೆ ಸೇತುವೆಯಂತೆ ಇದ್ದಾರೆ."[2]
ಎಂಬ ಮಾತು ಅರ್ಥಪೂರ್ಣವೆನಿಸುತ್ತದೆ. ಹೆಳವರ ಈ ವೃತ್ತಿ ವಿಶೇಷವನ್ನೇ ಕವಿವಾಣಿ
ಹೀಗೆ ಹಾಡಿದೆ :

> ಮುದಿಯ ಎತ್ತಿನ ಮೇಲೆ
> ಹಳೆಯ ಹೊತ್ತಿಗೆ ಹೊತ್ತು
> ಹೊಗಳುತ್ತ ಬಂದಿಹನು ನಮ್ಮನೆಯ ಹೆಳವ
> ಹಳ್ಳಿ ಜನತೆಯು ಬಾಳಿ
> ಬೆಳೆದ ಕತೆಯನು ಬರೆದು
> ಇತಿಹಾಸ ಬದುಕಿಸುತ ಜನಮನವ ಸೆಳೆದ[3]

ಜನಮನದಲ್ಲಿ ಬೇರುಬಿಟ್ಟ ಹೆಳವನ ಸಮಗ್ರ ಚಿತ್ರ ಈ ಕವಿವಾಣಿಯಲ್ಲಿ ಸಹಜ,
ಸುಂದರವಾಗಿ ಕಂಗೊಳಿಸಿರುವುದನ್ನು ಪರಿಭಾವಿಸಬಹುದು.

ಹೆಳವರು ಉಳಿದ ಸಾಮಾನ್ಯ ಭಿಕ್ಷುಕರಂತಲ್ಲ. ಒಂದರ್ಥದಲ್ಲಿ ಅವರು ಭಿಕ್ಷುಕರೇ
ಅಲ್ಲ. ಒಕ್ಕಲು ಮನೆಯವರು ಮಕ್ಕಳಂತೇ ಅವರನ್ನು ಗೌರವಿಸುವರು. ಹೆಳವರನ್ನು
'ಆಯಗಾರ'ರ ಗುಂಪಿಗೆ ಸೇರಿಸಬಹುದು. ಅವರ ಆದಾಯದ ಮೊತ್ತ ಅಧಿಕವಾಗಿರು

---

೧. ಇದು ಪ್ರತಿಯೊಬ್ಬ ಹೇಳವನಲ್ಲಿರುತ್ತದೆ. ಮೊದಲು ವಂಶಾವಳಿ ಲಿಖಿಸಿದ ಕಂಚಿನ ಸನದು ಇರುತ್ತಿತ್ತಂತೆ. ಇವರು ಹೇಳವರೆನ್ನುವುದಕ್ಕೆ ಆಧಾರವಾಗಿ ಅರಬ್ಬಿ ಭಾಷೆಯಲ್ಲಿರುವ ಕಂಚಿನ ಪತ್ರವನ್ನು ನಾನು ಕೆಲೂರಿನಲ್ಲಿ ನೋಡಿದ್ದೇನೆ. ಇವಕ್ಕೆ ವಂಶಾವಳಿಯ 'ಕಡತ'ಗಳೆಂದೂ ಕರೆಯುತ್ತಾರೆ.

೨. ಕರ್ನಾಟಕ ಜನಪದ ಕಲೆಗಳು– ಗೊ. ರು. ಚನ್ನಬಸಪ್ಪ– ಪುಟ ೧೯೨,

೩. 'ಬಣ್ಣಿರಿ ಮನುಕುಲ ಚಂದಿರರೆ'– ಪಿ. ಕೆ. ರಾಮೇಶ್ವರರ ಅಪ್ರಕಟಿತ ಕವನ ಸಂಕಲನದಿಂದ ಆಯ್ದ ಪದ್ಯ.

ತ್ತದೆ. ರೈತರು ಧವಸ ಧಾನ್ಯಗಳನ್ನು ಮಾತ್ರವಲ್ಲದೆ ದನಕರುಗಳನ್ನೂ ಅವರಿಗೆ ಕೊಡು ತಿದ್ದುದು ಸರ್ವವಿಧಿತ. ತಾವು ರೈತರ ಮನೆಯ ಹೆಣ್ಣುಮಕ್ಕಳೆಂದೇ ಅವರು ಹೇಳಿ ಕೊಳ್ಳುವರು. ಹೆಣ್ಣುಮಕ್ಕಳಿಗೆ ಮೀಸಲಾದ ಸೀರೆ, ಕುಪ್ಪಸ, ಬಳೆ ಮೊದಲಾದ ವಸ್ತು ಗಳನ್ನೂ ಬೇಡಿ, ಪಡೆದುಕೊಳ್ಳುತ್ತಾರೆ. ಮನೆಯವರು ಊಟಕ್ಕೆ ನೀಡಿದಾಗ ಹಾಡುವ ಹೆಳವನ ಹಾಡಿನಲ್ಲಿ ಈ ಸಂಗತಿಗಳೆಲ್ಲ ಸುಂದರವಾಗಿ ಮೂಡಿವೆ :

ಬೆಳ್ಳ ಬೆಳಗಾನೆದ್ದು ಹೆಳವ ಹೊಗಳುತ ಬಂದ
ಹೊಗಳ್ಯಾನ ತವರ ಮನಿ ಬೆಡಗ ।
ತವರ ಮನಿ ಬೆಡಗ ಹೊಗಳಿದ । ಹೆಳವಯ್ಯಗ
ಕೊಡತಾರ ಬಳುಲಿ ಆಕಳ ।[೧]

ರೈತರ ಮನೆಯ ಮದುವೆ ಮುಂತಾದ ಮಹತ್ವದ ಸಮಾರಂಭಗಳಲ್ಲಿ ಹೆಳವರನ್ನು ಕರೆಸುವ ಸಂಪ್ರದಾಯವಿತ್ತು. ಮನೆಯಲ್ಲಿ ಯಜಮಾನ ಸತ್ತರೆ, ಅವನು ಧರಿಸುವ ಬಟ್ಟೆಬರೆ, ಬಳಸುವ ತಾಟು ತಂಬಿಗೆಗಳನ್ನು ಬೇರೆಡೆಗೆ ಇಟ್ಟು, ತಮ್ಮ ಮನೆಯ ಹೆಳವ ಬಂದಾಗ ಅವುಗಳನ್ನು ಕೊಡುವರು. ಕಾಣಿಕೆಗಳನ್ನು ಪಡೆದ ಮೇಲೆ, ಹಾಡಿ ಹರಸುವುದು ಹೆಳವನ ಪರಿಪಾಠ. ಆ ಹಾಡು ಹೀಗಿದೆ :

ಶಿವಾಽಽ ಮಾಲಿಂಗಪ್ರಭುವಾಗಿ
ಹಾಲು ಹಳ್ಳವಾಗಿ, ತೂಗುತೊಟ್ಟಿಲಾಗಿ
ಬೆಳ್ಳಿ ಬಟ್ಟಲಾಗಿ
ಪಂಚೈದು ಮಂದಿ ಗಂಡುಮಕ್ಕಳಾಗಿ
ಪಂಚೈದು ಮಂದಿ ಹೆಣ್ಣುಮಕ್ಕಳಾಗಿ
ಮುಪ್ಪು ತಪ್ಪು ತನಕ ಸಕ್ಕರಿ ತುಪ್ಪದಲ್ಲಿ
ಕೈತೊಳೆವಂಥ ಐಶ್ವರ್ಯವಾಗಲಿ[೨]

ಸಾರುವಯ್ಯನವರು ಹರಸುವ ಈ ಪದ್ಯವನ್ನು ಹೆಳವರೂ ಹಾಡುವುದು ಗಮನಾರ್ಹ.

ಸಾಮಾನ್ಯವಾಗಿ, ಸುಗ್ಗಿಯ ದಿನಗಳ ನಂತರವೇ ಹೆಳವರು ವಂಶಾವಳಿ ಹೇಳಲು ಹೊರಡುವುದರಲ್ಲಿ ಸಾಕಷ್ಟು ಅರ್ಥವಡಗಿದೆ. ಸುಗ್ಗಿಯ ಹಿಗ್ಗಿನಿಂದಿರುವ ರೈತ, ತನ್ನ ವಂಶದ ಮೂಲಕಥೆಯ ಮಹಿಮೋನ್ನತಿಯನ್ನು ಕೇಳಿ, ಹೆಳವನಿಗೆ ತೃಪ್ತಿಯಾಗುವಂತೆ ಧವಸ-ಧಾನ್ಯಗಳನ್ನು ಕೊಡುವನೆಂಬ ಉದ್ದೇಶ ಇದರ ಹಿನ್ನೆಲೆಯಲ್ಲಿರಬೇಕು. ಅಲ್ಲದೆ,

೧. ಮತ್ತು ೨. ಕಿಲೂರಿನಲ್ಲಿರುವ ಬಸಪ್ಪ ಯಲ್ಲಪ್ಪ ಹೆಳವರ ಅವರಿಂದ ಇವುಗಳನ್ನು ಸಂಗ್ರಹಿಸಿ ದ್ದೇನೆ.

ರೈತ ಸಂತಸದಿಂದ ಹೊಸಬಟ್ಟೆಗಳನ್ನು ಧರಿಸುವ ಅವಧಿಯೂ ಇದಾಗಿರುವುದರಿಂದ ಹಳೆಯ ಬಟ್ಟೆಗಳೆಲ್ಲ ತನಗೇ ಸಿಗಬಹುದೆಂಬ ಆಶೆಯೂ ಹೆಳವನಿಗಿರಬೇಕು.[೧] ಕೆಲವು ಹೆಳವರು, ಒಂಟೆತ್ತಿನ ಗಾಡಿ ಹೂಡಿಕೊಂಡು ಪರಿವಾರ ಸಮೇತ ತಮ್ಮ ಪಕ್ಕಿನ ಹಳ್ಳಿಗಳಿಗೆ ಹೋಗಿ ಬೀಡು ಬಿಡುತ್ತಾರೆ. ನಾಲ್ಕಾರು ದಿನಗಳ ವರೆಗೆ ಅಲ್ಲಿಯೇ ಉಳಿದು ತಮ್ಮ ಮನೆಗಳನ್ನು ಮುಗಿಸಿ, ಮುಂದಿನ ಊರಿಗೆ ಹೋಗುತ್ತಾರೆ. ಹೀಗೆಯೇ ಅವರ ಸಂಚಾರ, ವರ್ಷದಲ್ಲಿ ೩-೪ ತಿಂಗಳ ವರೆಗೆ ಮಾತ್ರ ಮುಂದುವರೆಯುತ್ತದೆ. ಈ ದೃಷ್ಟಿಯಿಂದ ಅವರನ್ನು 'ಸಂಚಾರಿ' ಜನಾಂಗ ಎನ್ನುವುದಕ್ಕಿಂತ 'ಅರೆಸಂಚಾರಿ' ಜನಾಂಗವೆನ್ನುವುದು ಹೆಚ್ಚು ಸಮಂಜಸವೆನಿಸುತ್ತದೆ. ಈಗ, ಹೆಳವರು ಎತ್ತಿನ ಮೇಲೆ ಬರುವುದು ವಿರಳ. ರೈಲು, ಬಸ್ಸುಗಳಲ್ಲಿಯೇ ಅವರು ಊರಿಂದೂರಿಗೆ ಸಂಚರಿಸುವರು. ಜನರಲ್ಲಿ ವಂಶಾವಳಿಯನ್ನು ಕೇಳುವ ಮೊದಲಿನ ಕುತೂಹಲ ಕಡಿಮೆಯಾಗಿರುವುದರಿಂದ, ಹೆಳವರು ಇಂದು ತಮ್ಮ ವೃತ್ತಿಯಲ್ಲಿಯ ಆಸಕ್ತಿಯನ್ನು ಕಳೆದುಕೊಳ್ಳುತ್ತಿದ್ದಾರೆ. ತಮಗೆ ಒಗ್ಗದ ಬೇರೊಂದು ವೃತ್ತಿಯನ್ನು ಅವಲಂಬಿಸುತ್ತಿದ್ದಾರೆ. ದುಡಿಯುವ ಶಕ್ತಿ ಇಲ್ಲದ ಕೆಲವರು ಮಾತ್ರ ಅನಿವಾರ್ಯವಾಗಿ ಇದೇ ವೃತ್ತಿಯನ್ನಾಶ್ರಯಿಸಿದ್ದಾರೆ. ಇನ್ನು ಕೆಲವರು ಈ ವೃತ್ತಿಯನ್ನು ಅತ್ಯಂತ ಭಕ್ತಿಯಿಂದ ಕೈಕೊಂಡು, ಉಳಿದ ವೇಳೆಯಲ್ಲಿ ಒಕ್ಕಲುತನ ಮಾಡುತ್ತಿದ್ದಾರೆ. ಅಂಥವರು ಭೂಮಿ-ಸೀಮೆಗಳನ್ನು ಹೊಂದಿ, ನೆಮ್ಮದಿಯಿಂದಿದ್ದಾರೆ. ಉಳಿದವರು ವ್ಯವಸಾಯ, ವ್ಯವಹಾರ, ನೌಕರಿ, ಕಂಬಾರಿಕೆ, ಕೂಲಿ ಮೊದಲಾದ ಉದ್ಯೋಗಗಳಲ್ಲಿ ತೊಡಗಿದ್ದಾರೆ. ಹಿಂದೆ ಇವರಿಗೆ ಪ್ರೋತ್ಸಾಹ ಕೊಟ್ಟು, ಎಲ್ಲ ರೀತಿಯಿಂದಲೂ ನೆರವಾಗಿದ್ದ ಸಮಾಜ ಇಂದು ಬದಲಾಗಿರುವುದೇ ಈ ಪರಿಸ್ಥಿತಿಗೆ ಮುಖ್ಯ ಕಾರಣ.] ಕಡು ಬಡವರೂ, ವಿನಯಶೀಲರೂ ಆದ ಇವರಲ್ಲಿ ವಿದ್ಯಾವಂತರ ಸಂಖ್ಯೆ ತೀರ ಕಡಿಮೆ. ಆದರೆ ಅಕ್ಷರಾಭ್ಯಾಸವನ್ನು ಸಾಮಾನ್ಯವಾಗಿ ಎಲ್ಲರೂ ಮಾಡಿರುತ್ತಾರೆ. ತಂದೆಯೇ ಇವರಿಗೆ ಪ್ರಥಮಗುರು. ಅವನೇ ವೃತ್ತಿಗೆ ಅನಿವಾರ್ಯವಾಗಿ ಬೇಕಾಗುವ ಓದು-ಬರಹ ಕಲಿಸುವನು. ವಂಶಾವಳಿಯನ್ನು ಓದಲು, ಹೊಸ ಸಂಗತಿಗಳನ್ನು ಬರೆದುಕೊಳ್ಳಲು ಅವಶ್ಯವಾದ ಅಕ್ಷರಾಭ್ಯಾಸ ಇವರು ಮಾಡಿರುತ್ತಾರೆ.

---

ಟಿಪ್ಪಣಿ :

೧. ಇದ...

ಇರುತ್ತ... ಮದುವೆ ಮನುಷ್ಯ ಜೀವನದ ಮಹತ್ವದ ಘಟ್ಟ. ಪ್ರಕೃತಿಯ ಶಕ್ತಿಗೆ ಸಂಸ್ಕೃತಿಯ
ಪತ್ರವನ್ನು... ಸಂದರ್ಭ. ಗಂಡು, ಹೆಣ್ಣು ಪ್ರೌಢಾವಸ್ಥೆಗೆ ಬಂದಾಗ, ಸಮಾಜ
ಕರೆಯುತ್ತಾ... ಒಪ್ಪಿಗೆ ಪಡೆದು, ಅವರನ್ನು ಗೃಹಸ್ಥಾಶ್ರಮ ಜೀವನಕ್ಕೆ ಕೊಂಡೊಯ್ಯುವ

೨. ಕರ್ನಾಟಕ... ಮದುವೆಯ ಸಂದರ್ಭದಲ್ಲಿನ ಸಂಪ್ರದಾಯಾಚರಣೆಗಳು ಸಮಾಜದಿಂದ

೩. 'ಬಸ್ಸಿ...

ಪದ್ಯ. ...ರ ತಿಳಿಸಿದ ಪ್ರೊ. ಸೋಮಶೇಖರ ಇಮ್ರಾಪೂರ ಅವರಿಗೆ ನಾನು ಕೃತಜ್ಞ.

ಸಮಾಜಕ್ಕೆ ಜನಾಂಗದಿಂದ ಜನಾಂಗಕ್ಕೆ ವ್ಯತ್ಯಾಸಗೊಳ್ಳುವುದು ಸಹಜ. ಮದುವೆ ಪ್ರತಿಯೊಂದು ಜನಾಂಗದ ಸ್ವೀಕೃತ ಮೌಲ್ಯಗಳನ್ನು ಪ್ರತಿಬಿಂಬಿಸುತ್ತದೆ. ಉತ್ತರ ಕರ್ನಾಟಕದ ಹೆಳವರು, ಮದುವೆಯಲ್ಲಿ ಕೆಲವು ವಿಶಿಷ್ಟ ಸಂಪ್ರದಾಯಗಳನ್ನು ರೂಢಿಸಿ ಕೊಂಡಿರುವುದನ್ನು ಇಲ್ಲಿ ಅವಲೋಕಿಸಬಹುದು.[೧]

ಮದುವೆ ಕೇವಲ ಲೈಂಗಿಕ ಸಂಬಂಧವೆಂದು ಭಾವಿಸದೆ, ಪವಿತ್ರವಾದ ಧಾರ್ಮಿಕ ಬಂಧನವೆಂದು ಹೆಳವರೂ ನಂಬಿದ್ದಾರೆ. ಮದುವೆಗೆ ಮೊದಲು ಹೆಣ್ಣು ನೋಡಲು ಹೋಗುವುದು ಸಹಜ. ಹೋಗುವಾಗ ತಿಥಿ, ವಾರ, ನಕ್ಷತ್ರಗಳನ್ನು ಕೇಳಲು ಅವರು ಮರೆಯುವುದಿಲ್ಲ. ಹೆಣ್ಣಿನ ಮನೆಗೆ ಹೋದಾಗ, ಮನೆಯ ಬಾಗಿಲು ಹಾಕಿದ್ದರೆ, ಮನೆಯ ಕಸ ಉಡುಗುತ್ತಿದ್ದರೆ ಅವರು ಅಶುಭವೆಂದು ಭಾವಿಸುವರು. ಹೆಣ್ಣು ಎಲ್ಲ ದೃಷ್ಟಿಯಿಂದ ಒಪ್ಪಿಗೆಯಾದಮೇಲೆ 'ಬೆಡಗ' ನೋಡುವರು. ಹೆಳವರಲ್ಲಿ ಇಮ್ಮಡಿ, ಜ್ಯೋತಿ, ಬಂಡಿ, ಯಾತಪತ್ ಇತ್ಯಾದಿ ಬೆಡಗಗಳಿವೆ. ತಾವು ನೋಡಿದ ಹೆಣ್ಣಿನ ಹಾಗೂ ಗಂಡಿನ ಬೆಡಗ ಒಂದೇ ಆಗಿದ್ದರೆ, ಅವರ ಮದುವೆಯನ್ನು ಖಂಡಿತ ಮಾಡುವುದಿಲ್ಲ. ಇಬ್ಬರ 'ಬೆಡಗ'ಗಳು ಬೇರೆ ಬೇರೆ ಇದ್ದರೆ ಮಾತ್ರ ಅವರಿಬ್ಬರಲ್ಲಿ ಮದುವೆ ಸಾಧ್ಯ. ಇದನ್ನು ಕಡ್ಡಾಯವಾಗಿ ಪರಿಶೀಲಿಸುತ್ತಾರೆ. ಬೆಡಗ ಬೇರೆ ಇದ್ದು, ಹೆಣ್ಣು ಒಪ್ಪಿಗೆ ಯಾದರೆ ಹೆಣ್ಣಿನ ಮನೆಯಲ್ಲಿ 'ನಿಶ್ಚಯ'ಕಾರ್ಯ ಮಾಡುವರು. ಆಗ, ಸಕ್ಕರಿ ಹಂಚುವ, ಎಲೆಹಂಚುವ ಸಂಪ್ರದಾಯವಿದೆ. ಮುಂದೆ ಶುಭ ಮುಹೂರ್ತ ನೋಡಿ, ಮದುವೆ ನಿರ್ಧರಿಸುವರು. ಇವರಲ್ಲಿ, ಹಿಂದೆ 'ತೆರವು'[೨] ಕೊಡುವ ಪರಂಪರೆಯಿತ್ತು.

ಮದುವೆ ವರನ ಮನೆಯ ಮುಂದೆ ನಡೆಯುವುದು. ವರನ ಮನೆಯವರೇ ಮದುವೆಯ ಸಂಪೂರ್ಣ ವೆಚ್ಚವನ್ನು ನಿರ್ವಹಿಸುವರು. ಸಂಪ್ರದಾಯನಿಷ್ಠ ಹೆಳವರಲ್ಲಿ ಮದುವೆ ಹಿಂದೆ ಮೂರು ದಿನಗಳ ವರೆಗೆ ನಡೆಯುತ್ತಿತ್ತು. ಮೊದಲ ದಿನ, ತಮ್ಮವ ರಲ್ಲಿಯೇ ಒಬ್ಬನನ್ನು 'ಪಟ್ಟದವ' ಅಥವಾ 'ಪಟ್ಟಾಧಿಕಾರಿ' ಎಂದು ಆಯ್ಕೆ ಮಾಡುವರು. ಗಂಡಿನವರು, ಹೆಣ್ಣಿನವರು ಎಲ್ಲರೂ ಸೇರಿಯೇ ಈ ಆಯ್ಕೆಯನ್ನು ನಡೆಸಿದರೂ ಗಂಡಿನವರ ನಿರ್ಣಯಕ್ಕೆ ಹೆಚ್ಚಿನ ಬೆಲೆ. ಕೆಲವು ವಿಶೇಷ ಅರ್ಹತೆಗಳಿದ್ದವನೇ ಪಟ್ಟಾಧಿ ಕಾರಿಯಾಗಿ ಆಯ್ಕೆಯಾಗುವನು. ಅವನು ವರನ ಅಥವಾ ವಧುವಿನ 'ಬೆಡಗ'ದವ ನಾಗಿರಬಾರದು. ಬೇರೆ ಬೆಡಗದವನೇ ಇರಬೇಕು. ಹಲ್ಲು ಬಿದ್ದವ, ಕುರುಡನಾದವ ಹಾಗೂ ಅಂಗಹೀನ ಈ ಅಧಿಕಾರಕ್ಕೆ ಅನರ್ಹ, ಎಲ್ಲರ ಒಪ್ಪಿಗೆ ಪಡೆದು, ಅರ್ಹತೆ

೧. ಹೆಳವರ ಮದುವೆಯ ವೈಶಿಷ್ಟ್ಯಗಳನ್ನು ಬೀಳಗಿಯಲ್ಲಿ ಶಿಕ್ಷಕರಾಗಿರುವ ಭೀಮಪ್ಪ ಹೆಳವರ ಅವರಿಂದ ತಿಳಿದಿದ್ದೇನೆ.

೨. ಮೊದಲು ೬೫ ರೂಪಾಯಿ ಕನ್ಯಾಶುಲ್ಕ ಕೊಡುತ್ತಿದ್ದರು. ಬುಧವಾರ ಹುಟ್ಟಿದ ಹೆಣ್ಣು ಮಗಳಿಗೆ ತೆರವು ತೆಗೆದುಕೊಳ್ಳುವುದಿಲ್ಲವಂತೆ.

ಯಿಂದ 'ಪಟ್ಟಾಧಿಕಾರಿ' ಆದವನ ಸಂಪೂರ್ಣ ನೇತೃತ್ವದಲ್ಲಿಯೇ ಮದುವೆಯ ಮೂರೂ ದಿನದ ಕ್ರಿಯೆಗಳು ಸಾಗುವವು. ಆಶ್ಚರ್ಯದ ಸಂಗತಿಯೆಂದರೆ, ಹೆಳವರ ಮದುವೆ ಯಲ್ಲಿ ಸ್ವಾಮಿಗಳ, ಪುರೋಹಿತರ ಕೆಲಸವೇ ಇಲ್ಲ. ಪಟ್ಟಾಧಿಕಾರಿಯೇ ಅದರ ಸಂಪೂರ್ಣ ಹೊಣೆಗಾರ. ಅಕ್ಕಿ, ಐದು ಉತ್ತತ್ತಿ, ಐದು ಅರಿಷಿಣ ಕೊಂಬು, ಐದು ಅಡಿಕೆ, ಐದು ರೂಪಾಯಿ ಇವುಗಳನ್ನು ಹಾಕಿ ಒಂದು ಗಂಟು ಕಟ್ಟುವರು. ಅದಕ್ಕೆ 'ಪಟ್ಟದಗಂಟು' ಎಂದು ಹೆಸರು. ಅದನ್ನು ಜಗಲಿಯ ಮೇಲಿಟ್ಟು ಪೂಜೆ ಮಾಡಿ, ಪಟ್ಟಾಧಿಕಾರಿಗೆ ಒಪ್ಪಿಸುವರು. ಜೊತೆಯಲ್ಲಿ ಅದನ್ನು ಹಿಡಿದುಕೊಂಡೇ, ಅವನು ಮದುವೆಯ ಎಲ್ಲ ಕಾರ್ಯಗಳನ್ನು ನಿರ್ವಹಿಸಬೇಕು. ಬಂಧು ಬಳಗದವರ, ಸಮಾಜ ದವರ ಅಂತಃಕಲಹಗಳೇನಾದರೂ ಇದ್ದರೆ, ಮದುವೆಯ ಮೊದಲ ದಿನದ ಈ ಅವಧಿ ಯಲ್ಲಿ ಸರಿಪಡಿಸಿಕೊಳ್ಳುವರು. ನ್ಯಾಯಗಳಿದ್ದರೆ, ಅವು ಪರಿಹಾರವಾಗದೆ ಮದುವೆ ಸಾಗುವುದು ಕಷ್ಟ. ನಂತರ, 'ಪಟ್ಟಾಧಿಕಾರಿ' ಎಲ್ಲರನ್ನು ಕುರಿತು, 'ಪಟ್ಟಸಾಗಲೇನು' ? ಎಂದು ಪ್ರಶ್ನಿಸುವನು. ಅದಕ್ಕೆ ಎಲ್ಲರು ಒಪ್ಪಿಗೆ ಸೂಚಿಸಿದ ಮೇಲೆ, ಪಟ್ಟಾಧಿಕಾರಿ ಮೊದಲು ತಾನು ವಿಭೂತಿ ಹಚ್ಚಿಕೊಂಡು, ಉಳಿದವರೆಲ್ಲರಿಗೂ ಹಚ್ಚುವನು. ಇಲ್ಲಿಗೆ ನಿಜವಾದ ಮದುವೆಯ ಕಾರ್ಯ ಆರಂಭವಾದಂತೆ. ಮದುವೆಯ ಹಂದರಕ್ಕಾಗಿ, ತಳಿರು, ತೋರಣಗಳನ್ನು ಮೆರವಣಿಗೆಯಲ್ಲಿಯೇ ತಂದು, ಮಂಟಪ ಹಾಕುವರು. ತಳಿರು ತರುವವರೂ ಗಂಡಿನ, ಹೆಣ್ಣಿನ ಬೆಡಗಗಳಿಗೆ ಸಂಬಂಧಿಸಿದವರಿರಬಾರದು. ಸಾಯಂಕಾಲ ಅರಿಷಿಣ ಕಾರ್ಯಕ್ರಮ. ವರನಿಗೆ ವಧು, ವಧುವಿಗೆ ವರ, ಪರಸ್ಪರ ಅರಿಷಿಣ ಹಚ್ಚಿ, ಸ್ನಾನ ಮಾಡಿಸಬೇಕು. ಇದು ವಿಶಿಷ್ಟ ಸಂಪ್ರದಾಯ. ವಧು–ವರ ರಲ್ಲಿಯ ಗಾಂಭೀರ್ಯ ಮಾಯವಾಗಿ, ಪರಸ್ಪರ ಸರಳತೆ, ಪ್ರೀತಿ ಮೂಡಬೇಕೆಂಬ ಉದ್ದೇಶ ಇದಕ್ಕೆ ಹಿನ್ನೆಲೆಯಾಗಿರಬೇಕು. ಎರಡನೆಯ ದಿನ, ಗಂಡಿನ ಹೆಣ್ಣಿನ ಬೆಡಗ ಗಳಿಗೆ ಸಂಬಂಧಿಸದ ವ್ಯಕ್ತಿ 'ಹಾಲುಗಂಬ'[೧]ವನ್ನು ಗೊಂಗಡಿ ಹೊಚ್ಚಿಕೊಂಡು ತರುವನು. ಸೇಸೆಯ ಕಟ್ಟೆಯ ಕಂಬಕ್ಕೆ ಕಟ್ಟಿ, ಅದನ್ನು ತಂದವನೇ ಪೂಜಿಸುವನು. ಆ ಮೇಲೆ ಅಕ್ಷತೆಯ ಸಿದ್ಧತೆ. ಪಟ್ಟಾಧಿಕಾರಿಯ ನೇತೃತ್ವದಲ್ಲಿ, ಐನು ಜನ ಮುತ್ತೈದೆಯರು ಹಾಗೂ ಮದುಮಕ್ಕಳು 'ತಾಳಿ' ಪೋಣಿಸುವರು. ಅಕ್ಷತೆಯ ಸಮಯದಲ್ಲಿ ವಧುವನ್ನು ಅಡಗಿಸಿಡುವರು. ವರ ಇಲ್ಲವೆ ವರನ ಕಡೆಯವರು ಹುಡುಕಿ ತರುವರು. ಮದು ಮಕ್ಕಳನ್ನು ಹಸೆಯ ಮೇಲೆ ಕೂಡ್ರಿಸಿ, ಅಕ್ಷತೆ ಹಾಕುವರು. ನಂತರ, ಒಂದು ಉತ್ತತ್ತಿ ಯನ್ನು ದಾರಕ್ಕೆ ಕಟ್ಟಿ ತೂಗುಬಿಟ್ಟು, ಅದನ್ನು ಮಗುವೆಂದು ಭಾವಿಸಿ, ವಧುವರರಿಂದ ಮಕ್ಕಳಾಟ ಆಡಿಸುವರು. ಅವರ ಸರಸ ಸಲ್ಲಾಪಕ್ಕೆ ಆಸ್ಪದ ಕಲ್ಪಿಸುವರು. ಹೊಸ ದಂಪತಿಗಳಲ್ಲಿ ಸಲುಗೆ, ಸ್ನೇಹಗಳು ಬೆಳೆಯಲೆಂಬ ಉದ್ದೇಶದಿಂದಲೇ ಇವು ಆಚರಣೆಗೆ

---

೧. ಇಂಗಳ ಮತ್ತು ಬಸರಿಗಿಡದ ಟೊಂಗೆಗಳನ್ನು ತರುವನು. ಅದಕ್ಕೆ 'ಹಾಲಗಂಬ' ಎಂದು ಕರೆಯುವರು.

ಬಂದಿರಬೇಕು. ಮೂರನೆಯ ದಿನ, 'ಎಲೆ ಹಂಚುವುದು.' ಪ್ರತಿಯೊಂದು ಬೆಡಗದ ಹೆಸರಿನಲ್ಲಿ ಎಲೆ, ಅಡಿಕೆಗಳನ್ನು ಜೋಡಿಸಿ, ಸಾಲಾಗಿ ಇಡುವರು. ಆ ಹೆಸರಿನ 'ಬೆಡಗ' ದವರಲ್ಲಿ ಒಬ್ಬ ಹಿರಿಯರು ತಮ್ಮ ಬೆಡಗ ಹೇಳಿ, ಎಲೆ ಸ್ವೀಕರಿಸುತ್ತಾರೆ. ಈ ಸಂದರ್ಭ ದಲ್ಲಿಯೂ ನ್ಯಾಯಗಳೇನಾದರೂ ಇದ್ದರೆ ಪರಿಹರಿಸಿಕೊಳ್ಳುವ ಪರಿಪಾಠವಿದೆ. ಬೆಡಗವ ಆಧಾರದ ಮೇಲೆ ನಡೆವ 'ಎಲೆ ಹಂಚುವ' ವಿಶಿಷ್ಟ ಕಾರ್ಯಕ್ರಮದೊಂದಿಗೆ ಮದುವೆ ಮುಕ್ತಾಯವಾಗುವುದು. ಹಿಂದಿನ ಕಾಲದ ಹೆಳವರಲ್ಲಿ ನಡೆಯುತ್ತಿದ್ದ ಮದುವೆಯ ಈ ಸಂಪ್ರದಾಯಾಚರಣೆಗಳಲ್ಲಿ, ಈಗ ಕೆಲವು ಬದಲಾವಣೆಗಳಾಗಿದ್ದರೂ, ಮೂಲ ಸ್ವರೂಪ ಒಂದೇ ಆಗಿರುವುದನ್ನು ಸುಲಭವಾಗಿ ಗುರುತಿಸಲು ಸಾಧ್ಯ. ಈಗ, ತೆರವು ಮರೆಯಾಗಿ, ವರದಕ್ಷಿಣೆ ಕಾಣಿಸಿಕೊಂಡಿದೆ. ಮೂರುದಿನ ನಡೆಯುತ್ತಿದ್ದ ಮದುವೆ ಒಂದೇ ದಿನದಲ್ಲಿ ಮುಗಿಯುತ್ತದೆ. ಆದರೂ, ಪಟ್ಟಾಧಿಕಾರಿ, ಪಟ್ಟದಗಂಟು, ಎಲೆ ಹಂಚುವುದು ಇವೆಲ್ಲ ಇಂದೂ ಜೀವಂತವಾಗಿರುವುದು ವಿಶೇಷ.

**ಮರಣ :**

ಹುಟ್ಟು ಸಾವು ಮಾನವ ಜೀವನದ ಎರಡು ಮಹತ್ವದ ಕ್ಷಿತಿಜಗಳು. ಹುಟ್ಟಿದವನು ಸಾಯಲೇಬೇಕು. ಇದು ನಿಸರ್ಗ ನಿಯಮದ ನಗ್ನಸತ್ಯ. ಜನನ ಕಾಲದಲ್ಲಿ ಕೆಲವು ಆಚರಣೆಗಳನ್ನು ಕೈಗೊಳ್ಳುವಂತೆ, ಮರಣ ಕಾಲದಲ್ಲಿಯೂ ಕೆಲವು ವಿಧಿ–ವಿಧಾನಗಳನ್ನು ಅನುಸರಿಸುವ ಪರಂಪರೆ ಎಲ್ಲ ಜಾತಿ, ಜನಾಂಗಗಳಲ್ಲಿ ಕಂಡು ಬರುತ್ತದೆ. ಈ ಸಂಪ್ರದಾಯಗಳು, ಜನಾಂಗದಿಂದ ಜನಾಂಗಕ್ಕೆ ಭಿನ್ನವಾಗಿರುವುದು ಸಹಜ.

ಹೆಳವರು. ಜನನ ಕಾಲದಲ್ಲಿ ನಡೆಸುವ ಆಚರಣೆಗಳು 'ಲಿಂಗವಂತ' ಸಮಾಜದ ಸಂಪ್ರದಾಯಗಳನ್ನೇ ಬಹು ಮಟ್ಟಿಗೆ ಹೋಲುತ್ತವೆ. ಮರಣೋತ್ತರ ಸಂಸ್ಕಾರಗಳಲ್ಲಿ ಮಾತ್ರ, ಕೆಲವು ಬದಲಾವಣೆಗಳಿರುವುವರಿಂದ ಅವನ್ನಿಲ್ಲಿ ಗಮನಿಸಬಹುದು.[೧] ಸತ್ತವನಿಗೆ ಮೈ ತೊಳೆದು, ಹೊಸ ಬಟ್ಟೆ ಉಡಿಸಿ, ಹಾರ ಹಾಕಿ, ಗೋಡೆಗೆ ಕೂಡ್ರಿಸುವ 'ಸಿದಗಿ' ಕಟ್ಟಿ ಸ್ಮಶಾನಕ್ಕೆ ಒಯ್ಯುವ ಹಾಗೂ ಹೆಣವನ್ನು ಹುಗಿಯುವ ವಿಧಾನಗಳಲ್ಲಿ ಹೇಳಿಕೊಳ್ಳುವ ವ್ಯತ್ಯಾಸವೇನೂ ಹೆಳವರಲ್ಲಿಲ್ಲ. ಕೆಲವು ಕಡೆ, ಹೆಣವನ್ನು 'ಕೌದಿ'ಯಲ್ಲಿ ಒಯ್ಯುವ ಸಂಪ್ರದಾಯವಿದೆ.

ಸತ್ತ ಮೂರನೆಯ ದಿನದಂದು, ಅವರಲ್ಲಿ 'ಮೂರು ಕಾಳು' ಹಾಕುವ ವಿಶಿಷ್ಟ ಕ್ರಮವಿದೆ. ಅಂದು, ಅನ್ನ ಮಾಡಿಕೊಂಡು ಸ್ಮಶಾನಕ್ಕೆ ಹೋಗಿ, ಸತ್ತವನ ಗೋರಿ ಯನ್ನು ಪೂಜಿಸುವರು. ಅದರ ಮೇಲೆ ಅನ್ನ ಇಡುವರು. ಕಾಗೆ ಬಂದು ಅದನ್ನು ತಿನ್ನಬೇಕು. ಕಾಗೆ ತಿನ್ನುವವರೆಗೆ ಎಲ್ಲರೂ ಅಲ್ಲಿಯೇ ಇದ್ದು ನೋಡುವರು. ಸತ್ತವ

೧. ಈ ವಿವರಗಳನ್ನು ಗೊಳಸಂಗಿಯ ಗುರುಪಾದಪ್ಪ ಹವಾಲ್ದಾರ ತಿಳಿಸಿದ್ದಾರೆ.

ನಿಗೆ ಸಂಸಾರದ ಮೇಲೆ, ಪ್ರಬಲ ಆಶೆ ಏನಾದರೂ ಇದ್ದರೆ, ಕಾಗೆ ಬೇಗ ಅನ್ನ ತಿನ್ನುವು ದಿಲ್ಲವೆಂದು ನಂಬಿಕೆ ಅವರಲ್ಲಿದೆ.

ಹತ್ತನೆಯ ದಿವಸ, ಸತ್ತವನಿಗೆ 'ಊದ ಹಾಕುವುದು' ಎಂಬ ಕಾರ್ಯಮಾಡುವರು. ಸತ್ತವನನ್ನು ಕೂಡ್ರಿಸಿದ್ದ ಸ್ಥಳದಲ್ಲಿ–ಗೋದಿಯ ತವಡು ಹಾಕಿ, ಅವನ ಅತ್ಯಂತ ಪ್ರೀತಿಯ ಅಡಿಗೆಯ ಪದಾರ್ಥಗಳನ್ನು ಹಾಗೂ ಅವನು ಮಾಡುತ್ತಿದ್ದ 'ಚಟ'ದ ಸಾಮಾನುಗಳನ್ನು ಇಟ್ಟು, ಬಂಧು ಬಾಂಧವರೆಲ್ಲ ಸೇರಿ 'ಊದಹಾಕಿ' ಊಟ ಮಾಡು ತ್ತಾರೆ. ಮುಂದೆ, ಬೆಸತಿಂಗಳು ಇಲ್ಲವೆ ಬೆಸ ವರ್ಷಗಳಲ್ಲಿ ಸತ್ತವನ ಹೆಸರಿನಲ್ಲಿ ತಾಮ್ರದ ಇಲ್ಲವೆ ಬೆಳ್ಳಿಯ ಒಂದು 'ಮುಕ'[೧] ಮಾಡಿಸಿ, ಅವನನ್ನು ದೈವದಲ್ಲಿ ಕೂಡಿಸುವ ಸಂಪ್ರ ದಾಯವಿದೆ. ನಂತರ, ಆ 'ಮುಕ'ವನ್ನು 'ಜಗಲಿ'ಯ ಮೇಲಿಟ್ಟು, ಮನೆಯವರು ಪೂಜೆ ಮಾಡುತ್ತ ಹೋಗುವರು. ಮಾನವನು ದೇವನಾಗುವ ಈ ನಂಬಿಕೆಯಲ್ಲಿ ಹೆಳವರ ಹೃದಯ ವೈಶಾಲ್ಯವನ್ನು ಗುರುತಿಸಬಹುದು. ಅವರು ಆಚರಿಸುವ ಈ ಮರಣೋ ತ್ತರ ಸಂಸ್ಕಾರಗಳು ಇಂದಿಗೂ ನಿತ್ಯ ಜೀವಂತವಾಗಿವೆ.

**ಸಾಹಿತ್ಯ :**

ಗಂಟೆ ಹೆಳವರು ವಂಶಾವಳಿ ಹೇಳುವುದರ ಜೊತೆಗೆ ಸೊಗಸಾಗಿ ಹಾಡುತ್ತಾರೆ. ಅವರು ಹಾಡುವ ಜನಪದ ಕಾವ್ಯಗಳು, ಕಥೆಗಳು ಅದ್ಭುತರಮಣೀಯವಾಗಿವೆ. ಅವು ಗಳಲ್ಲಿ 'ಕರಿಬಂಟನಕತೆ', 'ಯಮದಾಳು ದೇವಮ್ಮ', 'ಮಾಸ್ತಮ್ಮನ ಕತೆ', 'ಯಮ ಧರ್ಮನ ಕತೆ', 'ಮಾಗಡಿ ಕೆಂಪೇಗೌಡ'; 'ಹೆಳವೇಗೌಡ, ಕತೆ' ಪ್ರಮುಖವಾಗಿವೆ. ಈ ಹೆಳವರ ಬಗೆಗೆ ಆಳವಾದ ಸಂಶೋಧನೆ ನಡೆಸಿ, ಅವರಲ್ಲಿ ಹುದುಗಿದ್ದ ಅಪಾರ ಸಾಹಿತ್ಯ ರಾಶಿಯನ್ನು ಸಂಗ್ರಹಿಸಿಕೊಟ್ಟ ಕೀರ್ತಿ ಖ್ಯಾತ ಜಾನಪದ ವಿದ್ವಾಂಸರಾದ ಡಾ. ಜೀ. ಶಂ. ಪರಮಶಿವಯ್ಯನವರಿಗೆ ಸಲ್ಲುತ್ತದೆ. ಉತ್ತರ ಕರ್ನಾಟಕದ ಹೆಳವರು ಮಾತ್ರ ಈ ರೀತಿ ಜನಪದ ಕಥನ ಕಾವ್ಯಗಳನ್ನು ಹಾಡುವುದಿಲ್ಲ. ವಂಶಾವಳಿಯನ್ನೇ ಧ್ವನಿ ತೆಗೆದು ಹಾಡುತ್ತಾರೆ. ಅದೂ ಕೂಡ ಸಂಪೂರ್ಣ ಹಾಡಿನ ರೂಪದಲ್ಲಿರುವುದಿಲ್ಲ. "ಗದ್ಯ ಕತೆಯ ಹಾಗೆ ಇರುತ್ತದೆ. ಆದರೆ ಒಣ ಗದ್ಯ ಕತೆಯೂ ಅದಲ್ಲ. ಅದನ್ನು ಪದ್ಯ ಗಂಧೀ ಗದ್ಯವೆಂದು ಕರೆಯಬಹುದು."[೨] ಆ ವಂಶಾವಳಿಯಲ್ಲಿ ಬರುವ ಸೋಜಿಗದ ಸನ್ನಿವೇಶಗಳು, ಕ್ರಾಂತಿಯ ಘಟನೆಗಳು ಹೆಳವರು ಪ್ರತಿಭಾಶೀಲರೆಂಬುದನ್ನು ಶ್ರುತ ಪಡಿಸುತ್ತವೆ. ಇವರೂ ಮೊದಮೊದಲು ಹಾಡುತ್ತಿದ್ದು ಜನರ ಅಲಕ್ಷದಿಂದ ಅವರ ಜಾನಪದ ಪ್ರತಿಭೆ ಬತ್ತಿರಬೇಕು.

---

೧. 'ಮುಖ' ಶಬ್ದದ ತದ್ಭವ. ಒಂದು ಮೂರ್ತಿಯನ್ನು ಮಾಡಿಸಿ, ಅದನ್ನೇ ದೇವರೆಂದು ಆರಾಧಿಸುವ ಹೆಳವರ ಶ್ರದ್ಧೆ ಮಹತ್ವದ್ದು.

೨. ಜಾನಪದ ಸಾಹಿತ್ಯ ದರ್ಶನ ಸಂಪುಟ ೪ ಪುಟ ೨೦೧. ಪ್ರೊ. ಬಿ. ಬಿ. ಮಹೀಷವಾಡಿ.

ವಂಶದ ಮೂಲಪುರುಷ ತೋರಿಸಿದ ಸಾಹಸ, ಅವನು ಮೂಲಸ್ಥಳ ಬಿಟ್ಟು ಬರಲು ಕಾರಣವಾದ ಘಟನೆ ಹಾಗೂ ಅಲ್ಲಲ್ಲಿ ಕಾಣಿಸಿಕೊಳ್ಳುವ ಅಂದಿನ ಸಾಮಾಜಿಕ ವಿಡಂಬನೆ- ಈ ಅಂಶಗಳು ವಂಶಾವಳಿ ಕತೆಯನ್ನೇ ಸಹಜ ಸಾಹಿತ್ಯದ ಮಟ್ಟಕ್ಕೇರಿಸಿವೆ. ಒಂದು ವಂಶಾವಳಿ ಆರಂಭದಲ್ಲಿ ಬರುವ ಬಿರುದಿನ ಚಿತ್ರ ಹೀಗಿದೆ :

ಕರಿಯುತ್ತ ಕಳ್ಳರ ಗಂಡ
ಬಿಳಿಯುತ್ತ ನಾಯ್ಕರ ಗಂಡ
ಕೊಂಡು ಕುದುರಿ ಹತ್ತವರ ಗಂಡ
ಹಿಂಡು ದೈತ್ಯರ ಗಂಡ
ಕಪ್ಪು ಕೇಳವರ್ಮ ಗಂಡ
ಕಪ್ಪು ಇಸಗೊಳ್ಳವರ ಗಂಡ
ತಿರುಪಿತ ನಾಡವರ ಗಂಡ
ಇಂತಿಂಥ ಬಿರುದು ಭಟ್ಟಂಗಿಗಳನ್ನು
ಸಾರಿಕೊಳ್ಳುತ್ತ ಬರುವ ನಾವು ಕಪ್ಪು ಕೊಡುವುದಿಲ್ಲ[೧]

ಮನೆಯ ಯಜಮಾನನ ವರ್ಣನೆ ಇನ್ನೊಂದು ವಂಶಾವಳಿಯಲ್ಲಿ ವೀರೋತ್ಕಟ ವಾಗಿದೆ :

ನಿಮ್ಮ ಮುತ್ತ್ಯಾಗಳು ಮಹಾಬಂಟರು
ಮಹಾ ಪುಂಡಾಟಿಕೆಯ ಗೌಡರು
ಎಡಲೋಡ ಎಡಕ ತಿರುತಿದ್ದರು
ಬಲಲೋಡ ಬಲಕ ತಿರುತಿದ್ದರು
ನೆತ್ತರಗಣ್ಣ, ಕೊಕ್ಕರ ಮೀಸೆ
ಮೀಸೆಯ ಮೇಲೆ ಜೋಡ ಗಜನಿಂಬಿ ಹಣ್ಣು ಕೂಡ್ರುತಿದ್ದುವು.[೧]

ಹೀಗೆ ವಂಶಾವಳಿ ಕಥೆ ಹೆಜ್ಜೆ ಹೆಜ್ಜೆಗೂ ಕುತೂಹಲಕಾರಿಯಾಗಿ ಘಟನೆಗಳ ಸುರುಳಿ ಬಿಚ್ಚುತ್ತ ಸಾಗುತ್ತದೆ. ಇಂಥ ಹೇರಳ ಶಬ್ದ ಚಿತ್ರಗಳನ್ನು ಸೃಷ್ಟಿಸಿದ ಹೆಳವ ಜಾನಪದ ಸಾಹಿತ್ಯದಲ್ಲಿ ಸ್ಥಿರಸ್ಥಾನ ಪಡೆಯುತ್ತಾನೆ. ವಂಶಾವಳಿಯ ಮೂಲಪುರುಷನ ಜೀವನ ದಲ್ಲಿ ಬರುವ ರೋಮಾಂಚಕಾರಿ ಕಥೆಗಳು, ಚಿತ್ರಗಳು, ಸನ್ನಿವೇಶಗಳು ಹೆಳವರ ಹಾಡು ಗಳಲ್ಲಿ ಇಂದಿಗೂ ಜೀವಂತವಾಗಿವೆ. ಅವರ ಜೀವನಕ್ಕೆ ಆಧಾರಸ್ತಂಭವಾಗಿವೆ.

**ಉಪಸಂಹಾರ :**

ಹೆಳವರ ಜೀವನ ವಿಧಾನದ ರೂಪರೇಷೆಗಳನ್ನು ಅತ್ಯಂತ ಸ್ಥೂಲವಾಗಿ ಇಲ್ಲಿ ನಿರೂಪಿಸಲೆತ್ನಿಸಿದ್ದೇನೆ. ಅವರ ಬದುಕಿನ ಕೆಲವು ಮುಖಗಳ ಪರಿಚಯ ಇಲ್ಲಿ ಆಗಿಲ್ಲ.

೧. ಮುಗಳಖೋಡದ ಬಾಲಪ್ಪ ರಾಮಪ್ಪ ಹೆಳವರ ಅವರಿಂದ ಕೇಳಿದ್ದು.

ಹೆಳವರ ಸಮಾಜದಲ್ಲಿಯೂ 'ಬಸವಿ' ಬಿಡುವ ಪದ್ಧತಿ ಪ್ರಚಲಿತವಾಗಿತ್ತು. ಈ ಸಂ
ಯನ್ನು ಹೇಳಲು ಅವರು ಹಿಂಜರಿಯುತ್ತಾರೆ. ತಾಯಿ ತಂದೆಯರು ಯಾವುದೇ
ಅಪೇಕ್ಷೆಗಾಗಿ ತಮ್ಮ ಮಗಳನ್ನು ದೇವರಿಗೆ ಅರ್ಪಿಸುವುದಾಗಿ ಹರಕೆ ಹೊತ್ತು, 'ಬಸ
ಬಿಡುವ ಪದ್ಧತಿ ಕೆಲವು ಸಮಾಜದಲ್ಲಿ ಹಿಂದಿನಿಂದಲೂ ವಿಶೇಷವಾಗಿತ್ತು. ಹೆಳವರ
ಈ ಪದ್ಧತಿ ಇಂದು ಕಡಿಮೆ ಆಗಿದೆ. ಆ ಜೀವನದ ಬಗ್ಗೆ ಅವರು ಜಿಗುಪ್ಸೆ ತಾಳಿದ್ದಾರ

ಮನೆ ಮನೆಯ ವಂಶಾವಳಿ ಇತಿಹಾಸವನ್ನು ರಮ್ಯವಾಗಿ ಹೇಳುವ ಹೆಳವರಿಂದ
ನಮ್ಮ ನಾಡಿನ ಸಾಂಸ್ಕೃತಿಕ ಚರಿತೆಗೆ ಸಲ್ಲುವ ಲಾಭ ಅಮೂಲ್ಯವಾದುದು. ಕೇವಲ
ರಾಜಮಹಾರಾಜರ ಏಳುಬೀಳುಗಳನ್ನು, ರಾಣೀವಾಸದ ರಮಣೀಯ ಜೀವನವನ್ನು
ಇತಿಹಾಸವೆಂದು ಓದಿದ ನಾವು ಅದಕ್ಕೆ ಹಿನ್ನೆಲೆಯಾಗಿ ನಿಂತ ಜನಸಾಮಾನ್ಯರ ಶೌರ್ಯ–
ಸಾಹಸ, ತ್ಯಾಗ, ಬಲಿದಾನಗಳ ಸಮಗ್ರ ಸತ್ಯ ಸಂಗತಿಗಳನ್ನು ಒದಗಿಸುವ ಹೆಳವರ
ಮಹತ್ವವನ್ನು ಮರೆಯುವಂತಿಲ್ಲ.

ಉತ್ತರ ಕರ್ನಾಟಕದ ಪ್ರಮುಖ ಜಾನಪದ ವೃತ್ತಿಕಾರರಾದ ಹೆಳವರ ಆಚಾರ–
ವಿಚಾರ, ಉಢಿಗೆ–ತೊಡಿಗೆ, ನಂಬಿಕೆ ಸಂಪ್ರದಾಯಗಳ ವೈಶಿಷ್ಟ್ಯಗಳನ್ನು ಗಮನಿಸಿದಾಗ
ಡಾ. ಹಾ. ಮಾ. ನಾಯಕ ಅವರ 'ಜಾನಪದ ಅನೇಕರು ತಿಳಿದಿರುವಂತೆ ಬರಿಯ ಹಳ್ಳಿ
ಹಾಡುಗಳ ಕಂತೆಯಲ್ಲ. ಅದು ಯಾವುದೇ ಜನಾಂಗದ ನಿಜವಾದ ಬಿಸಿಯುಸಿರು.
ಸಂಪ್ರದಾಯ ಸೌಂದರ್ಯದ ಸೈಜ ಅಭಿವ್ಯಕ್ತಿ' ಎಂಬ ಅಭಿಪ್ರಾಯ ಅರ್ಥಪೂರ್ಣ
ವೆನಿಸುತ್ತದೆ.

● ●

# ಮೋಡಿಕಾರರು

**ಬಸವರಾಜ ಮಲಶೆಟ್ಟಿ**

ಮೋಡಿ ವಿದ್ಯೆ ವೃತ್ತಿ ಮತ್ತು ಹವ್ಯಾಸಿ ರಂಗಗಳಲ್ಲಿ ಬೆಳೆದುಬಂದಿದೆ. ಈ ಮೋಡಿ ವಿದ್ಯೆಯನ್ನೇ ಉಪಜೀವನಕ್ಕಾಗಿ ಆಶ್ರಯಿಸಿಕೊಂಡು, ಅದನ್ನು ವಂಶಪರಂಪರೆಯಿಂದ ಉಳಿಸಿಕೊಂಡು, ಬೆಳೆಸಿಕೊಂಡು ಬಂದವರೇ ಮೋಡಿಕಾರರು. ಅಂಥ ಜನಾಂಗದ ಒಂದು ಅಭ್ಯಾಸ ಈ ಲೇಖನ. ಮೋಡಿ ವಿದ್ಯೆ ವೃತ್ತಿಯಿಂದ ಹವ್ಯಾಸಕ್ಕೆ ಇಳಿಯಿತೋ ಅಥವಾ ಹವ್ಯಾಸವೇ ಬಲಗೊಂಡು ವೃತ್ತಿಯಾಯಿತೋ ಎಂಬುದನ್ನು ನಿಖರವಾಗಿ ಹೇಳಲು ಸಾಧ್ಯವಾಗದು. ವೃತ್ತಿ ಮೋಡಿಕಾರರಷ್ಟೇ ನಿಷ್ಠೆಯಿಂದ ಹವ್ಯಾಸಿಗರು ಅದನ್ನು ಕಾಪಾಡಿಕೊಂಡು ಬಂದಿದ್ದಾರೆ. ಬಹುಶಃ ರೋಮಾಂಚಕಾರಿ ಮನರಂಜನೆಯಾದ ಮೋಡಿ ವಿದ್ಯೆಯು ಸರ್ವೇಸಾಮಾನ್ಯವಾಗಿ ಒಂದು ಹವ್ಯಾಸವಾಗಿ ಮೊದಲು ಬೆಳೆದಿರಬೇಕು. ಅದನ್ನೇ ಕೆಲವರು ವೃತ್ತಿಯನ್ನಾಗಿ ಅವಲಂಬಿಸಿಕೊಂಡು ಬಂದಿರಬೇಕು. ಇಲ್ಲವೆ, ವೃತ್ತಿಕಾರರ ಈ ವಿದ್ಯೆ ಇತರರನ್ನು ಆಕರ್ಷಿಸಿರಬೇಕು. ನಂತರ ಅದೊಂದು ಹವ್ಯಾಸವಾಗಿ ಬೆಳೆದಿರಬೇಕು. ಇಲ್ಲಿ ಇವೆರಡೂ ಸಾಧ್ಯತೆಗಳನ್ನು ಅಲ್ಲಗಳೆಯಲು ಬರುವುದಿಲ್ಲ. ಆದರೆ ಈ ಎರಡೂ ವರ್ಗಗಳು ತಮ್ಮ ವಿದ್ಯೆಯ ಪ್ರದರ್ಶನಕ್ಕಾಗಿ ಪರಸ್ಪರರನ್ನು ಅವಲಂಬಿಸಿರುವುದು ಒಂದು ಮಹತ್ವದ ಅಂಶವಾಗಿದೆ. ಅನ್ಯತ್ರ ಇಂಥ ಸ್ಪರ್ಧಾತ್ಮಕ ಸಂಬಂಧ ಕಂಡುಬರುವದು ಅಪರೂಪ. ಹವ್ಯಾಸಿಗಳಲ್ಲಿ ಸಾಮಾನ್ಯವಾಗಿ ಎಲ್ಲ ಜಾತಿಯವರು ಇದ್ದರೂ ಕೂಡ ಪಾಂಚಾಳರ ಸಂಖ್ಯೆ ಅಧಿಕವಾಗಿದೆ.

ಕರ್ನಾಟಕದಲ್ಲಿರುವ ಮೋಡಿಕಾರರೆಲ್ಲ ಆಂಧ್ರ ಮೂಲದವರು. ಇವರು ಗೊಲ್ಲ ಜಾತಿಯವರು. ಈ ಜಾತಿಯಲ್ಲಿ ಕಂಚಿಗೊಲ್ಲರು, ಮತ್ತು ಪೆದ್ದೇಟಗೊಲ್ಲರು ಎಂದು ಮುಖ್ಯ ಉಪವರ್ಗಗಳಿವೆ. ಮಸಾಳರೆಂಬುವವರು ಕೂಡ ಇದೇ ಜಾತಿಗೆ ಸೇರಿದವ

ರೆಂದು ಹೇಳಲಾಗುತ್ತದೆ. ಎಷ್ಟೋ ವರ್ಷಗಳ ಹಿಂದೆ ಇವರು ಕನ್ನಡನಾಡಿಗೆ ಬಂದು ನೆಲೆಸಿದ್ದಾರೆ. ಆಂಧ್ರ-ಕರ್ನಾಟಕಗಳ ಗಡಿಪ್ರದೇಶದಲ್ಲಿ ಹೆಚ್ಚಾಗಿ ವಾಸಿಸುತ್ತಾರೆ. ಅವರು ಸಂಚಾರಿಗಳಾದರೂ ತಮ್ಮದೆನ್ನುವ ಒಂದು ನೆಲೆಯನ್ನು ಹೊಂದಿದ್ದಾರೆ. ವರ್ಷ ಪೂರ್ತಿ ಸಂಚಾರದಲ್ಲಿಯೇ ಕಳೆಯುತ್ತಿದ್ದರೂ ಆಗಾಗ ಊರಿಗೆ ಬಂದು ಹೋಗುವ ಪರಿಪಾಠ ಇದೆ. ಕೆಲವರು ಭೂಮಿಯನ್ನೂ ಹೊಂದಿದ್ದಾರೆ. ಆದರೂ ಆರ್ಥಿಕವಾಗಿ ಇವರಾರೂ ಸುಸ್ಥಿತಿಯಲ್ಲಿಲ್ಲ. ಎಷ್ಟೇ ಗಳಿಸಿದರೂ ಅದು ಇವರ ಕೈಯಲ್ಲಿ ನಿಲ್ಲುವುದಿಲ್ಲ. ಬೇಡಿ ಪಡೆದುಕೊಂಡು ಜೀವಿಸುವುದು ಇವರಿಗೆ ಅಭ್ಯಾಸವಾಗಿ ಹೋಗಿದೆ.

ಮೋಡಿಕಾರ ಜನಾಂಗದ ಮೂಲ ಪರಂಪರೆಗಳ ಬಗ್ಗೆ ಪ್ರಚಲಿತವಿರುವ ಆಖ್ಯಾಯಿಕೆಗಳು ರಂಜನೀಯವಾಗಿವೆ. ಒಂದು ತಾಮ್ರ ಶಾಸನದಲ್ಲಿ ಈ ಎರಡು ಸಂಗತಿಗಳು ಉಲ್ಲೇಖಿಸಲ್ಪಟ್ಟಿವೆ.[೧]

೧) ಕಂಚಿಗೊಲ್ಲರು ಕಾಳಮ್ಮನ ಗುಡಿಯಲ್ಲಿ ಮಗನನ್ನುಕೊಂದು ರಕ್ತದಲ್ಲಿ ಕುಳ್ಳು ತೊಯ್ಯಿಸಿ ಮೂರು ರಕ್ತದ ದೀಪ ಉರಿಸಿದರು.

೨) ಒಮ್ಮೆ ಕಾಳಮ್ಮ, ಕಮರೇಶ್ವರ, ಚೌಡೇಶ್ವರ, ಮಾತಂಗಮ್ಮ ಮತ್ತು ಕೃಷ್ಣ ಈ ಐವರು ದೇವತೆಗಳ ರಥಗಳು ಚಲಿಸದೇ ನಿಂತುಬಿಟ್ಟವು. ಕೆಲ ದಿನಗಳ ನಂತರ ಮಣ್ಣಲ್ಲಿ ಹೂತು ಹೋದವು. ಈ ರಥಗಳನ್ನು ಮೇಲೆಕ್ಕೆತ್ತಿ ಮುಂದೆಳೆಯುವ ಕಾರ್ಯ ಯಾರಿಗೂ ಸಾಧ್ಯವಾಗಲಿಲ್ಲ. ಆಗ ಈ ಕಾರ್ಯ ನಿರ್ವಹಿಸಿದವರಿಗೆ ಮೂರು ಕೊಪ್ಪರಿಗೆ ಹೊನ್ನು ಕೊಡುವುದಾಗಿ ಡಂಗುರ ಸಾರಿದರು. ಮಲೆಯಾಳಿ ಅಡವಿಯಲ್ಲಿದ್ದ ಪುನಗಜಂಗಘಂಟ ಮತ್ತು ಹನುಮಂತ ಎಂಬ ಅಣ್ಣ ತಮ್ಮಂದಿರು ರಥ ಎಳೆಯಲು ಹುಲಿಯ ಮೇಲೆ ಹತ್ತಿಬಂದರು. ಜನ ನೋಡುತ್ತಿದ್ದಂತೆಯೇ ಹುಲಿಗಳು ಮಾಯವಾದವು. ಅಂಜನ ಹಾಕಿ ನೋಡಿ ಹುಗಿದು ಹೋಗಿದ್ದ ರಥಗಳನ್ನು ಹುಡುಕಿ ಮೇಲೆ ಬರುವಂತೆ ಮಾಡಿದರು. ಕೋಣ, ಮೇಕೆಗಳನ್ನು ಕೊಂದು ತೇರಿನ ಮೇಲಿಟ್ಟು ಬಂಧನ ಮಾಡಿದರು. ತಮ್ಮ ಗರ್ಭಿಣಿ ಸ್ತ್ರೀಯರನ್ನು ಬಲಿಕೊಟ್ಟು ಗರ್ಭದಲ್ಲಿದ್ದ ಪಿಂಡಗಳನ್ನು ತೆಗೆದು ತೇರಿನ ಕಳಸಕ್ಕೆ ಹಾಕಿದರು. ತೇರಿನಲ್ಲಿದ್ದ ಭೂತಗಳು ಓಡಿಹೋದವು. ಆಗ ತೇರುಗಳು ಮುಂದೆ ಚಲಿಸಿದವು. ತಮ್ಮ ಮಂತ್ರ ಶಕ್ತಿಯಿಂದ ಪಿಂಡಗಳನ್ನು ಗರ್ಭದಲ್ಲಿಟ್ಟು ಗರ್ಭಿಣಿಯರನ್ನು ಪುನಃ ಬದುಕಿಸಿದರು. ಇಷ್ಟೆಲ್ಲ ಆದಮೇಲೆ ಕರಾರಿನಂತೆ

೧. ಮೂಲಶಾಸನ ನನಗೆ ನೋಡಲು ಸಿಗಲಿಲ್ಲ. ಅದರ ನಕಲು ಪ್ರತಿಯೊಂದು ಜಿಗನಳ್ಳಿಯ (ತಾ. ಸಂಡೂರು ಜಿಲ್ಲಾ ಬಳ್ಳಾರಿ) ಮೋಡಿಕಾರ ಹನುಮಂತಪ್ಪನಲ್ಲಿದೆ. ಶಾಸನದ ಕಾಲ ಸ್ಪಷ್ಟವಾಗಿ ಗೊತ್ತಾಗುವದಿಲ್ಲ.

ಅವರಿಗೆ ಮೂರುಕೊಪ್ಪರಿಗೆ ಹೊನ್ನು ಕೊಡದೆ ಬರೀ ಬಿರುದಾವಳಿಗಳನ್ನು ಕೊಟ್ಟು ಕಳಿಸಲಾಯಿತು. ಅಷ್ಟೇಅಲ್ಲದೆ ಆ ಸಹೋದರರನ್ನು ಕಂಬಕ್ಕೆ ಕಟ್ಟಿ, ಬಾಯಲ್ಲಿ ಮಾಂಸ, ಎಂಜಲು ಹಾಕಿ ಜಾತಿಕೆಡಿಸಿದರು. ಹುಲಿಚರ್ಮ, ಕಾಲುಗಗ್ಗರಿ, ಹಗಲು ದೀವಿಗೆ, ಹಗಲುಬಾಸಿಂಗ, ಹನುಮಂತನ ನಿಶಾನಿ. ಗರುಡನನಿಶಾನಿ, ಮುಂತಾದವು ಗಳನ್ನು ಕೊಟ್ಟು ಕಳಿಸಿದರು. ಕುರುಬರು, ಊರಗೊಲ್ಲರು, ಅಕ್ಕಸಾಲಿಗರು, ಒಂಟೆತ್ತಗಾಣಿಗರು, ದೇವಾಂಗದವರು, ಪುತ್ತರಾಸುರರು, ಅತಕಾರರು, ಜಾಂಬ ಮುನಿಗಳು, ಬ್ಯಾಡರು– ಈ ಒಂಬತ್ತು ಜಾತಿಯುವರು ಇವರಿಗೆ ಕಾಣಿಕೆ ಕೊಡ ಬೇಕೆಂದು ನಿರ್ಣಯಿಸಲಾಯಿತು.

ಈ ಕಥೆಯು ಆಧಾರದ ಮೇಲೆ ಹೇಳುವದಾದರೆ ಮೋಡಿಕಾರರು ಮೂಲತಃ ಮಲೆಯಾಳದೇಶದವರು. ಮೋಡಿ, ಜಾದೂ, ಮುಂತಾದ ವಿದ್ಯೆಗೆ ಇಂದಿಗೂ "ಮಲೆ ಯಾಳಿ ವಿದ್ಯೆ" ಎಂದು ಕರೆಯುವದನ್ನು ಇಲ್ಲಿ ಗಮನಿಸಬೇಕು.

ಮೋಡಿಕಾರರು ಹೇಳಿಕೊಳ್ಳುವ ಇನ್ನೊಂದು ಕಥೆ ಹೀಗಿದೆ– ಮೊದಲು ಗೊಲ್ಲ ರಲ್ಲಿ ಒಂಬತ್ತು ಪಣದವರು ಮತ್ತು ಹದಿನೆಂಟು ಪಣದವರು ಎಂದು ಎರಡು ಪಂಗಡ ಗಳಿದ್ದವು. ಒಮ್ಮೆ ಅವೆರಡರಲ್ಲಿ ಜಗಳವಾಗಿ ಹದಿನೆಂಟು ಪಣದವರು ಒಂಭತ್ತು ಪಣದವರನ್ನು ಹೊಡೆದು ಓಡಿಸಿದರು. ಹೀಗೆ ಓಡಿಹೋದ ಒಂಭತ್ತು ಪಣದವರಲ್ಲಿ ಒಬ್ಬ ಹುಡುಗನಿದ್ದ. ಅವನು ಮಾಟಮಂತ್ರಮಾಡುವ ಒಬ್ಬ ಆಚಾರಿಯಲ್ಲಿ ಚಾಕರಿ ಕೆಲಸಕ್ಕೆ ಸೇರಿಕೊಂಡ. ದಿನಾಲೂ ಕಾಡಿಗೆ ಹೋಗಿ ಆಕಳುಗಳನ್ನು ಮೇಯಿಸಿಕೊಂಡು ಬರುವದು ಅವನ ಕೆಲಸವಾಗಿತ್ತು. ಅವನು ಹೋಗುತ್ತಿದ್ದ ಕಾಡಿನಲ್ಲಿ ಹಾಲು ಮತ್ತು ನೀರಿನ ಚಿಲುಮೆಗಳೆರಡು ಇದ್ದವು. ಒಂದು ದಿನ ಆ ಕಾಡಿನಲ್ಲಿದ್ದ ಹುಲಿಯೊಂದು ಇವನನ್ನು ಬೆರಗುಗೊಳಿಸಲು ಇಚ್ಛಿಸಿ ಒಂದು ತರದ ಸೊಪ್ಪನ್ನು ತಂದು ಆ ಚಿಲುಮೆ ಗಳಲ್ಲಿ ಒಂಡಿತು. ಅವು ಬತ್ತಿದವು. ಹುಲಿ ಆ ಸೊಪ್ಪನ್ನು ದಂಡೆಯ ಮೇಲಿಟ್ಟು ಹೋಯಿತು. ಕೆಲವು ಸಮಯದ ಮೇಲೆ ಅಲ್ಲಿಗೆ ಬಂದ ಹುಡುಗನು ಚಿಲುಮೆಗಳು ಬತ್ತಿರುವುದನ್ನು ಕಂಡು ಆಶ್ಚರ್ಯ ಚಕಿತನಾದ. ಆಟಆಡುತ್ತ ದಂಡೆಯಮೇಲಿನ ಸೊಪ್ಪನ್ನು ಮೇಲೆತ್ತಿದ. ಚಿಲುಮೆಗಳು ಚಿಮ್ಮತೊಡಗಿದವು. ಅದೇ ಸೊಪ್ಪನ್ನು ಕೆಳಗೆ ಇಟ್ಟ. ಚಿಲುಮೆಗಳು ಬತ್ತಿ ಹೋದವು. ಸಂಜೆಗೆ ಮನೆಗೆ ಹೋಗಿ ಈ ಸಂಗತಿಯನ್ನು ತನ್ನ ಯಜಮಾನ ಆಚಾರಿಗೆ ಹೇಳಿದ. ಮರುದಿನ ಆಚಾರಿ ಬಂದು ನೋಡಿದ, ತನಗೆ ಈ ಸಂಗತಿ ತಿಳಿಸಿ ಉಪಕರಿಸಿದುದಕ್ಕಾಗಿ ಪ್ರತಿಯಾಗಿ ಆ ಆಚಾರಿ ಹುಡುಗನಿಗೆ ತನ್ನಲ್ಲಿದ್ದ ಮಾಟಮಂತ್ರದ ವಿದ್ಯೆಯನ್ನೆಲ್ಲ ಕಲಿಸಿದನು. ಇಷ್ಟೇ ಅಲ್ಲದೆ ತನ್ನ ಇಬ್ಬರು ಹೆಣ್ಣುಮಕ್ಕಳನ್ನು ಕೊಟ್ಟು ಲಗ್ನ ಮಾಡಿದನು. ಹುಡುಗನು ವಿದ್ಯೆ ಯನ್ನು ಪ್ರದರ್ಶಿಸುತ್ತ ಸುಖವಾಗಿದ್ದನು. ಇತ್ತ ಹದಿನೆಂಟು ಪಣದವರು ಒಂಭತ್ತು ಪಣದವರ ಕೃಷ್ಣನ ರಥವನ್ನು ತುಳಿದು ಕೆಳಕ್ಕಿಳಿಸಿದ್ದರು. ಈ ರಥವನ್ನು ಮೇಲಕ್ಕೆತ್ತಿ

ದವರಿಗೆ ಬೇಡಿದ್ದನ್ನು ಕೊಡುವುದಾಗಿ ಗೊಲ್ಲರ ರಾಜನಾದ ಯಯಾತಿ ಡಂಗುರ ಸಾರಿಸಿದ. ಆಚಾರಿಯಿಂದ ವಿದ್ಯೆ ಕಲಿತಿದ್ದ ಗೊಲ್ಲರ ಹುಡುಗನು ಹೋಗಿ ಕೃಷ್ಣನ ರಥವನ್ನು ಮೇಲೆತ್ತಿದ. ಕರಾರಿನ ಪ್ರಕಾರ ಏನುಬೇಕಾದರೂ ಕೇಳು ಎಂದು ರಾಜನು ಹೇಳಿದ. ಅದಕ್ಕೆ ಗೊಲ್ಲರ ಹುಡುಗನು "ನನಗೆ ಹೆಚ್ಚಿನದೇನೂ ಬೇಡ. ಉಪ್ಪು ಸಪ್ಪಗಾಗುವವರೆಗೆ, ಕಬ್ಬು ವಿಷವಾಗುವವರೆಗೆ, ಸೂರ್ಯ ಚಂದ್ರರು ಇರುವವರೆಗೆ ನಾನು ದೇಶದಮೇಲೆ ನನ್ನ ವಿದ್ಯೆಯ ಪ್ರದರ್ಶನ ಮಾಡುವಂತೆ ಜಯರೇಖೆಯನ್ನು ಬರೆದುಕೊಡು" ಎಂದು ಕೇಳಿದನು. ಅದರಂತೆ ಯಯಾತಿರಾಜ ಜಯರೇಖೆಯನ್ನು ಬರೆದುಕೊಟ್ಟ. ಅದು ಇಂದಿಗೂ ಮೋಡಿಕಾರರಲ್ಲಿದೆ.

ಮೋಡಿ ವಿದ್ಯೆಯು ಮೋಡಿಕಾರರಿಗೆ ಪಂಚಾಳರಿತ್ತ ಕೊಡುಗೆ ಎಂಬ ಅಭಿಪ್ರಾಯ ಮೂಡಿಸುವಂಥ ಮತ್ತೊಂದು ಹೇಳಿಕೆ ಈ ರೀತಿಯಾಗಿದೆ. ಒಮ್ಮೆ ಪಂಚಾಳರ ಅಧಿದೇವತೆಯಾದ ಕಂಚಿ ಕಾಮಾಕ್ಷಿಯ ತೇರು ಚಲಿಸದೆ ನಿಂತು ಬಿಟ್ಟಿತು. ದೇವಿ ಪೂಜಾರಿಯ ಮೈ ಮೇಲೆ ಬಂದು ಐದುಜನ ಗರ್ಭಿಣಿಯರನ್ನು ಬಲಿಕೊಟ್ಟರೆ ತೇರು ಚಲಿಸುವದೆಂದು ಹೇಳಿದಳು. ಬಲಿಯಾಗಲು ಯಾರೂ ಮುಂದೆ ಬರಲಿಲ್ಲ. ತೇರು ಹಾಗೇ ನಿಂತು ಬಿಟ್ಟಿತು. ಆಗ ಮೋಡಿಕಾರರು ತಮ್ಮ ಐದುಜನ ಗರ್ಭಿಣಿ ಸ್ತ್ರೀಯರನ್ನು ಬಲಿಕೊಟ್ಟು ತೇರು ಎಳೆದರು. ಅಲ್ಲಿಯೇ ಇದ್ದ ಕಾಳಿಕಾ ಭಕ್ತನೊಬ್ಬ ಬಲಿಯಾದ ಗರ್ಭಿಣಿಯರನ್ನೆಲ್ಲ ಪುನಃ ಬದುಕಿಸಿದ. ಅವರ ನಿಷ್ಠೆ ತ್ಯಾಗಗಳಿಗೆ ಮನಸೋತು ತನಗೆ ಗೊತ್ತಿದ್ದ ಮೋಡಿ ವಿದ್ಯೆಯನ್ನೆಲ್ಲ ಅವರಿಗೆ ಕಲಿಸಿದ. ಆಮೇಲೆ ಅವರು ಆ ವಿದ್ಯೆಯನ್ನು ಪ್ರದರ್ಶಿಸುತ್ತ ನಾಡಿನಲ್ಲಿ ಸಂಚರಿಸ ತೊಡಗಿದರು.

ಮೇಲಿನ ಮೂರೂ ಕಥೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಕೆಲವು ಮಹತ್ವದ ಅಂಶಗಳು ಸ್ಪಷ್ಟವಾಗುತ್ತವೆ. ಚಲಿಸದೇ ನಿಂತ (ಮತ್ತು ಹುಗಿದುಹೋದ) ತೇರುಗಳನ್ನು ಎಳೆಯಲು ಮೋಡಿಕಾರರು ಮಾಡಿದ ಬಲಿದಾನ ಮೂರು ಕಥೆಗಳಲ್ಲಿಯ ಸಾಮಾನ್ಯ ಅಂಶವಾಗಿದೆ. ಕೊನೆಯ ಎರಡು ಹೇಳಿಕೆಗಳ ಪ್ರಕಾರ ಮೋಡಿ ವಿದ್ಯೆ ಅವರಿಗೆ ಇತರರಿಂದ ಪ್ರಾಪ್ತವಾದಂಥದು. ಈ ಮಾತು ವಿಚಾರರ್ಹವಾಗಿದೆ. ಒಂದು ಕಥೆಯಲ್ಲಿ (ಬ್ರಾಹ್ಮಣ) ಆಚಾರಿಯ ಮೂಲಕ ಈ ವಿದ್ಯೆ ಪ್ರಾಪ್ತವಾದುದಾಗಿ ಹೇಳಿದ್ದರೆ ಇನ್ನೊಂದು ಕಥೆಯಲ್ಲಿ ಪಂಚಾಳರ ಕಾಳಿಭಕ್ತನೊಬ್ಬನಿಂದ ಇದು ಉಪದೇಶಿಸಲ್ಪಟ್ಟುದಾಗಿ ಹೇಳಿದೆ. ಈ ಎರಡು ಹೇಳಿಕೆಗಳು ಬಹುಶಃ ಆಯಾ ಜಾತಿಯವರು ತಮ್ಮ ಜಾತಿಯ ಪ್ರತಿಷ್ಠೆ ಬೆಳೆಸಿಕೊಳ್ಳಲು ಹುಟ್ಟಿಸಿರಬಹುದಾದ ಸಾಧ್ಯತೆಯಿದೆ. ಪಂಚಾಳರಿಗೆ ಈ ವಿದ್ಯೆಕರಗತವಾದಂತಿದೆ. ಹವ್ಯಾಸಿ ಮೋಡಿಕಾರರಲ್ಲಿ ಪಂಚಾಳರ ಸಂಖ್ಯೆಯೇ ಜಾಸ್ತಿಯಾಗಿದೆ. ಕೆಲವುಕಡೆ ವೃತ್ತಿ ಮೋಡಿಕಾರರು ಪಂಚಾಳರನ್ನು ಗುರುಗಳೆಂದು ಗೌರವಿಸುತ್ತಾರೆ. ಅವರ ಅಪ್ಪಣೆಯಿಲ್ಲದೆ ಪ್ರದರ್ಶನಕ್ಕಿಳಿಯುವದಿಲ್ಲ. ಇದೆಲ್ಲ ಪಂಚಾಳ

ರಿಂದಲೇ ಈ ವಿದ್ಯೆ ಮೋಡಿಕಾರರಿಗೆ ಪ್ರಾಪ್ತವಾಯಿತೆಂಬುದನ್ನು ಸಮರ್ಥಿಸುವಂತಿದೆ. ಆದರೂ ಯಾವುದನ್ನೂ ನಿಖರವಾಗಿ ಹೇಳಲು ಸಾಧ್ಯವಾಗದು.

ವೃತ್ತಿ ಮೋಡಿಕಾರರು ಸಂಚಾರಿ ಜೀವಿಗಳೆಂದು ಈ ಮೊದಲೇ ಹೇಳಿದೆ. ಆದರೆ ಇವರ ಸಂಚಾರಕ್ಕೂ ಇತಿ ಮಿತಿಗಳಿವೆ. ಒಂದೊಂದು ಮನೆತನದವರು ಅಷ್ಟಷ್ಟು ಪ್ರದೇಶವನ್ನು (ಸುಮಾರು ೩, ೪ ತಾಲೂಕುಗಳನ್ನು) ಹಂಚಿಕೊಂಡಿರುತ್ತಾರೆ. ಆ ಭಾಗ ದಲ್ಲಿ ಅವರಷ್ಟೆ ಪ್ರದರ್ಶನ ನೀಡಬಲ್ಲರು. ಮತ್ತೊಬ್ಬರಿಗೆ ಸೇರಿದ ಪ್ರದೇಶದಲ್ಲಿ ಪ್ರವೇಶಿಸಿ ವಿದ್ಯೆ ಪ್ರದರ್ಶಿಸುವ ಅಧಿಕಾರ ಅವರಿಗಿಲ್ಲ. ಒಂದು ವೇಳೆ ಪ್ರದರ್ಶನ ನೀಡಲೇ ಬೇಕಾದಾಗ ಸದರಿ ಪ್ರದೇಶ ಯಾರಿಗೆ ಸೇರಿರುವದೋ ಅವರ ಅಪ್ಪಣೆ ಪಡೆದು ಕೊಂಡೇ ಆಟಕ್ಕಿಳಿಯಲಾಗುವದು. ಸುಮ್ಮನೇ ಭಿಕ್ಷೆಬೇಡುತ್ತ, ಹಾವುಗಳನ್ನು ಆಡಿಸುತ್ತಾ ತಿರುಗಾಡಲು ಯಾವ ಅಭ್ಯಂತರವೂ ಇಲ್ಲ.

ಇವರು ಆಂಧ್ರದಿಂದ ಬಂದವರಾದುದರಿಂದ ಇವರ ಮಾತೃಭಾಷೆ ತೆಲುಗು. ತಮ್ಮ ತಮ್ಮಲ್ಲಿ, ಮನೆಯಲ್ಲಿ ತೆಲುಗಿನಲ್ಲಿಯೇ ಮಾತಾಡುತ್ತಾರೆ. ವ್ಯವಹಾರಕ್ಕೆ ಇತರರೊಂದಿಗೆ ಕನ್ನಡ ಮಾತನಾಡುತ್ತಾರೆ. ಬಹಳದಿನಗಳಿಂದ ಮಾತೃಭೂಮಿಯ ಸಂಪರ್ಕವಿಲ್ಲದೆ ದೂರದಲ್ಲಿ ವಾಸಿಸುತ್ತಿರುವ ಇವರ ಮಾತೃಭಾಷೆ ಹಲವಾರು ವೈಲಕ್ಷಣ್ಯ ಗಳಿಂದ ಕೂಡಿದೆ. ಇವರು ಮಾತನಾಡುವ ತೆಲುಗು ಸಧ್ಯದ ಸ್ಟ್ಯಾಂಡರ್ಡ್ ತೆಲುಗಿಗಿಂತ ಅಲ್ಪ ಸ್ವಲ್ಪ ಭಿನ್ನವಾಗಿ, ಒಂದು ಉಪಭಾಷೆಯಾಗಿದೆಯೆಂದು ಹೇಳಬಹುದು. ಭಾಷಾ ಶಾಸ್ತ್ರದ ದೃಷ್ಟಿಯಿಂದ ಇದು ಅಧ್ಯಯನ ಯೋಗ್ಯವಾಗಿದೆ.

ಇವರ ಮದುವೆ ತೀರಾ ಸರಳ. ಸ್ವಜಾತಿಯವರು ದೂರದ ಊರುಗಳಲ್ಲಿ ರುತ್ತಿದ್ದರೂ. ಹುಡುಕಿ ತೆಗೆದು ವಧುವರರನ್ನು ಹೊಂದಿಸುತ್ತಾರೆ. ಇವರ ಮಠದ ಗುರುಗಳು ಪುರೋಹಿತರಾಗಿ ಕೆಲಸ ನಿರ್ವಹಿಸುತ್ತಾರೆ. ಹೇಳಿಕೊಳ್ಳುವಂಥ ವಿಶೇಷ ವಿಧಿ–ವಿಧಾನಗಳೇನೂ ಇಲ್ಲ. ವರನು ಹೆಣ್ಣಿಗೆ ತಾಳಿಕಟ್ಟುವುದೊಂದೇ ಮುಖ್ಯ ಕ್ರಿಯೆ. ಅದಷ್ಟಾದರೆ ಮದುವೆ ಮುಗಿದಂತೆಯೇ. ಮದುವೆ ಸಾಮಾನ್ಯವಾಗಿ ಹೆಣ್ಣಿನ ಮನೆ ಯಲ್ಲಿ ನಡೆಯುತ್ತದೆ. ಗಂಡಿನವರು ಹೆಣ್ಣಿನವರಿಗೆ ತೆರವು ಕೊಡುವ ಪದ್ಧತಿ ಇವರಲ್ಲಿದೆ. ಅದಕ್ಕೆ 'ಸುಲ್ಕ' ಎಂದು ಹೆಸರು. ಮದುವೆ ಹೆಣ್ಣಿನ ಮನೆಯಲ್ಲಿ ನಡೆದರೂ ಒಂದು ಊಟವನ್ನು ಗಂಡಿನವರು ಕೊಡಬೇಕು. ಆ ಊಟದ ಮದ್ಯ, ಮಾಂಸದ ಖರ್ಚು ಅವರದೇ. ಅಪರೂಪಕ್ಕೆ ಅನ್ಯಜಾತಿಯ ಹೆಣ್ಣನ್ನು ತರುವುದೂ ಉಂಟು. ಆಗ ತಮ್ಮ ಜಾತಿಯ ದೈವಕ್ಕೆ ದಂಡತೆತ್ತಿ ಆ ಹೆಣ್ಣನ್ನು ತಮ್ಮ ಜಾತಿಗೆ ಸೇರಿಸಿಕೊಳ್ಳಲಾಗು ತ್ತದೆ.

ಸತ್ತಾಗ ಇವರು ಆಚರಿಸುವ ವಿಧಿಗಳಿಗೂ ಈ ಪ್ರದೇಶದ ಇತರ ಸಮಾನ ಜಾತಿಯವರು ಆಚರಿಸುವ ವಿಧಿಗೂ ಹೆಚ್ಚಿನ ವ್ಯತ್ಯಾಸವಿಲ್ಲ. ಮದುವೆಯಲ್ಲಿ ತಮ್ಮ

ಗುರುಗಳನ್ನು ಕರೆಯುವ ಮೋಡಿಕಾರರು ಸತ್ತಾಗ ಮಾತ್ರ ಬ್ರಾಹ್ಮಣರನ್ನು ಕರ
ಮಂತ್ರ ಹೇಳಿಸುತ್ತಾರೆ. ಹೆಣದ ಮುಖಕ್ಕೆಲ್ಲ ಕುಂಕುಮ ಹಚ್ಚಿ, ಚಟ್ಟದಮೆ
ಮಲಗಿಸಿ, ಚುರಮುರಿ ಹಾರಿಸುತ್ತ ಸ್ಮಶಾನಕ್ಕೆ ಒಯ್ದು ಹುಗಿಯುತ್ತಾರೆ.

ಇವರು ಗೊಲ್ಲರಾದುದರಿಂದ ಶ್ರೀಕೃಷ್ಣನ ಬಗ್ಗೆ ಇವರ ಅಭಿಮಾನ, ಭಕ್ತಿ ಹೆಚ್ಚು
ಈ ಭಾಗದ ಪ್ರಸಿದ್ಧ ವೈಷ್ಣವ ದೇವತೆಯಾದ ತಿರುಪತಿ ತಿಮ್ಮಪ್ಪನಿಗೆ ನಡೆಮುಕೊಳ
ತ್ತಾರೆ. ಆದರೆ ತಿಮ್ಮಪ್ಪ ಇವರ ಆರಾಧ್ಯ ದೇವತೆಯಲ್ಲ, "ಮಲ್ಲಾಡಿ ಚೌಡಿ" ಎಂಬ
ಹೆಣ್ಣುದೇವರು ಇವರ ಆರಾಧ್ಯಮೂರ್ತಿ. ಈ ದೇವತೆಯ ಒಂದು ಅಂಗವಾಗಿ ಚೌಡಿ
ಬಳಿಯೆಂಬುದೊಂದು ಇರುತ್ತದೆ. ಇದು ಮೋಡಿ ಆಟದ ಕೇಂದ್ರವಸ್ತು. ಅದಿಲ್ಲದ
ಇವರ ಆಟ ಸಾಗದು. ಇವರ ಹೆಸರುಗಳು ಕೂಡ ಹೆಚ್ಚಾಗಿ ವೈಷ್ಣವಪರ, ರಾಮ,
ಕೃಷ್ಣ, ಹನುಮಂತ, ತಿಮ್ಮ, ಲಕ್ಷ್ಮಣ ಇತ್ಯಾದಿ. ಈ ಹೆಸರುಗಳ ಮುಂದೆ ಅಪ್ಪ,
ಅಯ್ಯ ಸೇರಿ ಗಂಡಸರ ಹೆಸರುಗಳಾಗುತ್ತವೆ. ಅಮ್ಮ, ಅವ್ವ ಸೇರಿ ಹೆಂಗಸರ ಹೆಸರು
ಗಳಾಗುತ್ತವೆ.

ಮೇಲೆ ಹೇಳಿದ ಕುರುಬರು, ಊರಗೊಲ್ಲರು, ಅಕ್ಕಸಾಲಿಗರು, ಒಂಟೆತ್ತ
ಗಾಣಿಗರು, ದೇವಾಂಗದವರು, ಮುತ್ತರಾಸುರರು, ಅತಕಾರರು, ಜಾಂಬಮುನಿಗಳು,
ಬ್ಯಾಡರು– ಒಂಬತ್ತು ಜಾತಿಯವರಿಂದ ಮೋಡಿಕಾರರು ಹಕ್ಕಿನ ಕಾಣಿಕೆ ಪಡೆಯು
ತ್ತಾರೆ. ಸದರೀ ಜಾತಿಯವರ ಮನೆಯಲ್ಲಿ ಮದುವೆ, ಮುಂಜಿ, ಕಾರ್ಯ, ಪ್ರಸ್ಥಾ
ಏನಾದರೂ ಜರುಗಿದಾಗ ತಪ್ಪದೇ ಹೋಗುತ್ತಾರೆ. ಲಗ್ನದಲ್ಲಿ ತಮ್ಮ ನಿಶಾನಿ, ಗಗ್ಗರಿ
ಗಳನ್ನು ವಧುವರರು ಕುಳಿತ ಚಕ್ಕಡಿಗೆ ಅಲಂಕಾರಕ್ಕಾಗಿ ಹಾಕುತ್ತಾರೆ.

ಇವರ ಆಟಕ್ಕೆ ಬಾಣತಿ ತಲೆ. ಬಾಣತಿ ಕೈ ಅವಶ್ಯವಾಗಿ ಬೇಕೇಬೇಕು. ಅವುಗಳನ್ನು
ತೆಗೆದುಕೊಂಡು ಬರುವ ವಿಧಾನ ಭಯಂಕರವಾದುದು. ಸತ್ತ ಬಾಣತಿಯನ್ನು ಹುಗಿದ
ಸ್ಥಳವನ್ನು ಮೊದಲೇ ಗುರುತು ಹಚ್ಚುತ್ತಾರೆ. ಅಮವಾಸ್ಯೆಯ ಮಧ್ಯರಾತ್ರಿ ಹುಟ್ಟು
ಡುಗೆಯಲ್ಲಿ ಸ್ಮಶಾನಕ್ಕೆ ಹೋಗುತ್ತಾರೆ. ಆಗ ಹೇಳಲಾಗುವ ವಿಶಿಷ್ಟ ಸಿದ್ಧಿ ಮಂತ್ರಕ್ಕೆ
"ಅಗರ್‌ಕೋಚ್" ಎಂದು ಹೆಸರು. ಆ ಮಂತ್ರ ಪಠಿಸುತ್ತಾ ಹೆಣಹುಗಿದಲ್ಲಿಗೆ
ಬರುವರು. ನಿರಂತರವಾಗಿ ಮಂತ್ರ ಹೇಳುತ್ತಿರುವಂತೆಯೇ ಹೆಣದ ಮೇಲೆ ಮುಚ್ಚಿದ
ಮಣ್ಣು ಚಕ್ರಾಕಾರವಾಗಿ ಹೊರಕ್ಕೆ ಚಿಮ್ಮ ತೊಡಗುವದು. ಮಣ್ಣೆಲ್ಲ ತೀರಿದ ಮೇಲೆ
ಹೆಣ ತಾನೇ ಮೇಲೆ ಚಾಚಿ ಕೈ ನೀಡುವದು. ತಲೆ ಎತ್ತುವದು. ಅವೆರಡನ್ನು ಕತ್ತರಿಸಿ
ಕೊಂಡು ಪುನಃ ಮಂತ್ರ ಹೇಳಲು ಪ್ರಾರಂಭಿಸಿದಾಗ ಮಣ್ಣು ತನ್ನಷ್ಟಕ್ಕೆ ತಾನೇ
ಮೊದಲಿನ ಕುಣಿ ಸೇರುವದು. ಇತ್ತೀತ್ತಲಾಗಿ ಹೀಗಾಗಬಾರದೆಂದು ಬಾಣಂತಿಯರನ್ನು
ಸುಡುವುದೇ ಹೆಚ್ಚು.

೬) ರಂಗದಲ್ಲಿಟ್ಟಿದ್ದ ನಾಣ್ಯ ಮಾಯವಾಗುತ್ತದೆ. ಅದು ದೂರದ ಯಾವುದೋ ಬಾವಿ, ಕೆರೆ, ನದಿಯಲ್ಲಿರುವ ಕಪ್ಪೆಯ ಹೊಟ್ಟೆಯಲ್ಲಿರುವುದನ್ನು ಪತ್ತೆಹಚ್ಚಿ ತರುವದು.

೭) ಕಾದ ಕಬ್ಬಿಣದ ತುಂಡನ್ನು ಬಾಯಲ್ಲಿ ಕಚ್ಚುವದು.

ಹೀಗೆ ಸಾಗುವ ಆಟ ಒಮ್ಮೊಮ್ಮೆ ಎರಡು ಮೂರು ದಿನಗಳವರೆಗೂ ನಡೆಯುತ್ತದೆ. ಯಾರೂ ಸೋಲುವದಿಲ್ಲ. ಏನೇ ಇದ್ದರೂ ವೃತ್ತಿ ಮೋಡಿಕಾರರು ವಿನಯಶಾಲಿಗಳು. ಪ್ರತಿಸ್ಪರ್ಧಿಯಲ್ಲಿ ವಿನಂತಿಸಿಕೊಂಡು ಅನುಕೂಲವಾಗುವಂತೆ ಬೇಡಿಕೊಳ್ಳುತ್ತಾರೆ. ಅವರದೊಂದೇ ಮಾತು– "ನಾವು ಸೋತರೂ ನಿಮ್ಮ ಮಕ್ಕಳೇ, ಗೆದ್ದರೂ ನಿಮ್ಮ ಮಕ್ಕಳೇ…". ಗೆದ್ದಾಗ ಅವರೆಂದೂ ಅಹಂಕಾರದಿಂದ ಬೀಗುವದಿಲ್ಲ. ಸಂಚಾರಿಗಳಾಗಿರುವ, ಬೇಡಿ ಪಡೆದುಕೊಂಡೇ ಜೀವಿಸುವ ಅವರ ಈ ವಿನಯ, ದೈನ್ಯ ಸಹಜವಾದುದೇ.

● ●

# ದುರಗ ಮುರಗಿಯವರು

ಚೆನ್ನಣ್ಣ ವಾಲೀಕಾರ

**ಪೂರ್ವೇತಿಹಾಸ :**

ಶಿಷ್ಟ ಸಾಹಿತ್ಯ ಮೇಲ್ವರ್ಗದವರದಾದರೆ ಜನಪದ ಸಾಹಿತ್ಯ ಕೆಳವರ್ಗದವರದು ದಲಿತರದು. ಮೇಲ್ಜನರು ದೇವರು ಧರ್ಮಗಳ ಬಗ್ಗೆ ಆಚರಣೆ ಮಾಡುವ ಎತ್ತರದ ಮಟ್ಟ ಕೆಳವರ್ಗದವರಿಗಾಗದಾದಾಗ ಅದು ಶಕ್ತ್ಯಾರಾಧನೆಗಿಳಿದು, ಮುಂದದು ಭಿಕ್ಷಾಟನೆ ಸ್ವರೂಪ ತಾಳಿತು. ಶರಣ ಸಂಪ್ರದಾಯದ ಪ್ರಕಾರ ಸಾರುವಯ್ಯನವರು ಧರ್ಮತತ್ವಗಳ ಪ್ರಚಾರ ಕೈಕೊಳ್ಳುವಂತೆ ಕೆಳವರ್ಗದ ಜನ ತಾವು ನಂಬಿದ್ದ ಶಕ್ತಿ ದೇವತೆಯ ಪ್ರಚಾರವನ್ನು ಮಾಡುತ್ತಿರುವುದು ನಾವು ದುರಗಮುರಗಿಯರಲ್ಲಿ ಕಾಣ ಬಹುದಾಗಿದೆ.

ದುರಗ ಮುರಗಿಯರೆಂದರೆ ದುರ್ಗಮ್ಮ ಮುರ್ಗಮ್ಮನ ಆರಾಧಕರು. ಇಲ್ಲಿ ದುರಗ ಅಂದರೆ ದುರ್ಗಾದೇವಿ ಮುರಗಮ್ಮ ಅಂದರೆ ಪಾರ್ವತಿ ಎಂದು ಅರ್ಥ ಹೊರಡುವುದು. ಆದರೆ ಅದು ಮೊದಲು ದುರಗ ಮರಗಿ ಎಂದಿರಬೇಕು. ಮುಂದೆ ದುವಿನ ಪ್ರಭಾವ ಮದ ಮೇಲಾಗಿ ಅದು ಕೂಡ ಮು ಆಗಿ ಮುರಗಿ ಆಗಿರಬೇಕೆಂಬ ಊಹೆ ಬರುವುದು. ಹೇಗಿದ್ದರೂ ಅವೆರಡೂ ಪದಗಳ ಅರ್ಥ ಶಕ್ತಿದೇವತೆಯಾದ ಪಾರ್ವತಿ ಎಂದೇ ಆಗುವುದು.

ದುರಗ ಮುರಗಿಯವರ ಆಚಾರ ವಿಚಾರ ಆಹಾರ ವಿಹಾರ ರೂಢಿ ಸಂಪ್ರದಾಯ, ಇರುವಿಕೆಯನ್ನು ನೋಡಿದರೆ ಇವರು ಭಿಲ್ಲ, ಗೊಂಡ ಜಾತಿಯವರಿಂದ ಬಂದ ದ್ರಾವಿಡ ಜನಾಂಗಕ್ಕೆ ಸೇರಿದವರಿರಬೇಕೆನಿಸುವದು. ಇವರು ಮೂಲತಃ ಅಲೆಮಾರಿ ಜನಾಂಗ [illegible] ಶಾಸ್ತ್ರದ ಅಧ್ಯಯನಕೆ ಯೋಗ್ಯವಾದುದು.

ದುರಗ ಮುರಗಿಯವರು ಉತ್ತರದಿಂದ ಬಂದವರೆಂದು ಹೇಳುತ್ತಾರೆ. ಆದರೆ ಇದು ಅಷ್ಟು ಸಮಂಜಸವಾಗಿ ಕಾಣುವದಿಲ್ಲ. ಶಕ್ತಿಪೂಜಕರಾದ ದ್ರಾವಿಡರ ಗುಂಪಿಗೆ ದುರಗ ಮುರಗಿಯವರು ಸೇರುವುದರಿಂದ ಇವರು ದಕ್ಷಿಣದವರೇ ಆಗಿರಬೇಕು. ಆದರೆ ಇವರು ಕುರುಬ ಜನಾಂಗಕ್ಕೆ ಸೇರಿದವರೆಂದು ಹೇಳುವರು. ಕುರುಬರಲ್ಲಿ ಎರಡು ಪ್ರಕಾರ. ಒಂದು ಊರಕುರುಬರು. ಇನ್ನೊಂದು ಅಡವಿ ಕುರುಬರು. ಅಡವಿ ಕುರುಬರು ಕುರಿಗಳ ಜೊತೆಗೆ ದನಗಳನ್ನು ಕಾಯುತ್ತಿದ್ದರು. ಮುಂದೆ ಈ ಜನಾಂಗ ದಲ್ಲಿ ಶಾಸ್ತ್ರ ಹೇಳುವವರು, ಕವಲೆತ್ತಿನವರು, ಬಾಳ ಸಂತರು, ದುರಗ ಮುರಗಿಯವರು ಜೀವನೋಪಾಯಕ್ಕಾಗಿ ಪಂಗಡ ಪಂಗಡಗಳಾಗಿ ಬೇರೆ ಬೇರೆ ವೃತ್ತಿಗಳನ್ನು ಕೈಕೊಂಡ ರೆಂದು ಆ ಜನರಿಗೆ ವಿಚಾರಿಸಿದಾಗ ತಿಳಿದು ಬಂತು. ಇನ್ನೂ ಒಂದು ಅಭಿಪ್ರಾಯ ಈ ಜನಾಂಗದ ಬಗ್ಗೆ ಇದೆ. ಶಾಕ್ಯಮತ ಪ್ರಚಾರಕ್ಕೆ ಬಂದ ಮೇಲೆ ವಾಮಾಚಾರ ಹೆಚ್ಚಾಯಿತು. ಕೆಳವರ್ಗದ ಜನ ದುರ್ಗಮ್ಮ ಮರ್ಗಮ್ಮ ದೇವತೆಯನ್ನು ಬುಟ್ಟಿ ಯಲ್ಲಿಟ್ಟುಕೊಂಡು ಬೀದಿ ಬೀದಿಗೆ ಹೋಗಿ ಈ ದೇವತೆ ಶಾಪ ಕೊಡುವವಳೆಂದು ಭಯ ಹಾಕಿ ಜೋಳ, ಬೇಳೆ, ಬಟ್ಟೆ ಪಡೆದು ಹೊಟ್ಟೆ ಹೊರೆಯುವ ಕೆಲಸ ಈ ಜನ ಮಾಡುತ್ತಿದ್ದರೆಂದು ಹೇಳುವರು.

## ವಾಸಿಸುವ ಪ್ರದೇಶ :

ಈ ಜನಾಂಗ ಅಲೆಮಾರಿಗಳಾದುದರಿಂದ ಶಾಶ್ವತವಾಗಿ ಒಂದು ಊರಿನಲ್ಲಿ ಇರುವದಿಲ್ಲ. ಹೆಚ್ಚಾಗಿ ಈ ಜನ ಊರಹೊರಗಿನ ಬಯಲಿನಲ್ಲಿ ಗುಡಿಸಲುಗಳನ್ನು ಹಾಕಿಕೊಂಡು ಇರುವುದು. ಇಲ್ಲವೆ ಊರ ಹೊರಗಿನ ಗುಡಿಗಳಲ್ಲಿ ಬಿಡಾರ ಬಿಡುವುದು. ಇವರು ಯಾವಾಗಲು ಪ್ರತ್ಯೇಕವಾದ ಜನಾಂಗವಾದುದರಿಂದ, ಊರ ಹೊರಗೆ ವಸತಿ ಮಾಡುವುದರಿಂದ ತಮ್ಮದೆ ಆದ ರೀತಿ, ನೀತಿ, ರೂಢಿ, ಸಂಪ್ರದಾಯಗಳನ್ನು ಕಾಯ್ದು ಕೊಂಡು ಬರಲು ಸಾಧ್ಯವಾಗಿದೆ. ಆದರೆ ಇತ್ತೀಚೆಗೆ ಪಟ್ಟಣಸೇರಿದ ಕೆಲ ಜನ ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುತ್ತಿರುವುದರಿಂದ ಅವರಲ್ಲಿ ಸಣ್ಣಾಗಿ ಆಧುನಿಕತೆ ತಲೆ ಹಾಕುತ್ತಿರುವುದು ಗುಲ್ಬರ್ಗ, ರಾಯಚೂರು, ಬೀದರ, ಬಳ್ಳಾರಿಗಳಲ್ಲಿ ಕಂಡು ಬರುವ ಮಾತಾಗಿದೆ.

## ಆಡುವ ಭಾಷೆ :

ಈ ಜನಾಂಗದ ಮೂಲಭಾಷೆ ತೆಲುಗು ಎಂದು ಹೇಳುವರು. ಆದರೆ ಇವರು ಮಹಾರಾಷ್ಟ್ರದಲ್ಲಿ ಮರಾಠಿಯಲ್ಲಿ ಕರ್ನಾಟಕಕ್ಕೆ ಬಂದರೆ ಕನ್ನಡದಲ್ಲಿ. ಇದರಂತೆ ಯಾವ ನಾಡಿಗೆ ಹೋದರೆ ಆ ಪ್ರದೇಶದ ಭಾಷೆಯಲ್ಲಿ ಆ ಜನಾಂಗದ ಜೊತೆ ವ್ಯವಹರಿಸುವರು. ಅದೇ ಭಾಷೆಯಲ್ಲಿಯೇ ದಾನ ನೀಡಿದ ಕೂಡಲೇ ಹರಕೆಗಳನ್ನು ಕೊಡುವಂಥವ ರಾಗುವರು.

**ನಂಬಿಕೆ, ಆಚಾರ, ವಿಚಾರ, ಸಂಪ್ರದಾಯಗಳು :**

ಇವರು ಮೂಲತಃ ಶಕ್ತಿಪೂಜಕರು ಆದ್ದರಿಂದ ಇವರಿಗೆ ದೇವಿವಾರಗಳಾದ ಮಂಗಳವಾರ ಮತ್ತು ಶುಕ್ರವಾರಗಳು ಯಾವುದೇ ಕಾರ್ಯ ಮಾಡಲು ಶುಭ ದಿನಗಳು. ಬೆಕ್ಕು ಅಡ್ಡಬಂದರೆ, ತಲೆ ಬೋಳಿಸಿದ ವಿಧವೆಯರನ್ನು ಕಂಡರೆ, ಯಾರಾದರೂ ಸೀನಿದರೆ ತಕ್ಷಣವೇ ಒಂದು ನಿಮಿಷ ಅದೇ ಸ್ಥಳದಲ್ಲಿ ಕುಳಿತು ಮುಂದೆ ಹೋಗುವರು. ದಸರೆಯಲ್ಲಿ ಹಿರಿಯರ (ಸತ್ತವರ) ಹಬ್ಬವನ್ನು ಆಚರಿಸುವರು. ಅವತ್ತು ಹೊಸಬಟ್ಟೆ ತಂದು ಅವರ ಹೆಸರ ಮೇಲೆ ಚಂದ್ರ, ಕುಂಕುಮ ಹಚ್ಚಿ ಪೂಜೆ ಮಾಡಿ ಮರುದಿನ ಉಟ್ಟುಕೊಳ್ಳುವರು. ಅವರು ತಮ್ಮ ಹಬ್ಬವನ್ನು ಆಚರಿಸುವಾಗ ಹೋಳಿಗೆ ಮಾಡುವ ದಿಲ್ಲ. ಅವರು ತಮ್ಮ ಎಲ್ಲ ಶುಭ ಕಾರ್ಯಗಳಿಗೂ ಹಂದಿ, ಹೆಂಡವನ್ನೇ ಬಳಸುವರು. ತಮ್ಮ ದೇವರಿಗೆ ಬೇಡಿಕೊಂಡು ಬಿಟ್ಟ ಹಂದಿಯನ್ನು ಕೊಯ್ದು ಅಡಿಗೆ ಮಾಡಿ ಉಂಡು, ಕುಡಿದು ಹಬ್ಬವನ್ನಾಚರಿಸುವರು.

**ಹುಟ್ಟು, ಸಾವು, ಮದುವೆ, ವಿಧಿ ನಿಷೇಧ, ಜೀವನ ವಿಧಾನ :**

ಇವರಿಗೆ ಭೂಮಿಯೇ ಹಾಸಿಗೆ ಆಗಸವೆ ಹಚ್ಚಡ ಮಲಗಿಕೊಳ್ಳಲು. ಗುಡಿಸಲು ಗಳಿದ್ದರೂ ಹೆಚ್ಚಾಗಿ ಇರುವುದು ಬಯಲಿನಲ್ಲಿಯೇ. ಕೂಸು ಹುಟ್ಟಿದ ಕೂಡಲೇ ಬುಟ್ಟಿಯಲ್ಲಿ ಹಾಕುವರು. ಕೂಸಿನ ಮಾಸನ್ನು ಒಂದು ಸಣ್ಣ ಗುಳ್ಳಿಯಲ್ಲಿ ಹಾಕಿ ಅಂಗಳದಲ್ಲಿ ಹೂಳುವರು. ಉಡುವ ಸೀರೆ, ಧೋತರವನ್ನು ತೊಟ್ಟಿಲನ್ನಾಗಿ ಉಪ ಯೋಗಿಸುವರು. ಅಕ್ಕನ ಮಗಳಿಗೆ, ಅತ್ತೆ ಮಾವರ ಮಗಳಿಗೆ ಮಾಡಿಕೊಳ್ಳುವರು. ೧೫೦ ರೂ. ಇಲ್ಲವೆ ೧೫೦ ರೂ. ಹೆಣ್ಣಿಗೆ ತೆರವು, ಕರ (ತೆಲುಗಿನಲ್ಲಿ ಓಲಿ) ಕೊಡುವರು. ಹಂದರ ಹಾಕುವದಿಲ್ಲ. ಬುರು ಬುರು ವಾದ್ಯವನ್ನೆ ಲಗ್ನದ ಓಲಗವನ್ನಾಗಿ ಮಾಡು ವರು. ಒಬ್ಬರು ಎರಡು ಇಲ್ಲವೆ ಮೂರ್‍ನಾಲ್ಕು ಲಗ್ನವಾಗಬಹುದು. ಹಂದಿ ಹೆಂಡ ಗಳೇ ಲಗ್ನದ ಪ್ರತಿ ಕಾರ್ಯಕ್ರಮದಲ್ಲಿ ಆಹಾರ ಕುಡಿತಗಳಾಗುವವು. ಯಾವ ಗುಡಿಗೆ ಹೋಗಿ ಲಗ್ನವಾಗುವದಿಲ್ಲ. ತಮ್ಮ ಗುಡಿಸಲಲ್ಲಿಯೇ ದುರ್ಗಮ್ಮನಿರುವಾಗ ಬೇರೆ ಗುಡಿಗೆ ಹೋಗುವದೇಕೆ ಎಂಬುದು ಅವರ ವಿಚಾರ. ಮನೆಯಲ್ಲಿ ದುರ್ಗಮ್ಮನ ಮೂರ್ತಿ ಇಟ್ಟು ಮದುವೆ ಕಾರ್ಯ ನೆರವೇರಿಸುವರು. ಲಗ್ನ ಮಾಡಲು ಪಂಚಾಂಗ ನೋಡುವದಿಲ್ಲ. ಮೂಲತಃ ಈ ಜನರು ಬಡವರಾದುದರಿಂದ ಲಗ್ನದಲ್ಲಿ ಬಂಗಾರ ಬೆಳ್ಳಿಗಳ ಆಭರಣವಿರುವದಿಲ್ಲ. ಬಂಗಾರದ ತಾಳಿಯೂ ಮಾಡಿಸುವದಿಲ್ಲ. ಅದಕ್ಕಾಗಿ ಬಾಜಾರದಲ್ಲಿರುವ ಕರಮಣಿಯನ್ನಷ್ಟೇ ತಂದು ಕಟ್ಟುವರು. ಒಂದು ಜೋಡು ಸೀರೆ ಕುಬುಸ ತರುವರು. ಲಮಾಣಿಗಳಂತೆ ಒಂದು ಸಲ ಮದುವೆ ಮಾಡಿಕೊಟ್ಟರೆ ಆ ಕಡೆಗೇ ಸಾಯುವವರೆಗೆ ಹೆಣ್ಣುಮಗಳನ್ನು ಬಿಡುವ ಪದ್ದತಿ ಇವರಲ್ಲಿಲ್ಲ. ಕರೆದು ಕಳಿಸುವ ಪದ್ಧತಿ ಇವರಲ್ಲಿದೆ. ಅಣ್ಣ ಸತ್ತರೆ ಅಣ್ಣನ ಹೆಂಡತಿಯನ್ನು ತಮ್ಮ ಲಗ್ನ

ವಾಗಬಹುದು. ಆದರೆ ಗಂಡುಳ್ಳವಳನ್ನು ಇನ್ನೊಬ್ಬವ ಕೂಡಿಕೊಂಡರೆ ಅವನ ಕೊರಳಿಗೆ ಆಕೆಗೆ ಕಟ್ಟಿ ಮದುವೆ ಗಂಡನ ಖರ್ಚನ್ನು ವಸೂಲ ಮಾಡುವರು.

ತಂಟೆ ತಕರಾರುಗಳು ಉಂಟಾದಾಗ ನ್ಯಾಯಗಳು ನಡೆಯುವವು. ಕೇರಿಯ ಹಿರಿ ವಯಸ್ಸಿನ ಮುಖಂಡನೇ ಇವರ ಮುಖ್ಯ ನ್ಯಾಯಾಧೀಶ. ಬಿಟ್ಟುಬಿಡದೆ ಮೂರ್ನಾಲ್ಕು ದಿವಸಗಳವರೆಗೆ ನ್ಯಾಯ ನೆಡೆಯುವದು. ಈ ಮಧ್ಯ ಎರಡೂ ಪಕ್ಷಕ್ಕೂ ಕುಡಿಯಲು, ತಿನ್ನಲು ಒಬ್ಬನು ಖರ್ಚು ಮಾಡುವನು. ಕೊನೆಗೆ ತಪ್ಪಿತಸ್ಥನೆಂದು ನಿರ್ಣಯಿಸಲ್ಪಟ್ಟವನು, ವಿಧಿಸಿದ ದಂಡದ ಜೊತೆಗೆ ಆ ಖರ್ಚನ್ನು ಕೊಡಬೇಕಾಗುವದು. ಈ ಜನರಲ್ಲಿ ಬಸವಿಗೆ ಬಿಡುವ ಪದ್ಧತಿ ಇಲ್ಲ. ಆದರೆ ಕೊರಳಲ್ಲಿ ದೇವಿಯ ಪದಕ ಕಟ್ಟಿ ಕೊಳ್ಳುವರು

ಸತ್ತಾಗ ಸುಡದೆ ಹೂಳುವರು. ಲಗ್ನವಾಗಿದ್ದರೆ ಸಿದಿಗೆಯಲ್ಲಿ ಕೂಡಿಸಿ ಮೆರೆಸುತ್ತ ಹೆಣವನ್ನು ಮಸಣಕ್ಕೆ ಒಯ್ಯುವರು. ಲಗ್ನವಾಗದಿದ್ದರೆ ಗೋಣಿಚೀಲದಲ್ಲಿ ಹಾಕಿ ಕೊಂಡು ಸುಮ್ಮನೆ ಒಯ್ದು ಮಣ್ಣುಮಾಡಿ ಬರುವರು.

**ಆಹಾರ, ವಿಹಾರ, ಆರಾಧಿಸುವ ದೈವ, ಹಬ್ಬ ಹರಿದಿನಸಗಳು :**

ಇವರಲ್ಲಿ ಮೂರು ವಿಧಾನ.

೧. ಬುಟ್ಟಿ ದುರ್ಗ ಮುರಗಿಯುವರು. ಇವರು ದುರ್ಗಾದೇವಿಯನ್ನು ಬುಟ್ಟಿಯಲ್ಲಿಟ್ಟು ಕೊಂಡು ಬೇಡಲು ಹೊರಡುವರು.

೨. ಪೆಟ್ಟಿಗೆ ದುರ್ಗಮುರಗಿಯುವರು. ಇವರು ದುರ್ಗಾದೇವಿಯನ್ನು ಪೆಟ್ಟಿಗೆ ಯಲ್ಲಿಟ್ಟುಕೊಂಡು ಓಣಿ ಓಣಿ ತಿರುಗುವರು.

೩. ಗಡಿ ದುರ್ಗಮುರಗಿಯುವರು. ಇವರು ಮಕ್ಕಳಾಡುವಂತಿರುವ ಸಣ್ಣ ಕೈಬಂಡಿಯಲ್ಲಿ ದುರ್ಗಾದೇವಿಯನ್ನು ಕೂಡಿಸಿಕೊಂಡು ಊರಲ್ಲಿ ಸುತ್ತಾಡಿಸಿ ಊರ ಹೊರಗಿನ ಗಡಿಯವರೆಗೆ ಸುತ್ತಾಡಿಸಿಕೊಂಡು ಬರುವರು. ಅಂದರೆ ಊರಿಗೆ ಬಂದ ರೋಗರುಜಿನ ಸುಂಕಗಳು ಹೋಗಲೆಂದು.

ಇವರು ಹೆಚ್ಚಾಗಿ ಕಡು ಬಡವರಾದುದರಿಂದ ಯಾವುದೇ ಹಬ್ಬ ಆಚರಿಸುವ ದಿಲ್ಲ. ಸಿಹಿ ಅಡುಗೆ ಮಾಡುವದಿಲ್ಲ. ನಮ್ಮ ಮನೆ ಮನೆಗಳಲ್ಲಿ ಮಾಡಿದ್ದನ್ನೆ ಬೇಡಿ ಕೊಂಡು ಒಯ್ದು ಉಣ್ಣುವರು. ಹತ್ತಿರ ಸ್ವಲ್ಪ ಹಣವಿದ್ದರೆ ದಸರೆ ಹಬ್ಬವೊಂದನ್ನೆ ಆಚರಿಸುವರು. ನಾವು ಕೊಡುವ ಹಳೆ ಅರಿವೆಯನ್ನು ಧರಿಸುವರು.

ಹೆಚ್ಚಾಗಿ ಈ ಜನ ಬೇಟೆ ಪ್ರಿಯರು, ಅಡವಿ ಇಲಿ, ಅಡವಿಬೆಕ್ಕು, ಮೊಲ. ಜಿಂಕೆ ಬೇಟೆಯಾಡಿ ತಂದು ತಿನ್ನುವರು. ಮಾರೆಮ್ಮನ ಜಾತ್ರೆಗೆ ಹೊಸಬಟ್ಟೆ ಧರಿಸು

ವರು. ರೊಕ್ಕ ಇದ್ದಾಗ ಎಲ್ಲ ಹಬ್ಬವನ್ನೂ ಆಚರಿಸುವರು. ಇಲ್ಲದಿದ್ದರೆ ಎಂದಿನ ಜನ ನೀಡಿದ್ದನ್ನು ಉಣ್ಣುತ್ತ ತಿನ್ನುತ್ತ ಇರುವರು.

ದುರ್ಗಮ್ಮ. ಮರಗಮ್ಮ. ಕಂಚ ಮಾರೆಮ್ಮ, ಪೊಲಿಮಾರಿಮಾರೆಮ್ಮ (ಸೀ ಮಾರೆಮ್ಮ) ಸುಂಕಲಮ್ಮ, ಪಾಲಕಮ್ಮ ಇವರ ದೇವತೆಗಳು. ಮಾರೆಮ್ಮ- ಮೃತ್ಯ ವಿನ ದೇವತೆ, ಸುಂಕಲಮ್ಮ- ರೋಗದ ಸುಂಕನ್ನು ವರಡುವ ದೇವತೆ, ಪಾಲಕಮ್ಮ- ಎಲ್ಲ ಪೀಡೆಗಳಿಂದ ಕಾಪಾಡುವ ದೇವತೆ.

**ಪ್ರಧಾನ ಕಸಬು, ವೇಷಭೂಷಣ, ಕಲೆ ಸಾಹಿತ್ಯ, ಮಂತ್ರಮಾಟ, ಪೂಜಾ ವಿಧಾನ ಹಾಗೂ ನೆಲೆಗಳ ವೈಶಿಷ್ಟ್ಯ :**

ದುರ್ಗಮ್ಮ ಮರ್ಗಮ್ಮನನ್ನು ಹೊತ್ತುಕೊಂಡು ತಿರುಗಾಡುವುದೇ ಇವರ ಪ್ರಧಾನ ಕಸಬು ಆಗಿದೆ. ತಲೆಯ ಮೇಲೆ ಬುಟ್ಟಿಯಲ್ಲಿ ಇಲ್ಲವೆ ಪೆಟ್ಟಿಗೆಯಲ್ಲಿ ದೇವಿಯ ಮೂರ್ತಿಯನ್ನಿಟ್ಟುಕೊಂಡು ಜಿಂಕೆ ಚರ್ಮದಿಂದ ಮಾಡಿದ ಬುರುಬುರು ವಾದ್ಯ ಬಾರಿಸುತ್ತ.

ಮರಗಮ್ಮ ಬಂದಾಳ್ರಿ ಎವ್ವಾ
ದುರಗಮ್ಮ ಬಂದಾಳ್ರಿ ಎವ್ವಾ
ಬರ್ರಿ ಎವ್ವಾ ಬರ್ರಿ ಎವ್ವಾ
ಬರ್ರಿ ತಾಯಿ ಬರ್ರಿ ತಾಯಿ

ಎಂದು ಓಣಿಯೆಲ್ಲ ತಿರುಗಾಡಿ ಜನರನ್ನು ಕೂಡಿಸುವಳು. ಅದೇ ಹೊತ್ತಿಗೆ ಆಕೆಯ ಗಂಡ ಕಾಲಿಗೆ ಗೆಜ್ಜೆ ಕಟ್ಟಿಕೊಂಡು, ತಲೆ ಗೂದಲು ಬಿಟ್ಟುಕೊಂಡು, ನಡುವಿಗೆ ಕೆಂಪು ಬಟ್ಟೆ ಕಟ್ಟಿಕೊಂಡು. ಮುಖಕ್ಕೆ ಅರಿಸಿಣ ಹಚ್ಚಿಕೊಂಡು ರಕ್ತ ಸೋರುವಂತೆ ರಟ್ಟೆಗೆ ಲಡ್ಡು ಹೊಡೆಯುತ್ತ ಆ ಬುರುಬುರು ಸದ್ದಿನ ಜೊತೆಗೆ ಶೀಘ್ರಗತಿಯಲ್ಲಿ ಕುಣಿಯುವನು. ಕೆಲವರಿಗೆ ಇದು ಹೇಸಿಕೆಯೆನಿಸಿದರೆ ಇನ್ನೂ ಕೆಲವರಿಗೆ ಮೋಜೆನಿಸಿ ಬೇಗ ಬೇಗ ದುಡ್ಡು ಕೊಡುವರು. ಒಮ್ಮೊಮ್ಮೆ ಮುಖಕ್ಕೆ ಮುಖವಾಡ ಹಾಕಿಕೊಂಡು ಆ ಬುರುಬುರು ಸದ್ದಿನ ಗತ್ತಿನ ಜೊತೆಗೆ ನವಿಲು ಕುಣಿದಂತೆ ಕುಣಿಯುವನು. ತಲೆಯ ಮೇಲೆ ಹೊತ್ತುಕೊಂಡ ದೇವತೆ ದೌರ್ಜನ್ಯಗಳಿಂದ ರಕ್ಷಿಸುವವಳೆಂದು, ಲಡ್ಡು ಹೊಡೆದುಕೊಳ್ಳುವ ಬರಿಮೈಯಲ್ಲಿರುವ ಪೋತಹಾಜ ಮೇಲ್ಜನರಿಂದ ಶೋಷಣೆಗೊಳ್ಳುತ್ತಿರುವ ಗುಲಾಮನ ಪ್ರಾತಿನಿಧ್ಯವನ್ನು ಸಾರುವವನೆಂದು ಕಂಡುಬರುವುದು. ತಲೆಯ ಮೇಲೆ ದೇವಿಯನ್ನು ಹೊತ್ತುಕೊಂಡು ಊರಲ್ಲಿ ಬರುವ ಉದ್ದೇಶ ಊರೊಳಗಿನ ರೋಗರುಜಿನ ಪೀಡೆಗಳನ್ನು ದೂರಮಾಡಲೆನ್ನುವ ಸಲುವಾಗಿ.

ಈ ಜನಾಂಗದಲ್ಲಿ ಹೆಚ್ಚಾಗಿ ಬೇಡಿಕೊಳ್ಳುವ ಕೆಲಸ ಹೆಂಗಸರದು. ಗಂಡಸರು ಹಂದಿಗಳನ್ನು ಸಾಕುತ್ತ, ಅವುಗಳ ಕೂದಲ ಗೊಬ್ಬರ ಮಾರುತ್ತ ಇರುವರು. ಬೇಡಿ

ಕೊಂಡು ತಂದು ಹಾಕಲೆನ್ನುವ ಸಲುವಾಗಿ ಕೆಲವರು ಮೂರ್ನಾಲ್ಕು ಹೆಂಡಂದಿರನ್ನು ಮಾಡಿಕೊಳ್ಳುವರು.

ಈ ಜನ ರೋಗರುಜಿನಗಳಿಗೆ ಯಾವ ವೈದ್ಯರ ಹತ್ತಿರ ಹೋಗುವದಿಲ್ಲ. ತಮಗೆ ಗೊತ್ತಿದ್ದಂಥ ಗಿಡಮೂಲಿಕೆಗಳನ್ನು ತಿನ್ನುವರು. ಮೂರ್ನಾಲ್ಕು ದಿನಗಳಿಗೊಮ್ಮೆ ಜಳಕ ಮಾಡುವರು. ಮೈಯಿಗೆ ಎರೆಮಣ್ಣನ್ನು ಹಚ್ಚಿ ಮೈ ತೊಳೆದುಕೊಳ್ಳುವರು.

ಒಂದು ಕಾಲಕ್ಕೆ ಕೇವಲ ದುರ್ಗಾದೇವಿಯ ಪ್ರಚಾರಕ್ಕಿದ್ದ ಈ ಜನ ಈಗ ಕೇವಲ ಆ ದೇವಿಯ ಹೆಸರಿನ ಮೇಲಿಂದ ಹೊಟ್ಟೆ ಹೊರೆದು ಕೊಳ್ಳುವ ತತ್ವಕ್ಕೆ ಬಂದಿದ್ದಾರೆ. ಒಂದಿನ ಘನ ಉದ್ದೇಶ ಮರೆತು ಹೋಗಿ ಈಗ ಅದು ಉದರಂಭರಣದ ಕಾರ್ಯಕ್ಕಿಳಿದಿದೆ.

ಅಲಲಲಲ ಎಂದು ಕೂಗುತ್ತ ಬರುವ ಪೋತರಾಜನ ದೃಶ್ಯ ಬಯಲಾಟದ ಪಾತ್ರವನ್ನು ನೆನಪಿಗೆ ತರುವುದು. ಅವನು—

ತಾಯಿ ಬಂದಾಳೆವ್ವಾ
ಮರಗಮ್ಮ ಬಂದಾಳೆವ್ವಾ

ಎಂದು ಕೂಗುತ್ತ ನಿಂತಾಗ ನೀಡಲು ಜೋಳ ತಂದರೆ ಜೋಳಿಗೆಯಲ್ಲಿ ಜೋಳ ನೀಡಿಸಿಕೊಂಡು ನೀಡುವವರ ಮರದಲ್ಲಿ ಮೂರು ಬೊಟ್ಟಿಗೆ ಬರುವ ಜೋಳ ಮತ್ತು ತಾಯಿ ಬಂಡಾರ (ಅರಿಸಿಣ) ಬೇವಿನ ತೊಪ್ಪಲು ಹಾಕುವನು. ಅದನ್ನವರು ಪವಿತ್ರ ವೆಂದು ತಿಳಿದು ಮನೆಯ ಜೋಳದ ಚೀಲದಲ್ಲಿ ಒಯ್ದು ಹಾಕುವರು. ಸಂಪತ್ತು ಹೆಚ್ಚಾಗಲೆಂಬ ದೃಷ್ಟಿಯಿಂದ. ಪೋತರಾಜನು ಮುಖಕ್ಕೆ ಹಾಕಿಕೊಳ್ಳುವ ಮುಖವಾಡ ಅದು ದೇವಿಕೊಂದ ಮಹಿಷಾಸುರನದಾಗಿದೆ.

ಈ ಜನ ಜಾತ್ರೆ, ಉತ್ಸವ, ಹಬ್ಬ ಹುಣ್ಣಿವೆಗಳಿದ್ದಾಗ ಊರಲ್ಲಿ ಬರುವರು. ಇಲ್ಲ ದಿದ್ದರೆ ಮೊಲೆ ಕುಡಿಯುವ ಮಕ್ಕಳಿಗೆ ಟೊಂಕಕ್ಕೆ ಕಟ್ಟಿಕೊಂಡು ಊರೂರು ನಡೆವ ಹತ್ತಿ, ಜೋಳ, ಕಡಲೆ, ತೊಗರೆ, ಸಜ್ಜೆ, ಗೋಧಿ ರಾಶಿಗೆ ಹೋಗುವರು.

ಹುಸೇನಮ್ಮ, ಜಂಗಲೆಮ್ಮ, ಸಾವೆರೆಮ್ಮ, ಸಾವರೆಪ್ಪ ಎಂಬ ಹೆಸರು ನೋಡಿದರೆ ಇವರ ಮೇಲೆ ಮುಸ್ಲೀಮ ಸಂಸ್ಕೃತಿಯ ಪ್ರಭಾವ ಆದಂತೆ ಕಂಡು ಬರುವುದು.

ಇವರು ಒಂದುಗಳಿಗೆ ಸುಮ್ಮನೆ ಕೂಡುವ ಜನವಲ್ಲ. ತಮ್ಮ ಅನ್ನಕ್ಕಾಗಿ ಸದಾ ಚರಿಸುವ ಜನ. ಇವರು ಹೆಚ್ಚಾಗಿ ಪ್ರಕೃತಿಯಲ್ಲಿರುವುದರಿಂದ ಈ ಬುದ್ಧಿ ಇವರಿಗೆ ಪಕ್ಕಿಪಕ್ಕಿಗಳನ್ನು ನೋಡಿ ಬಂದಿರಬೇಕೆಂದು ಅನ್ನಿಸುವದು.

ಕೊಂಚೆ, ಕೊರವ, ಬಾಳಸಂತ, ದುರಗಮುರಗಿಯುವರು ದ್ರಾವಿಡ ಮ
ದಿಂದ ಬಂದವರಾದುದರಿಂದ ಅವರೆಲ್ಲರ ಆಚಾರ ವಿಚಾರ ರೂಢಿ ಸಂಪ್ರದಾಯ ಹ
ಹರಿದಿನ. ಆಹಾರ ವಿಹಾರಗಳು ಒಂದಕ್ಕೊಂದು ಹೋಲುವುದರಿಂದ, ಒಂದರೊ
ಗೊಂದು ಸಿಗಿಬಿದ್ದಿರುವುದರಿಂದ ಈ ಜನಾಂಗದ ಅಭ್ಯಾಸ ಮಾಡುವುದು ಅತೀಗ
ವಾಗಿದೆ. ಈ ದಿಶೆಯಲ್ಲಿ ಈ ಲೇಖನ ಒಂದು ದಿಕ್ಸೂಚಿ ಎಂದಿಷ್ಟೆ ಹೇಳಬಯಸುವೆ.

# ಬುಡುಬುಡುಕಿಯುವರು

ಸಿ. ಸಿ. ಎ. ಪೈ.

## ೧. ಪೂರ್ವೋತ್ತರ :

ಅತಿ ಸಣ್ಣದಾದ ಡಮರಿನಂತಿರುವ ಚರ್ಮ ವಾದ್ಯವನ್ನು ಬಾರಿಸುತ್ತ ತಮ್ಮ ಕಸಬು ಮಾಡುವಂತಹ ಜನರೇ ಈ ಬುಡುಬುಡುಕಿಯುವರು. ತಮ್ಮ ಈ ವಾದ್ಯ ದಿಂದಲೇ ಅವರಿಗೆ ಈ ಹೆಸರು ಬಂದಿದೆ. ಆದರೆ ಇವರನ್ನು ಉತ್ತರ ಕರ್ನಾಟಕದಲ್ಲಿ ದೋಷಿಗಾರರೆಂದೂ, ಗೊಂದಲಿಗರೆಂದೂ ಕರೆಯುವ ವಾಡಿಕೆಯಿರುವುದು ಕಾಣಿಸು ತ್ತದೆ. ಇವರು ತಮ್ಮ ಕಸಬು ಮಾಡುವಾಗ ಜ್ಯೋತಿಷ್ಯ ಹೇಳುತ್ತಾರಾದ್ದರಿಂದಲೋ, ಅಥವಾ ಈ ಜನಾಂಗದವರು ತಮ್ಮ ಸಾಂಪ್ರದಾಯಿಕ ವೃತ್ತಿಯನ್ನು ಮೀರಿ, ಜ್ಯೋತಿಷ್ಯದ ಅಭ್ಯಾಸವನ್ನು ಮಾಡಿಕೊಂಡು ಅದನ್ನೇ ತಮ್ಮ ಉಪಜೀವನದ ದಾರಿ ಯನ್ನಾಗಿ ಮಾಡಿಕೊಂಡಿರುವುದರಿಂದಲೋ, ಇವರಿಗೆ ದೋಷಿಗಾರರೆಂಬ ಅಪರನಾಮವು ಅಂಟಿಕೊಂಡಿರಬೇಕು. ಗೊಂದಲಿಗರೆಂಬ ಹೆಸರು ಕೇವಲ ಇವರ ಮೂಲ ಜಾತಿಯ ಹೆಸರೆಂದು ಇವರಿಂದ ಸಂಗ್ರಹಿಸಿದ ವಿವರಗಳಿಂದ ನಾವು ಅನುಮಾನಿಸಬಹುದಾಗಿದೆ. ಗೊಂದಲಿಗರೆಂಬುದು ಒಂದು ವಿಶಾಲವಾದ ಜಾತಿ. ಅದರಲ್ಲಿ ಗೊಂದಲ ಹಾಕಿ ಕಥೆ ಹೇಳುವವರದು ಒಂದು ಪಂಗಡವಾದರೆ, ಬುಡುಬುಡುಕಿ ಬಾರಿಸಿ ಕಸಬು ಮಾಡು ವವರದು ಇನ್ನೊಂದು ಪಂಗಡ ಎಂದು ನಿಷ್ಕರ್ಷೆಯಾಗಿ ಹೇಳಲು ಸಾಕಷ್ಟು ಆಧಾರ ಗಳಿದ್ದರೂ ಕೂಡಾ, ವೃತ್ತಿ ಗೊಂದಲಿಗರು ಮಾತ್ರ ಈ ವಾದವನ್ನು ಒಪ್ಪಲೊಲ್ಲರು. ಅವರ ಕಲ್ಪನೆಯ ಪ್ರಕಾರ ಗೊಂದಲಿಗರು ಮೇಲು ಜಾತಿ ಮತ್ತು ಬುಡುಬುಡುಕಿ ಯುವರು ಕೀಳು ಜಾತಿ. ಗೊಂದಲಿಗರನ್ನು ಮಾತಾಡಿಸಿದಾಗ ಎಲ್ಲರೂ ಈ ಪ್ರಕಾರ ವಾದಿಸುವವರೇ ನಮಗೆ ಸಿಗುತ್ತಾರೆ,

ಬುಡುಬುಡುಕಿಯುವರ ಬಗ್ಗೆ ಹಲವಾರು ಗ್ರಂಥಸ್ಥ ಉಲ್ಲೇಖಗಳಿವೆ. ಮೊಟ್ಟ ಮೊದಲನೆಯದಾಗಿ ೧೮೮೪ ರಲ್ಲಿ ಪ್ರಕಟಗೊಂಡ, ಮುಂಬಯಿ ಗ್ಯಾಸಟಿಯರ್ ಸರಣಿಯ ೨೩ ನೆಯ ಸಂಪುಟದಲ್ಲಿ ಇವರ ಬಗ್ಗೆ ವಿವರಗಳಿವೆ. ಜೇಮ್ಸ್ ಕ್ಯಾಂಪ್ಬೆಲ್ ಎಂಬಾತನು ಸಂಪಾದಿಸಿದ ಈ ಗ್ರಂಥ ಬಿಜಾಪುರ ಜಿಲ್ಲೆಯನ್ನು ಅನ್ವಯಿಸುತ್ತದೆ. ಈ ಗ್ರಂಥದಲ್ಲಿ ಈ ಜನರ ಹೆಸರು ಬುಡ್ಬುಡ್ಕೇರ ಎಂದಿದೆ. ಎರಡನೆಯದಾಗಿ ೧೯೦೮ ರಲ್ಲಿ ಪ್ರಕಟವಾದ ಇಂಪಿರಿಯಲ್ ಗ್ಯಾಸೆಟಿಯರ್ ಸರಣಿಯ ೧೫ ನೆಯ ಸಂಪುಟದ ೩೨೮ ನೆ ಪುಟದಲ್ಲಿ ಬುಡುಬುಡಕಲರು ಎಂಬ ಗುಂಪಿನ ಉಲ್ಲೇಖವಿದೆ. ಇಲ್ಲಿ ಏನೋ ತಪ್ಪು ಕಲ್ಪನೆ ಕಾಣಿಸುತ್ತದೆ. ಇಲ್ಲಿ ಈ ಜನರು ತೆಲುಗು ಮಾತಾಡುವವರೂ, ಭಿಕ್ಷುಕ ವೃತ್ತಿಯವರೂ, ಬ್ರಾಹ್ಮಣರಿಂದ ಮಾತ್ರ ಸತ್ಕಾರ ಸ್ವೀಕರಿಸುವವರೂ ಆಗಿದ್ದಾರೆ ಎಂದು ಹೇಳಲಾಗಿದೆ. ಇವರು ಆಂಧ್ರ ಪ್ರದೇಶದ ಕೃಷ್ಣಾ ಜಿಲ್ಲೆಯಲ್ಲಿ ಸಿಗುತ್ತಾರಂತೆ. ಈ ವಿವರಗಳನ್ನು ಓದುವಾಗ, ಬುಡುಬುಡುಕಿಯುವರನ್ನು ಪ್ರತ್ಯಕ್ಷ ಕಂಡು ಕೇಳಿ ರೂಢಿಯಿರುವವರಿಗೆ ಮಾತ್ರ ಇಲ್ಲಿಯ ತಪ್ಪು ಕಲ್ಪನೆ ಸ್ಪಷ್ಟವಾಗಿ ಗೋಚರಿಸುತ್ತದೆ. ಅಲೆಮಾರಿಗಳಾದ ಈ ಜನರು ತಮ್ಮ ಉಪಜೀವನಕ್ಕಾಗಿ ವಲಸೆಹೋದುದು ಸರ್ವಮಾನ್ಯವಾದುದು. ಹಾಗೆ ಹೊಸ ಪ್ರದೇಶಕ್ಕೆ ಹೋದಾಗ ತಮ್ಮ ಕಸಬು ಪರಿಣಾಮಕಾರಿಯಾಗಬೇಕಾದರೆ ಸ್ಥಳೀಯ ಭಾಷೆಯ ರೂಢಿಯಿಲ್ಲದಿದ್ದರೆ ಆಗಲಾರದು. ಇವರು ಅನೇಕಭಾಷೆಗಳನ್ನು ಅಭ್ಯಾಸಮಾಡಿ ಬಳಸಬೇಕಾದುದೂ ಅನಿವಾರ್ಯವೇ; ಇವರು ಎರಡು ಮೂರು ಭಾಷೆಗಳನ್ನು ಲೀಲಾಜಾಲವಾಗಿ ಬಳಸುವುದನ್ನು ಕಂಡಾಗ, ಆಂಧ್ರದಲ್ಲಿರುವ ಈ ಜನರು ಅಲ್ಲಿಯ ತೆಲುಗುಭಾಷೆಯನ್ನೂ ಸ್ಥಳೀಯ ಜನರಂತೆಯೇ ಮೈಗೂಡಿಸಿಕೊಂಡುದ್ದೇನೂ ಆಶ್ಚರ್ಯವಾಗಲಾರದು. ಅಷ್ಟರಿಂದಲೇ ಇವರ ಮಾತೃಭಾಷೆಯೆ ತೆಲುಗು ಎಂದು ತೀರ್ಮಾನಿಸಲು ಬರುವಂತಿಲ್ಲ.

ಮೂರನೆಯದಾಗಿ ಮಹಾರಾಷ್ಟ್ರ ಪ್ರಕಟಿಸಿದ ಕೊಲ್ಹಾಪುರ ಜಿಲ್ಲೆಯ ಗ್ಯಾಸೆಟಿಯರ್ ಗ್ರಂಥದಲ್ಲಿ ಇವರ ಉಲ್ಲೇಖ ಕಾಣಿಸುತ್ತದೆ. ಆದರೆ ಇಲ್ಲಿ ಮಾತ್ರ ಇವರನ್ನು ಸುಡುಬುಡುಕೇರ ಎಂದು ಕರೆದಿದ್ದಾರೆ. ತರ್ಕಮಾಡುವಾಗ ಯಾರೋ ಒಬ್ಬರು ಈ ಜನರು ಸುಡುಗಾಡಿನಲ್ಲಿ ಪಣಕಟ್ಟಿ ತಮ್ಮ ಕಸಬು ಮಾಡುತ್ತಾರಾದ್ದರಿಂದ ಸುಡುಗಾಡು ಶಬ್ದದಿಂದ ಅವರ ಹೆಸರು ಹೀಗೆ ಉತ್ಪನ್ನವಾಗಿರಬೇಕೆಂದು ಸೂಚಿಸಿರುವರು. ಆದರೆ ಸುಡುಗಾಡು ಎಂಬ ಶಬ್ದ ಕನ್ನಡ ಶಬ್ದವಾಗಿದ್ದು, ಅದರ ಬಳಕೆ ಕರ್ನಾಟಕದಲ್ಲಿರಬೇಕಾಗಿತ್ತು, ಮಹಾರಾಷ್ಟ್ರದಲ್ಲಲ್ಲ. ಈ ಕಾರಣದಿಂದ ಅವರ ತರ್ಕ ಸಮಂಜಸವೆನಿಸುವುದಿಲ್ಲ. ಅದೇ ಮೇರೆಗೆ ಇನ್ನೂ ಒಬ್ಬರು ಈ ಜನರು ಸುಳ್ಳುಸುಳ್ಳು ಶಕುನ ಹೇಳುತ್ತಿರುವುದರಿಂದ ಅವರನ್ನು ಸುಳ್ಳುಬುಡುಕೇರರೆಂದು ಕರೆದು ಅದೇ ಕ್ರಮೇಣ ಸುಡುಬುಡುಕೇರ ಎಂದಾಗಿರಬೇಕೆಂದು ವಾದಿಸುತ್ತಾರೆ. ಇಲ್ಲೂ ಸುಳ್ಳು ಎಂಬ ಶಬ್ದವೂ ಕನ್ನಡ ಶಬ್ದವೇ ಆಗಿದ್ದು, ಅದು ಕನ್ನಡದಲ್ಲಿ ಕರ್ನಾಟಕದಲ್ಲಿ ಬಳಕೆಯಲ್ಲಿರದೆ ಕೇವಲ ಮಹಾರಾಷ್ಟ್ರ

ದಲ್ಲಿ ಮಾತ್ರ ಕಾಣಸಿಗುವುದೂ ಚೋದ್ಯವಾದ ವಿಷಯವೇ. ಆದ ಕಾರಣ ಈ ವಾದವೂ ಹೆಚ್ಚು ತಿರುಳುಳ್ಳದ್ದೆಂದು ತಿಳಿಯಲಾಗದು. ಈ ಪ್ರಕಾರದ ಹೆಸರಿನ ವ್ಯತ್ಯಯಕ್ಕೆ ಇನ್ನೇನೋ ಬೇರೆ ಕಾರಣ ಇರಲೇ ಬೇಕು. ಸದ್ಯಕ್ಕೆ ಮಾತ್ರ ಖಚಿತವಾದುದೇನೂ ನಮಗೆ ಗೋಚರಿಸುವುದಿಲ್ಲವೆಂದು ಒಪ್ಪಲೇಬೇಕಾಗಿದೆ. ಆದರೆ ಈ ಗ್ರಂಥದಲ್ಲಿ ನಮಗೆ ಸಿಗುವ ಎಲ್ಲ ವಿವರಗಳೂ ನಮ್ಮ ನಾಡಿನ ಬುಡುಬುಡುಕಿಯುವರಿಗೆ ಅನ್ವಯಿಸುವಂಥವು ಗಳೇ ಆಗಿವೆ.

೧೯೭೭ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ "ಕರ್ನಾಟಕದ ಜಾನಪದ ಕಲೆಗಳು" ಎಂಬ ಗ್ರಂಥದಲ್ಲಿ ಎರಡು ಪುಟಗಳಷ್ಟು ವಿವರಗಳು ಬುಡುಬುಡುಕಿಯುರನ್ನು ಕುರಿತಾದವುಗಳು. ಇದಲ್ಲದೆ ಡಾ. ಎಮ್. ಎಮ್. ಕಲ್ಬುರ್ಗಿ ಅವರು ಸಹಾ ತಮ್ಮ ಉತ್ತರ ಕರ್ನಾಟಕದ ಜಾನಪದ ಕಲೆಗಳ ಬಗೆಗಿನ ಗ್ರಂಥದಲ್ಲಿ ಈ ಜನರಿಗೆ ಒಂದು ಪುಟದಷ್ಟು ಸ್ಥಾನ ಮೀಸಲಿರಿಸಿದುದನ್ನೂ ನಾವು ಗಮನಿಸಬೇಕು.

೧೯೭೮ ರಲ್ಲಿ ಬೆಳಕಿಗೆ ಬಂದ ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟನೆಯಾದ "ಜಾನಪದ ಸಾಹಿತ್ಯ ದರ್ಶನ ಭಾಗ ೪" ಇದರಲ್ಲಿ ನಿಂಗಣ್ಣ ಸಣ್ಣಕ್ಕಿ ಅವರು ಬುಡು ಬುಡುಕಿ ಸಾಹಿತ್ಯ ಎಂಬ ವಿಷಯದ ಮೇಲೆ ಇಪ್ಪತ್ತೈದು ಪುಟಗಳಷ್ಟು ದೀರ್ಘವಾದ ಲೇಖನವನ್ನು ಬರೆದಿದ್ದಾರೆ. ಇವರಾದರೋ ಈ ಜನಾಂಗಕ್ಕೆ ಕಿಡಬುಡಕಿಯುವರು ಎಂಬ ಇನ್ನೊಂದು ನಾಮಾಂಕಿತವನ್ನು ಕೊಟ್ಟಿದ್ದಾರೆ. ಅಷ್ಟೇ ಅಲ್ಲದೆ ಬೆಳವಲ ಸೀಮೆಯಲ್ಲಿ ಇವರನ್ನು ಗೂಳಿಗಾರ ಎಂದೂ ಕರೆಯುತ್ತಾರೆ ಎಂದು ತೋರಿಸಿಕೊಟ್ಟಿದ್ದೂ ಗಮನಾರ್ಹವೇ.

ಇಷ್ಟೆಲ್ಲಾ ಗ್ರಂಥಸ್ಥ ಉಲ್ಲೇಖಗಳನ್ನು ಬಿಟ್ಟರೆ ನಮಗೆ ಧಾರವಾಡದ ಆಕಾಶ ವಾಣಿ ಕೇಂದ್ರದ ಒಂದು ಕಾರ್ಯಕ್ರಮ ಗೋಚರಿಸುತ್ತದೆ. ೧೯೭೮ ರ ಜೂನ್ ೨೩ ರಂದು ಧಾರವಾಡ ಜೆ. ಎಸ್. ಎಸ್. ಕಾಲೇಜಿನ ಸಮಾಜ ಶಾಸ್ತ್ರದ ಅಧ್ಯಾಪಕರಾದ ಶ್ರೀ ಎಮ್. ಎ. ನಾಗೇಶ ಅವರು ಸಾದರ ಪಡಿಸಿದ ಕಾರ್ಯಕ್ರಮವೇ ಇದು. ಇವರು ತಮ್ಮ ವಿಷಯದ ಬಗ್ಗೆ ವ್ಯಾಖ್ಯಾನಮಾಡಿದ ತರುವಾಯ, ಈಗ ಧಾರವಾಡದ ಕೊಪ್ಪದ ಕೆರೆಯಲ್ಲಿ ವಾಸಮಾಡುತ್ತಿರುವ ಶಿವಾಜಿ ಬಾಗಲೆ ಎಂಬಾತನಿಂದ ನಿರೂಪಣೆ ಪಡೆದು, ಆ ಮೇಲೆ ಆತನ ಪ್ರದರ್ಶನವನ್ನು ತಮ್ಮ ಕಾರ್ಯಕ್ರಮದಲ್ಲಿ ಪ್ರಸಾರಮಾಡಿದ್ದಾರೆ.

ನಿಜಕ್ಕೂ ನೋಡಿದರೆ, ಈ ವರೆಗೆ ನಮಗೆ ದೊರಕಿದ ಎಲ್ಲಾ ಆಕರಗಳಲ್ಲಿ ಇವೇ ಹೆಚ್ಚು ವ್ಯಾಪಕವಾದುದು, ಏಕೆಂದರೆ ಇದರಲ್ಲಿ ಮಾತ್ರ ಬುಡುಬುಡುಕಿಯುವರ ನಿರೂಪಣೆ ಒಳಗೊಂಡಿದೆ. ಅಷ್ಟಿದ್ದರೂ ವೈಜ್ಞಾನಿಕ ವಿಶ್ಲೇಷಣೆಗೆ ಮಾತ್ರ ಇದರಲ್ಲೂ ಸಾಕಷ್ಟು ವಸ್ತು ಲಭ್ಯವಿಲ್ಲವೆಂದೇ ಒಪ್ಪಬೇಕಾಗಿದೆ. ನಮ್ಮ ಅಧ್ಯಯನಕ್ಕಾಗಿ ನಾವು

ಇನ್ನೂ ವ್ಯಾಪಕವಾದಂತಹ ಸಂಗ್ರಹಣಕಾರ್ಯಕ್ಕೆ ಇಳಿಯಬೇಕಾಯಿತು. ಅ
ಪರಿಣಾಮವೇ ಈ ಪ್ರಬಂಧ. ಹಾಗೆಯೇ ನಾವು ಗಮನಿಸಬೇಕಾದಂತಹ ಇನ್ನೊಂ
ವಿಷಯವೇನೆಂದರೆ, ನಮಗೆ ಲಭ್ಯವಿರುವ ೧೮೮೪ ರ ಗ್ರಂಥದಿಂದ ಈಚೆಗೆ ಈ ವಿವರಗ
ಗ್ರಂಥಗಳ ಮಟ್ಟಿಗೆ ಸಂಕುಚಿತವಾಗಿ ಕುಗ್ಗುತ್ತ ಬಂದಿರುವುದು. ಅಂದಿನ ವಿದ್ವಾಂಸ
ಬರೆದಿಟ್ಟ ಜನಾಂಗಿಕ, ಮಾನವ ಶಾಸ್ತ್ರೀಯ ಹಾಗೂ ಸಾಂಸ್ಕೃತಿಕ ವಿವರಗಳು ಅನಂತರ
ಗ್ರಂಥಸ್ಥ ಆಕರಗಳಲ್ಲಿ ಮರೆಯಾಗುತ್ತ ಬಂದಿವೆ ಎಂಬುದು ವಿಷಾದಕರವೇ ಸರಿ.

ನಾವು ಕ್ಷೇತ್ರ ಕಾರ್ಯಕ್ಕೆ ತೊಡಗಿ, ಬೆಳಗಾಂವಿ ಜಿಲ್ಲೆಯ ಬೈಲಹೊಂಗಲ ಮತ್ತು
ರಾಮದುರ್ಗ ತಾಲೂಕಗಳಲ್ಲಿಯೂ, ಧಾರವಾಡ ಪಟ್ಟಣ ಮತ್ತು ಧಾರವಾಡ
ತಾಲ್ಲೂಕದ ಉತ್ತರ ಭಾಗದಲ್ಲಿಯೂ, ಬಿಜಾಪುರ ಜಿಲ್ಲೆಯ ಹಲವು ಸ್ಥಳಗಳಲ್ಲಿಯೂ
ವಿವರ ಸಂಗ್ರಹಣವನ್ನು ನಡೆಸಿದ್ದೇವೆ. ಹಲವಾರು ಮಂದಿ ಬುಡುಬುಡುಕಿಯವರನ್ನು
ಕಂಡು ಅವರಿಂದ ವಿವರಗಳನ್ನು ಸಂಗ್ರಹಿಸಿದ್ದೇವೆ. ಇಷ್ಟೆಲ್ಲಾ ಉತ್ತರ ಕರ್ನಾಟಕದ
ಮಟ್ಟಿಗಾದರೆ, ನಮ್ಮ ಬಾಲ್ಯದ ದಿವಸಗಳ ನಮ್ಮ ಹುಟ್ಟೂರಾದ ಮಂಗಳೂರು ಪಟ್ಟಣ
ದಲ್ಲಿಯೂ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ವಿವಿಧ ಭಾಗಗಳಲ್ಲಿಯೂ ಬೀದಿಗಳಲ್ಲಿಯೂ
ಈ ಜನರನ್ನು ಕಂಡದ್ದು ನಿಜ. ಅಲ್ಲಿ ಮಾತ್ರ ನಾವು ಇವರನ್ನು ನರಸಣ್ಣ ಎಂದು
ಕರೆಯುವುದು ವಾಡಿಕೆ. ಕೊಂಕಣ ಭಾಷೆ ಪ್ರಬಲವಿದ್ದ ಕಡೆಗಳಲ್ಲಿ ಇವರು ತಮ್ಮ
ಸ್ವಂತ ಭಾಷೆಯಾದ ಮರಾಠಿ ಭಾಷೆಯನ್ನು ಬಳಸಿಕೊಂಡು ತಾವು ಹುಬ್ಬಳ್ಳಿ, ಧಾರವಾಡ
ಆ ಕಡೆಯಿಂದ ಬಂದವರು ಎಂದು ಹೇಳುತ್ತಿದ್ದುದನ್ನು ನಾವಿಲ್ಲಿ ಸ್ಮರಿಸಬಹುದು.

**೨. ಮೂಲ ನೆಲೆ ಮತ್ತು ವಾಸ :-**

ಮೊದಲ ನೋಟಕ್ಕೆ ಬುಡುಬುಡುಕಿಯವರು ಅಲೆಮಾರಿಗಳಂತೆ ಕಂಡು ಬಂದರೂ,
ಸ್ವಲ್ಪ ಪರೀಕ್ಷೆ ಮಾಡಿ ನೋಡಿದರೆ ಅವರು ಅಲೆಮಾರಿಗಳಲ್ಲವೆಂದು ನಾವು ತೀರ್ಮಾನಿಸ
ಬೇಕಾಗುತ್ತದೆ. ಮೂಲತಃ ಅವರೇನೋ ಮಹಾರಾಷ್ಟ್ರದಿಂದ ಬಂದಿರಬೇಕೆಂಬುದು
ಅವರ ಮನೆ ಮಾತಾದ ಮರಾಠಿ ಭಾಷೆಯಿಂದ ನಾವು ಊಹಿಸಬಹುದು. ಅಷ್ಟಿದ್ದರೂ
ಕೂಡಾ, ಹಿಂದೊಮ್ಮೆ ಕರ್ನಾಟಕದಿಂದ ಮಹಾರಾಷ್ಟ್ರಕ್ಕೆ ವಲಸೆಹೋಗಿ ಆಮೇಲೆ ತಮಗೆ
ಅನುಕೂಲ ಕಂಡಾಗ ಕರ್ನಾಟಕಕ್ಕೆ ಹಿಂದೆ ಬಂದ ಜನರು ಇವರೇಕೆ ಆಗಬಾರದು ಎಂಬ
ಪ್ರಶ್ನೆಯೂ ಇಲ್ಲದಿಲ್ಲ. ಪ್ರಸ್ತುತಕ್ಕೆ ಈ ಪ್ರಶ್ನೆಯನ್ನು ಉತ್ತರಿಸುವ ಬಗೆ ಕಾಣಿಸ
ಲಾರದು, ಹಾಗೂ ಈ ಪ್ರಶ್ನೆಗೆ ಗಮನ ಕೊಡಲು ಸಹಾಯಕವಾಗುವಷ್ಟು ವಿವರ
ಸಂಗ್ರಹಣ ಸಂಶೋಧನೆಗಳೂ ನಡೆದಿಲ್ಲವೆಂದು ಒಪ್ಪಬೇಕು.

ಹೇಗಿದ್ದರೂ ಈಗಿನ ಬುಡುಬುಡುಕಿಯವರು ಮಾತ್ರ ಮಹಾರಾಷ್ಟ್ರದ ಕಡೆಯಿಂದ
ಕರ್ನಾಟಕಕ್ಕಾಗಮಿಸಿ ತಲೆಮಾರು ತಲೆಮಾರುಗಳಿಂದ ಕರ್ನಾಟಕದ ನೀರು ಕುಡಿದು

ಬದುಕುತ್ತಿರುವುದು ಮಾತ್ರ ಸ್ಪಷ್ಟ. ಅಧಿಕವಾಗಿ ಹಳೆಯ ಮುಂಬಯಿ ಕರ್ನಾಟಕದ ಜಿಲ್ಲೆಗಳಲ್ಲೇ ಇವರ ಸ್ಥಿರ ನೆಲೆ ಎಂಬುದಕ್ಕೂ ಸಾಕಷ್ಟು ಆಧಾರಗಳಿವೆ.

ಇವರ ಸಾಮಾನ್ಯ ಪದ್ಧತಿ ಪ್ರಕಾರ ಇವರು ಜೊತೆಗೂಡಿ ಒಂದೇ ಓಣಿಯಲ್ಲಿ ವಾಸಮಾಡುತ್ತಾರೆ. ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಅವರು ಎಲ್ಲೆಲ್ಲಿ ಕಾಣಸಿಗುತ್ತಾರೋ ಅಲ್ಲೆಲ್ಲಾ ಅವರ ವಾಸಸ್ಥಳಕ್ಕೆ ಗೊಂದಲಿಗರ ಓಣಿ ಎಂಬ ಹೆಸರಿರುವುದು ಇದಕ್ಕೆ ಒಂದು ನಿದರ್ಶನವಾಗಿದೆ. ಹೆಚ್ಚಾಗಿ ಇವರು ಬಾಡಿಗೆಯ ಮನೆಗಳಲ್ಲಿ ವಾಸ ಮಾಡುತ್ತಾರೆ. ವೃತ್ತಿಗಿಳಿಯುವವರು ಕೇವಲ ಪುರುಷರು ಮಾತ್ರವಾದುದರಿಂದ ಮಕ್ಕಳೂ ಮಹಿಳೆಯರೂ ವರ್ಷದುದ್ದಕ್ಕೂ ತಂತಮ್ಮ ಈ ಮನೆಗಳಲ್ಲೆ ಉಳಿಯುತ್ತಾರೆ. ಅಲ್ಲೆ ತಮಗೆ ಪರಂಪರಾಗತವಾಗಿ ಬಂದಂತಹ ವಿದ್ಯೆಯಿಲ್ಲದ ನಿರಕ್ಷರಕುಕ್ಷಿಗಳ ಬಡ ಜೀವನವನ್ನು ಸಾಗಿಸುತ್ತಾರೆ. ತಮ್ಮ ಕಸಬಿಗಾಗಿ ಅಲೆದಾಡಿದ ಪುರುಷರು ತಮ್ಮ ಸಂಪಾದನೆಯನ್ನು ಹೊತ್ತುಕೊಂಡು ಈ ತಮ್ಮ ಮನೆಗಳಿಗೆ ಹಿಂತಿರುಗುತ್ತಾರೆ.

ಹಲವಾರು ಮಂದಿ ಬುಡುಬುಡುಕಿಯುವರು ಮಾತಿನ ಆಧಾರದ ಮೇಲೆ, ಸದ್ಯಕ್ಕೆ ಕರ್ನಾಟಕದಲ್ಲೇ ಬುಡುಬುಡುಕಿಯುವರ ಮನೆಗಳು ಐದುನೂರಕ್ಕೂ ಮಿಕ್ಕಿವೆ ಎಂದು ಅನುಮಾನಿಸಲು ಯಾವ ಅಡ್ಡಿಯೂ ಕಾಣಿಸುವುದಿಲ್ಲ. ಆದರೆ ಇವರೆಲ್ಲರೂ ಒಂದೇ ಕಡೆಯಲ್ಲಿ ವಾಸವಾಗಿಲ್ಲ. ಅತಿ ದೊಡ್ಡ ಗುಂಪುಗಳೆಂದರೆ ಬಿಜಾಪುರ ಜಿಲ್ಲೆಯ ಹುನುಗುಂದ ತಾಲೂಕದ ಕೋಡಿಹಾಳ ಗ್ರಾಮದಲ್ಲಿ ಮತ್ತು ಧಾರವಾಡ ಜಿಲ್ಲೆಯ ನರಗುಂದ ತಾಲ್ಲೂಕದ ಕೋಣೂರು ಗ್ರಾಮದಲ್ಲಿ ಸಿಗುತ್ತವೆ. ಇವರ ಪೈಕಿ ಹಲವಾರು ಮಂದಿ ಸಾಕಷ್ಟು ಸಂಪಾದಿಸಿರಬೇಕು, ಏಕೆಂದರೆ ಅವರಿರುವ ಓಣಿಗಳಲ್ಲಿ ಮನೆಮಾಲಿಕರಾರೂ ಅನ್ಯ ಜಾತೀಯರೇನಲ್ಲ, ಸ್ವತಃ ಗೊಂದಲಿಗ ಜಾತಿಗೆ ಸೇರಿದವರೇ.

ಪುರಾತನ ಕಾಲದಿಂದಲೂ ಇವರಲ್ಲಿ ಒಂದು ರೀತಿಯ ಕ್ಷೇತ್ರ ಹಂಚೋಣಿ ನಿಷ್ಕರ್ಷೆಯಾಗಿರುವುದನ್ನೂ ನಾವು ನೋಡುತ್ತೇವೆ. ಒಬ್ಬೊಬ್ಬ ವೃತ್ತಿಗಾರರಿಗೆ ನಾಲ್ಕೈದು ವಿಶಾಲ ಗ್ರಾಮಗಳನ್ನು ಹಂಚಿಕೊಟ್ಟಿದ್ದಾರೆ. ಆದ್ದರಿಂದ ಅವರು ಒಬ್ಬರು ಇನ್ನೊಬ್ಬರ ಕ್ಷೇತ್ರವನ್ನು ಆಕ್ರಮಿಸುವಂತಿಲ್ಲ.

ಜೇಮ್ಸ್ ಕ್ಯಾಂಪ್ಬೆಲರ ಗ್ರಂಥದಲ್ಲಿ ಬುಡುಬುಡುಕಿಯುವರು ಹಿಂದೂ ಮತ್ತು ಮುಸ್ಲಿಮ ಧರ್ಮಗಳಿಗೆ ಸೇರಿದವರಿದ್ದಾರೆಂದು ಸೂಚಿಸಲಾಗಿದೆ. ಆದರೆ ನಾವು ಅನ್ವೇಷಿಸಿದ ಪ್ರಕಾರ ಬಹಳಷ್ಟು ಮಂದಿ ಬುಡಬುಡುಕಿಯುವರು, ಮುಸಲ್ಮಾನ ಧರ್ಮದವರು ತಮ್ಮ ಕಸಬು ಮಾಡುವವರಿಲ್ಲವೆಂದು ವಾದಿಸುತ್ತಾರೆ. ಅವರ ಹೇಳಿಕೆಯಂತೆ ತಮ್ಮ ಕಸಬು ಮಾಡುವ ಮುಸಲ್ಮಾನರು ಹಿಂದೆ ಇದ್ದರು. ಆದರೆ ಮುಸಲ್ಮಾನರು ಅವರನ್ನು ಅಪ್ಪಟ ಮುಸಲ್ಮಾನರಲ್ಲವೆಂದು ತಮ್ಮ ಧರ್ಮದಿಂದ ಹೊರಗೆ ಇಟ್ಟಿದ್ದಾರೆ. ಇನ್ನೂ

ಕೆಲವು ಮಂದಿ ಬುಡುಬುಡುಕಿಯುವರು ಬೇರೆಯೇ ಹೇಳುವವರಿದ್ದಾರೆ. ಇಂದಿ
ಮುಸಲ್ಮಾನ ಬುಡುಬುಡುಕಿಯುವರು ಇದ್ದಾರೆ, ಆದರೆ ಅವರು ಕರ್ನಾಟಕದವ
ಅವರ ನೆಲೆ ಹೈದರಾಬಾದ ಆ ಕಡೆ ಇದ್ದು ಅವರು ಕಸಬು ಮಾಡುತ್ತ ನಮ್ಮ ರಾಜ್ಯ
ಸಂಚಾರ ಮಾಡುತ್ತಾರಷ್ಟೇ.

**೩. ಭಾಷೆ, ಮಾತು ಇತ್ಯಾದಿ :–**

ಬುಡುಬುಡುಕಿಯುವರು ವಿದ್ಯೆಯಿಲ್ಲದ ನಿರಕ್ಷರಕುಕ್ಷಿಗಳು. ಹೀಗಿದ್ದರೂ ಕನ
ಮೂರು ಭಾಷೆಗಳನ್ನಾದರೂ ಲೀಲಾಜಾಲವಾಗಿ ಮಾತಾಡಬಲ್ಲರು. ಇವರ ಮ
ಮಾತು ಮರಾಠಿ ಭಾಷೆಯಾದರೆ, ಉರ್ದು ಮತ್ತು ಕನ್ನಡ ಭಾಷೆಗಳನ್ನು ಇವರು ಸರ
ವಾಗಿ ಮಾತಾಡುತ್ತಾರೆ. ಈ ಮೂರನ್ನೂ ತಮ್ಮ ಕಸಬಿಗಾಗಿ ನಿರಂತರವಾಗಿ ಬಳಸು
ತ್ತಾರೆ. ಕೆಲವರು ಇನ್ನೂ ದೂರದ ಊರುಗಳನ್ನು ಅಲೆದು ಕೊಂಡು ಇನ್ನೂ ಬೇರ
ಭಾಷೆಗಳನ್ನೂ ಕಲಿತು ಕೊಂಡಿರುವುದು ಅಸಾಧ್ಯವೇನಲ್ಲ. ನಿದರ್ಶನಕ್ಕಾಗಿ ಬೈಲ
ಹೊಂಗಲದ ಹನುಮಂತಪ್ಪ ವಾಕೋಡೆ ಎಂಬಾತ ಸದ್ಯ ಧಾರವಾಡ ತಾಲ್ಲೂಕದ
ಉತ್ತರ ಭಾಗದಲ್ಲೂ ಕಿತ್ತೂರಿನಲ್ಲೂ ಸಂಚರಿಸುವಾತ. ಈತನು ಮೇಲ್ಕಂಡ ಮೂರು
ಭಾಷೆಗಳನ್ನು ಮಾತಾಡುವನಲ್ಲದೆ, ಗೋವಾದಲ್ಲಿಯೂ ಸಂಚರಿಸಿ ಅನುಭವ ಪಡೆದಿರುವ
ನಾದ್ದರಿಂದ ಕೊಂಕಣಿ ಭಾಷೆಯನ್ನೂ ತಕ್ಕ ಮಟ್ಟಿಗೆ ರೂಢಿಸಿಕೊಂಡಿರುವುದು ಗಮ
ನಾರ್ಹವಾಗಿದೆ.

ನಮ್ಮ ಧಾರವಾಡ ಪಟ್ಟಣದ ನಿರೂಪಕನಾದ ಶಿವಾಜಿ ಬಾಗ್ಲೆ ತಾನು ಕಸಬು
ಮಾಡದ ಸಮಯದಲ್ಲೆಲ್ಲಾ ಧಾರವಾಡ ಪಟ್ಟಣದಲ್ಲಿ ಭಾಂಡೆ ಮಾರಿಕೊಂಡು ಉಪ
ಜೀವನ ನಡೆಸುತ್ತಾನೆ. ಈತನ ಮಾತಿನಲ್ಲಿ ಅನೇಕ ಆಂಗ್ಲ ಭಾಷೆಯ ಶಬ್ದಗಳು ಸೇರಿ
ಕೊಂಡಿರುವುದೂ ಗಮನಾರ್ಹವೇ. ಉದಾಹರಣೆಗಾಗಿ–ಸೀಜನ್, ಟೈಮು, ಕರೆಕ್ಟ,
ಆಕ್ಸಿಡೆಂಟ, ಮೆಶಿನರಿ, ಇತ್ಯಾದಿಗಳಿವೆ.

ಇವರೆಲ್ಲರ ಮಾತು ಕೇಳುವಾಗ ಹೆಚ್ಚಾಗಿ ಇವರ್‍ಯಾರು ಆಲೋಚನೆ ವಿಚಾರ
ಮಾಡಿಕೊಂಡು ಮಾತಾಡುವುದು ಕಡಿಮೆಯೇ ಎಂದು ಹೇಳಬೇಕಾಗುತ್ತದೆ. ಬಾಲ್ಯ
ಪ್ರಾಯದಲ್ಲಿಯೇ ಹುಡುಗನು ತಂದೆಯ ಜೊತೆಯಲ್ಲಿ ಕಸಬಿಗೆ ಹೋಗಿ ತನ್ನ ಮನೆತನದ
ಪರಂಪರೆಯನ್ನು ಮೈಗೂಡಿಸಿಕೊಳ್ಳುತ್ತಾನೆ. ಆಗ ಮತ್ತು ಅನಂತರ ತನಗೆ ತಿಳಿದೋ
ತಿಳಿಯದೆಯೋ ತನ್ನ ತಂದೆಯ ಮಾತುಗಳನ್ನೆಲ್ಲಾ ಚಾಚೂ ತಪ್ಪದೆ ಗಿಳಿಪಾಠ ಮಾಡಿ
ಕೊಳ್ಳುತ್ತಾನೆ. ಅಲ್ಲದೆ ಆತನ ಮಾತಿನ ರೀತಿ, ಶೈಲಿ, ಧ್ವನಿ, ಎಲ್ಲವೂ ಆ ಸಂಪ್ರದಾಯಕ್ಕೆ
ಬದ್ಧವಾಗಿಯೇ ಇರುತ್ತವೆ. ಆದ್ದರಿಂದ ಕಸಬು ಮಾಡುವಾಗ ಇವರು ಹೇಳುವುದೆಲ್ಲವೂ
ಅವರ ಜಾಗೃತ ಪ್ರಜ್ಞೆಯಿಂದ ಹೊರಡುವುದು ಕೇವಲ ಅಪರೂಪವೇ. ಯಾಂತ್ರಿಕ
ವಾಗಿಯೇ ಇವರ ನಾಲಿಗೆ ಆಡುತ್ತದೆ ಎನ್ನಲು ಯಾವ ಅಡ್ಡಿಯೂ ಇಲ್ಲ. ಪ್ರಸ್ತುತಕ್ಕೆ

ಅದಕ್ಕೆ ಅರಿಷಿನ ಕುಂಕುಮ ಭಂಡಾರಗಳ ಅಲಂಕಾರಮಾಡಿ, ದೇವನಾಮಸ್ಮರಣೆ ಮಾಡು ತ್ತಾರೆ. ಹೀಗೆಲ್ಲಾ ಮಾಡುವಾಗ ನಿಶ್ಯಬ್ಧ ಮೌನ ವಾತಾವರಣವಿರಬೇಕು. ಪಣ ಕಟ್ಟುವವರೂ ಮಾತಾಡಲೊಲ್ಲರು. ಹಾಗೆಯೇ ಅಲ್ಲಿ ಗೂಗೆ ಮತ್ತು ಹಾಲುವಕ್ಕಿಗಳ ಶಬ್ದವನ್ನು ಕೇಳುತ್ತಾರೆ. ಮೊದಲೇ ಯಾವ ಗಿಡಗಳಲ್ಲಿ ಹಾಲುವಕ್ಕಿ ಇರಬಹುದೆಂದು ಖಚಿತಪಡಿಸಿ ಬಂದಿದ್ದಾರೆ. ಹಕ್ಕಿಯ ಉಲಿತದ ಪ್ರಕಾರ ತಾವು ಶಕುನಭವಿಷ್ಯ ಹೇಳುತ್ತೇವೆ ಎಂಬುದು ಇವರ ವಾದ. ಅಲ್ಲಿಂದ ಎದ್ದು, ಆ ಮೇಲೆ ಅವರು ಇಡಿ ಊರನ್ನೇ ಸುತ್ತು ಹಾಕಬೇಕು. ಇದು ಎರಡನೆಯ ಹೆಜ್ಜೆ. ಹೀಗೆ ಸುತ್ತು ಹಾಕು ವಾಗ ಇವರು ಬುಡುಬುಡುಕಿಯನ್ನು ಬಾರಿಸುತ್ತಾ ತಮ್ಮ ಪರಿಚಯದ ಸಕಲ ದೇವರ ನಾಮಗಳನ್ನುಸುರಿ ನಾಮಸ್ಮರಣೆಮಾಡುತ್ತಾ ನಡೆಯುತ್ತಾರೆ. ಈ ಪ್ರಕಾರ ಮೂರ ರಿಂದ ಒಂಭತ್ತು ದಿನಗಳ ವರೆಗೆ ಈ ಪಣಕಟ್ಟುವ ಹಾಗೂ ಊರನ್ನು ಸುತ್ತು ಹಾಕುವ ಕ್ರಿಯೆ ನಡೆಯಬೇಕು. ಆ ಮೇಲೆ ಮಾತ್ರ ಇವರು ಶಕುನಭವಿಷ್ಯಗಳನ್ನು ಹೇಳಲು ಪ್ರಾರಂಭಿಸಬಹುದು.

ಮೂರನೆಯ ಹೆಜ್ಜೆಗೆ ಇವರು ಊರ ಗೌಡನ ಅಥವಾ ಊರ ಪ್ರಮುಖನ ಮನೆಗೆ ಹೋಗಿ ವಂದಿಸಿ, ತಾವು ಊರಿನ ಬಗ್ಗೆ ಹೇಳಲಿರುವ ಶಕುನ ಭವಿಷ್ಯಗಳನ್ನು ಹೇಳಿ ಸನ್ಮಾನ ಅನುಮತಿಗಳನ್ನು ಪಡೆಯುತ್ತಾರೆ. ಅಲ್ಲಿ ಅವರು ಬಳಸುವ ಮಾತು ಗಳು ಈ ಪ್ರಕಾರ ಇರುತ್ತವೆ :—

ಧಣಿಯರೆ ನಿಮ್ಮ ಈ ಊರಾಗೆ ಹಕ್ಕಿ ನುಡಿದ ಪ್ರಕಾರ ಶಕುನ ಹೇಳ್ತೀನಿ..
ಇನ್ನು ಮೂರು ತಿಂಗಳೊಳಗಾಗಿ ಈ, ನಿಮ್ಮ ಓಣಿಯ ಆಗ್ನೇ ದಿಕ್ಕಿನಲ್ಲಿ...
ಒಂದು ಭೂಮಿಯ ತಂಟೆಯಾಗಿ...
ಒಂದು ಪ್ರಾಣಹಾನಿಯಾಗುತ್ತೈತೆಂದು ಹಕ್ಕಿ ನುಡಿದೈತೆ ಸ್ವಾಮಿ...
ಈ ಎರಡನೇ ಓಣಿಯಲ್ಲಿ ದಕ್ಷಿಣ ಪಶ್ಚಿಮ ಮಧ್ಯದ ಮೂಲಿ ಮೇಲೆ...
ಹೆಣ್ಣಿನ ಸಂಬಂಧ ವಾದವಿವಾದ ಉಂಟಾಗಿ ದೊಡ್ಡ ಜಗಳವಾಗುತ್ತದೆ ಸ್ವಾಮಿ...
ಮತ್ತೆ ಮೂರನೇ ಶಕುನ ಏನಂತೀರಿ ಧಣಿಯರೇ...
ಈ ಊರಲ್ಲಿ ರಂಡೆಮುಂಡಿ ಮಗಗೆ ಮುಂಜಾನೆ ನಕ್ಕೊಂತ ಹೊರಗೆ ಹೋದಂವ ತಿರುಗಿ ಬರುವಾಗ ನಾಲ್ಕು ಮಂದಿ ಹೊತ್ಕೊಂಡು ಬರುತ್ತಾರೆ ಧಣಿಯರೇ,...
ಆದರೆ ಅದು ಹೇಗಲೇ ಮಗನೇ ದೋಷಗ್ಯಾ ಎಂಥ ಕೇಳೀರಿ ಮಹಾರಾಜ್...
ಯಾವುದೇ ದೃಷ್ಟಿಯಿಂದಾಗಲೀ, ಆಕ್ಸಿಡಂಟಾಗಲೀ, ಯಾವುದಾದರೊಂದು ಹೊಡೆದಾಟ ಬಡಿದಾಟದಿಂದಾಗಲೀ ಅವನಿಗೆ ಮರಣ ಐತೆಂತ ಹಕ್ಕಿ ಹೇಳ್ತದ ಧಣಿಯರೇ...
ಧಣಿಯರೇ ನಿಮ್ಮೂರಾಗ ಈ ಮೂರು ಶಕುನ ಹಕ್ಕಿ ನುಡಿದಂಗ ಖಿಕ್ಕಿ ತಿಳಿದು ಪಕ್ಕಾ ಹೇಳ್ತೀನಿ, ನಿನ...

ಅಲ್ಲಿಂದ ಊರಿನ ಜನರ ಮನೆಗಳಿಗೆ ಹೋಗಿ ತಾನು ಕಂಡ ಪ್ರಕಾರ ಹೇ
ಪ್ರಾರಂಭಿಸಿ ನಡೆಯುತ್ತಾನೆ. ಹೀಗೆ ಹೋದವ ಮನೆ ಬಾಗಿಲಲ್ಲಿ ನಿಂತು ತನ್ನ
ಪ್ರಾರಂಭಿಸುವಾಗ ಬುಡುಬುಡುಕಿ ಬಾರಿಸಿ ಸ್ವರದಿಂದ–

ದೇವಾ ರಾಮಚಂದ್ರ ಬಲವೈತಿ...

ಗೌಡರೇ ಗುರುಬಲ ನಿಮಗೈತೀ...ಎಂದು ಇಷ್ಟು ಧ್ವನಿಯೆತ್ತಿ ಹಾಡಿದ ನಂತ
ಮಾತಿಗೆ ತೊಡಗುತ್ತಾನೆ :–

ಮಾರಾಜರೇ ಶನಿ ದೃಷ್ಟಿ ಮಾತ್ರ ನಿಮಗೆ ನೆಟ್ಟೈತಿ. ದೇವೀ ಆಶ್ರಯ ನಿಮಗೈತ್ರಿ
ಜಗದಂಬೆ ನಿಮ್ಮನ್ನು ಕಾಪಾಡುತ್ತಾಳೆ— ಎಂದು ಹೇಳಿ ಬುಡುಬುಡುಕಿಯನ್ನು
ಇನ್ನೊಂದು ಲಯದಲ್ಲಿ ಬಾರಿಸುತ್ತಾನೆ.

ಹೀಗೆ ಹೋದಾಗ ಮನೆಯಲ್ಲಿ ಯಜಮಾನರು ಇಲ್ಲದ್ದು ನೋಡಿದರೆ ಇವರ
ರೀತೀಯೇ ಬೇರೆಯಾಗುತ್ತದೆ. ಆ ಮನೆಯ ಸ್ತ್ರೀಯರಿಗೆ ಒಳ್ಳೆ ಮನಮೆಚ್ಚುವಂತೆ
ಏನಾದರೂ ಹೇಳಿ ಅವರನ್ನು ಒಲಿಸುತ್ತಾರೆ. ಈ ರೀತಿಯಲ್ಲಿ ಅವರಿಂದ ಧಾರಾಳ
ದಾನವನ್ನು ಗಿಟ್ಟಿಸುತ್ತಾರೆ. ಒಂದು ವೇಳೆ ಮೆಚ್ಚುಗೆಯಿಂದ ತಮಗೆ ಲಾಭ ಲಭಿಸ
ದಿದ್ದರೆ ಅವರಿಗೆ ಭಯಭೀತಿಯನ್ನು ಹುಟ್ಟಿಸುವಂತೆ ಆಡಿಕೊಳ್ಳುತ್ತಾರೆ :

ತಾಯಿ ನಿಮ್ಮ ಮುಟ್ಟಿನ ನೀರು ಹಾವಿಗೆ ತಗಲೈತಿ...
ತಾಯಿ ನಿಮ್ಮ ಗ್ರಹದೊಳು ಒರ್ಕಾತ ಕೊರತೆಯಾಗೈತೆ...
ಆ ಹಾವಿನ ದೋಷಮಾತ್ರದಿಂದ ಪೀಡಾ ಹತ್ತೈತಿ ತಾಯವ್ವೇ...
ಎಲಾ ಮಗನೇ ದೋಷಿಗ್ಯಾ ಇದಕ್ಕೆ ಏನು ಮಾಡಬೇಕೆಂದು ಕೇಳ್ತೀರಿ ತಾಯಿ...
ನಿಮ್ಮ ಉಟ್ಟಂಥ ಸೀರಿ ತೊಟ್ಟಂತ ಕುಬುಸಾ ಕಳೆದು ಬಿಡಿ ತಾಯಿೊ...
ಕಳದ ಬಟ್ಟೆ ಇಳಿಯ ತೆಗೆದು ಈ ಜೋಳಿಗಿ ಮ್ಯಾಲೆ ಚೆಲ್ಲಿ ಕೈತೊಳೆದು ದೇವರ
ಮುಂದೆ ದೀಪ ಹಚ್ಚಿ ಬಾ ತಾಯಿೊ...

ಹೀಗೆ ಏನೆಲ್ಲಾ ಉಪಾಯ ಮಾಡಿ ಬಟ್ಟೆ, ಕಾಳನ್ನು ಸಂಗ್ರಹಿಸುತ್ತಾರೆ. ಬೇರೆ
ಯಾರಾದರೂ ಬಂದರೆ ಹಾಗೂ ಇವರಿಂದ ಹೆಚ್ಚೇನಾದರೂ ಗಿಟ್ಟಿಸಬಹುದೆಂದು
ಕಂಡು ಬಂದರೆ ಪುನಃ ಪ್ರಾರಂಭಿಸುತ್ತಾರೆ :

ಮತ್ತು ನಿಮ್ಮ ಸರ್ವ ವಿಘ್ನಗಳು ಪರಿಹಾರವಾಗಿ ...
ನಿಮಗೆ ನಾಲ್ಕು ಮಂದಿಯಲ್ಲಿ ಲೇಸಾಗಿ...
ನೀವು ಹಿಡಿದಂಥ ಮಾತು ಹೌದಾಗಿ...

ಅವರ ಜ್ಞಾನ ಪ್ರ...
ವಾಗಿಯೇ ಇವರ ನಾಲಿಗೆ ಆಡುತ್ತದೆ ಎನ್ನಲು ಯಾವ ಅಡ್ಡಿ...

ಕೊನೆಯಲ್ಲಿ ಸುಖಆಗ್ತೈತಿ...
ಅದರಂತೆ ಈ ನಿಮ್ಮ ಮಗಾ ಬುಡುಬುಡುಕ್ಯಾನ ಮಾತುಮಾತಿನಲ್ಲಿ ತೋರ್ತೈತಿ. .
ಅದಕ್ಕಾಗಿ ತಾಯಿಯವರೇ ನಿಮ್ಮ ಮಗ ಹೇಳಿದ ಪ್ರಕಾರ ಮಂಗಳಾರ ಸುಕ್ರಾರ...
ಒಂದೊತ್ತು ಮಾಡಿ ದೇವಿ ಪೂಜಾ ಮಾಡಿ ಊಟಾ ಮಾಡ್ರಿ ತಾಯವರೇ...
ಅಂದರೆ ದುರ್ಗಮ್ಮಾ ಎಲ್ಲಾ ದುಮ್ಮಾನಗಳನ್ನು ದೂರ ಮಾಡ್ತಾಳ್ರಿ...

ಇಷ್ಟು ಹೇಳುವ ಹೊತ್ತಿಗೆ ಮನೆಯ ಗಂಡನೇನಾದರೂ ಬಂದನೆಂದರೆ ಇವರ ಮಾತಿನ ಸರಣಿ ಬದಲಾಗುತ್ತದೆ:

ಮಹಾರಾಜ ನಿಮಗೆ ಈ ನಿಮ್ಮ ಮಗಾ ದೋಷಿಗ್ಯಾ ಒಂದು ಯಂತ್ರಾ ಮಾಡಿ ಕೊಡ್ತೀನ್ರೀ ಧಣಿಯರೇ...
ದಿನಾ ಜಳಕ ಮಾಡಿ ಬಟ್ಟಲದಲ್ಲಿ ಎಣ್ಣಿ ಹಾಕಿ ಆ ಎಣ್ಣಿಯಲ್ಲಿ ತಾಯಿತದ ನೆರಳ ನೋಡಿ...
ನಿಮ್ಮ ಮುಖಾನ ಅದರಲ್ಲಿ ನೋಡಿಕೊಂಡು ಅದೇ ಎಣ್ಣೆಯನ್ನು ನಿಮ್ಮ ಮನೀ ದೇವರ ಮುಂದೆ ದೀವಿಗಿ ಹಚ್ಚಿ ಮುಂದಿನ ಉದ್ಯೋಗಕ್ಕೆ ಹೋಗರೀ ಅಪ್ಪಾವರೇ...
ಆದರ ಒಂದು, ಈ ನಿಮ್ಮ ಮಗನ ಮಾತ ಒಂದು ನಡಸಬೇಕರೀ....
ಅದೇನೇ ಮಗನೇ ಅಂಥಾ ಕೇಳಿರಿ......
ಹೇಳ್ತೀನಿ ಸ್ವಾಮಿ......
ಅಚ್ಚ ಕರಿಯ ಆರಿವಿ ಮಾತ್ರ ತೊಡಬ್ಯಾಡರೀ ಧಣಿಯರೇ......
ಮನಿ ಗೋದಲಿಯೊಳಗೆ ಕರೀ ಎತ್ತು ಕಟ್ಟಬ್ಯಾಡರೀ ಧಣಿಯರೇ......
ಸ್ವಾಮಿ ಅದರಿಂದ ನಿಮ್ಮ ಜೀವಕ್ಕೆಲ್ಲಾ ಸುಖವಿಲ್ಲ......

ಹೀಗೆಲ್ಲಾ ಹೇಳಿ ಅವರಿಂದ ಬೇಡಿ ಕಾಳುಕಡಿಯನ್ನು ಸಂಪಾದಿಸಿ ಕೊಳ್ಳುತ್ತಾರೆ. ಈ ಪ್ರಕಾರ ಮನ ಒಲಿಸುವ ಕುಶಲತೆಯನ್ನು ಇವರು ಅಳವಡಿಸಿಕೊಂಡಿರುತ್ತಾರೆ. ಇನ್ನೂ ಕೆಲವು ಜನರಿಗೆ ಅವರ ಭಾವವನ್ನು ನೋಡಿ ಇನ್ನೂ ಬೇರೆ ತೆರನಾದ ಮೋಡಿ ಹಾಕುತ್ತಾರೆ.

ಬುಡುಬುಡುಕಿಯನ್ನು ಬಾರಿಸುತ್ತಾ : ದೇವಿ ನಿಮಗೆ ದಯಮಾಡುತ್ತಾಳೆ......
ಜಗದಂಬೆ ತಾಯಿ ಬಲ ನಿಮಗೈತರೀ......
ದೇವಾ ರಾಮಚಂದ್ರ ಬಲವೈತೀ......

ಇನ್ನು ಹಾಡು ತಡೆದು ಮಾತಿನ ಸರಣಿಯಲ್ಲಿ :

ಧಣಿಯರೇ, ಜಾಗದಲ್ಲಿ ನೋಡರೀ ಸುಖಾ ಇಲ್ಲ.
ಹಾಗಾದರೆ ಇದಕ್ಕೆ ಏನ ಮಗನೇ ಬುಡುಬುಡುಕ್ಯಾ ಅಂಥ ಕೇಳಿರಿ......
ನೋಡಿರೀ ಧಣಿಯರೇ ಈಗ ಸದ್ಯಸ್ಕಾಲ, ಈ ಸದ್ಯಸ್ಕಾಲಕ ತಾವು ಮ
ಒಂದು ಕೆಲಸಕ ಕೈ ಹಾಕೀರಿ ಮಹಾರಾಜ್......
ಅದು ಸಾಧ್ಯವಾದೀತೋ ಇಲ್ಲೋ ಅಂಥ ಸದಾ ಕೊರಗುತಾ ಇದ್ದಿ
ಧಣಿಯರೇ...
ಹೌದೋ ಮಗನೇ ದೋಷಿಗ್ಯಾ ಅದು ಖರೇ...
ಮುಂದೆ ಏನೈತೆ ಹೇಳೋ ಮಗನೇ...
ನೋಡರೀ ಧಣಿಯರೇ ನಿಮ್ಮ ಮನದಾಗ ಕನಕನ ಕನವರಸ್ತೈತರೀ...
ಆದಕ್ಕ ಮಾತ್ರ ನೋಡರಿ ಅಪ್ಪಾವರೇ...
ಆರು ತಿಂಗಳ ಅವ್ದಿ ಅವಕಾಶ, ಆದರಲ್ಲಿ ಅಪ್ಪಾರ ಪ್ರಾಪ್ತಿ ಐತರಿ ಸ್ವಾಮಿ..
ಆ ಅಪ್ಪಾರ ಆವ ಪರಿಯಿಂದ ದೂರಾದೀತು, ಪರ್ಯ್ಯಾರಾದೀತು....
ಅಂತ ಬೈಗೂ ಬೆಳಗೂ. ಎದ್ರೂ ಕುಂತ್ರೂ ಉಸಿರು ಕಳೆದು ಬೇಸರಗೊಂಡಿ
ಅಪ್ಪಾವರೇ...
ಈ ನಿಮ್ಮ ಮಗನ ಮಾತನ್ನು ನಡೆಸಿಕೊಡರಿ...
ಬಂದಂಥ ಎಲ್ಲಾ ಸಂಕಟ ದೂರು ಮಾಡುವಂಥ ಸರ್ವ ವಿಘ್ನ ಪರ್ಯ್ಯಾರಕ
ಯಂತ್ರ, ನವಗ್ರಹ ಯಂತ್ರ, ಯಕ್ಷಿಣಿ ಯಂತ್ರ, ಸಮೃದ್ಧಿ ಯಂತ್ರ ತಕ್ಷಣಮಾಡಿ
ಕಟ್ಟುತೀನ್ರಿ ಬಾಬಾ...
ಕಸಿವಿಸಿಗೊಳ್ಳಬ್ಯಾಡರೀ ಧಣಿಯರೇ...
ಕಳವಳ ಬ್ಯಾಡರೀ, ತುಳಜಾಭವಾನಿ ಕೃಪಾ ಮಾಡ್ತಾಳರೀ...

ಇಷ್ಟು ಹೇಳಿ ಧ್ವನಿ ತೆಗೆದು :

ಸ್ವಾಮಿ ರಾಮಚಂದ್ರ ಬಲವೈತಿ,
ದೇವೀ ಮಾಯವ್ವನ ದಯ ನಿಮಗೈತಿ...
ಗುರು ದಶಾ ಮಾತ್ರ ಬಹಳೈತರೀ...
ಮಂಜುನಾಥ ಸ್ವಾಮಿಯ ಬಲವೈತಿ... ಎಂದು ಹೇಳುತ್ತಾರೆ.

ಇದಕ್ಕೆಲ್ಲ ಬೆಳ್ಳಿ ತಗಡು ಬೇಕು, ಕರೇ ದಾರದ ಖಂಡಿಕಿ ಬೇಕು, ಪಂಚಕಪ್ಪುರ, ಕಸ್ತೂರಿ ಬೇಕು, ಗೋರೋಜನ, ಆಕಳ ಹಾಲು, ಇವೆಲ್ಲವನ್ನು ಕೂಡಿಸಿ ಬೆಳ್ಳಿ ತಗಡಿನ ಮೇಲೆ ಯಂತ್ರ ಬರೆದು ಬಲರಟ್ಟೆಯಲ್ಲಿ ಕಟ್ಟುತ್ತೇನೆ ಎಂದೂ ಹೇಳುತ್ತಾರೆ. ಇದಕ್ಕೆ ಇನ್ನೂ ಒಂದು ಮಾತಿನ ಪಾಲನೆ ಬೇಕನ್ನುತ್ತಾರೆ. ತಾಯಿತ ಧರಿಸಿದ ಮೇಲೆ ಸತ್ತವರ

ಮನೆಗೆ, ಹಡೆದವರ ಮನೆಗೆ ಯಾವುದೇ ತರಹದ ಹೊಲೆಮನೆಗೆ ಮಾತ್ರ ಹೋಗ ಬಾರದು ಎಂಬುದು. ಹಾಗೆ ಹೋಗುವ ಪ್ರಸಂಗ ಬಂದರೂ ಕೂಡಾ ತಾನು ಕೊಟ್ಟ ತಾಯಿತವನ್ನು ಬಿಚ್ಚಿ ನೆಲುವಿನ ಕಾಲಿಗೆ ಕಟ್ಟಿ, ಹೋಗಿ ಬಂದಮೇಲೆ ಜಳಕಮಾಡಿ ಮಡಿಯಿಂದ ಧರಿಸಬೇಕು ಎಂಬುದೂ ಆತನ ಅಪ್ಪಣೆ. ಹೀಗೆ ಮಾಡಿದರೆ ಮುಂದಿನ ಪುಷ್ಯ ಮಾಸದೊಳಗೆ ಅವರಿಗೆ ಎಲ್ಲ ಸುಖದುಃಖಗಳೂ ಪುಟ ಬಿಟ್ಟಂತೆ ಆಗುತ್ತವೆ ಎಂಬ ಆಶ್ವಾಸನೆ ಆತನದು. ಇಷ್ಟೆಲ್ಲ ಹೇಳಿಯಾದ ತರುವಾಯ

"ಮಕ್ಕಳು ಮರಿಗಳು ಹಸಿದಾವರೀ, ಧಣಿಯರೇ...
ಅಮ್ಮಾನವರಿಗೆ ಹೇಳಿರಿ ಐದು ಸೇರು ಜೋಳ, ಐದು ಸೇರು ಗೋದಿ, ಐದು ಸೇರು ಅಕ್ಕಿ ತೀವ್ರ ದಾನಮಾಡಂತ ಹೇಳರಿ...
ಹಾಂ ಇನ್ನೊಂದು ಮಾತರೀ ಧಣಿಯರೇ....
ಅಮ್ಮಾನವರು ಸುಮ್ಮಸುಮ್ಮನೆ ದುಮ್ಮಾನದಿಂದ ದುಃಖಿಸಿ ಮಾಡಿಕೊಂಡು ಹಿಡಿದು ನಿಂತಾರರಿ...
ಅವರಿಗೆ ನೋಡರಿ ದೇವರು...
ಇದನೆ ಯಾಕೆ ಹೇಳಲೊಲ್ಲೆ ಮಗನೇ ಬುಡುಬುಡುಕ್ಯಾ ಅಂದೀರಿ...
ಹಕ್ಕಿ ನುಡಿದುದ್ದು, ಹಲ್ಲಿ ನುಡಿದುದ್ದು ಕಂಡು ತಿಳಿದು ನಾನು ಹೇಳಕ್ಕತ್ತೀನ್ರಿ ಮಹಾರಾಜ.
ಈಗ ಸದ್ಯ ನೋಡರೀ, ಅಮ್ಮಾನವರಿಗೆ...
ಕಣ್ಣಿಗೆ ಕಂಡದ್ದು ಕೈಗೆ ಇಲ್ಲ...
ಕೈಗೆ ಬಂದುದ್ದು ಭಾಯಿಗಿಲ್ಲ...
ಬಯ್ಸೀದ ಬಯಕೆಲ್ಲಾ ಬಯ್ಲಾಗಿ ಸಿರ್ಬಯುಲ್ಯಾಗ ನಿಂತಾಂಗ ನಿಂತಾರರಿ ಅಮ್ಮಾನವರು...
ಅದು ಏನೆಲಾ ಮಗನೇ, ದೋಷಿಗ್ಯಾ ಅಂತೀರಿ ಧಣಿಯುವರೇ...
ಅಮ್ಮಾನವರನ್ನು ಸ್ವಲ್ಪ ಮುಂದೆ ಕರಿಯಿರಿ ಧಣಿಯರೇ...
ಓಹೋ, ತಾಯಿ ಮುಖ ನೋಡಿದರೆ ತಾರಾಬಲ, ಚಂದ್ರಬಲ, ಗುರುಬಲ,...
ಎಲ್ಲವೂ ದೈವಬಲ ಮುಖ ಮುದ್ರೆಯ ಮೇಲೆ ಒಡೆದು ಕಾಣ್ತಾವರೀ ಧಣಿ...
ತಾಯಿಯ ವಿಶಾಲ ಹಣಿ ವಿಶಾಲ ಗುಣ ಯಾವ ಲಕ್ಷಣಕ್ಕೂ ಕೊರತೆಯಿಲ್ಲ ಧಣಿ...
ಆದರೆ ನೋಡರಿ ತಾಯಿ ನಿಮಗೆ ಉಣ್ಣಾಕ ಉಡಾಕ ತೊಡಾಕ ಯಾವ ತೊಂದರೆ ಇಲ್ಲ ಅವ್ವವ್ರಾ...
ಸಂತಾನ ಚಿಂತಿ ಒಂದು ಬಂದು ನಿಮ್ಮನ್ನು ಚೆಂದು ಬೇಯಿಸಿ ಬಿಟ್ಟಯ್ತೆ ತಾಯಿ...

ಅಂದರ ನೋಡರಿ ತಾಯಿಯವರೇ, ಮಕ್ಕಳ ಬಗ್ಗೆ ಮನದಾಗ ಮರುಗಿ
ಸೊರಗಿ ಕರಗಾಕ ಹತ್ತೀರಿ ತಾಯಿ...

ಅದಕ ಈ ನಿಮ್ಮ ಮಗಾ ಹೇಳ್ತೀನರೀ ಅವ್ವಾವ್ರೇ...

ಅಷ್ಟು ಮಾಡ್ರೀ ತಾಯಿ...

ನೋಡ್ರೀ ತಾಯಿ ಹೆಳಂದ್ರು ಹೇಳ್ತೀನಿ, ಅಮ್ಮಾವರೇ...

ಈ ನಿಮ್ಮ ಮಗನ ಮಾತು ಎಂದೂ ಹುಸಿ ಆಗಾಕಿಲ್ರೀ ತಾಯಿ...

ಅದು ಏನಪ್ಪಾ ಮಗನೇ ದೋಷಿಗ್ಯಾ ಅಂದೀರಿ ತಾಯಿ...

ನಿಮ್ಮಮನೆಯಲ್ಲಿದ್ದಂಥ ಹೆಣ್ಣು ದೇವರ ಹರಿಕಿ ಮಾತ್ರ ತಡೆದು ನಿ
ತಾಯಿ...

ಅದನ್ನು ಮಾತ್ರ ಗಡಿಬಿಡಿ ಮಾಡಿ ಆ ದೇವೀ ಹರಿಕಿ ಮುಟ್ಟಿಸಿ ಬಿಡ್ರೀ ..

ಅದಕ ಏನ್ಮಾಡಿ ಮುಟ್ಟಿಸಬೇಕೆಂಬುದು ಹೇಳ್ತೀನ್ರಿ ಈ ಮಗಾ....

ನೋಡ್ರೀ ತಾಯಿ, ನೀವು ಬಂಗಾರದ ಐದು ಮಾಸಿಯಾಗಲೀ ಐದು ಗು
ಯಾಗಲೀ ದೇವಿ ಮೂರ್ತಿ ಮಾಡಿಸಿ ಅದಕ್ಕೆ ಅಭಿಷೇಕ ಮಾಡಿಸಿ, ಹತ್ತು ಕಟ್ಟಿ
ಕರೇ ಅರಿವಿ, ಹತ್ತು ಚಟಾಕ ಕರೇ ಎಳ್ಳು, ಹತ್ತು ಕರೇ ಕಣ್ಣಿನ ಟೆಂಗಿನಕಾಯ
ಹತ್ತು ಕರೇ ಕಬ್ಬಿನ ಕಣಕಿ, ಎಲ್ಲವನ್ನೂ ದೇವಿಗೆ ಹರಿಕೆ ಮುಗಿಸುವುದು ಉಳಿದಿ
ತಾಯಿ...

ಇಷ್ಟೆಲ್ಲಾ ಸಾಹಿತ್ಯ ತರಿಸಿ, ಈ ಮಗನ ಕೈಯಲ್ಲಿ ಕೊಡಿರಿ, ಎಲ್ಲಾ ಸ
ಮಾಡ್ತೀನಿ....

ಅದನ್ನು ಹ್ಯಾಗ ಮಾಡ್ತಿಯಪ್ಪಾ ಮಗನೇ ಅಂದರೆ ನೋಡರಿ ತಾಯಿ....

ನಿಮ್ಮ ಹೊಲದಾಗ ಒಂದು ಬನ್ನೀ ಗಿಡ ಐತೆ...

ಆ ಬನ್ನೀ ಗಿಡದ ಬುಡಕ್ಕೆ ರಂಗ ಹೊಯ್ದು, ಎಳ್ಳು ಗಂಟು ಕಟ್ಟಿ ಇಟ್ಟು, ಹತ್ತು
ಕಾಯಿ ಸುತ್ತು ದಿಕ್ಕುಗಳಿಗಿಟ್ಟು, ನಡುವೆ ಆ ಬಂಗಾರದ ಮೂರ್ತಿ, ದೇವಿ
ಮೂರ್ತಿ ಇಟ್ಟು, ಏನೆಲ್ಲಾ ಪೂಜೆ ಪುನಸ್ಕಾರ ಮಾಡಿ, ನಾನು ಬಂದುಬಸ್ತು
ಮಾಡಿ ಬರ್ತೀನ್ರಿ ತಾಯಿ...

ಮತ್ತ ಇದರಾಗ ಇನ್ನೊಂದು ಮರೆತೀನ್ರೀ ಅಮ್ಮಾವರೇ...

ಹತ್ತು ದಿಕ್ಕುಗಳಿಗೆ ಹತ್ತುತ್ತಾಣೆಯಂತೆ ರೊಕ್ಕ ಮಾತ್ರ ಇಡಬೇಕರೀ ತಾಯಿ...

ಅಂದರ ಎಲ್ಲಾ ಸರಿ ಹೋಗಿ ಮತ್ತು ಏನಪ್ಪಾ ಅಂದೀರಿ . . .

ನೀವು ಮಾತ್ರ ಪ್ರತಿ ಮಂಗಳವಾರ ಸುಕ್ರವಾರ

ನೀವು ಜಳಕ ಮಾಡಿ ಜಗದಂಬನ ಪೂಜಾ ಮಾಡಿ ಒಂದೊತ್ತು ಮಾಡ್ರೀ...

ಹಿಂಗ ಹನ್ನೊಂದು ವಾರ ಮಾಡ್ರೀ ಅಮ್ಮಾವರೇ,...

ಏನೊಂದು ಮುಂದೊಂದು ಕಂಟಕ ಇದ್ದರೂ ಕಾಳಿಕಾ ಭವಾನೀ ಕೃಪೆಯಿಂದ ಸಿರಸಿ ಮಾರಮ್ಮನ ದಯದಿಂದ ಸರರರ ಸರಿದು ಸರಳ ಸ್ವತೋಷ ಪ್ರಾಪ್ತಿ ಯಾಯ್ತೈರಿ, ಮತ್ತ ಪುತ್ರ ಸಂತಾನ ಸ್ಥಿರವಾಗ್ತೈತಿರಿ…

ತಾಯಿೊ ಮಹಾರಾಜರ ಮುಂದೆ ಹೇಳಿದಂತೆ ಐದು ಸೇರು ಜೋಳ, ಐದು ಸೇರು ಗೋದಿ, ಐದು ಸೇರು ಅಕ್ಕಿ ಎಲ್ಲಾನು ಮೇಲುಗೈ ಮಾಡಿ ದಾನಮಾಡಿರಿ ತಾಯಿ....

ತಮ್ಮ ದಾನ ಕೊಟ್ಟ ಮನೆಗೆ ಹಾಲು ಹಳ್ಳಾಗಿ, ಬೆಳ್ಳಿ ಬಟ್ಟಲವಾಗಿ, ತೂಗು ತೊಟ್ಟಿಲ ಘನವಾಗಿ ಸಾಗಲೆಂದು ಈ ನಿಮ್ಮ ಮಗಾ ಹರಿಕಿಯಿಟ್ಟು ಹೋಗ್ತಾನರೀ....

ಇದಕ ಮಾತ್ರ ತಪ್ಪುಸಬ್ಯಾಡರೀ ತಾಯಿ, ನಾನು ಮುಂದೆ ಬಂದಾಗ ಏನು ಹೇಳಿದ ಏನು ತಿಳಿದ ಎಂಬುದು ತಿಳಿತೈತರೀ ತಾಯಿೊ.....

ಕೊಟ್ಟದ್ದಾಕ ಮಾತ್ರ ಮರುಗಬ್ಯಾಡರಿ. ಕೊಡೊ ಶಿವ ಬಡವಲ್ರೀ, ತಮಗೆ ಕೊಟ್ಟೇ ಕೊಡ್ತಾನ....

ಏಳ್ರೀ ತಾಯಿೊ, ಹಸಿವ್ಯಾಗೈತೀ……

ಈ ನಿಮ್ಮ ಮಗನ ಸಂತೋಷ ಮಾಡಿ ಕಳಿಸಿರಿ ತಾಯಿೊ

ಪುನಃ ಧ್ವನಿಯೇರಿಸಿ :

ದೇವಾ ರಾಮಚಂದ್ರ ಬಲವೈತಿ……

ಸ್ವಾಮಿ ಮಂಜುನಾಥ ಕೃಪಾ ನಿಮಗೈತಿ……

ಲೋಕೂರ ದ್ಯಾಮವ್ವನ ದಯಾ ನಿಮಗೈತಿ……

ಮುಲಗೀಯ ಮುಲಗಮ್ಮನ ಕೃಪಾ ನಿಮಗೈತಿ....

ಮಾಕೂಟ ಮಲ್ಲೇಶನ ದಯ ನಿಮಗೈತ್ರೀ....

ತಾಯಿ ಮೊರ ತುಂಬ ಕಾಳ ತಂದ ನೀಡ ತಾಯಿೊ……

ಜಯ ಜಯ ಜಯ ಜಯ ಜಯವಾಗುತ್ತದ ನಿಮಗ.....

ಭಯ ದೂರವಾಗುತೈತಿ ತಾಯಿೊ……

ಗುರು ದಯ ನಿಮಗೈತಿ……

ಗುರು ದಿಶಾ ಮಾತ್ರ ಬಹಳೈತಿ ತಾಯಿೊ……

ಜಯ ಜಯ ಜಯ ಜಯವಾಗುತ್ತದೆ ತಾಯಿೊ……

ಇಷ್ಟು ಹೇಳಿಕೊಂಡು ತನ್ನ ಬಹುಮಾನ ಪಡಕೊಂಡು ಓಣಿಯಲ್ಲಿ ಮುಂದಕ್ಕೆ ಸಾಗುತ್ತಾನೆ. ಅಲ್ಲೂ ಇದೇ ಪ್ರಕಾರ ಅಥವಾ ಇನ್ನೂ ತನ್ನ ನೆನಪಿನಲ್ಲಿರುವ ಬೇರೆ ವಿವರಗಳನ್ನೂ ಹೇಳಿಕೊಳ್ಳುತ್ತಾನೆ. ಕೆಲವೆಡೆಗಳಲ್ಲಿ ಮಕ್ಕಳನ್ನು ಕಂಡರೇ ಅತನಿಗೆ ಹೊಸ ಹುರುಪು. ಅವರಿಗೆ ಮರುಳು ಮಾಡುವಂತಹ ಮಾತುಗಳನ್ನು ಹೇಳಿ

ಅವರನ್ನು ಪುಲಕಿತಗೊಳಿಸುತ್ತಾನೆ. ಅಥವಾ ತುಂಟ ಮಕ್ಕಳನ್ನು ಕಂಡರೆ ಅ
ಅಳುಕನ್ನುಂಟುಮಾಡುವ ಬೇರೆ ಮಾತುಗಳೂ ಆತನ ಬತ್ತಳಿಕೆಯಲ್ಲಿ ಇಲ್ಲವೆಂ
ಇನ್ನು ಬೆಳೆಯುತ್ತ ನಿಂತ ಹೆಣ್ಣು ಮಕ್ಕಳನ್ನು ಕಂಡರೆ ಆಕೆಯು ಹಸ್ತ ಸಾಮುದ್ರಿಕವ
ಹೇಳುವಂತೆಯೋ ಅಥವಾ ಶುದ್ಧ ಹಕ್ಕಿ ಶಕುನ ಹೇಳುವಂತೆಯೋ ನಟಿಸಿ ಆಕೆ
ಲಗ್ನದ ಬಗ್ಗೆ ಪ್ರಸ್ತಾಪಿಸಿ ಆಕೆಯನ್ನು ನಾಚಿಕೆಯಿಂದ ಮುದ್ದೆಯಾಗುವಂತೆ ಮಾ
ತ್ತಾನೆ. ಅಥವಾ ಆಕೆಗೆ ಮನತುಂಬುವ ವಿಚಾರಗಳನ್ನು ತಿಳಿಸಿ ಆಕೆಯನೆರವಿನಿಂ
ಮನೆಯ ಹಿರಿಯರು ತನಗೆ ಧಾರಾಳತನವನ್ನು ತೋರಿಸವಂತೆಯೂ ಮಾಡಬಲ್ಲನು.

## ೭. ಇವರ ನಂಬಿಕೆ ಆಚಾರ ವಿಚಾರಗಳು :

ಇವರ ಕಸಬು ಮಾಡುವ ಕ್ರಮದಲ್ಲೇ ಈ ಬಗ್ಗೆ ಸಾಕಷ್ಟು ಒಡೆದು ಕಾಣಿಸುತ್ತದ
ಯಾದರೂ, - ಇವರಿಗೆ ನಿತ್ಯ ಸಾಮಾನ್ಯವಾದಂತಹ ಕೆಲವು ನಂಬಿಕೆಗಳನ್ನು ನಾವಿಲ್ಲಿ
ಗಮನಿಸಬೇಕು. ಇವರು ತಮ್ಮ ನಂಬಿಕೆಗಳನ್ನು ಹಾಲುವಕ್ಕಿಯ ಮಾತಿನ ಮೇಲೆ,
ಹಲ್ಲಿಯ ಒದರಾಟದ ಮೇಲೆ, ಗ್ರಹಗಳ ಮೇಲೆ, ಹಾವಿನ ಮೇಲೆ ಹೀಗೆ ಬೇರೆ ಬೇರೆ
ವಿಷಯಗಳ ಮೇಲೆ ಊರಿಕೊಳ್ಳುತ್ತಾರೆ.

### ಹಕ್ಕಿಯ ಆಧಾರದ ಮೇಲೆ :

ಇವರು ಸ್ಮಶಾನದಲ್ಲಿದ್ದಾಗ ಪಣಕಟ್ಟಿದಾಗ, ಹಾಲುಪಕ್ಕಿ ಕೂಗುವುದಕ್ಕಿಂತಲೂ
ಮುಂಚೆ ಗೂಗೆ ಕೂಗಿತೆಂದರೆ ಅವರ ಅಭಿಮತದ ಪ್ರಕಾರ ಲಕ್ಷಣ ಅಷ್ಟೊಂದು ಶುಭಕರ
ವಲ್ಲ. ಇದು ಅದರ ಒಂದೇ ಕೂಗು ಕೇಳಿಸಿದರೆ. ಆದರೆ ಒಂದರ ನಂತರ ಒಂದು
ಎರಡು ಕೂಗು ಕೇಳಿಸಿದರೆ ಇದು ಕೇವಲ ಶುಭಕರವಲ್ಲ, ಮಾತ್ರವಲ್ಲ, ಗ್ರಾಮದ
ಗ್ರಾಮಕ್ಕೆಯೇ ಇದು ತೊಂದರೆದಾಯಕ ಎಂದು ಭಾವಿಸುತ್ತಾರೆ. ಆದ್ದರಿಂದ ಇವರು
ಪಣಕಟ್ಟುವಾಗ ಗೂಗೆಯು ಕೂಗು ಕೇಳಿಸದೆ ಇದ್ದರೆ ಮಾತ್ರ ಶುಭ ಎಂಬುದು ಇವರ
ತೀರ್ಮಾನ.

ಇನ್ನು ಹಾಲುಪಕ್ಕಿಯು ಉಲಿತ ಕಿಲಿಬಿಲಿ ಎಂದು ಕೇಳಿಸುತ್ತದೆ. ಇದು ಕೇವಲ
ಒಂದು ಸಲ ಮಾತ್ರ ಕೇಳಿಸಿತೆಂದರೆ ಸಾಧಾರಣ ಶುಭಕರ, ಹಾಗು ಎರಡುಸಲ ಕೇಳಿ
ಬಂದರೆ ಹೆಚ್ಚು ಶುಭಕರ. ಮೂರು ಸಲ ಕೇಳಿಸಿತಾದರೆ ಲಾಭ ಅತಿ ಕಡಿಮೆ, ಹಾಗೂ
ನಾಲ್ಕು ಸಲ ಉಚಿತ ಕೇಳಿಸಿದರೆ ಹಿಂದಿನ ವರುಷದಂತೆಯೇ ಎಂದು ಇವರು ಭವಿಷ್ಯದ
ತೀರ್ಮಾನವನ್ನು ಮಾಡುತ್ತಾರೆ. ಜೋಡು ಹಕ್ಕಿಗಳು ಜೊತೆಯಾಗಿ ಒಂದು ಸಲ
ಮಾತ್ರ ಉಲಿದರೆ ಅದು ಸಾಧಾರಣ ಶುಭಕರ, ಹಾಗೂ ಎರಡು ಸಲ ಉಲಿದವೆಂದರೆ
ಅದು ಉತ್ತಮಮಕರ ಎಂಬ ಭಾವನೆ ಇವರದು. ಈ ಜೋಡು ಪಕ್ಕಿಗಳಲ್ಲಿ

ಒಂದೊಂದಾಗಿಯೇ ಪ್ರಶ್ನೋತ್ತರದಂತೆ ಉಲಿದವೆಂದರೆ ಇನ್ನೂ ಹೆಚ್ಚು ಶುಭಕರ ಎಂದು ತಿಳಿಯುತ್ತಾರೆ.

ಈ ಹಕ್ಕಿಗಳು ಉಲಿಯುತ್ತಿದ್ದಂತೆಯೇ ಗಿಡಬಿಟ್ಟು ಹಾರಿದರೆ, ಅವು ಯಾವ ದಿಕ್ಕಿಗೆ ಹಾರುತ್ತವೆ, ಯಾವ ಗಿಡದಲ್ಲಿ ಕುಳಿತು ಉಲಿಯುತ್ತವೆ ಎಂಬುದೆಲ್ಲಾ ಇವರ ಗ್ರಹಣಕ್ಕೆ ಮುಖ್ಯವಾದುದೇ. ಹೀಗೆ ಅದು ಅರಳಿ ಮರದಲ್ಲಿದ್ದರೆ ಬ್ರಾಹ್ಮಣರಿಗೆ ಸಂಬಂಧ, ಬೇವಿನ ಮರದಲ್ಲಿದ್ದರೆ ಬೇಟೆಕಾರನಿಗೆ ಸಂಬಂಧ, ಜಾಲಿಮರದಲ್ಲಿದ್ದರೆ ಸರ್ಮಕಾರನಿಗೆ ಸಂಬಂಧ, ಹಾಗೂ ಗೋವಿನ ಮರದಲ್ಲಿದ್ದರೆ ಮಾಲಗಾರನಿಗೆ ಸಂಬಂಧ ಎಂದು ಇವರು ಸಂಬಂಧ ಕಟ್ಟುತ್ತಾರೆ. ಓಣಿಯ ಕಡೆ ಹಾರಿದರೆ ಆ ಪ್ರದೇಶಕ್ಕೆ ಮಾತ್ರ ಸಂಬಂಧ, ಅಥವಾ ಅವುಗಳು ಊರಿನ ಗೋಡೆಯೋ ಕೋಟೆಯನ್ನೋ ಆಶ್ರಯಿಸಿ ಉಲಿದರೆ ಇಡೀ ಊರಿಗೆಯೇ ಸಂಬಂಧ ಪಟ್ಟ ವಿಷಯವೆಂದು ಇವರ ಊಹೆ.

ಹಲ್ಲಿಯ ಶಕುನದ ಮಟ್ಟಿಗೆ ಹೆಚ್ಚಿನ ಸ್ವಾರಸ್ಯವೇನೂ ಕಾಣಿಸದಿದ್ದರೂ, ಮನೆಯಲ್ಲಿ ಜೋಡಿ ಹಲ್ಲಿ ಕೂಗಿದರೆ, ಆಗುವ ಕೆಲಸ ಆಗುತ್ತದೆ. ಆದರೆ ಕೊಂತು ನಿಂತು ಹೋಗಪ್ಪಾ ದೋಷಿಗ್ಯಾ ಎಂಬ ಕಲ್ಪನೆ ಇವರದು.

ಗ್ರಹಗಳ ಮಟ್ಟಿಗೆ ಅವರ ಕಲ್ಪನೆ ದಿನಗಳು ಅನುಕೂಲವೋ ಎಂದು ನಿರ್ಣಯಿಸುವುದರಲ್ಲಿದೆ. ಇದೇನೂ ಮಹಾ ಬುದ್ಧಿಶಕ್ತಿಯ ಕೆಲಸವಲ್ಲ, ಇವರಿಗೆ ಇದೂ ಗಿಳಿಪಾಠವಾಗಿಯೇ ಇರುತ್ತದೆ. ಸಾಮಾನ್ಯವಾಗಿ ಊರುಗಳ ಸೂಕ್ಷ್ಮ ಪರಿಚಯ ವಿರುವ ಇವರಿಗೆ ಯಾವ ಮನೆಯವರು ಯಾವ ಜಾತಿಗೆ ಸೇರಿದವರು ಎಂಬುದರ ಬಗ್ಗೆ ಪೂರ್ಣ ಮನವರಿಕೆ ಇದ್ದೇ ಇರುತ್ತದೆ. ಹಾಗೆ ಅವರು ಶಕುನ ಹೇಳುತ್ತಿರುವಾಗ ಆಯಾ ಜಾತಿಯವರಿಗೆ ಪೂಜ್ಯವಾದ ದಿನವನ್ನೇ ಆರಿಸಿಕೊಂಡು ಅವರವರಿಗೆ ಮನ ತೃಪ್ತಿಯಾಗುವಂತಹ ಸಲಹೆಯನ್ನೇ ನೀಡುತ್ತಾರೆ.

ಹೀಗೆ ಸಾಮಾನ್ಯವಾಗಿ ಎಲ್ಲರಿಗೂ ಹೇಳುವ ವಿಷಯುಗಳು :

ಸುಕ್ರವಾರ ಮಂಗಳವಾರ ಶನಿವಾರ ಉಪ್ಪು ಮಾತ್ರ ಹೊರಗೆ ಕೊಡಬ್ಯಾಡರೀ
ನಿಮ್ಮ್ಸಿ ಲಕ್ಷ್ಮೀ ಪರಮನಿಗಿ ಹೋಗ್ತ್ಯಾಳ ಪರಮನಿ ಲಕ್ಷ್ಮೀ ನಿಮ್ಮನಿಗೆ ಬರ್‍ತಾಳೆ.
ಅಮಾಸಿ ದಿವ್ಸ ಪಾಟಿ ಬಿಡಿ, ಹಿಡಿದ ಕೆಲಸ ಪಾಸಾಗ್ತದರೀ.

ಜನರನ್ನು ಹುಟ್ಟಿದ ವಾರ ಯಾವುದೆಂದು ಕೇಳಿ ಆ ದಿವಸ ಕಷ್ಟ (ಕ್ಷೌರ) ಮಾಡಿಸಬೇಡಿರಿ ಎಂದು ಹೇಳುತ್ತಾರೆ. ಬ್ರಾಹ್ಮಣರಿಗೆ, ಮರಾಠಿ ಜನರಿಗೆ ಶನಿವಾರ ಮಾರುತಿ ಉಪಾಸನೆಗೆ ಪ್ರೇರೇಪಿಸುತ್ತಾರೆ. ಇವರನ್ನು ನೋಡಿದಾಗಲೇ ಅವರಿಗೆ ಸಂಬಂಧಿಸಿದ ಮಾತನ್ನೇ ಆಡತೊಡಗುತ್ತಾರೆ.

ದೇವಾ ರಾಮಚಂದ್ರ ಬಲವೈತಿ......
ರಾಮಚಂದ್ರ ದೇವರ ಬಲವೈತಿ....
ಸ್ವಾಮಿ ಸೇವಕ ದೂತನ ಬಲ ನಿಮಗೈತಿ....
ಬಲಭೀಮನ ಜಯ ಬಲ ನಿಮಗೈತಿ......

ಇತರ ಜಾತಿಯವರಿಗೆ ದುರ್ಗವ್ವ, ಕಾಳವ್ವ, ಕಂಟ್ಯವ್ವ. ಎಲ್ಲವ್ವ ಇತ್ಯಾದಿ ದೇವತ ಉಪಾಸನೆಗೆ ಪ್ರೇರೇಪಿಸಿ, ಮಂಗಳವಾರ ಶುಕ್ರವಾರಗಳ ಉಪಾಸನೆಗೆ ಹುರಿಗೆ ಸುತ್ತಾರೆ.

ಶುಕ್ರವಾರ ಶನಿವಾರ ಎರಡು ದಿವಸ ಕಷ್ಟಮಾಡುವುದು ಬಂದು ಮಾಡಿರಿ
ಶುಕ್ರವಾರ ಜಲುಮದ ಘಾತುವಾರ

ಹೀಗೆಲ್ಲಾ ಹೇಳಿಕೊಂಡು ಮುಂದುವರಿಯುತ್ತಾರೆ.

ಹಾವಿನ ವಿಷಯವೆಂದರೆ, ಹಾವು ಬಂದಾಗ ಅದನ್ನು ಬಡಿಯಬೇಡಿರಿ ಎಂದು ಹೇಳುತ್ತಾರೆ. ಇನ್ನು ಕೆಲವರಿಗೆ ಬೆಳ್ಳಿಯ ಹಾವನ್ನು ಮಾಡಿಸಿ ಜಗಲಿ ಮೇಲಿಟ್ಟು ಪೂಜೆಮಾಡಲು ಹೇಳುತ್ತಾರೆ. ಇದನ್ನು ತಾವು ಎತ್ತಿಕೊಂಡು ಹೋಗಬೇಕೆಂಬ ಭಾವನೆ ಇದ್ದರೆ, ಐದು ತೊಲೆಯ ಬೆಳ್ಳಿಯ ಹಾವು ಮಾಡಿಸಿ, ಹುತ್ತದ ಮೇಲಾಗಲೀ ಅಥವಾ ಹರಿಯುವ ನೀರಿನ ಹೊಳೆಯ ದಂಡೆಯ ಮೇಲಾಗಲೀ, ಆಯಾ ಊರಿನ ಪರಿಸರ ಹಾಗೂ ನಂಬಿಕೆ ಕಲ್ಪನೆಗಳ ಪ್ರಕಾರ ಸೂಚನೆ ಕೊಟ್ಟು, ಅಲ್ಲಿ ಅದರ ಪೂಜೆ ಮಾಡಿ, ಹಿಂತಿರುಗಿ ನೋಡದೆಯೇ ಮನೆಗೆ ತೆರಳಬೇಕೆಂದು ಹೇಳುತ್ತಾರೆ. ಹೆಚ್ಚಾಗಿ ಈ ಶಕುನ ಕಲ್ಪನೆಯೆಲ್ಲ ಸ್ವಲಾಭಕ್ಕಾಗಿಯೇ ಎಂದು ಕಾಣಿಸುತ್ತದೆ. ಕೇಳುವ ಜನರು ಮಾತ್ರ ಬಹುತೇಕ ಅವಿದ್ಯಾವಂತರೂ ನಿರಕ್ಷರಕುಕ್ಷಿಗಳೂ ಇರುವುದರಿಂದ ಹೆಚ್ಚಾಗಿ ಹಳ್ಳಿಯ ಜನರು ಹಳ್ಳಿಗೆ ಹಳ್ಳಿಯೇ ಇವರ ಮಾತನ್ನು ನಂಬುವವರೇ.

**೮. ಸಮಾರೋಪ :**

ಬುಡುಬುಡುಕಿಯವರಿಗೆ ಹಳೆಯ ಕಾಲದ ಸಮಾಜದಲ್ಲಿ ಒಂದು ನಿರ್ದಿಷ್ಟ ಕಾರ್ಯ ಇದ್ದಿರಬೇಕೆಂಬುದು ಇವರ ಕೆಲವು ಮಾತುಗಳಿಂದ ಊಹಿಸಬಹುದು. ವಿಶೇಷವಾಗಿ ಶುಚಿತ್ವ ನೈರ್ಮಲ್ಯ ಎಂದರೇನೆಂದು ಜನರು ತಿಳಿಯದ ಕಾಲದಲ್ಲಿ ಮನೆ ವಾತಾವರಣ ವನ್ನು ಶುಚಿಯಾಗಿಡಲು ಮುಗ್ಧ ಜನರ ಭಾವುಕತೆಯ ಲಾಭಪಡೆದು ಬುಡುಬುಡುಕಿ ಯವರು ಮನೆಯ ಶುಚಿತ್ವವನ್ನು ಹೀಗೆ ಉಪದೇಶಿಸುತ್ತಿದ್ದರು :

ಬಾಗಿಲ ಮುಂದೆ ಮುಸುರೆ ನೀರು ಕಾಲ್ಮಡಿ ಬಂಧ ಮಾಡಿರಿ...
ರಾತ್ರಿ ದೇವರ ಸಂಚಾರ ಹಗಲಿಗೆ ಮನುಷ್ಯ ಸಂಚಾರ ...

ಬಾಗಿಲ ಎಷ್ಟು ಸ್ವಚ್ಛ ಇರುತ್ತದೆ. ಮನೆ ಅಷ್ಟು ಸ್ವಚ್ಛ ಇರುತ್ತದೆ...
ಬಾಗಿಲ ಮನೆಗಳು ಸ್ವಚ್ಛ ಇದ್ದರೆ ಮನ ಅಷ್ಟೇ ಸ್ವಚ್ಛ ಇರುತ್ತದೆ...

ಆದರೆ ಇಂದು ಶುಚಿತ್ವದ ಬಗ್ಗೆ ಬೇರೆ ದಾರಿಗಳೂ ಬೇರೆ ರೂಢಿಗಳೂ ಬೆಳೆದಿರುವಾಗ ಇವರ ಬೋಧನೆಗೆ, ಅದೂ ಅರ್ಧಮರ್ಧ ಕಲ್ಪನೆಯ ಸಲಹೆಗೆ ಬೆಲೆಯಿಲ್ಲ. ಹೀಗಿದ್ದರೂ ಇವರು ಪರಂಪರಾಗತವಾದ ಮಾತಿನ ಬುಟ್ಟಿಯನ್ನು ಬದಲಾಯಿಸುವವರಲ್ಲ.

ಪ್ರಾರಂಭದಲ್ಲೇ ಹೇಳಿದ ಪ್ರಕಾರ ಐದುನೂರಕ್ಕಿಂತಲೂ ಹೆಚ್ಚು ಮನೆಗಳು ಇದ್ದರೂ, ಇವರಲ್ಲಿ ರೂಪಾಯಿಗೆ ಐದು ಪೈಸೆಯಷ್ಟು ಮಂದಿ ಮಾತ್ರ ಈ ಕಸಬು ಮಾಡುತ್ತಾರೆಂಬುದು ಸಾಮಾನ್ಯ ಅಭಿಪ್ರಾಯ. ಇದಕ್ಕೆ ಕಾರಣ ಏನೆಂದು ಕೇಳಿದರೆ ಕೆಲವರು ತಮಗೆ ಸಾಕಷ್ಟು ಭಿಕ್ಷೆ ಸಿಗದಿದ್ದುದೇ ಮುಖ್ಯ ಕಾರಣವೆನ್ನುತ್ತಾರೆ. ತಾವು ಭಿಕ್ಷುಕರಲ್ಲವೆಂದು ಹಟವಾಗಿ ವಾದಿಸುವ ಇವರೇ ತಮಗೆ ಭಿಕ್ಷೆ ಸಿಗುವುದಿಲ್ಲವೆಂದು ಕಾರಣ ಕೊಡುವುದೂ ಸ್ವಾರಸ್ಯಕರವೇ. ಬಹಳ ಅಪರೂಪಕ್ಕೆ ಇವರ ಪೈಕಿ ಕೆಲವರು ತಮ್ಮ ಕಸಬು ಜಾಣತನ ವಿದ್ಯೆಯ ಮೇಲೆ ಹೊಂದಿಕೊಂಡಿಲ್ಲವೆಂದು ತಿಳಿದು, ಜ್ಯೋತಿಷ್ಯ ವಿದ್ಯೆಯನ್ನು ಕಲಿತು, ತಾವು ಗ್ರಾಮಾಂತರಗಳಲ್ಲಿ ಕಸಬು ಮಾಡುವುದನ್ನು ಬಿಟ್ಟು, ತಮ್ಮ ಬೀಡಿನಲ್ಲೇ ಜನರು ಬರುವಂತೆ ಮಾಡಿಕೊಂಡು ಸಾಕಷ್ಟು ಸಂಪಾದನೆ ಮಾಡುತ್ತಲಿದ್ದಾರೆ. ಆದರೆ ಅವರನ್ನು ಇನ್ನು ಬುಡುಬುಡುಕಿಯವರೆಂದು ಕರೆಯಬಹುದೋ ಎಂಬ ಪ್ರಶ್ನೆ. ಜನಾಂಗದ ಮಟ್ಟಿಗೆ ಅವರೇನೋ ಒಂದೆ ಸಮಾಜಕ್ಕೆ ಸೇರಿದವರಾದರೂ ಕಸಬಿನ ಮಟ್ಟಿಗೆ ಅವರು ಈ ಪಂಗಡದಿಂದ ಬೇರೆ ಆಗಿರುವರೆಂಬುದು ಗಮನಾರ್ಹ.

ಪುರುಷರು ಕಸಬುಮಾಡುವಾಗ ಮಹಿಳೆಯರು ಮನೆಯಲ್ಲೇ ಇದ್ದುಕೊಂಡು ಮಕ್ಕಳು ಮರಿಗಳ ಪರಿಪಾಲನೆ ಮಾಡುವುದಲ್ಲದೆ ಕೌದಿ ಹೊಲಿದು ಸಂಪಾದನೆ ಮಾಡುತ್ತಾರೆ. ಪುರುಷರು ಇನ್ನೇನು ಮಾಡಬಲ್ಲರು ಎಂದು ಕೇಳಿದರೆ, ಇತ್ತೀಚೆಗೆ ನಿಮ್ನ ವರ್ಗದವರಿಗೆ ನೌಕರಿ ಸೌಲಭ್ಯಗಳುಂಟಾಗಿರುವುದರಿಂದ, ಹೆಚ್ಚು ಮಂದಿ ಈಗ ನೌಕರಿ ಮಾಡ ತೊಡಗಿದ್ದಾರೆಂದು ಹೇಳುವರು. ಆದರೆ ಇದರ ಬಗ್ಗೆ ಅಂಕೆಸಂಖ್ಯೆಗಳೇನೂ ಲಭ್ಯವಿಲ್ಲ.

ಬುಡುಬುಡುಕಿಯವರು ತಮ್ಮ ಕಸಬು ಮಾಡುವಾಗ ಸುತ್ತುಮುತ್ತಲಿನ ಜನರಿಗೆ ಒಂದು ರೀತಿಯ ಸ್ವಾರಸ್ಯಕರವಾದ ವಿನೋದವನ್ನೂ ಒದಗಿಸುತ್ತಾರೆ. ಅವರ ಕೈ ಚಳಕದ ಪ್ರಕಾರ ಉಲಿಯುವ ಆ ಪುಟ್ಟ ವಾದ್ಯ ಕೇಳುಗರನ್ನು ಮರುಳುಗೊಳಿಸುವುದಂತೂ ಖಂಡಿತವೇ. ಅಷ್ಟಿದ್ದರೂ ಸ್ವಲ್ಪ ನಾಗರಿಕತೆಯ ಗಾಳಿ ಸೋಂಕಿದ ಊರು

ಗಳಲ್ಲಿ ಬುಡುಬುಡುಕಿಯುವರನ್ನು ಕಂಡಾಗ ಜನರು ಅವರಿಗೆ ದಾನ ಕೊಡ
ಬದಲು ಅವರನ್ನು ಬೆದರಿಸಿ. ಇವರ ಬುರುಡೆಯು ಮಾತಿಗೆ ಮಾರುಹೋಗದೆ,
ಕಷ್ಟ ಪಟ್ಟು ದುಡಿದು ಸಂಪಾದಿಸಿರಿ, ಭಿಕ್ಷಾಟನೆ ತರವಲ್ಲ ಎಂದು ಓಡಿಸುತ್ತಾರೆ
ಹಲವಾರು ಮಂದಿ ನಿರೂಪಕರ ಅನುಭವ. ಆದ್ದರಿಂದ ಈ ಜನಾಂಗದ
ತಮ್ಮ ಕಸಬನ್ನು ಅವಲಂಬಿಸಿ ಉಪಜೀವನ ನಡೆಸುವುದೆಂದರೆ ಉಪವಾಸ
ಬೇಕಾಗುವುದು. ಇದಕ್ಕೆ ಇತ್ತೀಚೆಗೆ ಕೆಲವರು ಕಂಡುಹಿಡಿದ ಉಪಾಯವೆಂದರೆ,
ಕಸಬು ಮಾಡುವ ಕಾಲಕ್ಕೆ ಅಂದರೆ ನವರಾತ್ರಿಯು ಕಾಲಕ್ಕೆ ಕಸಬು ಮಾಡುವ
ಆ ದಿನಗಳಲ್ಲಿ ಜನರೆಲ್ಲಾ ಉತ್ಸಾಹಭರಿತರಾಗಿ ಓಗ್ಗಿನಿಂದಿದ್ದು, ತುಂಬುಮನಸ್ಸಿ
ರಾಗಿರುವುದು ಸಾಮಾನ್ಯವಾಗಿದ್ದುದರಿಂದ, ಆ ದಿವಸಗಳಲ್ಲಿ ಇವರಿಗೆ ದಾನಧ
ಸಿಗುವುದಂತೂ ನಿಶ್ಚಿತವೇ. ಆ ದಿವಸಗಳಲ್ಲಿ ಕಸಬಿನ ನೆರವಿನಿಂದ ಇವರು ಸಂಪಾ
ದುದು ವರ್ಷದುದ್ದಕ್ಕೂ ಬಾಳದಾದರೂ. ತಕ್ಕ ಮಟ್ಟಿಗೆ ಅನುಕೂಲವಾಗುತ್ತ
ಇನ್ನುಳಿದ ಕಾಲಕ್ಕೆ ಉಪಜೀವನದ ಬೇರೆ ಮಾರ್ಗವನ್ನವಲಂಬಿಸಬೇಕು. ಅದಕ್ಕಾಗಿಯೆ
ಅವರು ಈಗ ಹೊಸ ಅಲುಮಿನಿಯಮ್ ಲೋಹದ (ಜರ್ಮನ್) ಪಾತ್ರೆಗಳನ
(ಬಾಂಡೆಗಳನ್ನು) ಮಾರುತ್ತ ಊರಲೆಯುತ್ತಾರೆ. ಇದರಿಂದ ಸಾಕಷ್ಟು ಸಂಪಾದನೆಯು
ಆಗದಿಲ್ಲ. ಹೀಗೆ ಇವರ ಸಂಪ್ರದಾಯು ನವರಾತ್ರಿಯು ಹುರುಪಿನಲ್ಲಿ ತೀರಾ ಅಳಿದು
ಹೋಗುವ ಭಯವಿಲ್ಲದಿದ್ದರೂ, ಇದಕ್ಕೆ ವೈಜ್ಞಾನಿಕ ಶಾಸ್ತ್ರೀಕತೆಯು ಆಧಾರ ಇಲ್ಲದ್ದ
ರಿಂದ ಇದು ಬೆಳೆಯುವುದಂತೂ ಅಸಾಧ್ಯವೇ. ಹಾಗಿದ್ದರೂ. ನಮ್ಮ ದೇಶದಲ್ಲಿ
ರೂಪಾಯಿಗೆ ಎಂಭತ್ತು ಪೈಸೆಯಷ್ಟು ಜನರು ನಿರಕ್ಷರಕುಕ್ಷಿಗಳಿರುವಾಗ ಇವರನ್ನು ನಂಬಿ
ಅವಲಂಬಿಸುವವರಿಗೆ ಕೊರತೆಯಿಲ್ಲ. ಆದ್ದರಿಂದ ಇವರ ಕಲೆ ಕಣ್ಮರೆಯಾಗಲಾರ
ದೆಂದು ತೀರ್ಮಾನಿಸಬಹುದು.

ತಮ್ಮ ಮಾತು ಕೇಳುವವರು ಯಾರು ಎಂಬುದನ್ನು ಮಾತ್ರ ಇವರು ಗಮನಿಸಿ, ಇಂಥ ರನ್ನು ಮೆಚ್ಚಿಸುವ ಬಗೆಯೆಂತು ಎಂಬುದನ್ನು ನಿರ್ಣಯಿಸುವ ಮಟ್ಟಿಗೆ ಮಾತ್ರ ತಮ್ಮ ಜಾಗೃತ ಪ್ರಜ್ಞೆಯನ್ನುಪಯೋಗಿಸಿ ಸೂಕ್ಷ್ಮವಾಗಿ ತೂಕಮಾಡುವುದು ಕಾಣಿಸುತ್ತದೆ. ಒಮ್ಮೆ ಈ ತೀರ್ಮಾನ ಮಾಡಿ ಆಯಿತೆಂದರೆ, ಆ ಪ್ರಕಾರವಾಗಿ ತಮ್ಮ ವಾಕ್ಸರಣಿಯನ್ನು ನಿಯಂತ್ರಿಸಿದರೆಂದರೆ ಆ ಮೇಲೆ ಅವರು ಹೇಳುವುದೆಲ್ಲವೂ ಗಿಳಿಪಾಠವೇ. ಆಗ ಮಾತ್ರ ಒಂದು ಧ್ವನಿ ಮುದ್ರಿಕೆಯ ಯಂತ್ರ ನಡೆಯುವಂತೆ ಅವರ ಬಾಯಿ ನುಡಿಯುತ್ತದೆ.

### ೪. ವೇಷ, ಭೂಷಣ, ವಾದ್ಯ ಮತ್ತು ಇತರ ಪರಿಕರಗಳು :-

ವಿಚಿತ್ರ ವೇಷ ಭೂಷಣಗಳೇನೂ ಇರದಿದ್ದರೂ ಇವರ ರೂಪದಲ್ಲಿ ಇವರದೇ ಆಗಿರುವ ವೈಲಕ್ಷಣ್ಯಗಳು ಕಾಣಿಸದೇ ಇಲ್ಲ. ಉದ್ದಕ್ಕೆ ಪಂಜೆಯುಟ್ಟು ಜುಬ್ಬವನ್ನು ಧರಿಸುತ್ತಾರೆ. ಅದರ ಮೇಲೆ ದಪ್ಪವಾದಂತಹ ಕೋಟು ಹಾಕುವುದು ಇವರ ಈಗಿನ ವಾಡಿಕೆ. ಹಿಂದೆ ಇವರು ಉದ್ದವಾದ ನಿಲುವಂಗಿಯನ್ನು ಹಾಕುವ ವಾಡಿಕೆಯಾಗಿತ್ತು. ಇವರಲ್ಲಿ ಅನುಕೂಲವಿದ್ದವರು ಅಧಿಕ ಬೆಲೆಬಾಳುವ ಉಣ್ಣೆಯ ಕೋಟನ್ನು ಧರಿಸುವು ದನ್ನೂ ನಾವು ಕಂಡಿದ್ದೇವೆ. ತಲೆಗೆ ಒಂದು ಕಡು ಬಣ್ಣದ ಮುಂಡಾಸು ಅಥವಾ ಪಟ್ಟಾವನ್ನು ಸುತ್ತುತ್ತಾರೆ. ಹೆಗಲಮೇಲೆ ಬಟ್ಟೆಯಿಂದ ನಿರ್ಮಿತವಾದಂತಹ ಜೋಳಿಗೆ ಯನ್ನು ಇಳಿಬಿಡುತ್ತಾರೆ. ಇದಕ್ಕೆ ಹಿಂಬದಿಗೂ ಮುಂಬದಿಗೂ ಚೀಲಗಳಿವೆ. ಸಾಕಷ್ಟು ದಾನ ಕಾಣಿಕೆಗಳನ್ನು ಅದರಲ್ಲಿ ತುಂಬಿಸಲು ಅನುಕೂಲವಿದೆ. ಇದೆಲ್ಲ ಹಾಕಿದ ನಂತರ ಮೇಲೆ ಒಂದು ಕೆಂಪು ಶಲ್ಯವನ್ನೂ ಇಳಿಬಿಡುವುದು ಒಂದು ಸಾಮಾನ್ಯ ವಾಡಿಕೆ ಎನ್ನ ಬಹುದು. ಇವರ ಕೈ ಬೆರಳುಗಳಿಗೆ ಉಂಗುರಗಳಿರುತ್ತವೆ. ಕೆಲವರ ಕಿವಿಯಲ್ಲಿ ಒಂಟೆ ಗಳಿರುವುದನ್ನೂ ನಾವು ಕಂಡಿದ್ದೇವೆ. ಹಣೆಯ ಮಧ್ಯದಲ್ಲಿ ಕೆಳಗಿಂದ ಮೇಲಕ್ಕೆ ಒಂದು ಗಂಧದ ನಾಮವನ್ನೆಳೆದು ಅದರ ನಡುವೆ ಅಗಲ ಗಾತ್ರದ ದೊಡ್ಡದೊಂದು ಕುಂಕುಮದ ಬೊಟ್ಟನ್ನು ಇಟ್ಟರೆ ಇವರ ಅಲಂಕಾರ ಮುಗಿಯಿತು.

ಇಷ್ಟೆಲ್ಲಾ ಇವರ ವೇಷಭೂಷಣವಾದರೆ, ಇವರ ಕೈಯಲ್ಲಿ ಪರಿಕರಗಳು ಬೇರೆ. ಇವರ ಮುಖ್ಯ ಪರಿಕರವೆಂದರೆ ಇವರ ಕೈಯಲ್ಲಿರುವ ಆ ಪುಟ್ಟ ವಾದ್ಯ, ಬುಡಬುಡುಕಿ. ಇವರ ಸಂಪ್ರದಾಯದಲ್ಲಿ ಇದು ಶಿವನ ವಾದ್ಯ ಎಂಬ ಪ್ರತೀತಿ ಇದೆ. ಅಷ್ಟೆ ಅಲ್ಲದೆ ಅದರ ಬಗ್ಗೆ ಅನೇಕ ಕಥೆಗಳೂ ಇಲ್ಲದಿಲ್ಲ. ಅವುಗಳಲ್ಲಿ ಒಂದೆರಡನ್ನು ಇಲ್ಲಿ ಅವಲೋಕಿ ಸುವುದು ಉಚಿತವೆನಿಸಬಹುದು.

ಒಂದು ಕಥೆಯ ಪ್ರಕಾರ, ಒಮ್ಮೆ ಶಿವಪಾರ್ವತಿಯರು ತಮ್ಮ ಭಕ್ತರಿಗೆ ವರಗಳನ್ನು ನೀಡುತ್ತಾ ಇದ್ದರಂತೆ. ಬಂದ ಬಂದವರಿಗೆ ಅವರು ಬೇಡಿದ್ದನ್ನು ದಾನ ಮಾಡಿದರು.

ನಿಗೆ ಇವರ ಕೈಯಲ್ಲಿದ್ದುದೆಲ್ಲಾ ಮುಗಿದಾಗ ಬುಡುಬುಡುಕಿಯ ಜನಾಂಗದವ
ದು ಬೇಡತೊಡಗಿದರು. ಆಗ ಪಾರ್ವತಿ ಅವರನ್ನು ಬರಿಗೈಯಲ್ಲಿ ಕಳುಹಲೊಪ್ಪ
ನ ಕೈಯಲ್ಲಿದ್ದ ಡಮರುವನ್ನೇ ಅವರಿಗೆ ದಾನ ಮಾಡಿಸಿದಳಂತೆ. ಇದನ್ನೇ ತಮ
ಪಜೀವನದ ಆಧಾರವಾಗಿಟ್ಟು ಇವರು ಬದುಕುತ್ತಿದ್ದಾರೆ.

ಇನ್ನೊಂದು ಕಥೆಯ ಪ್ರಕಾರ ಮೂರು ಮಂದಿ ರಾಕ್ಷಸ ಅಣ್ಣ ತಮ್ಮಂದಿರು
ವಿಧ್ವಂಸಕ ಶಕ್ತಿಯಲ್ಲಿ ಎಲ್ಲರನ್ನೂ ಮೀರಿಸಿದ್ದರು. ಈ ದರ್ಪದಿಂದ ಎಲ್ಲರನ್ನೂ ಹಿಂಸಿಸಿ
ಪೀಡಿಸುತ್ತಿದ್ದರು. ನರರೂ ಸುರರೂ ಇವರ ಹಾವಳಿಯಿಂದ ಕಂಗಾಲಾಗಿದ್ದರು.
ಇಷ್ಟು ಸಾಲದುದಕ್ಕೆ ಇವರ ಶಕ್ತಿ ಎಷ್ಟು ಪ್ರಬಲವಾಯಿತೆಂದರೆ, ಇವರು ದೇವದೇವತೆ
ಗಳನ್ನೂ ಕಾಡಿಪೀಡಿಸತೊಡಗಿದರು. ಈ ಉಪದ್ರವದಿಂದ ಪರಿಹಾರವನ್ನು ಹುಡುಕು
ತ್ತಿದ್ದಾಗ ನಾರದನು ಒಂದು ಸಲಹೆ ಕೊಟ್ಟನಂತೆ. ಇದನ್ನು ತಡೆಯಬೇಕಾದರೆ ಅದು
ಕೃಷ್ಣನೊಬ್ಬನಿಂದಲೇ ಸಾಧ್ಯ ಎಂದು ಸೂಚಿಸಿದನಂತೆ. ಆಗ ದೇವದೇವತೆಗಳೆಲ್ಲ ಕೃಷ್ಣನ
ಮೊರೆಹೊಕ್ಕರು. ಇವರ ರಕ್ಷಣೆಗಾಗಿ ಕೃಷ್ಣನು ಬುಡುಬುಡುಕಿಯವನ ವೇಷ ಹಾಕಿ
ಕೊಂಡು, ಬುಡುಬುಡುಕಿಯನ್ನು ಬಾರಿಸುತ್ತಾ ಬಂದು ಈ ಕಂಟಕಿಗಳಾದ ದೈತ್ಯರ
ಸ್ತ್ರೀಯರಿಗೆ ತಮ್ಮ ಬಂಜೆತನವನ್ನು ನೀಗಿಸುವ ದಾರಿಯನ್ನೂ ಅವರ ಭವಿಷ್ಯವನ್ನೂ
ಹೇಳಿದನಂತೆ. ಆತನ ಸಲಹೆಯ ಪ್ರಕಾರ ನಡೆದಾಗ ಅವರ ಪಾತಿವ್ರತ್ಯ ಕೆಟ್ಟು
ಹೋಯಿತು. ಅವರ ಗಂಡಂದಿರ ಶಕ್ತಿಬಲಗಳೆಲ್ಲಾ ಇವರ ಪಾತಿವ್ರತ್ಯದ ಆಧಾರದ
ಮೇಲೆ ಅವಲಂಬಿಸಿಕೊಂಡಿದ್ದುದರಿಂದ, ಇವರ ಪಾತಿವ್ರತ್ಯ ನಾಶವಾದಂತೆಯೇ
ಅವರ ಬಲವೂ ಉಡುಗಿ ಹೋಯಿತು. ಆ ಮೇಲೆ ಕೃಷ್ಣನು ಅವರನ್ನು ಸುಲಭವಾಗಿ
ಧ್ವಂಸಮಾಡಿ ಜಯಭೇರಿ ಹೊಡೆದು ಹಿಂತಿರುಗುತ್ತಿದ್ದನು. ಆಗ ದಾರಿಯಲ್ಲಿ ಆತನಿಗೆ
ಈ ಜನಾಂಗದವರು ಎದುರಾದರು ಮಾತ್ರವಲ್ಲ. ಆತನ ಕೈಯಲ್ಲಿದ್ದ ಆ ಪುಟ್ಟ ಡಮರು
ವನ್ನೂ ಬೇಡಿ ಪಡೆದರು. ಕೃಷ್ಣನು ಅದನ್ನವರಿಗೆ ದಾನ ಮಾಡಿದನು ಮಾತ್ರವಲ್ಲದೆ,
ಇನ್ನು ಮುಂದೆ ತಾನು ಪ್ರಾರಂಭಿಸಿದ ಭವಿಷ್ಯ ಹೇಳುವ ವೃತ್ತಿಯನ್ನು ಅವರು ನಿರಂತರ
ವಾಗಿ ಮುಂದುವರಿಸಿಕೊಂಡು ಹೋಗಬೇಕೆಂದೂ ಕಟ್ಟಪ್ಪಣೆ ಮಾಡಿದನಂತೆ. ಅಂದಿ
ನಿಂದ ಇವರು ತಮ್ಮ ಉಪಜೀವನಕ್ಕಾಗಿ ಹಕ್ಕಿಶಕುನ ಹೇಳುವ ವೃತ್ತಿಯನ್ನು ನಡೆಸುತ್ತಾ
ಬಂದಿದ್ದಾರೆ.

ಇಲ್ಲಿ ನಾವು ಗಮನಿಸಬೇಕಾದ ಒಂದು ವಿಷಯವಿದೆ. ತಮ್ಮ ಧರ್ಮಪರಂಪರೆ
ಸಂಪ್ರದಾಯಗಳನ್ನು ಹೇಳುವಾಗ ಇವರು ಇನ್ನೂ ಒಂದು ಸೂಕ್ಷ್ಮ ವಿಷಯವನ್ನೂ
ಗಮನದಲ್ಲಿಡುತ್ತಾರೆ. ತಾವು ಸಂಚಾರ ಮಾಡುವ ಪ್ರದೇಶ ವೈಷ್ಣವ ಪಂಥ ಪ್ರಬಲ
ವಾದುದೋ ಅಥವಾ ವೀರಶೈವ ಪಂಥ ಪ್ರಬಲವಾದುದೋ ಎಂದು ಗಮನಿಸಿಯೇ.
[illegible] ಅವರು ಜನರಿಗೆ ಪ್ರಸಾರಮಾಡುತ್ತಾ ನಡೆಯುತ್ತಾರೆ.

ಈ ಬದಲಾವಣೆಗಳೆಲ್ಲಾ ಇವರು ತಮ್ಮ ಅನುಕೂಲಕ್ಕಾಗಿ ಮಾತ್ರ ಮಾಡುವರು. ಇವರ ಸ್ವಂತ ಪಂಥ ಹೆಚ್ಚಾಗಿ ವೀರಶೈವದ ಕಡೆ ವಾಲಿಕೊಂಡಿದೆ ಎಂದು ಅನುಮಾನಿಸಲಿಕ್ಕೆ ಅಡ್ಡಿಯಿಲ್ಲ.

ಇವರ ಪರಂಪರೆ ಮೂಲಗಳ ಬಗ್ಗೆ ಸ್ವಾರಸ್ಯಕರವಾದ ಕಥೆಗಳು ಇನ್ನೂ ಅನೇಕ ಇರಬಹುದು, ಇವೆ. ಆದರೆ ಅವುಗಳ ಬೆನ್ನು ಹತ್ತುವುದು ಇಲ್ಲಿಗೆ ಸುಸಂಗತವೇನಲ್ಲ. ಆರದು. ಇಂತಹ ಕಥೆಗಳಿವೆ ಎಂಬುದಕ್ಕೆ ಮೇಲಿನ ಎರಡು ನಿದರ್ಶನಗಳು ಸಾಕು. ಇವರ ಕೈಯಲ್ಲಿರುವ ಬುಡುಬುಡುಕಿ ಒಂದು ಪುಟ್ಟ ಚರ್ಮ ವಾದ್ಯ. ಸಣ್ಣದೊಂದು ಸಾಗವಾನಿ ಮರದ ತುಂಡನ್ನು ಕೊರೆದು, ನಡು ಸಣ್ಣದಾಗಿರುವಂತೆ ಮಾಡಿ ಇದನ್ನು ತಯಾರಿಸುತ್ತಾರೆ. ಇದರ ಎರಡೂ ಮುಖಗಳು ಸುಮಾರು ಎರಡುವರೆ ಮೂರಂಗುಲದಷ್ಟು ವ್ಯಾಸವಿರುತ್ತವೆ. ಈ ಎರಡೂ ಮುಖಗಳಿಗೆ ನೆರಳಿನಲ್ಲಿ ಒಣಗಿಸಿದ ಆಡಿನ ಅಥವಾ ಕುರಿಯ ಜಠರದ ಚರ್ಮವನ್ನು ಬಿಗಿಯಾಗಿ ಕಟ್ಟುತ್ತಾರೆ. ಇದರ ಸಣ್ಣ ನಡುವಿಗೆ ಬದ್ದೆ ಎಂದು ಕರೆಯುತ್ತಾರೆ, ಹಾಗೂ ಅಲ್ಲಿ ಕಟ್ಟುವ ದಾರಕ್ಕೆ ಬದ್ದೆದಾರವೆಂದೂ ಕರೆಯುತ್ತಾರೆ. ಈ ಬದ್ದೆ ದಾರ ಎಷ್ಟು ಬಿಗಿಯಾಗಿರುತ್ತದೋ ಅಷ್ಟೇ ಇಂಪಾದ ಧ್ವನಿ ಅದನ್ನು ಬಾರಿಸುವಾಗ ಹೊರಡುತ್ತದೆ. ಈ ಬದ್ದೆಯ ನಡುವೆ ಎರಡು ದಾರದ ತುಂಡುಗಳನ್ನು ಕಟ್ಟುತ್ತಾರೆ. ಮತ್ತು ಇವುಗಳ ಒಂದು ಕೊನೆ ಬಿ ಇದ್ದು, ಆ ಕೊನೆಗೆ ಗಟ್ಟಿಯಾದ ಗಂಟುಹಾಕಿ ಅದಕ್ಕೆ ಮೇಣದ ಲೇಪನಮಾಡುತ್ತಾರೆ. ಇದು ಬಿಡಿಯಾಗಿರುವುದರಿಂದ ಬದ್ದೆಯ ಕಡೆ ಕೈಯಲ್ಲಿ ಹಿಡಿದು ಬುಡುಬುಡುಕಿಯನ್ನು ತಿರುಗಿಸಿದಾಗ ಈ ಬಿಡಿ ಕೊನೆ ಚರ್ಮಕಟ್ಟಿದ ಮುಖಕ್ಕೆ ಹೊಡೆದು ಸಪ್ಪಳವನ್ನೆಬ್ಬಿಸುತ್ತದೆ. ತೋರುಬೆರಳನ್ನು ಬದ್ದೆದಾರದೊಳಗೆ ಸೇರಿಸಿ ಹಿಡಿದು ಬುಡುಬುಡುಕಿಯನ್ನು ಹಿಂದೆಮುಂದೆ ರಭಸವಾಗಿ ತಿರುಗಿಸಿಯೇ ಇದನ್ನು ಬಾರಿಸುವುದು. ಸಪ್ಪಳವನ್ನು ನಿಯಂತ್ರಿಸಲು ಬುಡುಬುಡುಕಿಯವರು ತಮ್ಮ ತೋರುಬೆರಳಿನಿಂದ ಆ ಬದ್ದೆದಾರವನ್ನು ತೀವ್ರ ಬಿಗಿಗೊಳಿಸುತ್ತಾರೆ ಅಥವಾ ಬಿಡುತ್ತಾರೆ. ಹೀಗೆ ಈ ವಾದ್ಯವನ್ನು ತಾಳಬದ್ಧವಾಗಿ ಬಾರಿಸುವುದೇ ಒಂದು ಕಲೆಯೆನಿಸುತ್ತದೆ.

ಈ ವಾದ್ಯವನ್ನು ಹೇಗೆ ಹೇಗೋ ಬಾರಿಸಿದರೆ ಆಗದು. ಆಯಾ ಕಾರ್ಯಕ್ಕೆ ಅನುಗುಣವಾಗಿ ಆಯಾ ತೆರನಾಗಿ ಅದನ್ನು ಬಾರಿಸಬೇಕು, ಮತ್ತು ಅವರು ಬಾರಿಸುತ್ತಾರೆ. ಹೀಗೆ ಪಣಕಟ್ಟಿದಾದ ತರುವಾಯ ಊರು ಸುತ್ತು ಹಾಕುವಾಗ ಪಣದ ವಾದನ ಒಂದು ತೆರನಾದರೆ, ತಾಳ ಹಾಕುವ ವಾದನ ಬೇರೆಯೇ ರೀತಿಯದ್ದು. ಹಾಡುವಾಗ ತಾಳ ಹಾಕುವ ವಾದನ ಇನ್ನೊಂದು ರೀತಿಯಾದರೆ, ಮಾತಾಡುವಾಗ ಬೇರೆಯೇ ರೀತಿಯಿಂದ ಬಾರಿಸುವರು. ಕಥಾ ಪ್ರಸಂಗಕ್ಕೆ ಒಂದು ರೀತಿಯಲ್ಲಿ ಬಾರಿಸಿದರೆ ಭವಿಷ್ಯ ಹೇಳುವಾಗ ಪೂರ್ಣ ಇನ್ನೊಂದು ರೀತಿಯಲ್ಲಿ ಬಾರಿಸುತ್ತಾರೆ. ಇದರಿಂದಲೇ ಬಾರಿಸುವಾತನ ನಿಪುಣತೆ ಹಾಗೂ ಕಲಾತ್ಮಕತೆ ತಾನೇ ವ್ಯಕ್ತವಾಗುತ್ತವೆ.

ಇನ್ನು ಈ ವಾದ್ಯವಲ್ಲದೆ ಇವರ ಕೈಯಲ್ಲಿ ಬೇರೆ ಪರಿಕರಗಳೂ ಇವೆ. ಬ
ನೆಂದರೆ ಹಲವಾರು ಚಿತ್ರಗಳನ್ನೊಳಗೊಂಡ ಹೊತ್ತಗೆ. ಓದು ಬರಹ ತಿಳಿಯದ
ನರು ಆ ಹೊತ್ತಗೆಯ ಮೂಲಕ ಜನರಿಗೆ ಭವಿಷ್ಯ ಹೇಳುತ್ತಾರೆ. ಇದರ ಹೆ
ಡ್ಡಿ ಹೊತ್ತಿಗೆ ಎಂದು. ಪ್ರೇಕ್ಷಕರ ಕೈಯಲ್ಲಿ ಒಂದು ಕಡ್ಡಿ ಕೊಟ್ಟು ಹೊತ್ತಗೆಯ
ರಲಿಕ್ಕೆ ಹೇಳುತ್ತಾರೆ. ಆ ಕಡ್ಡಿ ಹಾಗೆ ತೋರಿಸಿಕೊಟ್ಟ ಚಿತ್ರದ ಪ್ರಕಾರ ತಾ
ಮೊದಲೇ ಗಿಳಿಪಾಠ ಮಾಡಿದ ಶುಭಾಶುಭವನ್ನು ನುಡಿಯುತ್ತಾರೆ. ಮುಗ್ಧ ಜನರ
ಇದು ನಿಜಕ್ಕೂ ಆಶ್ಚರ್ಯವನ್ನುಂಟು ಮಾಡುತ್ತದೆ. ಈ ಕಡ್ಡಿ ಕಟ್ಟಿಗೆದ್ದು ಇದ್ದರು
ಬಹುತೇಕ ತಾಮ್ರದ್ದಿರುತ್ತದೆ, ಮತ್ತು ಎರಡೂವರೆ ಮೂರು ಇಂಚು ಉದ್ದವಿರುತ್ತದ

ಇನ್ನುಳಿದ ಎರಡು ಪರಿಕರಗಳು ಇವರು ನಡೆಸುವ ಮಂತ್ರ ಮಾಟಕ್ಕೆ ಸಂಬಂಧ
ಪಟ್ಟವುಗಳು. ಈ ಬಗ್ಗೆ ಇವರು ಸಾಮಾನ್ಯ ಜನರಿಗೆ ಸಾಕಷ್ಟು ವಿವರವಾಗಿ ಹೇಳಿ
ಪ್ರಸಾರಮಾಡುತ್ತಾರಾದರೂ ಅಪರಿಚಿತರೂ ಅನ್ವೇಷಕರು ಇದರ ಬಗ್ಗೆ ಕೇಳಿದರಾದರೆ
ಅವರ ಬಾಯಿಗೆ ಬೀಗಮುದ್ರೆ ಜಡಿಯಲಾಗುತ್ತದೆ. ಇದಕ್ಕೆ ಈ ಉಪಕರಣಗಳೇ
ಕಾರಣ. ಅವರ ಪ್ರತೀತಿಯಂತೆ ಸತ್ತ ಬಾಣಂತಿಯ ಹಸ್ತ ಮತ್ತು ತಲೆಬುರುಡೆ ಇವೇ
ಈ ಪರಿಕರಗಳು. ಹೇಳಿಕೆಯಂತೆ ಇವುಗಳನ್ನು ಬುಡುಬುಡುಕಿಯವರೇ ಮಂತ್ರ
ಮಾಡಿ ಸಮಾಧಿಯಿಂದ ಎಬ್ಬಿಸಿ ತರಬೇಕು. ಇದನ್ನೆಲ್ಲ ಅನ್ವೇಷಕರ ಮುಂದೆ ಹೇಳಿದರೆ
ಲ್ಲಿ ಪೋಲಿಸರಿಗೆ ತಿಳಿದು ತಮ್ಮನ್ನು ಹಿಡಿಯುವರೋ ಎಂಬ ಭಯದಿಂದಲೇ ಇವರು
ಮಾತಾಡಲೊಲ್ಲರು ಎಂದು ಬಹುತೇಕ ಅನುಮಾನಿಸಬಹುದಾಗಿದೆ. ಆದರೆ ಹಳ್ಳಿಯ
ಮುಗ್ಧ ಜನರ ಮೇಲೆ ತಮ್ಮ ಪ್ರತಿಷ್ಠೆಯನ್ನು ನಾಟಿಸಲು, ವಿಶೇಷವಾಗಿ ಹೆಣ್ಣುಮಕ್ಕಳ
ಮೇಲೆ ಪ್ರಭಾವ ಬೀರಲು, ಉದ್ದುದ್ದ ವ್ಯಾಖ್ಯಾನಗಳನ್ನೇ ಹೆಣೆಯುತ್ತಾರೆ. ಬೈಲ
ಕೊಂಗಲದ ಹನುಮಂತಪ್ಪ ವಾಕೋಡೆ ಧಾರವಾಡ ತಾಲೂಕದ ಗರಗ ಗ್ರಾಮದಲ್ಲಿ
ಮಡಿವಪ್ಪನ ಗುಡಿಯಲ್ಲಿ ಬೀಡುಬಿಟ್ಟಿರುತ್ತಾನೆ. ಅಲ್ಲಿ ಸುತ್ತುಮುತ್ತಲಿರುವ ಮುಗ್ಧ
ಊರಿಗೆಲ್ಲ ತನ್ನ ಬಳಿಯಿರುವ ಬಾಣಂತಿಯ ಹಸ್ತ ತಲೆಬುರುಡೆಗಳ ಬಗ್ಗೆ ತುಂಬ ಅಂಜಿಕೆ
ನಾಟಿಸಿಕೊಂಡಿದ್ದಾನೆ. ಆದರೆ ನಾವು ಕೇಳಿದ ಪ್ರಶ್ನೆಗಳಿಗೆ ಉತ್ತರವಾಗಿ ಅಂತಹದ್ದೇನೂ
ತನ್ನಲ್ಲಿಲ್ಲ ಎಂದೇ ಉತ್ತರ ಕೊಟ್ಟನು. ಸಮೀಪದವರೆಲ್ಲ ಒಂದೇ ಸ್ವರದಿಂದ "ಯಪ್ಪಾ,
ನಮಗೆ ಹಾಗೆ ಹೀಗೆ ಎಂದು ತುಂಬಾ ಹೇಳಿದ್ದಿಯಲ್ಲೊ, ಅದೆಲ್ಲಾ ಹೇಳೋ ಎಂದಾಗ
ಅವರ ಮೇಲೆ ಕೋಪದಿಂದ ಕಿಡಿಕಿಡಿಯಾದನು. ಆತನ ಅಂಜಿಕೆ ಆತನ ನಡುಕದಿಂದಲೇ
ಬಿಂಬಿಸುತ್ತಿತ್ತು. ಇನ್ನೊಂದು ವಿಷಯವೆಂದರೆ ಮುಗ್ಧ ಜನರನ್ನು ವಂಚಿಸಲು ಯಾವ
ಬು ಬುರುಡೆ ಇದ್ದರೂ ಸರಿಯೇ, ನಡೆಯುತ್ತದೆ. ಆದ್ದರಿಂದ ಇವರು ಯಾವು
ನರೂ ಬುರುಡೆ ಎಲುಬುಗಳನ್ನು ಸಂಪಾದಿಸಿ ಅವುಗಳನ್ನು ತಾವು ತಮ್ಮ ಮಂತ್ರ
ಸಂಯಿಂದ ಸಂಪಾದಿಸಿದೆವೆಂದು ಈ ಜನರನ್ನು ನಂಬಿಸಿದ ಪ್ರಕಾರ ಅನ್ವೇಷಕರನ್ನು
ಗವು ನಂಬಿಸಲಾರೆವೆಂಬ ಭಯವೂ ಜೊತೆಯಲ್ಲಿ ಇದ್ದೇ ಇರಬೇಕು. ಹಾಗೆ ಅವರು

# ಜನಪದ ವೈದ್ಯ ಮಂತ್ರ-ಮಾಟದವರು

**ಜಯವಂತ ಕುಳ್ಳಿ**

ರೋಗ-ರುಜಿನಗಳು ಮನುಷ್ಯನ ಸಾಮಾನ್ಯ ಸಮಸ್ಯೆ. ಯಾವುದೋ ಕಾರಣಕ್ಕಾಗಿ ರೋಗ, ಬೇನೆ ಏನಾದರೊಂದು ಅವನಿಗೆ ಇದ್ದದ್ದೆ. ಜಗತ್ತಿನಲ್ಲಿ ಮನುಷ್ಯನಿಗೆ ಅತಿ ಭಯಾನಕ ಸಂಗತಿಯೆಂದರೆ ಸಾವು. ಸಾವನ್ನು ನೆನೆದರೇ ಮನುಷ್ಯನಿಗೆ ನಡುಕ ಬರುತ್ತದೆ. ಜಡ್ಡು ಸಾವಿಗೂ ಕಾರಣವಾದೀತೆಂಬ ಭೀತಿಯಿಂದ ಅದರ ನಿವಾರಣೆಗೆ ಅವನು ಪ್ರಯತ್ನಿಸುವುದು ಸಹಜವೆ. ಅಲ್ಲದೆ ಕೆಲವೊಮ್ಮೆ ನೋವು ಸಹಿಸಲಸಾಧ್ಯವಾಗಿರುತ್ತದೆ, ಅದರ ಉಪಶಮನಕ್ಕಾಗಿಯೂ ಅತ ಪ್ರಯತ್ನಿಸಬೇಕಾದುದು ಅನಿವಾರ್ಯ. ಜಡ್ಡಿನ ಕಾರಣ ಕಂಡುಹಿಡಿದು ಅದಕ್ಕೆ ತಕ್ಕ ಮದ್ದು ಸೂಚಿಸಿ, ಗುಣ ಮಾಡಲು ಒಬ್ಬ ವ್ಯಕ್ತಿ ಬೇಕು. ಇಂಥ ಮದ್ದು ಕೊಡುವುದು ರೋಗದ ಬಗೆಗೆ ನಮ್ಮ ಜನಪದ ನಂಬಿಕೆಯನ್ನಾಧರಿಸುತ್ತದೆ. ಕಾರಣ ರೋಗಗಳ ಬಗೆಗೆ ಜನಪದ ಕಲ್ಪನೆ, ಅದಕ್ಕೆ ಅದರ ಕಾರಣಗಳು, ಆ ಹಿನ್ನೆಲೆಯಲ್ಲಿ ಅದನ್ನು ಗುಣಪಡಿಸುವ ವೈದ್ಯರು, ಅವರು ಕೊಡುವ ಔಷಧಿಗಳು ಇವುಗಳ ಸ್ಥೂಲ ಕಲ್ಪನೆ ಈ ಪ್ರಬಂಧದಲ್ಲಿ ಕಾಣುತ್ತದೆ.

**ರೋಗ ಕಾರಣಗಳು :**

ರೋಗಗಳು ಹೇಗೆ ಉಂಟಾಗುತ್ತವೆ ಎನ್ನಲು ಜನಪದ ನಂಬಿಕೆ ನಮ್ಮ ನಂಬಿಕೆಗಿಂತ ತೀರ ಭಿನ್ನವಾಗಿದೆ. ಮನುಷ್ಯನ ಆರೋಗ್ಯವನ್ನು ದೈಹಿಕ ಆರೋಗ್ಯ ಹಾಗೂ ಮಾನಸಿಕ ಆರೋಗ್ಯ ಎಂದು ಎರಡು ರೀತಿಯಲ್ಲಿ ವಿಂಗಡಿಸಬಹುದು. ಅಲ್ಲದೆ ಆಯಾ ಸ್ಥಳದ ದೃಷ್ಟಿಯಿಂದ ವ್ಯಕ್ತಿಯ ಆರೋಗ್ಯ ಹಾಗೂ ಸಮುದಾಯ ಆರೋಗ್ಯ ಎಂದೂ ವಿಂಗಡಿಸಬಹುದು.

ರೋಗಾಣುಗಳು ರೋಗನಿರ್ಮಾಣಕ್ಕೆ ಕಾರಣ. ಹೊಲಸಿನಿಂದ ಈ ರೋಗ
ಗಳು ಹುಟ್ಟುತ್ತವೆ. ಕಾರಣ ನಮ್ಮ ಪರಿಸರವನ್ನು ಸ್ವಚ್ಛವಾಗಿರಿಸಿದರೆ ರೋಗಕ
ಗಳನ್ನು ದುರ್ಬಲಗೊಳಿಸಬಹುದು. ಇದು ಸಾಮಾನ್ಯವಾಗಿ ವೈದ್ಯಕೀಯ ರಂಗ
ಪ್ರಚಲಿತವಾಗಿರುವ ಜ್ಞಾನ. ಆದರೆ ಇಂಥ ಕಲ್ಪನೆಗೂ, ಜನಪದ ರೋಗಕಲ್ಪನೆ
ಸಂಬಂಧವೇ ಇಲ್ಲ. ಅವರ ಪ್ರಕಾರ ಸ್ವಚ್ಛತೆಗೂ, ರೋಗಕ್ಕೂ ಯಾವುದೇ ಸಂಬ
ವಿಲ್ಲ. ಅಂದರೆ ಹೊಲಸಿನಿಂದ ರೋಗಗಳು ಹುಟ್ಟುತ್ತವೆ, ಸ್ವಚ್ಛತೆಯಿಂದ ಅ
ಕಡಿಮೆಯಾಗುತ್ತವೆ ಎಂಬ ಸಿದ್ಧಾಂತದ ಕಲ್ಪನೆ ಅವರಿಗೆ ಒಪ್ಪಿತವಲ್ಲ. ಯಾಕೆಂದ
ಇಂಥ ದೈವಿನಿಂಥ ದೇಹಕ್ಕೆ ಸಣ್ಣ ಕ್ರಿಮಿ ಏನು ತಾನೆ ಮಾಡಲು ಸಾಧ್ಯ? ಇಂ
ವಿಚಾರಗಳೆಲ್ಲ ಅವರ ದೃಷ್ಟಿಯಲ್ಲಿ 'ಅತಿ ಜ್ಞಾನ'ದ ಫಲ. ಇಂಥ ಕಲ್ಪನೆ ರೂಢ
ವಾಗಿರುವುದರಿಂದಲೇ ಮನೆಗಳನ್ನು ಆ ರೀತಿ ಕಟ್ಟಿರುತ್ತಾರೆ. ಅಡಿಗೆಮನೆ, ಅದರ
ಮಗ್ಗುಲಲ್ಲಿಯೇ ಹತ್ತಾರು ಎಮ್ಮೆ, ದನ–ಕರುಗಳನ್ನೆಲ್ಲ ಕಟ್ಟಲು ಸ್ಥಳ, ಅಲ್ಲಿಯೇ ಅವು
ಗಳ ಸೆಗಣಿ, ಮೂತ್ರ, ಇನ್ನೊಂದು ಮಗ್ಗುಲಲ್ಲಿ ಪಡಸಾಲಿ ಸರಾಗವಾಗಿ ಗಾಳಿಯಾಡಲು
ಕಿಡಕಿಗಳಿಲ್ಲ, ಬೆಳಕೂ ಕಡಿಮೆ, ಇಂಥ ವಾತಾವರಣದಿಂದ ರೋಗ ಹುಟ್ಟುತ್ತವೆಯೆಂದು
ಅವರಿಗೆ ಹೇಳಿದವರು 'ಹುಚ್ಚ'ರೆನ್ನಿಸಿಕೊಳ್ಳುತ್ತಾರೆ. ಯಾವನಾದರೊಬ್ಬ ಚನ್ನಾಗಿ
ಊಟಮಾಡಿ, ಸರಿಯಾಗಿ ಮಲಗಿ. ಚನ್ನಾಗಿ ಕೆಲಸ ಮಾಡುತ್ತಿದ್ದರೆ ಅವನು ಆರೋಗ್ಯ
ವಂತ ಎಂಬ ಕಲ್ಪನೆ ಅವರದು. ಇದೇನೂ ತಪ್ಪಲ್ಲ. ಆದರೆ ಊಟಮಾಡಿ ಕೆಲಸ
ಮಾಡಿದರೆ ಅದೇ ಆರೋಗ್ಯದ ಲಕ್ಷಣವಲ್ಲ, ಅವನಲ್ಲಿ ಎಂಥೆಂಥ ರೋಗಗಳಿವೆಯೋ!
ಅವರಿಗೆ ಸಣ್ಣಸಣ್ಣ ರೋಗಗಳು ರೋಗಗಳೇ ಅಲ್ಲ. ಜ್ವರವಂತೂ ಏನೂ ಅಲ್ಲ. ಜ್ವರ
ಬಂದರೆ ಮೈ ಬೆಚ್ಚಗಾಗಿದೆ ಅಷ್ಟೆ: ಶೀತವಾದರೆ ಉಗಳು–ಸೆಗಡಿ ಆಗಿದೆ. ಸ್ವಲ್ಪ ತಲೆ
ನೋಯುತ್ತಿದೆ, ಹಲಬ್ಯಾನಿ ಬಂದಿದೆ ಅಷ್ಟೆ. ವ್ಯಕ್ತಿ ನೆಲ ಹಿಡಿದು ಮಲಗಿದರೆ ಮಾತ್ರ
ಅವನಿಗೆ ಏನೋ ಆಗಿದೆ ಎಂಬ ಭಾವನೆ ಪ್ರಾರಂಭವಾಗುತ್ತದೆ. ಈ ರೀತಿ ವ್ಯಕ್ತಿ ನೆಲ
ಹಿಡಿದನೆಂದರೆ ಅದಕ್ಕೆ ಕಾರಣ ವಿಚಾರಿಸಲು ಪ್ರಾರಂಭಿಸುತ್ತಾರೆ.

ಜನಪದ ನಂಬಿಕೆಯ ಪ್ರಕಾರ, ಸಾಮಾನ್ಯವಾಗಿ ನಾಲ್ಕು ಕಾರಣಗಳಿಂದ ರೋಗ
ಬರುತ್ತವೆ. ಅವೆಂದರೆ—

೧. ದೇವರು ಸಿಟ್ಟಿಗೆದ್ದರೆ,
೨. ಅತಿ ಮಾನುಷ ಶಕ್ತಿಗಳು ಪೀಡೆ ಕೊಡುವುದರಿಂದ,
೩. ಕೆಲವು ವ್ಯಕ್ತಿಗಳ, ಶಕ್ತಿಗಳ ಮೂಲಕ,
೪. ದೇಹದಲ್ಲಿ ಏನಾದರೂ ಪ್ರವೇಶಿಸಿದರೆ,

ಈ ಕಾರಣಗಳಿಂದಲೇ ವ್ಯಕ್ತಿ ಜಡ್ಡಿಗೆ ಬೀಳುತ್ತಾನೆ. ಈ ಮೇಲಿನ ಪ್ರತಿ
ಯೊಂದಕ್ಕೂ ಜನಪದ ಸಮಾಜದಲ್ಲಿ ವಿಶಿಷ್ಟ ಕಾರಣಗಳಿವೆ. ಅದನ್ನು ಈಗ ಒಂದೊಂದಾ
ಗಿ ನೋಡುವಾ.

## ೧. ದೇವರು ಸಿಟ್ಟಿಗೆದ್ದರೆ :

ಜಗತ್ತಿನ ಸೃಷ್ಟಿಗೆ, ಇಲ್ಲಿನ ಎಲ್ಲ ವ್ಯಾಪಾರಗಳಿಗೆ ದೇವರು ಕಾರಣ ಎಂಬುದು ಅಚಲವಾದ ಜನಪದ ನಂಬಿಕೆ. ಒಳ್ಳೆಯದೇ ಇರಲಿ, ಕೆಟ್ಟದ್ದೇ ಇರಲಿ ಯಾವುದಕ್ಕೂ ದೇವರೇ ಕಾರಣ. 'ನಮ್ಮ ಕೈಯಾಗ ಏನ ಐತಿ, ಅಂವ ಮಾಡಿದರಾಗ ಆಗತೈತಿ' ಆದರೆ ದೇವರು ಕೆಟ್ಟದ್ದನ್ನು ಮಾಡುತ್ತಾನೆಯೇ ಎಂಬ ಪ್ರಶ್ನೆ ಏಳಬಹುದು. ದೇವರು ತನ್ನ ಮಕ್ಕಳಾದ ಮನುಷ್ಯರಿಗೆ ಸದಾ ರಕ್ಷಣೆ ಒದಗಿಸುತ್ತಾನೆ. ಆದಕ್ಕಾಗಿ ಜನ ಅವನನ್ನು ಯಾವಾಗಲೂ ತೃಪ್ತಿಯಿಂದ ಇಡಬೇಕಾಗುತ್ತದೆ. ಪೂಜೆ–ಪುನಸ್ಕಾರ, ವ್ರತ, ಹರಕೆಗಳ ಮೂಲಕ ಅವರನ್ನು ಸದಾ ತೃಪ್ತಿಯಿಂದಿಡಲು ಅವನು ತೊಡಗಿರುತ್ತಾನೆ. ಮನುಷ್ಯರೇ ದೇವರನ್ನು ಮರೆತು ಪೂಜೆ, ವ್ರತ, ಹರಕೆಗಳನ್ನು ಮರೆತರೆ ದೇವರು ಸಿಟ್ಟಿಗೆದ್ದು ಮನುಷ್ಯನಿಗೆ ರೋಗ ತರುತ್ತಾನೆ. ಆಗ ವ್ಯಕ್ತಿಗೆ ರೋಗ–ಬೇನೆಗಳು ಬರುತ್ತವೆ. ಇದು ಜನಪದ ನಂಬಿಕೆಯಲ್ಲಿ ರೋಗ ಬರುವುದಕ್ಕೆ ಕಾರಣ.

ಈ ರೀತಿ ರೋಗ ಬಂದ ಕೂಡಲೆ ಆ ವ್ಯಕ್ತಿ ಅಥವಾ ಅವನ ಮನೆಯವರು ಶಕುನ ಕೇಳಿ, ತಾವು ಬಿಟ್ಟಿದ್ದು ಏನು ಎಂಬುದನ್ನು ಜ್ಞಾಪಿಸಿಕೊಂಡು ಅಂಥ ಹರಕೆಯನ್ನು ಸಲ್ಲಿಸಿಯೋ, ವ್ರತವನ್ನು ಮಾಡಿಯೋ, ಪೂಜೆಗಳನ್ನು ಮಾಡಿಯೋ ಅಥವಾ ಮಾಡಿಸಿಯೋ ದೇವರನ್ನು ತೃಪ್ತಿಪಡಿಸುತ್ತಾನೆ. ಈ ರೀತಿ ತೃಪ್ತನಾದ ದೇವರು ತನ್ನ ರಕ್ಷಣೆಯನ್ನು ಮತ್ತೆ ಒದಗಿಸುತ್ತಾನೆ. ರೋಗ ಗುಣವಾಗುತ್ತದೆ. ಇದು ರೋಗನಿವಾರಣೆಗೆ ಅವರ ಕಾರಣ. ಒಂದು ವೇಳೆ ರೋಗ ಗುಣವಾಗದಿದ್ದರೆ, ರೋಗಿ ಸತ್ತರೆ ಅದಕ್ಕಾಗಿ ಅವರು ಕೊಡುವ ಕಾರಣ ವ್ರತದಲ್ಲಿ ತಪ್ಪಿದ್ದು. ಅಂತೂ ಏನಾದರೂ ಅವನೆ ಕಾರಣ.

## ೨. ದುಷ್ಟ ಶಕ್ತಿಗಳ ಪೀಡೆ :

ತನ್ನ ಮಕ್ಕಳಾದ ಮನುಷ್ಯರಿಗೆ ದೇವರ ರಕ್ಷಣೆ ಸದಾ ಇರುತ್ತದೆ. ಮೇಲೆ ಹೇಳಿದಂತೆ ಮನುಷ್ಯನು ದೇವರನ್ನು ತೃಪ್ತಿಯಿಂದ ಇಡಬೇಕು. ಅವನು ತೃಪ್ತನಾಗಿರುವವರೆಗೆ ತೊಂದರೆಯಿಲ್ಲ. ಯಾಕೆಂದರೆ ಜಗತ್ತಿನಲ್ಲಿಯ ದುಷ್ಟ ಶಕ್ತಿಗಳು ಯಾವಾಗಲೂ ಹೊಂಚುಹಾಕುತ್ತಿರುತ್ತವೆ. ದೇವರು ಮನುಷ್ಯನ ಪೂಜೆ, ವ್ರತ, ಹರಕೆಗಳ ಅಭಾವದಿಂದ ಸಿಟ್ಟಿಗೆದ್ದು, ತನ್ನ ರಕ್ಷಣೆ ಹಿಂತೆಗೆದುಕೊಂಡರೆ ಅವಕ್ಕೆ ಅವಕಾಶ ಸಿಗುತ್ತದೆ. ಅವುಗಳ ಆಟ ಸಾಗುತ್ತದೆ. ಮತ್ತು ಮನುಷ್ಯನಿಗೆ ರೋಗಗಳು ಬರುತ್ತವೆ. ಆಗ ಮತ್ತೆ ಪೂಜೆ, ಹರಕೆ, ನೈವೇದ್ಯ ಮುಂತಾದವುಗಳಿಂದ ದೇವರನ್ನು ತೃಪ್ತಿಪಡಿಸುತ್ತಾನೆ. ಆಗ ದೇವರ ರಕ್ಷಣೆ ಮತ್ತೆ ಒದಗುತ್ತದೆ. ದುಷ್ಟಶಕ್ತಿಗಳು ಹಿಂದೆಗೆಯುತ್ತವೆ. ರೋಗ ನಿವಾರಣೆಯಾಗುತ್ತದೆ.

ಇಲ್ಲಿ ಇನ್ನೊಂದು ಅಂಶ, ಸ್ಥಳೀಯ ಸಣ್ಣಪುಟ್ಟ ದೇವತೆಗಳು. ಇವೆಲ್ಲ ಹೆಣ್ಣು ದೇವತೆಗಳೆ. ಜನಪದ ನಂಬಿಕೆಯ ಪ್ರಕಾರ ಒಂದೊಂದು ರೋಗಕ್ಕೆ ಒಂದೊಂದು

ಇಂಥ ಅಧಿಷ್ಠಾತೃ ದೇವತೆಯಿರುತ್ತದೆ. ಉದಾಹರಣೆಗೆ—ಮೈಲಿಬೇನೆಗೆ ಲಕ್ಕವ್ವ, ಗೊಬ್ಬರ-ಗಣಜಲಿಗಳಿಗೆ ದುರ್ಗವ್ವ ಇತ್ಯಾದಿ. ಹರಕೆ ತಪ್ಪಿಸಿದಾಗ ದೊಡ್ಡ ದೇವರೇ ಸಿಟ್ಟಿಗೇಳುವಾಗ ಇವರು ಸಿಟ್ಟಾಗದಿರುತ್ತಾರೆಯೆ ? ಹರಕೆ, ನೈವೇದ್ಯ ಇತ್ಯಾದಿಗಳನ್ನು ತಪ್ಪಿಸಿದಾಗ ಇವರೂ ಸಿಟ್ಟಿಗೆದ್ದು ರೋಗ ತರುತ್ತಾರೆ. ಇವರು ಹೆಚ್ಚಾಗಿ ವೈಯಕ್ತಿಕ ರೋಗಕ್ಕಿಂತ ಸಾಂಕ್ರಾಮಿಕ ರೋಗ ತರುವುದು ಹೆಚ್ಚು. । ಆಗ ಇಡೀ ಹಳ್ಳಿಯೇ ತಮ್ಮ ಯಾವುದೋ ತಪ್ಪಿಗಾಗಿ 'ಅಮ್ಮ' ಸಿಟ್ಟಿಗೆದ್ದಿದ್ದಾಳೆಂದು ಒಂದು ದಿನ ಗೊತ್ತುಮಾಡಿ ಆಕೆಗೆ ಸೀರೆ ಉಡಿಸುತ್ತಾರೆ. ಇದು ಇಡೀ ಗ್ರಾಮದ ಕಾರ್ಯ. ಒಬ್ಬ ವ್ಯಕ್ತಿಗೆ ಏನಾದರೂ ಆದರೆ ಆತ ಅಮ್ಮನಿಗೆ ಹರಕೆ ಹೊತ್ತು, ರೋಗ ಕಡಿಮೆ ಮಾಡಲು ಕೇಳಿಕೊಳ್ಳುತ್ತಾನೆ. ಹೀಗೆ ಹರಕೆ ತೀರಿಸಿದಾಗ ಅಮ್ಮ ತನ್ನ ಶಕ್ತಿಯಿಂದ ರೋಗ ನಿವಾರಣೆ ಮಾಡುತ್ತಾಳೆಂದು ನಂಬುತ್ತಾರೆ. ಮೈಲಿಬೇನೆ ಬಂದಾಗ ಮೈಲಿ ಲಕ್ಕವ್ವನಿಗೆ ಕೋಳಿಯನ್ನು 'ಹಾರಿಸುತ್ತಾರೆ'. ಗೊಬ್ಬರ-ಗಣಜಲಿ ಬಂದಾಗ ದುರ್ಗವ್ವನಿಗೆ ಕಡುಬು-ತಂಪು 'ಬಾಣ' ಕೊಡುತ್ತಾರೆ. ಈಗಲೂ ಸುಶಿಕ್ಷಿತ ಹೆಣ್ಣುಮಕ್ಕಳು ತಮ್ಮ ಮಕ್ಕಳಿಗೆ ಗೊಬ್ಬರ-ಗಣಜಲಿ ಆದರೆ ಡಾಕ್ಟರರ ಔಷಧದಿಂದ ಗುಣವಾದ ಮೇಲೆ ದುರ್ಗವ್ವನಿಗೆ ಕಡುಬು ನೈವೇದ್ಯ ಕೊಡುವುದನ್ನು ನೋಡಬಹುದು. ಅಷ್ಟು ಆಳವಾದ ನಂಬಿಕೆಗಳಿವು.

ಇದಲ್ಲದೆ ತಮ್ಮ ಮನೆತನದ ಹಿರಿಯರಿಗೆ ಸಲ್ಲಬೇಕಾದ ಗೌರವ. ನೆನಪು ಸಲ್ಲಿಸಲು ಮರೆತರೂ ರೋಗ ಬರುತ್ತವೆ ಎಂಬ ಕಲ್ಪನೆ ಇದೆ. ಮನೆಯಲ್ಲಿ ಮಕ್ಕಳಿಗೊ ಅಥವಾ ತಮಗೊ ಏನಾದರೂ ರೋಗ ಬಂದರೆ ಇಂಥದನ್ನು ಏನಾದರೂ ಮಾಡಲು ಮರೆತಿದ್ದೇವೆಯೇ ಎಂಬುದನ್ನು ನೆನಪಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಆಗ ತಾಯಿಗೆ ಸೀರೆ ಏರಿಸುವುದನ್ನು ಬಿಟ್ಟಿದ್ದು ನೆನಪಾಗುತ್ತದೆ. ಆಗ ಬರುವ ಅಮಾವಾಸ್ಯೆಗೊ ಹುಣ್ಣಿಮೆಗೊ 'ಸೀರೆ ತಪ್ಪದೆ ಏರಿಸುತ್ತೇವೆ' ಎಂದು ಮತ್ತೆ ವಚನ ಕೊಡುತ್ತಾರೆ. ಆಗ ರೋಗ ಗುಣವಾಗುತ್ತದೆ. ಇದು ಅವರ ಕಲ್ಪನೆ.

ಅಲ್ಲದೆ ಕುಲದೇವರ ಜಾತ್ರೆಗೊ, ದರ್ಶನಕ್ಕೊ ಹೋಗುವುದನ್ನು ತಪ್ಪಿಸಿದರೂ ರೋಗ ಬರುವುದೆಂಬ ಕಲ್ಪನೆ ಇದೆ. ಅದಕ್ಕಾಗಿ ಪ್ರತಿವರ್ಷ ಒಬ್ಬರಾದರೂ ಮನೆಯಿಂದ ಇದಕ್ಕೆ ಹೋಗಲೇಬೇಕು. ಹೋಗದಿದ್ದರೆ ರೋಗ ಬರುತ್ತದೆ. ರೋಗ ಬಂದಾಗ ಈ ರೀತಿ ಹೋಗಿರದಿದ್ದುದು ನೆನಪಾದರೆ ಆದಷ್ಟು ಬೇಗ ಹೋಗಿಬರುವ ನಿರ್ಣಯ ತೆಗೆದುಕೊಂಡರೆ ರೋಗ ನಿವಾರಣೆಯಾಗುತ್ತದೆ.

**೩. ಅತಿಮಾನುಷ ಕಾರಣಗಳು :**

ಜನಪದ ನಂಬಿಕೆಯ ಪ್ರಕಾರ ಅತಿಮಾನುಷ ಕಾರಣಗಳಲ್ಲಿ ಅತಿ ಮಹತ್ವದ್ದು ಕರ್ಮ. ಅವರೇನು ಅತಿಮಾನುಷ ಇತ್ಯಾದಿ ಕರೆಯುವುದಿಲ್ಲ. ಆದರೆ ಕರ್ಮ ತಮ್ಮ ರೋಗಕ್ಕೆ ಕಾರಣ ಎಂದು ನಂಬುತ್ತಾರೆ. ಮನುಷ್ಯ ಹಿಂದಿನ ಜನ್ಮದಲ್ಲಿ ಮಾಡಿದ

ಕರ್ಮಗಳು ಈ ಜನ್ಮದಲ್ಲಿ ಪರಿಣಾಮ ಬೀರುತ್ತವೆ. ಕೆಟ್ಟ ಕರ್ಮಗಳಿಂದ ಅವನ ದೇಹದ ಮೇಲೆ ಕೆಟ್ಟ ಪರಿಣಾಮವಾಗುತ್ತದೆ. ಒಳ್ಳೆಯ ಕರ್ಮ ಮಾಡಿದ್ದರೆ ಅವನು ಈ ಜನ್ಮದಲ್ಲಿ ನಿರೋಗಿಯಾಗಿರುತ್ತಾನೆ. ಕೆಟ್ಟ ಕೆಲಸ ಮಾಡಿದ್ದರೆ ಈಗ ರೋಗಪೀಡಿತನಾಗಿರುತ್ತಾನೆ. 'ಅಂವ ಪಡದ ಬಂದಾನ', 'ಹಿಂದಿನ ಜನ್ಮದಾಗ ಏನೇನು ಮಾಡಿತ್ತೊ, ಈಗ ಅವ ಎಲ್ಲ ತಿರುಗಿ ಬಡ್ಯಾಕ ಹತ್ಯಾವ' ಮುಂತಾದ ಮಾತುಗಳು ಯಾವನಾದರೂ ನಿರೋಗಿಯಾಗಿದ್ದರೆ ಅಥವಾ ರೋಗಪೀಡಿತನಾಗಿದ್ದರೆ ಸಹಜವಾಗಿ ಬರುವ ಮಾತುಗಳು.

ಇದಲ್ಲದೆ ಜನಪದ ನಂಬಿಕೆಯ ಪ್ರಕಾರ ಗ್ರಹ–ನಕ್ಷತ್ರಗಳೂ ಅವನ ದೇಹದ ಮೇಲೆ ಪರಿಣಾಮ ಬೀರುತ್ತವೆ. ಕೆಟ್ಟ ನಕ್ಷತ್ರದಲ್ಲಿ ಹುಟ್ಟಿದವ ರೋಗಿಯಾಗಿಯೂ. ಒಳ್ಳೆಯ ನಕ್ಷತ್ರದಲ್ಲಿ ಹುಟ್ಟಿದವ ನಿರೋಗಿಯಾಗಿಯೂ ಇರುತ್ತಾನೆಂದು ಅವರು ನಂಬುತ್ತಾರೆ. 'ಯಾವ ನಕ್ಷತ್ರದಾಗ ಹುಟ್ಟಿತೊ, ಹುಟ್ಟಿದಾಗಿನಿಂದ ಒಂದs ಸವನ ಅರಿತತಿ'. 'ಹುಟ್ಟಿದ ನಕ್ಷತ್ರರೆ ಎಂತಾದೊ, ಬ್ಯಾನೀ ಕಟಕೊಂಡ ಬಂದsತಿ' ಮುಂತಾದ ಮಾತುಗಳು ಈ ನಂಬಿಕೆಯನ್ನು ಸಮರ್ಥಿಸುತ್ತವೆ. ಕೆಲವು ಗ್ರಹಗಳ ಕಾಟವೂ ಮನುಷ್ಯನಿಗೆ ಉಂಟಾಗುತ್ತದೆ ಎಂಬ ನಂಬಿಕೆ ಅವರಲ್ಲಿದೆ. 'ಅವಗ ಸಾಡೇಸಾತಿ ಹಿಡದತಿ, ಬ್ಯಾನಿ ಹ್ಯಾಂಗ ಕಡಿಮಿ ಆಗಬೇಕು ?' ಮುಂತಾದ ಮಾತುಗಳು ಈ ನಂಬಿಕೆಯನ್ನು ಆಧರಿಸಿವೆ. ಕೆಟ್ಟ ಗ್ರಹಗಳಿಂದ ಅವನಿಗೆ ವಿವಿಧ ರೀತಿಯ ಪೀಡೆಗಳು ಕಾಡುತ್ತವೆ.

ಅತಿಮಾನುಷ ಕಾರಣಗಳಲ್ಲಿ ಭೂತಚೇಷ್ಟೆಗೆ ಅತಿ ಮಹತ್ವದ ಸ್ಥಾನವಿದೆ. ಗಾಳಿ ಕಾಟ, ಭೂತಚೇಷ್ಟೆ, ದೆವ್ವ ಬಡಿಯುವದು, ಗಾಳಿಶಕಾ ಇತ್ಯಾದಿ ಹೆಸರುಗಳಿಂದ ಕರೆಯಲ್ಪಡುವ ಜಾಡ್ಯ ಬಹುತೇಕ ಹಳ್ಳಿಗಳಲ್ಲಿ ಕಂಡುಬರುವ ಜಾಡ್ಯ. ದೇವರಿಗಿಂತ ಹೆಚ್ಚು ಸರ್ವಾಂತರ್ಯಾಮಿ ಸಂಗತಿ ಇದು. ದೆವ್ವ ಹೆಣ್ಣುಮಕ್ಕಳನ್ನು ಹೆಚ್ಚಾಗಿ ಬಡಕೊಳ್ಳುತ್ತದೆ. ಬಾಣಂತಿಯರು, ಹಸಿಮೈಯವರಿಗೆ ಇದರ ಕಾಟ ಇನ್ನು ಜಾಸ್ತಿ. ದೆವ್ವ ಬಿಡಿಸಲು ದೆವ್ವ ಬಿಡಿಸುವವರನ್ನು ಮೊರೆಹೋಗಬೇಕು.

ಇವಲ್ಲದೆ ಮಾಟದ ದೋಷ, ದೃಷ್ಟಿದೋಷಗಳು ಜನಪದ ನಂಬಿಕೆಯ ಪ್ರಕಾರ ರೋಗಕ್ಕೆ ಕಾರಣವಾಗುತ್ತವೆ. 'ಅವನ ಕಣ್ಣು ಬಾಳ ಕೆಟ್ಟ ಅದಾವ', 'ಆಕಿ ಕಣ್ಣಿಗಿ ಇರ್ಕೀನ ಹಾಕಬ್ಯಾಡ'. 'ಕೂಸಿಗಿ ನೆದರ ಆಗೇತಿ', 'ಪಾಪ ಅದಕ ದಿಟ್ಟಿ ತಾಗೇತಿ' ಮುಂತಾದ ಮಾತುಗಳು ದೃಷ್ಟಿದೋಷದ ಪ್ರಾಬಲ್ಯವನ್ನು ಸೂಚಿಸುತ್ತವೆ. ಈ ನೆದರಿನ ಭೀಕರತೆಯ ಅನುಭವ ಹಳ್ಳಿಗಳಲ್ಲಿ ಸಾಕಷ್ಟು ಆಗಿರುತ್ತದೆ. ಒಬ್ಬೊಬ್ಬ ವ್ಯಕ್ತಿಯ ದೃಷ್ಟಿ ಅದೆಷ್ಟು ತೀಕ್ಷ್ಣವಾಗಿರುತ್ತದೆಯೆಂದರೆ ಅವನು. ಹೆಚ್ಚಾಗಿ ಅವಳು ನೋಡಿದ ಕೂಡಲೆ ಹಾಲು ಒಡೆಯುತ್ತದೆ–ಒಮ್ಮೊಮ್ಮೆ ಗಡಿಗೆ ಸಮೇತ. ಕೆಲವರು ಸುಂದರ ಮಗುವನ್ನು ನೋಡಿದರೆ ಆ ಮಗುವಿನ ಮೈ ಬೆಚ್ಚಗಾಗುತ್ತದೆ. ಅದರಲ್ಲಿಯೂ ಮಕ್ಕಳಾಗ

ದವರು ಇಂಥ ಮಕ್ಕಳನ್ನು ನೋಡಿದರೆ ಇನ್ನೂ ತೀವ್ರವಾದ ಜ್ವರ ಬರುತ್ತವೆ. ಮಕ್ಕಳು ಕಿರಿಕಿರಿ ಮಾಡುವುದು ಇದೇ ಕಾರಣದ ಮೂಲಕ.

ಇನ್ನು ಮಾಟ-ಮಂತ್ರಗಳಿಂದಲ್ಲೂ ತಮಗೆ ಆಗದವರ ಬಗೆಗೆ ಕೆಡುಕನ್ನುಂಟು ಮಾಡುವದು ಹಳ್ಳಿಗಳಲ್ಲಿ ವಿಶೇಷವಾಗಿ ನಡೆಯುವ ದೃಶ್ಯ. ಇದು ಮನುಷ್ಯರಿಗೂ, ದನಗಳಿಗೂ ಕೂಡಿಯೇ ನಡೆಯುತ್ತದೆ. ಒಬ್ಬರ ಎಮ್ಮೆ ಚನ್ನಾಗಿ ಹಿಂಡುತ್ತಿದ್ದರೆ ಅದರಿಂದ ತಮ್ಮ ವ್ಯಾಪಾರಕ್ಕೆ ಧಕ್ಕೆ ಉಂಟಾಗುತ್ತಿದ್ದರೆ, ಆ ದನಕ್ಕೆ ಮಾಡಿಸುತ್ತಾರೆ. ಹಾಗೆ ಮಾಡಿದ ಕೂಡಲೆ ದನ ಹಿಂಡುವುದನ್ನೇ ನಿಲ್ಲಿಸಿಬಿಡುತ್ತದೆ. ಇದೇ ರೀತಿ ಮನುಷ್ಯರಿಗೂ ಮಾಡಿಸುವುದು ವಾಡಿಕೆ. ಈ ರೀತಿಯಾದ ವ್ಯಕ್ತಿ ಯಾವ ಬಾಹ್ಯ ಕಾರಣಗಳೂ ಇಲ್ಲದೆ ಸವೆಯುತ್ತ ಹೋಗಿ ಸಕಾಲದಲ್ಲಿ ಆ ಕಾರಣ ಗೊತ್ತಾಗದೆ ಹೋದರೆ ಸಾಯುವದೂ ಉಂಟು.

ತಮಗೆ ಬೇಕಿಲ್ಲದ ವ್ಯಕ್ತಿಗೆ ಮಾಯ-ಮಂತ್ರದ ಸಹಾಯದಿಂದ ತೊಂದರೆ ಕೊಡ ಬಹುದು. ಮಾಂತ್ರಿಕನು ತನ್ನ ವಿರೋಧಿಗೆ ತೊಂದರೆ ಕೊಡಲು ಆ ವ್ಯಕ್ತಿಯು ಯಾವುದಾದರೊಂದು ವಸ್ತುವನ್ನು, ಉದಾಹರಣೆಗೆ, ಅವನ ಬಟ್ಟೆ, ಉಗುರು, ಕೂದಲು ಮುಂತಾದವುಗಳನ್ನು ತೆಗೆದುಕೊಂಡು ಮಾಟ ಮಾಡಿಸಬಹುದು. ಇಲ್ಲವೆ ಯಾವು ದಾದರೊಂದು ಆಹಾರ ಪದಾರ್ಥಕ್ಕೆ ಮಾಟಮಾಡಿ ಅದನ್ನು ತಮಗೆ ಬೇಡಾದವರಿಗೆ ತಿನ್ನಿಸಬಹುದು. ಇನ್ನೊಂದು ರೀತಿಯ ಪ್ರಕಾರ ಗೊಂಬೆ ಅಥವಾ ಲಿಂಬೆಹಣ್ಣು ಮಂತ್ರಿಸಿ, ಸೂಜಿ ಚುಚ್ಚಿ ಹುಗಿದು ಬಿಡುತ್ತಾರೆ. ಮಾಟದ ಮೂಲಕ ಈ ವಸ್ತು ಉದ್ದಿಷ್ಟ ವ್ಯಕ್ತಿಯೊಡನೆ ಸಂಬಂಧ ಕಲ್ಪಿಸುತ್ತದೆ. ಅವನಿಗೆ ಪೀಡೆ ಪ್ರಾರಂಭವಾಗುತ್ತದೆ. ಮುಂದೆ ತೊಂದರೆಗೊಳಗಾದ ವ್ಯಕ್ತಿಗೆ ಮತ್ತೊಬ್ಬ ಪ್ರಬಲ ಮಾಟದವನ ಸಹಾಯ ಪಡೆಯದಿದ್ದರೆ ಸಾವು ಖಂಡಿತ.

ಮೇಲಿನ ಕಾರಣಗಳನ್ನು ಅವಲೋಕಿಸಿದಾಗ ಜನಪದ ನಂಬಿಗೆಯ ಪ್ರಕಾರ ಹೊಲಸಿಗೂ, ರೋಗಕ್ಕೂ ಯಾವುದೇ ಸಂಬಂಧವಿಲ್ಲ. ಸ್ವಚ್ಛತೆಯಿದ್ದರೆ ರೋಗ ಬರು ವದಿಲ್ಲ, ಹೊಲಸಿನಿಂದ ರೋಗ ಬರುತ್ತದೆ ಎನ್ನುವ ವಿಚಾರವನ್ನೇ ಅವರು ಒಪ್ಪುವ ದಿಲ್ಲ. ಜಳಕ ಮಾಡುವದು ಸ್ವಚ್ಛತೆಯ ಕಾರಣವಿಲ್ಲ, ಮಡಿಯಾಗಲು. ಪೂಜೆ ಮಾಡಬೇಕಾದಾಗ ಅಥವಾ ಇನ್ನಾವುದೋ ಪವಿತ್ರ ಸಂದರ್ಭಗಳಲ್ಲಿ ಮಡಿಯಿಂದಿರ ಬೇಕಾಗುತ್ತದೆ. ಅದಕ್ಕಾಗಿ ಸ್ನಾನಮಾಡಿ ಮಡಿಯಾಗುತ್ತಾರೆ. ಸ್ನಾನಮಾಡದಿದ್ದರೆ ಮೈಲಿಗೆ ಯಾಗಿರುತ್ತದೆ. ಮೈಲಿಗೆಯಾಗಿದ್ದರೆ ಪೂಜೆ ಮಾಡಲು ಬರುವದಿಲ್ಲ.

ಈ ರೋಗಗಳ ಈ ಹಿನ್ನೆಲೆಯಲ್ಲಿ ಅದನ್ನು ಗುಣಪಡಿಸಲು ೧) ನಾಟಿವೈದ್ಯ, ಮನೆವೈದ್ಯ ೨) ಮಂತ್ರಮಾಟದವರು, ಮತ್ತು ೩) ದೇವರು ಹೇಳುವವರು ಇರು

ತ್ತಾರೆ. ಆಯಾರೋಗದ ಲಕ್ಷಣವನ್ನನುಸರಿಸಿ, ತಮ್ಮ ಕ್ಷೇತ್ರದ ಪರಿಣತಿಯ ಪ್ರಕಾರ ಔಷಧ ಅಥವಾ ಮಂತ್ರ ಪ್ರಯೋಗಿಸುತ್ತಾರೆ.

## ೧. ಮನೆವೈದ್ಯ :

ಮಂತ್ರ-ಮಾಟಗಳಿಗೆ ಹೊರತಾದ ಯಾವುದಾದರೂ ದೈಹಿಕ ರೋಗ ಬಂದಾಗ ಹೆಚ್ಚಾಗಿ ಆ ರೋಗದ ಕಾರಣ ಕಂಡು ಹಿಡಿದು ಯಾವುದಾದರೊಂದು ಗೃಹೌಷಧವನ್ನು ಮನೆಯಲ್ಲಿಯ ಒಬ್ಬ ಹಿರಿಯರೇ ಕೊಡುತ್ತಾರೆ. ಇವರೇ ಮನೆವೈದ್ಯರು. ಮನೆಯಲ್ಲಿ ಇಂಥವರು ಅಜ್ಜನೋ. ಅಜ್ಜಿಯೋ ಸಾಮಾನ್ಯವಾಗಿ ಕಂಡುಬರುತ್ತಾರೆ. ಅವರಿಲ್ಲದಿದ್ದರೆ ಓಣಿಯಲ್ಲಿ ಯಾರಾದರೊಬ್ಬ ಇಂಥ ಔಷಧ ಸೂಚಿಸಲು ಇರಬಹುದು. ಇಲ್ಲವೇ ಗ್ರಾಮದಲ್ಲಿ ಒಬ್ಬ ಇಂಥವರಿದ್ದರೆ ಅವನಿಗೆ ನಾಟೀವೈದ್ಯ ಎಂದು ಕರೆಯು ತ್ತಾರೆ. ಇಂಥವರ ಔಷಧಿಗಳೆಲ್ಲ ಸ್ವಾನುಭವ ಅಥವಾ ಇನ್ನೊಬ್ಬರಿಂದ ಕೇಳಿ ತಿಳಿದ ಔಷಧಿಗಳು ಹೆಚ್ಚಾಗಿ ಮನೆಯಲ್ಲಿ ಸಿಗುವ ಯಾವದಾದರೊಂದು ವಸ್ತುವೇ ಔಷಧವಾಗುತ್ತದೆ. ಸಾಮಾನ್ಯವಾಗಿ ಗೊಲ್ಲರು ಈ ರೀತಿ ಔಷಧ ಕೊಡುವದನ್ನು ನಾವು ಕಾಣಬಹುದು.

## ೨. ಮಂತ್ರ-ಮಾಟಗಾರ :

ಮಂತ್ರ-ಮಾಟಗಾರರ ಪ್ರಕಾರ ಎಲ್ಲ ರೋಗಗಳನ್ನು ಮಂತ್ರದಿಂದ ಗುಣಪಡಿಸಲು ಬರುತ್ತದೆ. ಅವರ ಪ್ರಕಾರ, ಒಂದು ರೋಗಕ್ಕೆ ಒಬ್ಬ ಅಧಿಷ್ಠಾತೃದೇವತೆ ಇರುವುದುಂಟು. ಆ ದೇವತೆಗೆ ಉಪಾಸನಾ ರೂಪದಲ್ಲಿ ಮಂತ್ರ ಪಠಿಸಿದರೆ ರೋಗ ಗುಣವಾಗುತ್ತದೆ. ಆ ರೋಗದ ಅತಿಮಾನುಷ ಕಾರಣಗಳನ್ನು ನಿವಾರಿಸುವ ಶಕ್ತಿ ಆ ಮಂತ್ರಗಳಿಗಿರುತ್ತದೆ. ಈ ಶಕ್ತಿಯು ಮೂಲಕ ಅಧಿಷ್ಠಾತೃ ದೇವತೆಯು ಅಥವಾ ಇನ್ನಾವದೇ ಶಕ್ತಿಯು ಕೋಪ ಉಪಶಮನವಾಗಲು ಸಾಧ್ಯವಾಗುತ್ತದೆ. ಹೀಗೆ ಕೋಪ ಉಪಶಮನವಾದರೆ, ರೋಗ ನಿವಾರಣೆಯಾಗುತ್ತದೆ. ಪ್ರಾರ್ಥನೆ, ಪೂಜೆ, ವ್ರತ, ದಾನಗಳ ಮೂಲಕವೂ ದೇವತೆಗಳ ಕೋಪವನ್ನು ಉಪಶಮನಗೊಳಿಸಲು ಸಾಧ್ಯ. ರೋಗಿಗಳಿಗೆ ತಮ್ಮ ರೋಗವಾವುದು, ರೋಗದ ಸ್ವರೂಪವೇನು ಎಂಬ ವಿಷಯ ತಿಳಿದರೆ ಅಂಥವರು ಮಂತ್ರಗಾರನ ಹತ್ತಿರ ಹೋಗುವುದು ಕಡಿಮೆ.

ಬಹಳಷ್ಟು ಮಂತ್ರಗಳನ್ನು ತಿಳಿದು, ಅನೇಕ ರೋಗಗಳನ್ನು ಗುಣಪಡಿಸಬಲ್ಲಾತನಿಗೆ ಮಾತ್ರ ಜನಪದ ನಂಬಿಕೆಯ ಪ್ರಕಾರ ಮಂತ್ರಗಾರ ಎಂದು ಕರೆಯುವುದು. ಒಂದು ವಿಶಿಷ್ಟರೋಗಕ್ಕೆ ಮಾತ್ರ ಮಂತ್ರ ಹಾಕುವವರನ್ನು ಹಾಗೆ ಸಾಮಾನ್ಯವಾಗಿ ಕರೆಯುವದಿಲ್ಲ. ಉದಾಹರಣೆಗೆ, ಚೇಳು ಕಡಿದದ್ದಕ್ಕೆ, ಹಾವು ಕಡಿದದ್ದಕ್ಕೆ ಮಂತ್ರ ಹಾಕುವವರನ್ನು 'ಮಂತ್ರಾ ಹಾಕಾಂವ' ಎಂದೇ ಕರೆಯುತ್ತಾರೆ. ಮಂತ್ರಗಾರ ಮಂತ್ರ

ವನ್ನು ಗಟ್ಟಿಯಾಗಿ ಉಚ್ಚರಿಸುವದಿಲ್ಲ. ಇದಕ್ಕೆ ಅವರು ಕೊಡುವ ಕಾರಣವೆಂದರೆ ಮಂತ್ರವನ್ನು ಗಟ್ಟಿಯಾಗಿ ಉಚ್ಚರಿಸಿದರೆ ಅದರ ಪರಿಣಾಮ ಕಡಿಮೆಯಾಗುತ್ತದೆ ಯೆಂಬ ನಂಬಿಕೆ. ಮಂತ್ರಗಳಲ್ಲಿ ಬೂದಿ, ವಿಭೂತಿ, ಎಲೆ. ಲಿಂಬೆಹಣ್ಣು ಇತ್ಯಾದಿ ವಸ್ತುಗಳು ಮುಖ್ಯಪಾತ್ರವಾಡುತ್ತವೆ. ಇಲ್ಲಿ ರೋಗಿಗಳ ಶ್ರದ್ಧೆ ಮುಖ್ಯ. ಶ್ರದ್ಧೆಯಿಲ್ಲ ದವರು ಮಂತ್ರಗಾರರಲ್ಲಿಗೆ ಹೋಗಬಾರದೆಂಬುದು ಜನಪದ ನಂಬಿಕೆ.

**ದೇವರ ಹೇಳುವರು :**

ಸಾಮಾನ್ಯವಾಗಿ ಒಬ್ಬ ದೇವತೆ ಮೈಮೇಲೆ ಬಂದು, ಆ ಸ್ಥಿತಿಯಲ್ಲಿದ್ದಾಗ ಮಾತ ನಾಡಿದ್ದಕ್ಕೆ 'ದೇವರ ಹೇಳೂದು'ಎಂದು ಹೆಸರು. ಅಂಥವರು 'ದೇವರ ಹೇಳುವರು' ಇಂಥ ಸ್ಥಿತಿಯಲ್ಲಿನ ಮಾತು ರೋಗಕ್ಕೆ ಪರಿಹಾರಸೂತ್ರ. ಗಂಡು ಜೋಗತಿ, ಜೋಗಪ್ಪಾ ಗಳಿಗೆ ಈ ರೀತಿ ಮೈಮೇಲೆ ಬರುವುದು ಹೆಚ್ಚು. ಇಂಥ ಪ್ರಸಂಗಗಳಲ್ಲಿ ರೋಗಿ ತನ್ನ ರೋಗಕ್ಕೆ ಪರಿಹಾರೋಪಾಯ ಕೇಳಿದರೆ ಆ ದೇವತೆಯು ಪ್ರಕಾರ ಯಾವುದೋ ವ್ರತ ಬಿಟ್ಟಿದ್ದು, ಹರಕೆ ತಪ್ಪಿಸಿದ್ದು ಮುಂತಾದ ಕಾರಣಗಳು ಹೊರಡುತ್ತವೆ.

**ಉಪಚಾರ:**

ರೋಗಿಯ ಮೂತ್ರ ಪರೀಕ್ಷೆ. ರಕ್ತ ಪರೀಕ್ಷೆ, ಜ್ವರ ಮುಂತಾದ್ದನ್ನು ಮುಗಿಸಿ, ರೋಗಿಯನ್ನು ಪ್ರಶ್ನೆ ಕೇಳಿ ರೋಗವನ್ನು ತಿಳಿದುಕೊಳ್ಳುವ ಆಧುನಿಕ ವೈದ್ಯಶಾಸ್ತ್ರದ ರೀತಿಗೂ, ಜನಪದ ವೈದ್ಯನ ರೀತಿಗೂ ಅಜಗಜಾಂತರ ವ್ಯತ್ಯಾಸವಿದೆ. ಇವನು ಮೊದಲು ರೋಗಿಯ ದೇಹವನ್ನು ಪರೀಕ್ಷಿಸುತ್ತಾನೆ. ಆಗ ರೋಗ ತಿಳಿಯದಿದ್ದರೆ ಅವನು ತಿಂದದ್ದೇನು, ಎಲ್ಲಿಗೆ ಹೋಗಿದ್ದ ಮುಂತಾಗಿ ಕೇಳುತ್ತಾನೆ . ಇದಕ್ಕೆ ಕಾರಣ ಯಾವು ದಾದರೂ ದುಷ್ಟಶಕ್ತಿ ವಾಸವಾಗಿದ್ದ ಸ್ಥಳಕ್ಕೆ ಹೋಗಿದ್ದು ಕಂಡು ಬಂದರೆ, ಆ ಶಕ್ತಿಯ ಪೀಡೆ ಎಂದು ನಿರ್ಣಯಕ್ಕೆ ಬರಬಹುದು. ಇದರಿಂದಲೂ ಪ್ರಯೋಜನವಾಗದಿದ್ದರೆ ತನ್ನ ವಿಶೇಷಶಕ್ತಿಯ ಮೊರೆಹೋಗುತ್ತಾನೆ. ಶಕ್ತಿಯ ಉಪಾಸನೆ ಮಾಡಿ ಅದರ ಮುಖಾಂತರ ಕಾರಣ ತಿಳಿದುಕೊಳ್ಳುತ್ತಾನೆ. ಆಹುತಿ ಮುಂತಾದ್ದನ್ನು ಕೊಟ್ಟು ಆ ಶಕ್ತಿಯನ್ನು ತೃಪ್ತಿಪಡಿಸುತ್ತಾನೆ.

ಜನಪದರಲ್ಲಿ ರೋಗಿಗೆ ವೈದ್ಯನ ಶಕ್ತಿಯಲ್ಲಿ ನಂಬಿಕೆ ಮುಖ್ಯ. ಆ ಭಾವನೆ ಯನ್ನುಂಟು ಮಾಡಲು ವೈದ್ಯನೂ ಸತತ ಶ್ರಮಿಸುತ್ತಾನೆ. ಅವನು ಅನೇಕ ರೀತಿಯಲ್ಲಿ ಅದಕ್ಕಾಗಿ ಪ್ರಯತ್ನಿಸುತ್ತಾನೆ. ಅವನು ವಿಚಿತ್ರ ವೇಷ ಧರಿಸಬಹುದು. ತನ್ನ ದೇವತೆ ಯನ್ನು ಕಣ್ಣಿಗೆ ಹೊಡೆಯುವಂತೆ ಸಿಂಗರಿಸಬಹುದು. ರೋಗಿ ಬಂದ ಕೂಡಲೆ ತನ್ನೆಲ್ಲ ಕ್ರಿಯೆಗಳನ್ನು ದೇವತೆಯತ್ತ ಕೇಂದ್ರೀಕರಿಸಿ, ಎಲ್ಲವೂ ದೇವರಿಂದಲೇ ನಡೆಯುತ್ತವೆ ಯೆಂಬ ಭರವಸೆಯನ್ನು ಅವನಲ್ಲಿ ಹುಟ್ಟಿಸುತ್ತಾನೆ.

ಆಮೇಲೆ ರೋಗಿಯನ್ನು ಪ್ರಶ್ನಿಸಿ, ಅವನ ರೋಗದ ಕಾರಣಗೊತ್ತು ಹಚ್ಚಲು, ಕಣ್ಣುಮುಚ್ಚಿ, ಮಂತ್ರಪಠಣ ಮಾಡಿ, ದೇವತೆಯ ಮುಖಾಂತರ ಕಾರಣ ತಿಳಿದಂತೆ ಬಿಂಬಿಸುವದು. ಇಲ್ಲವೆ ಬೆಂಕಿಯಲ್ಲಿ ಕೆಲವು ರಾಸಾಯನಿಕಗಳನ್ನು ಹಾಕಿ ಅದನ್ನು ಒಮ್ಮೆಲೆ ಉರಿಸಿ, ತನ್ನ ಶಕ್ತಿಯನ್ನು ಬಿಂಬಿಸಿ, ಆಮೇಲೆ ಅವನ ರೋಗವನ್ನು ತಿಳಿಸುವುದು. ಇದು ಅವನ ವಿಧಾನ.

ಮೇಲೆ ಹೇಳಿದ ರೋಗದ ಕಲ್ಪನೆಯ ಹಿನ್ನೆಲೆಯಲ್ಲಿ ವೈದ್ಯರೇ ಔಷಧ ಕೊಡುತ್ತಾರೆ. ಇಲ್ಲಿ ದಿನನಿತ್ಯದ ಗೃಹಬಳಕೆಯ ವಸ್ತುಗಳೇ ಔಷಧಿಗಳು. ಉದಾಹರಣೆಗೆ, ಬಾಯಲ್ಲಿ ಅಗ್ರುವಾದರೆ ಜೀರಿಗೆ ತಿನ್ನಲು ಹೇಳುತ್ತಾರೆ. ಕೆಲವೊಮ್ಮೆ ಕೊಬ್ಬರಿ ಅಥವಾ ಗೋಡಂಬಿ ತಿನ್ನಲೂ ಹೇಳುತ್ತಾರೆ. ಹೊಟ್ಟೆ ಕಡಿಯುತ್ತಿದ್ದರೆ ಅಜಿವಾನ ತಿನ್ನಲು ಹೇಳುವರು. ಇಲ್ಲವೆ ಮನೆಯಲ್ಲಿಯ ತಿನ್ನುವ ಸೋಡಾ ಮತ್ತು ಲಿಂಬೆಹಣ್ಣಿನ ರಸ ಕೂಡಿ ತೆಗೆದುಕೊಳ್ಳಲು ಹೇಳುವರು. ಹಲ್ಲುನೋವು ಕಾಣಿಸಿ ಕೊಂಡರೆ ನೋಯುವ ಹಲ್ಲಿನ ಸ್ಥಳದಲ್ಲಿ ತಂಬಾಕು ಇಡಲು ತಿಳಿಸುವದು. ಹುಳಿಸುಡುವುದು ಹಳ್ಳಿಗಳಲ್ಲಿ ಸಾಮಾನ್ಯ. ಇದನ್ನು ಶಮನ ಮಾಡಲು ಹುಣಸೆಕಪ್ಪ ತಿಂದರಾಯಿತು. ಈಗ acidity ಎಂದು ಕರೆಯಲ್ಪಡುವ ಇದಕ್ಕೆ ಅನೇಕ ಗುಳಿಗೆಗಳಿವೆ. ನೆಗಡಿಯಾದರೆ ಶುಂಠಿಕಷಾಯ ಕುಡಿಯಲು ಇಲ್ಲವೆ ಶುಂಠಿಕಡುಬು ತಿನ್ನಲು ಹೇಳುವುದು ವಾಡಿಕೆ. ಇಲ್ಲವೆ ಬರಿ ಚುರಮುರಿ ತಿನ್ನಲು ಹೇಳುತ್ತಾರೆ. ಸ್ವಲ್ಪ ಕೆಮ್ಮಿದ್ದರೆ, ಸಣ್ಣ ಮಕ್ಕಳಿಗೆ ಅರಿಷಿಣದ ಗುಟಿಹಾಕಲು ತಿಳಿಸುತ್ತಾರೆ. ಕೆಮ್ಮು ಸ್ವಲ್ಪ ಜಾಸ್ತಿಯಿದ್ದರೆ, ಹುಲಗಲ ಕಾಯಿಯ ಸರವನ್ನೋ, ಬಳ್ಳೊಳ್ಳಿಯ ಸರವನ್ನೋ ಕೊರಳಲ್ಲಿ ಕಟ್ಟುತ್ತಾರೆ. ಕಣೆಜಿಟ್ಟಿಯಾದರೆ ಕೆಂಪು ಹಂಚನ್ನೋ, ಲವಂಗವನ್ನೋ ಅಥವಾ ಬಳ್ಳುಳ್ಳಿಯನ್ನು ತೆಯ್ದು ಹಚ್ಚಲು ತಿಳಿಸುತ್ತಾರೆ. ಕೆಲವರು ಹುಣಿಸೆಯ ರಾಡಿ ಹಚ್ಚಲೂ ಹೇಳುತ್ತಾರೆ. ತಲೆ ಒಡೆದರೆ ತಂಬಾಕು, ಸಕ್ಕರಿ ಅಥವಾ ಜಾಚಲಿ ತುಂಬುತ್ತಾರೆ. ಮಕ್ಕಳ ಹೊಟ್ಟೆ ಜಾಡಿಸುತ್ತಿದ್ದರೆ ಎಂದು ಸಕ್ಕರಿ, ಜಾಜಿಕಾಯಿ ಮತ್ತು ತುಪ್ಪ ಕೂಡಿಸಿ ಕೊಡುತ್ತಾರೆ. ಕೆಲವರು ಜಿಲೇಬಿ ಪಾಕವನ್ನು ತಿನ್ನಲು ಹೇಳುತ್ತಾರೆ. ಇಲ್ಲವೆ ಹಾಲಿನಲ್ಲಿ ಲಿಂಬೆಹಣ್ಣನು ಹಿಂಡಿ ಕೂಡಲೆ ಕುಡಿದುಬಿಡಲು ತಿಳಿಸುತ್ತಾರೆ, ಕೆಲವು ಪ್ರದೇಶಗಳಲ್ಲಿ ತೆಂಗಿನ ನೀರನ್ನು ಕುಡಿಯಲು ತಿಳಿಸುತ್ತಾರೆ. ಹೀಗೆ ಅನೇಕ ವಸ್ತುಗಳನ್ನು ಬಳಸುತ್ತಾರೆ. ಇದು ಹೇಳುತ್ತ ಹೋದರೆ ಮುಗಿಯದ ಪ್ರಪಂಚ. ಮನೆಯಲ್ಲಿಯ ವಸ್ತುಗಳನ್ನೇ ಬಳಸಿ ರೋಗ ಉಪಶಮನ ಮಾಡಲು ಮನೆ ವೈದ್ಯರು ಸೂಚಿಸುವ ಸಾಮಾನ್ಯ ಮಾರ್ಗಗಳಿವು.

ಇನ್ನು ಇದಕ್ಕಿಂತ ದೊಡ್ಡ ಪ್ರಮಾಣದ ರೋಗಗಳಿಗೂ ತಾವೇ ಔಷಧಿ ಸೂಚಿಸಿ ಕೊಡುತ್ತಾರೆ. ಇವುಗಳಲ್ಲಿ ನಿತ್ಯಬಳಕೆಯ ವಸ್ತುಗಳೊಡನೆ ಸೇರಿಸಿ ಕೊಡುವ ಕೆಲವು ಮೂಲಿಕೆಯ ಔಷಧಿಗಳಿವೆ. ಉದಾಹರಣೆಗೆ, ಮೂಲವ್ಯಾಧಿಗೆ ಮೆಂತೆ ಬೀಜನ್ನು ಪುಡಿಮಾಡಿ, ಉಪ್ಪುಸೇರಿಸಿ ತಿನ್ನುತ್ತ ಹೋದರೆ ಮೂಲವ್ಯಾಧಿ ಕಡಿಮೆಯಾಗುತ್ತದೆ.

ಮಧುಮೇಹ (ಸಕ್ಕರೆರೋಗ) ಕ್ಕೆ ನೇರಲಹಣ್ಣಿನ ಬೀಜವನ್ನು ಪುಡಿಮಾಡಿ ಕೊಡುತ್ತಾರೆ. ನಾವೇ ನೇರಲ ಹಣ್ಣನ್ನು ತಿನ್ನುತ್ತ ಹೋದರೂ ಮಧುಮೇಹ ಕಡಿಮೆಯಾಗುತ್ತ ಹೋಗುತ್ತದೆ. ಕಫ ಕತ್ತರಿಸಲು ಹೆಮ್ಮುಗಳನ್ನು ತಿನ್ನಲು ಕೊಡುತ್ತಾರೆ. ಕೆಲವರು ತುಳಸಿಎಲೆ ಹಾಗೂ ಹೆಮ್ಮುಗಳನ್ನು ಪುಡಿಮಾಡಿ ಮಿಶ್ರಣ ತಯಾರಿಸಿಕೊಡುತ್ತಾರೆ. ಭೀಕರವಾದ ನಾರು ಹುಣ್ಣಿಗೆ ಸುಲಭವಾದ ರಾಮಬಾಣವೊಂದುಂಟು. ತಗಣಿ ಹಾಕಿ ಬೆಲ್ಲದ ಗುಳಿಗೆಕೊಟ್ಟರೆ ಮೂರು ದಿವಸದಲ್ಲಿ ನಾರು ಇಳಿಯುತ್ತದೆ. ಬಿಳೀ ಸೆರಗಿಗೆ ಬಿಳೀ ದಾಸಾಳಹೂವು ತಿಂದರೆ ಉತ್ತಮ. ಕಾಮನಿ ರೋಗ ಗುಣಪಡಿಸಲು ಮೊಸರು, ಬೆಲ್ಲ ಕೂಡಿಸಿ ಕೊಟ್ಟು ಅದನ್ನು ಗುಣಪಡಿಸುತ್ತಾರೆ. ಹೀಗೆ ಸಕಲರೋಗಗಳಿಗೂ ಔಷಧಿ ಕೊಡುವ ಮನೆ–ವೈದ್ಯರು ತೀರ ನಿಷ್ಪ್ರಯೋಜಕರು ಎಂದು ಹೇಳುವಂತಿಲ್ಲ; ಅವರ ಹೇಳಿಕೆಗಳಲ್ಲಿ ಎಲ್ಲವೂ ಸತ್ಯ ಎಂದೂ ಹೇಳುವಂತಿಲ್ಲ. ಇಲ್ಲಿ 'ಪಂಚಭವತಿ ಪಂಚ ನಭವತಿ' ರೀತಿಯಲ್ಲಿ ಪ್ರಯೋಜನವಾಗುತ್ತದೆ.

ಇನ್ನು ಮಂತ್ರಗಾರರು. ಇದು ಆಯಾ ಗ್ರಾಮದ ವ್ಯಕ್ತಿಯ ಪ್ರಸಿದ್ಧಿಯನ್ನು ಅವಲಂಬಿಸಿರುತ್ತದೆ. ಸಾಮಾನ್ಯರೋಗಗಳಿಗೂ ಮಂತ್ರಹಾಕಿಸಿಕೊಳ್ಳುವವರು ಇದ್ದುದ ರಿಂದ ಮಂತ್ರಹಾಕುವವರೂ ಸಿಗುತ್ತಾರೆ. ಹಳ್ಳಿಗಳಲ್ಲಿ ಮಕ್ಕಳ ಮೈ ಬೆಚ್ಚಗಾದರೆ ಮಸಿದಿಗೋ, ಮತ್ತೊಂದು ಸ್ಥಳಕ್ಕೋ ಹೋಗಿ ತಾಯತ ಕಟ್ಟಿಸುತ್ತಾರೆ. ಮಕ್ಕಳ ಕಿರಿಕಿರಿ, ನೆಗಡಿ, ಕೆಮ್ಮು, ಸುಮ್ಮಸುಮ್ಮನೆ ಅಳುವುದು (ಅವರ ಪ್ರಕಾರ) ಇವುಗಳಿಗೆಲ್ಲ ಅಲ್ಲಿ ಮಂತ್ರಿಸಿದ ಬೂದಿಯೋ, ತಾಯತವೋ ದೊರೆಯುತ್ತದೆ. ಇಲ್ಲವೆ ದಾರವನ್ನು ಮಂತ್ರಿಸಿ ಕಟ್ಟುತ್ತಾರೆ. ಮಂತ್ರಿಸಿದ ದಾರ ಅಂಜಿಕೆಯ ರೋಗವನ್ನು ಕಳೆಯಲು ಬಹುವಾಗಿ ಬಳಕೆಯಾಗುತ್ತದೆ. ಹಾವು ಕಡಿದರೆ ಮಂತ್ರದಿಂದ ಗುಣಪಡಿಸುತ್ತಾರೆ. ಚೇಳು ಕಡಿದರೆ ಮಂತ್ರದಿಂದ ಗುಣಪಡಿಸುತ್ತಾರೆ. ಇಲಿ, ನಾಯಿ ಕಡಿದವರಿಗೆ ಗುರುವಾರ ಅಥವಾ ರವಿವಾರ ನೀರು ಮಂತ್ರಿಸಿ ಕೊಡುತ್ತಾರೆ. ಈ ಮಂತ್ರಗಾರರು ಔಷಧಿಕೊಟ್ಟರೂ ಮಂತ್ರಹಾಕಿಯೇ ಕೊಡುತ್ತಾರೆ.

ಗಾಳಿಶಕ ಅಂದರೆ ಭೂತಚೇಷ್ಟೆ ಇದ್ದರಂತೂ ಮಂತ್ರವೇ ಬೇಕು. ಗಾಳಿ ಶಕ ಬಡಿದ ವ್ಯಕ್ತಿಯನ್ನು ಅಮವಾಸ್ಯೆಯ ದಿವಸವೊ, ರವಿವಾರದಿವಸವೊ ಒಂದುಕೋಣೆ ಯಲ್ಲಿ ಹಾಕಿ, ಮೆಣಸಿನಹೊಗೆ ಎಬ್ಬಿಸಿ, ಆಮೇಲೆ ಮಂತ್ರಹಾಕುತ್ತಾರೆ. ಒಮ್ಮೊಮ್ಮೆ ಒಂದು ಸಿಟ್ಟಿಂಗನಲ್ಲಿ ದೆವ್ವ ಬಿಡುವದಿಲ್ಲ. ಆಗ ೪–೬ಸಲ ಹಾಗೆಯೇ ಅದನ್ನು ಮುಂದುವರಿಸಬೇಕಾಗುತ್ತದೆ. ಈ ರೀತಿ ವ್ಯಕ್ತಿಗಳಲ್ಲದೆ ದೆವ್ವ ಬಿಡಿಸುವ ಕೇಂದ್ರಗಳೂ ಇವೆ. ಅಲ್ಲಿ ಮಂತ್ರಹಾಕುವ ಅವಶ್ಯಕತೆಯಿಲ್ಲ. ಆ ಸ್ಥಳಕ್ಕೆ ಹೋದರೆ ಸಾಕು. ಬಿಟ್ಟು ಹೊಗುತ್ತವೆ.

ಮಂತ್ರಗಾರನಹತ್ತರ ಹೋಗಿ ಬರಲು ಒಂದು ಕ್ರಮವಿದೆ. ಅವರು ಪಂಚ ಫಳಾರ (ಊದಬತ್ತಿ, ಕರ್ಪೂರ, ಅಡಿಕೆ, ಎಲೆ, ಅಕ್ಕಿ ಇತ್ಯಾದಿ) ಮತ್ತು ದಕ್ಷಿಣೆ ತೆಗೆದು

ಕೊಂಡು ಬರಬೇಕು. ಅವನ್ನು ಮಂತ್ರಗಾರನಿಗೆ ಕೊಡಬೇಕು. ಮಂತ್ರಗಾರ ಅವನ್ನೆಲ್ಲ ಇಟ್ಟು ಪೂಜೆಮಾಡಿ, ಅಂಗಾರವನ್ನೊ, ಲಿಂಬೆಹಣ್ಣನ್ನೊ, ದಾರವನ್ನೊ ಏನಾದರೊಂದು ವಸ್ತುವನ್ನು ಮಂತ್ರಿಸಿಕೊಡುತ್ತಾನೆ. ಅವನ್ನು ತೆಗೆದುಕೊಂಡು ಹೋಗಬೇಕು. ಮಂತ್ರಿಸುವ ವಸ್ತು ಏನಾದರೂ ಇರಬಹುದು. ಉದಾಹರಣೆಗೆ, ಲಿಂಬೆಹಣ್ಣು, ಎಲೆ, ಬೂದಿ, ವಿಭೂತಿ, ಅಕ್ಕಿ, ಉಪ್ಪು, ನವಣೆ, ಬೇರು, ತೊಗಟೆ ಇತ್ಯಾದಿ ಕೆಲವು ಸಲ ತಾಯಿತ ಮಾಡಿ, ರೋಗಿಯ ನಡಕ್ಕೋ, ರಟ್ಟೆಗೊ, ಕುತ್ತಿಗೆಗೊ ಕಟ್ಟುತ್ತಾರೆ.

## ಪರಂಪರೆ :

ಮಂತ್ರವಿದ್ಯೆಯನ್ನು ಕಲಿಯುವದು ಮಾತ್ರ ಮೇಲಿನಷ್ಟು ಸುಲಭದ ಕೆಲಸವಲ್ಲ. ಮಂತ್ರಗಾರ ತನ್ನ ಶಿಷ್ಯನನ್ನು ಬಹು ಎಚ್ಚರಿಕೆಯಿಂದ ಆರಿಸಿಕೊಳ್ಳುತ್ತಾನೆ. ಇದಕ್ಕೆ ಕಾರಣ, ಅದರಲ್ಲಿ ಅಡಕವಾಗಿರುವ ಕಠಿಣ ಸಾಧನೆ, ಸಾಧನೆಯ ಜೊತೆಗೆ ಅತ್ಯಂತ ಧೈರ್ಯವೂ ಆ ವ್ಯಕ್ತಿಗಿರಬೇಕಾಗುತ್ತದೆ. ಸಾಧನೆಯೂ ಬಹು ವಿಶಿಷ್ಟವಾಗಿರುತ್ತದೆ. ಹೆಚ್ಚಾಗಿ ಸಾಧನೆ ನಡೆಯುವ ದಿವಸಗಳು ಆದಿತ್ಯವಾರ, ಅಮಾವಾಸ್ಯೆ. ಅದೂ ರಾತ್ರಿ. ಬಹಳಷ್ಟು ಸಲ ಮಧ್ಯರಾತ್ರಿ. ಸ್ಥಳ ಸ್ಮಶಾನ. ಗ್ರಹಣದ ದಿನವಂತೂ ಅವರಿಗೆ ಅತ್ಯುತ್ತಮ ದಿವಸ. ಸ್ಮಶಾನದಲ್ಲಿ ಮಂತ್ರಪಠಣ. ಕೆಲವೊಂದು ಮಂತ್ರಗಳಲ್ಲಿ ಅದೇ ಹುಗಿದ ಬಾಣಂತಿಯ ಶವವನ್ನು ಅಗೆದು ತೆಗೆದು, ಕೈಯನ್ನು ತೆಗೆದುಕೊಳ್ಳುತ್ತಾರೆಂದೂ ಹೇಳುತ್ತಾರೆ. ಈ ಸಾಧನೆಯಲ್ಲಿ ಶುದ್ಧಿಗೆ, ಶುದ್ಧ ಚಾರಿತ್ರ್ಯಕ್ಕೆ ವಿಶೇಷ ಸ್ಥಾನವುಂಟು. ಚಾರಿತ್ರ್ಯ ಶುದ್ಧಿಯಿಲ್ಲದಿದ್ದರೆ ಮಂತ್ರದ ಪರಿಣಾಮ ಅಷ್ಟು ಆಗುವದಿಲ್ಲವೆಂದು ನಂಬಿಕೆ. ಕೆಲವೊಮ್ಮೆ ವಿಪರೀತ ಪರಿಣಾಮಗಳೂ ಆಗುವದಂತೆ. ಆಶೆಗೆ ಬಲಿಬಿದ್ದು ಮಂತ್ರಪ್ರಯೋಗಮಾಡಬಾರದು. ಹಣ ಮತ್ತಿತರ ಆಸೆಗಾಗಿ ಮಂತ್ರ ಹಾಕುವವರನ್ನು ಮಂತ್ರಗಾರರೆಂದು ಕರೆಯುವದೇ ಇಲ್ಲ. ಅವರು ಮಾಟಗಾರರು, ಚಾಡಿ ಮಾಡುವವರು. ಎರಡರಲ್ಲಿಯೂ ಮಂತ್ರವೇ ಮೂಲವಾಗಿದ್ದರೂ, ಮೊದಲಿನದರಲ್ಲಿ ಸದುದ್ದೇಶವಿರುತ್ತದೆ. ಎರಡನೆಯದರಲ್ಲಿ ಅಂಥದೇನು ಇಲ್ಲ. ಹಣಕೊಟ್ಟವರು ಒಳ್ಳೆಯದನ್ನೇ ಹೇಳಲಿ, ಕೆಟ್ಟದನ್ನೇ ಹೇಳಲಿ ಅದನ್ನು ಮಾಡುತ್ತಾರೆ.

ಈಗಿನ ವೈಜ್ಞಾನಿಕ ಯುಗದಲ್ಲಿ ಮನೆವೈದ್ಯರನ್ನು, ವೈದ್ಯ ವಿಧಾನವನ್ನು, ಔಷಧಿಗಳನ್ನು ಕುರಿತು ಮೂಗು ಮುರಿಯುವ ಸಂಪ್ರದಾಯವೇ ಬೆಳೆದಿದೆ. ಆದರೆ ಸಾವಿರಾರು ವರ್ಷಗಳಿಂದ ಕೋಟಿಗಟ್ಟಲೆ ಜನರ ಮೇಲೆ ಪ್ರಯೋಗವಾದ ಈ ಔಷಧಿಗಳು ಸಂಪೂರ್ಣ ನಿಷ್ಪ್ರಯೋಜಕವೇ ಎಂದು ಸಾಧಿಸುವುದು ಸುಶಿಕ್ಷಿತ ಮೂರ್ಖತನವೆನಿಸೀತು. ಪ್ರತಿ ಊರಿನಲ್ಲಿ ಮನೆಯಲ್ಲಿ ಇಂಥ ವೈದ್ಯರಿದ್ದಾರೆ; ಪ್ರತಿ ಊರಿನಲ್ಲಿ ಒಂದು ವಿಶಿಷ್ಟ ಔಷಧಿ ಇದೆ. ಅವನ್ನು ತಾತ್ಸಾರ ಮಾಡಿ, ಮರೆತು ಬಿಡುವುದಕ್ಕಿಂತ ಅಂಥ ವೈದ್ಯರನ್ನು ಬರಮಾಡಿಕೊಂಡು, ಸುಶಿಕ್ಷಿತ ವೈದ್ಯರು ಅವರ ಔಷಧಿಗಳ ವಿವರ

ಪಡೆದು, ಅವನ್ನು ವೈಜ್ಞಾನಿಕವಾಗಿ ಪರೀಕ್ಷಿಸಿ, ಪರಿಣಾಮಕಾರಿಯಾದವುಗಳನ್
ಮಾರುಕಟ್ಟೆಗೆ ಬರುವಂತೆ ಹೊಸ ಪದ್ಧತಿಯಿಂದ ತಯಾರಿಸುವ ಪ್ರಯತ್ನಮಾಡಬೇಕ
ಈ ಕ್ರಮ ಇನ್ನೂ ಪರಿಹಾರ ಕಾಣದ ಅನೇಕ ರೋಗಗಳನ್ನು ಗುಣಪಡಿಸಲು ನೆ
ವಾದೀತು. ನಮ್ಮಲ್ಲಿ ಇನ್ನೂ ತೊನ್ನು. ನಾರು ಮುಂತಾದ ರೋಗಗಳಿಗೆ ಔಷಧಿಗಳ
ದೊರೆತಿಲ್ಲ. ಈಗಾಗಲೇ ಬಳಕೆಯಲ್ಲಿರುವ ನಮ್ಮ ಹಳ್ಳಿಗಳಲ್ಲಿಯ ಇಂಥ ಔಷಧಿಗಳು
ನಿಜವಾಗಿ ರೋಗ ಪರಿಹರಿಸುವವೆ ಎಂಬುದನ್ನು ಪರೀಕ್ಷಿಸಿ, ಸ್ವೀಕರಿಸಿದರೆ, ವೈದ್ಯ
ಪ್ರಪಂಚಕ್ಕೆ ಹೊಸ ಜಗತ್ತೆ ತೆರೆಯುವವರಲ್ಲಿ ಸಂದೇಹವಿಲ್ಲ. ಇಂಥ, ಪ್ರಯತ್ನಗಳತ್ತ
ಹೊಸ ಪೀಳಿಗೆಯ ಲಕ್ಷ್ಯ ಹೊರಳಿದ್ದು, ಸಂತೋಷಕರ. ಇದು ಮುಂದುವರಿಯಬೇಕು.

---

ಈ ಪ್ರಬಂಧವನ್ನು ಸಿದ್ಧಪಡಿಸುವಾಗ ಡಾ. ಕೆ. ಜಿ. ಗುರುಮೂರ್ತಿ ಅವರ 'ಜನಪದ ಸಮಾಜ ಮತ್ತು ಸಂಸ್ಕೃತಿ' (ಅಪ್ರಕಟಿತ) ಗ್ರಂಥದಿಂದಲೂ, ಅವರೊಡನೆ ಚರ್ಚೆಯಿಂದಲೂ ಬಹಳ ಅನುಕೂಲವಾಯಿತು. ಅದೇ ರೀತಿ ಶ್ರೀ ಡಿ. ಕೆ. ಭಟ್ಟ ಅವರ Ethnomedicine in a Karnatak Village (ಅಪ್ರಕಟಿತ) ಮಹಾ ಪ್ರಬಂಧದಿಂದಲೂ ನೆರವು ದೊರೆಯಿತು. ಇದಕ್ಕಾಗಿ ನಾನು ಇಬ್ಬರಿಗೂ ಋಣಿ.

# ಕೊರವರು-ಕೊರವಂಜಿ

ಬಿ. ವ್ಹಿ. ಮಲ್ಲಾಪುರ

ಉತ್ತರ ಕರ್ನಾಟಕದಲ್ಲಿ ಒಂದು ಕಾಲಕ್ಕೆ ಎಲ್ಲರ ಮನೆಮಾತಾಗಿದ್ದ ಕುಲಗೋಡ ತಮ್ಮಣ್ಣನ 'ಶ್ರೀಕೃಷ್ಣ ಪಾರಿಜಾತ' ಬಯಲಾಟ ನೋಡಿದವರು ಅದರಲ್ಲಿ ಬರುವ ರಂಜನೀಯ ಕೊರವಂಜಿಯು ಪಾತ್ರವನ್ನು ಮರೆಯಲು ಸಾಧ್ಯವಿಲ್ಲ. ಅದರಲ್ಲಿ ಶ್ರೀಕೃಷ್ಣನು ಕೊರವಂಜಿ ವೇಷ ಧರಿಸಿ ಸತ್ಯಭಾಮೆಯ ಅಂತರಂಗವನ್ನು ತಿಳಿಯು ತ್ತಾನೆ. ಶ್ರೀವೆಂಕಟೇಶ ಪಾರಿಜಾತದಲ್ಲಿ ವಿಷ್ಣು, ನಾರಾಯಣಪುರದ ಆಕಾಶರಾಜನ ಮಗಳಾದ ಪದ್ಮಾವತಿಯನ್ನು ಪರೀಕ್ಷಿಸಲು ಕೊರವಂಜಿಯ ರೂಪ ಧರಿಸುತ್ತಾನೆ. ಹೆಳವನಕಟ್ಟೆ ಗಿರಿಯಮ್ಮನು ಬರೆದ 'ಬ್ರಹ್ಮಕೊರವಂಜಿ'ಯಲ್ಲಿ ಬ್ರಹ್ಮದೇವನೇ ಕೊರ ವಂಜಿಯ ರೂಪ ತೊಟ್ಟು ಕಂಸನ ಸೆರೆಯಲ್ಲಿದ್ದ ವಸುದೇವ-ದೇವಕಿಯರನ್ನು ಸಂತೈಸು ತ್ತಾನೆ. ಪ್ರಸನ್ನವೆಂಕಟದಾಸಕೃತ 'ನಾರದ ಕೊರವಂಜಿ' ನಾಟಕದಲ್ಲಿ ರುಕ್ಮಿಣಿಯ ಅಣ್ಣ ಅವಳ ಮನಸ್ಸಿಗೆ ವಿರುದ್ಧವಾಗಿ ಶಿಶುಪಾಲನಿಗೆ ಅವಳನ್ನು ಕೊಡಬೇಕೆ[ಂದು] ನಿರ್ಧರಿಸಿದಾಗ ನಾರದನು ಕೊರವಂಜಿಯ ರೂಪ ತಾಳಿ ರುಕ್ಮಿಣಿಯ ಬಳಿ ಬ[ಂದು] ಅವಳನ್ನು ಶ್ರೀಕೃಷ್ಣನು ವಿವಾಹವಾಗಿ ದ್ವಾರಕೆಗೆ ಕರೆದೊಯ್ಯುವನೆಂದು ಕಣಿ ಹೇ[ಳು] ತ್ತಾನೆ. ಅತ್ಯುಗ್ರ ತಪಸ್ಸಿನಲ್ಲಿ ನಿರತಳಾಗಿದ್ದ ಹದಿನಾರರ ಹರೆಯದ ಗಿರಿಜೆಯ ವನ್ನು ಪರೀಕ್ಷಿಸಲು ಶಿವನು ಹಾಕಿದ ಹಲವಾರು ವೇಷಗಳಲ್ಲಿ ಕೊರವಂಜಿಯು ಒಂದೆರಡು ಜನಪದ ಕಥೆಗಳಲ್ಲಿ ಬರುತ್ತದೆ. ಇದೇ ರೀತಿ ಅರ್ಜುನಕೊರವಂಜಿ, ಮ[illegible] ಕೊರವಂಜಿ ಮೊದಲಾದ ಯಕ್ಷಗಾನಗಳು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ [illegible] ಗೊಂಡಿರುವುದು ಕಂಡುಬರುತ್ತದೆ. ಜನಪದ ಸಾಹಿತ್ಯದಲ್ಲಿ ಕೊರವಂಜಿಯ ಹಾಡ[illegible] ಒಂದು ಪ್ರತ್ಯೇಕ ಪ್ರಕಾರವೇ ಇದೆ. ಇದರಿಂದ ಕೊರವಂಜಿ ಕನ್ನಡಿಗರಿಗೆಲ್ಲ ಚಿರಪ[illegible]

ಹೆಣ್ಣು ಮದುವೆ ವಿವಾಹ ಅಕ್ಕನ ಅವನು ಸೋದರ ಕಾಲಕ್ಕೆ ಮದುವೆ

ಹೆಂಡತಿಯ

ಅಕ್ಕನನ್ನು ತಾಯಿಭಾವನೆಯಿಂದ ಇವರು ಕಾಣುವರು. [illegible] ಹೆಣ್ಣುಪದ್ಧತಿ

ಂಬುದು ವಿದಿತವಾಗುತ್ತದೆ. ಆದರೆ ಅವರ ಪೂರ್ವೇತಿಹಾಸ, ಜೀವನವಿಧಾನ, ಸಂಪ್ರದಾಯ ಇತ್ಯಾದಿಗಳನ್ನು ತಿಳಿದವರು ಬಹಳಕಡಿಮೆ. ಈ ಅಂಶಗಳ ಮೇಲೆ ಬೆಳಕು ಚೆಲ್ಲುವುದೇ ಈ ಪ್ರಬಂಧದ ಮುಖ್ಯ ಉದ್ದೇಶ.

ಕೊರವಂಜಿಗಳು ದಕ್ಷಿಣಭಾರತದ ಅಲೆಮಾರಿ ಜನಾಂಗಗಳಲ್ಲಿ ಒಂದಾದ ಕೊರವರ ಬುಡಕಟ್ಟಿಗೆ ಸೇರಿದ, ಕಣಿ ಹೇಳುವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿರುವ ಸ್ತ್ರೀಯರು. ಪ್ರಮುಖ ದ್ರಾವಿಡ ಭಾಷೆಗಳಲ್ಲೆಲ್ಲ ಕೊರವಂಜಿ ಪದ ಸಿಕ್ಕುತ್ತದೆ. ತಮಿಳಿನಲ್ಲಿ ಕುರತ್ತಿ, ಕೊರವಂಜಿ ಪದಗಳಿದ್ದರೆ, ತೆಲುಗಿನಲ್ಲಿ ಕೊರವತ, ಕೊರವಂಜಿ ರೂಪಗಳಿವೆ. ಎರುಕುಲು ಎಂದೂ ಇವರನ್ನು ತೆಲುಗಿನಲ್ಲಿ ಕರೆಯಲಾಗುತ್ತದೆ. ಕೊರವರಿಗೆ ಕೊರಚ, ಕೊರಮ ಎಂಬ ಬೇರೆ ಬೇರೆ ಹೆಸರುಗಳೂ ಇವೆ. ಕೊರಚ ಮತ್ತು ಕೊರಮ ಎರಡೂ ಪ್ರತ್ಯೇಕ ಬುಡಕಟ್ಟುಗಳೆಂದು ಕೆಲವು ವಿದ್ವಾಂಸರ ವಾದ. ಕೊರಚರನ್ನು ಕೇಳಿದಾಗ ತಾವು ಕೊರವರಿಗಿಂತಲೂ ಬೇರೆ ಎಂದು ಹೇಳುತ್ತಾರೆ. ಆದರೆ ಈ ಎರಡೂ ಜನಾಂಗಗಳಲ್ಲಿರುವ ಸಂಪ್ರದಾಯ, ಆಚಾರ-ವಿಚಾರಗಳನ್ನು ವೀಕ್ಷಿಸಿದಾಗ ಅವೆರಡೂ ಒಂದೇ ಆಗಿದ್ದು ಪ್ರದೇಶ ಭಿನ್ನತೆಯಿಂದ ಬೇರೆ ಬೇರೆ ಹೆಸರುಗಳು ಬಂದಿರುವುದು ತಿಳಿದುಬರುತ್ತದೆ. ಕೊರಚ ಪದವು ಕೊರವ ಪದಕ್ಕಿಂತ ಈಚೆಗೆ ರೂಢಿಯಲ್ಲಿ ಬಂದುದೆಂದು ಥರ್ಸ್ಟನ್ ಹೇಳುತ್ತಾರೆ. ಕುರು (=ಭವಿಷ್ಯ ಹೇಳು) ಧಾತುವಿನಿಂದ ಕೊರವ, ಕೊರಚ ಪದಗಳು ಬಂದಿರಬೇಕೆಂದು ಹೇಳುತ್ತಾರೆ. ತಮಿಳಿನ ಕುರ(ಕುಜಿಂಜಿ)ನಿಯ (Hill country) ಶಬ್ದದಿಂದ ಕೊರಚ ಹೆಸರು ಬಂದಿರಬೇಕೆಂದು ಹೇಳುವವರೂ ಇದ್ದಾರೆ. ಯಾವುದೂ ನಿರ್ಧಾರ ಈ ವಿಷಯದಲ್ಲಿ ಸಾಧ್ಯವಿಲ್ಲ.

**ಜನಾಂಗದ ಮೂಲ:** ಈ ಬುಡಕಟ್ಟು ಜನಾಂಗದ ಮೂಲವು ಇನ್ನೂ ಅಜ್ಞಾತವಾಗಿಯೇ ಇದೆ. ಇವರು ದಕ್ಷಿಣಭಾರತದ ಒಂದು ಬುಡುಕಟ್ಟು ಜನಾಂಗವೆಂಬುದಂತೂ ನಿಜ. ಕೊರವರ ಮೂಲವನ್ನು ಕುರಿತು ಹಲವಾರು ದಂತಕಥೆಗಳು ಪ್ರಚಲಿತವಾಗಿವೆ. ೧) ಪಾರ್ವತಿ ಒಮ್ಮೆ ಕಣಿಹೇಳುವವಳ ವೇಷಧರಿಸಿದ್ದಳಂತೆ. ...ವಳ ವಂಶೀಯರೆ ಕೊರವರೆಂದು ಒಂದು ಕಥೆ ಇದೆ. ಅರ್ಜುನನ ತಪಸ್ಸನ್ನು ...ೕಕ್ಷಿಸಲು ಶಿವನು ಕಿರಾತನಾದಾಗ ಪಾರ್ವತಿಯು ಕಿರಾತೆಯರೂಪ ಧರಿಸಿದಳು ...ನಳೇ ಕೊರವಿಯೆಂದು ಹೇಳುವವರೂ ಇದ್ದಾರೆ. ೨) ಪಾರ್ವತಿ ಒಂದು ಸ... ...ವೊಂದರ ಹೊಟ್ಟೆಯಲ್ಲಿ ಬೆಲೆಬಾಳುವ ಹರಳುಗಳನ್ನು ತುಂಬಿ ಮೇದಾರನೊಬ್ಬನಿ... ...ನರಿಂದ ತೊಟ್ಟಿಲೊಂದನ್ನು ತಯಾರಿಸಲು ಕೇಳಿದಳಂತೆ. ಮೇದಾರನು ಆ ಹರಳುಗ... ...ನಿಗೆ ಹೆದರಿ ಹಾವನ್ನು ಮುಟ್ಟಲು ಹಿಂಜರಿದನು. ಆಗ ಪಾರ್ವತಿ ಕೊರ... ...ಹೇಳಿದಳು. ಕೊರಚನು ಹಾವನ್ನು ಬಿದಿರು ಸೀಳುವ... ...ತಯಾರಿಸಿದನಂತೆ. ಸಂತೃಪ್ತಳಾದ ಪಾರ್ವತಿ ಕೊರಚನಿಗೆ ತ... ...ಬಿದಿರಿನ ಮಾಂತ್ರಿಕ ದಂಡವನ್ನೂ ಮತ್ತು ಮೊರವ...

---

ಈ ಪ್ರಬಂಧವನ್ನು ಸಿದ್ಧ... ಕೆಲಸವನ್ನು...
ಮತ್ತು ಸಂಸ್ಕೃತಿ' (ಅಪ್ರಕಟಿತ) ಗ್ರಂಥ...
ವಾಯಿತು. ಅದೇ ರೀತಿ ಶ್ರೀ ಡಿ. ಕೆ. ಭಟ್ಟ ಅ...
Village (ಅಪ್ರಕಟಿತ) ಮಹಾ ಪ್ರಬಂಧದಿಂದಲೂ
ಇಬ್ಬರಿಗೂ ಋಣಿ.

**ಕೊರವರ ಪಂಗಡಗಳು :** ಕೊರವರು ಮೂಲದಲ್ಲಿ ಒಂದೇ ಬುಡಕಟ್ಟಿನವ ರಾದರೂ ಅವರು ಅನುಸರಿಸುತ್ತ ಬಂದ ವೃತ್ತಿ ವೈವಿಧ್ಯದ ಕಾರಣವಾಗಿ ಭಿನ್ನ ಭಿನ್ನ ಪಂಗಡಗಳಾಗಿ ವಿಭಜನೆಗೊಂಡಿದ್ದಾರೆ. ಇಂಥ ಪಂಗಡಗಳು ಮುಖ್ಯವಾಗಿ ನಾಲ್ಕು ಇವೆ. ೧) ಊರು ಕೊರಚರು ಅಥವಾ ದಬ್ಬೆಕೊರಚರು. ೨) ಉಪ್ಪುಕೊರಚರು ಅಥವಾ ಘಟ್ಟದ ಕೊರಚರು. ಇವರನ್ನು ಎತ್ತಿನಕೊರಚರೆಂದೂ ಕರೆಯುತ್ತಾರೆ. ೩) ಕುಂಚೀಕೊರಚರು ಹಾಗೂ ೪) ಸನಾದಿಕೊರಚರು. ಇವಲ್ಲದೆ ಪಾತ್ರದಕೊರಚರು, ಸೂಳೆಕೊರಚರು ಎಂಬ ವಿಭಾಗಗಳೂ ಇವೆ. ಆಂಧ್ರ ಪ್ರದೇಶದಲ್ಲಿ 'ಪಾಮುಲು,' 'ರಾಳು,' ಮುಂತಾದ ಹೆಸರಿನ ಕೊರಚರ ಪಂಗಡಗಳೂ ಇವೆ.

ಕೊರವ ಅಥವಾ ಕೊರಚರಲ್ಲಿ ಪಟ್ಟಾಡಿ, ಕಾವಡಿ, ಮೇನಪಡಿ ಮತ್ತು ಮೆಂಡ್ರ ಗುಟಿ ಎಂಬ ನಾಲ್ಕು ಗೋತ್ರಗಳಿವೆಯೆಂದು ಹೇಳುತ್ತಾರೆ. ಪಟ್ಟಾಡಿಗಳಿಗೆ ಕಕ್ಕೆ, ಕಾವಡಿಗಳಿಗೆ ಬೇವು ಪವಿತ್ರ. ಈ ಗಿಡಗಳ ಕೆಳಗೆ ಅವರು ತಮ್ಮ ಮನೆದೇವರೆಂದು ಕಲ್ಲುಗಳನಿಟ್ಟು ಪೂಜಿಸುವರು. ವೆಂಕಟರಮಣನನ್ನು ಹೂಗಳಿಂದ ಪಟ್ಟಾಡಿಗಳು ಪೂಜಿಸುವುದರಿಂದ ಅವರಿಗೆ ಆ ಹೆಸರು ಬಂದಿದೆಯಂತೆ. ಕಾವಡಿಯ ಕೋಲಿನ ತುದಿಗೆ ತಮ್ಮ ಹರಕೆಯ ವಸ್ತುಗಳನ್ನು ಒಯ್ಯುವವರು ಕಾವಡಿಗಳು. ದೇವರ ಮುಂದೆ ಹಾಡುವವರು ಮೇನಪಾಡಿಗರು. ದೇವರಿಗೆ ಕೆರವು ಒಪ್ಪಿಸುವವರು ಮೆಂಡ್ರಗುಟ್ಟಿ ಗಳು. ಈ ನಾಲ್ಕು ಗೋತ್ರಗಳಲ್ಲಿ ಮೊದಲಿನ ಎರಡು ಗೋತ್ರದವರು ಶ್ರೇಷ್ಠರು. ಇನ್ನುಳಿದ ಎರಡು ಗೋತ್ರಗಳ ಜೊತೆ ಇವರು ವಿವಾಹ ಸಂಬಂಧ ಮಾಡುವುದಿಲ್ಲ.

**ವಿವಾಹ ಪದ್ಧತಿ :** ಕೊರವರಲ್ಲಿ ಸಾಮಾನ್ಯವಾಗಿ ಪ್ರಾಯಕ್ಕೆ ಬಂದಮೇಲೆಯೇ ಗಂಡು ಹೆಣ್ಣುಗಳ ಮದುವೆ ನಡೆಯುತ್ತದೆ. ಹೆಣ್ಣುಮಗಳು ಸಮಾಜದ ಕೋಪಕ್ಕೆ ಒಳಗಾಗದೆ ಅವಿವಾಹಿತಳಾಗಿ ಉಳಿಯಬಹುದು. ಕೆಲಮಟ್ಟಿಗೆ ಸ್ಥಿತಿವಂತರಾದವರು ಒಬ್ಬಳಿಗಿಂತ ಹೆಚ್ಚು ಹೆಣ್ಣುಮಗಳನ್ನು ಮದುವೆಯಾಗಬಹುದು. ಆದರೆ ಇದು ಅಪರೂಪ. ಬಹುಪತಿತ್ವವಂತೂ ಕೊರಚರಲ್ಲಿ ರೂಢಿಯಲ್ಲಿಲ್ಲ. ಅಕ್ಕನ ಹೆಣ್ಣು ಮಕ್ಕಳನ್ನು ವಿವಾಹವಾಗುತ್ತಾರೆ. ಆದರೆ ತಂಗಿಯ ಹೆಣ್ಣುಮಕ್ಕಳನ್ನು ಮದುವೆ ಯಾಗುವುದಿಲ್ಲ. ಸೋದರಮಾವ ಮತ್ತು ಸೋದರತ್ತೆಯ ಹೆಣ್ಣುಮಕ್ಕಳನ್ನು ವಿವಾಹ ವಾಗಲಡ್ಡಿಯಿಲ್ಲ. ಒಬ್ಬನ ತಂದೆ ಅಥವಾ ಚಿಕ್ಕಪ್ಪ-ದೊಡ್ಡಪ್ಪರು ತಮ್ಮ ಅಕ್ಕನ ಹೆಣ್ಣುಮಕ್ಕಳನ್ನು ಮದುವೆಯಾಗಿದ್ದರೆ ಸೋದರತ್ತೆಯ ಚಿಕ್ಕಹೆಣ್ಣುಮಕ್ಕಳನ್ನು ಅವನು ಮದುವೆಯಾಗುವದಿಲ್ಲ. ಒಬ್ಬನು ತನ್ನ ಅಕ್ಕನ ಅಥವಾ ಸೋದರತ್ತೆ, ಸೋದರ ಮಾವನ ಇಬ್ಬರು ಮಕ್ಕಳನ್ನು ಮದುವೆಯಾಗಬಹುದು. ಆದರೆ ಒಂದೇ ಕಾಲಕ್ಕೆ ಹೀಗೆ ಮಾಡಲುಬರದು. ಇಬ್ಬರು ಸೋದರಿಯರಲ್ಲಿ ಸಣ್ಣವಳನ್ನು ಒಬ್ಬನು ಮದುವೆ ಯಾಗಿದ್ದರೆ ದೊಡ್ಡವಳನ್ನು ಪತ್ನಿಯೆಂದು ಸ್ವೀಕರಿಸುವುದಿಲ್ಲ. ಏಕೆಂದರೆ ಹೆಂಡತಿಯ ಅಕ್ಕನನ್ನು ತಾಯಿಭಾವನೆಯಿಂದ ಇವರು ಕಾಣುವರು. ವಿಧುರು ಹೆಣ್ಣುಪದ ಕಿ

ಕೊಟ್ಟಳಂತೆ. ಅದರಿಂದಾಗಿ ಕೊರವ ಹೆಣ್ಣುಮಕ್ಕಳು ಕಣಿಹೇಳುವುದನ್ನೇ ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡರಂತೆ. ೩) ಮಹಾಭಾರತದಲ್ಲಿ ಕೊರವರು ಧರ್ಮರಾಜನ ವಂಶದವರೆಂದು ಸೂಚಿಸುವ ಒಂದು ಕಥೆಯಿದೆ. ಸೋದರರ ಜೊತೆ ಧರ್ಮರಾಜನು ವನವಾಸಕ್ಕೆ ಹೋದಾಗ ಅವನನ್ನು ಪ್ರೀತಿಸಿದ ಓರ್ವ ಹೆಣ್ಣುಮಗಳು, ಕಣಿಹೇಳುವವಳ ವೇಷಧರಿಸಿ ಹೋಗಿ ಅವನನ್ನು ವರಿಸಿದಳಂತೆ. ಆಕೆಯ ಸಂತಾನವೇ ಕೊರವರೆಂದು ನಂಬಲಾಗುತ್ತದೆ. ಇಂದಿನ ಕೊರವರ ಚಾಣಾಕ್ಷತನ ಹಾಗೂ ಸಾಹಸಗಳನ್ನು ಹೋಲುವ ಕಾರ್ಯನಿರತ 'ಕುರು' ಎಂಬ ಜನಾಂಗದ ಹೆಸರು ಮಹಾಭಾರತದಲ್ಲಿ ಬರುವುದಾದರೂ ಮೇಲಿನ ಕಥೆಯನ್ನು ನಂಬಲು ಅನುಮಾನಿಸಬೇಕಾಗುತ್ತದೆ. ಕೊರವರು ಮೂಲತಃ ಉತ್ತರದವರೆಂಬುದನ್ನು ಸೂಚಿಸುವ ಪ್ರಯತ್ನ ಇಲ್ಲಿದೆ.

ಕೊರವರು ದಕ್ಷಿಣಭಾರತದ ಮೂಲ ಆದಿವಾಸಿಗಳಾಗಿರುವುದು ಸಾಧ್ಯವಿದೆ. ಇವರ 'ಹಬ್‌ಶಿಕಾ' ಎಂಬ ಮುಖಂಡನ ನೇತೃತ್ವದಲ್ಲಿ ದಕ್ಷಿಣಕನ್ನಡ ಪ್ರದೇಶವನ್ನು ಒಂದು ಕಾಲಕ್ಕೆ ಆಳುತ್ತಿದ್ದರೆಂದು ಬುಚನನ್ ಅಭಿಪ್ರಾಯಪಡುತ್ತಾನೆ. ಅಬ್ಬೆದು ಬಾಯಿಸ್, ಇವರನ್ನು ಕಳ್ಳಬಂಟರೆಂದು ಕರೆದಿದ್ದಾನೆ. ಸಾಮಾನು ಸಾಗಿಸುವ, ಬುಟ್ಟಿ ತಯಾರಿಸುವ, ನಿರಂತರ ಅಲೆಮಾರಿಗಳಾಗಿರುವ ಇವರಿಗೂ ಜಿಪ್ಸಿಗಳಿಗೂ ಬಹುಮಟ್ಟಿನ ಸಾಮ್ಯತೆಯಿರುವುದನ್ನು ಹೇಳುತ್ತಾನೆ. ವೈರಿಗಳನ್ನು ಸುಲಿಯಲು, ಬೇಹುಗಾರಿಕೆ ಮಾಡಲು ಕಳ್ಳಬಂದರ ಹೆಸರಿನ ಕೊರವರ ಒಂದು ತುಕಡಿಯನ್ನೇ ಟೀಪುಸುಲ್ತಾನ ತನ್ನ ದಂಡಿನಲ್ಲಿ ಇಟ್ಟಿದ್ದನಂತೆ. ಕೊರವರ ಕೊಳ್ಳೆ ಮತ್ತು ಲೂಟಿಗಳಿಂದ ತಮ್ಮನ್ನು ತಪ್ಪಿಸಿಕೊಳ್ಳಲು ಒಂದು ಕಾಲಕ್ಕೆ ಜನರು ಹಣವನ್ನೋ ಅಥವಾ ವಸ್ತುಗಳನ್ನೋ ಅವರಿಗೆ ಕೊಡುತ್ತಿದ್ದರಂತೆ.

**ವಾಸಸ್ಥಾನ :** ಕೊರಚರು ಮೊದಲು ಅಲೆಮಾರಿಗಳಾಗಿದ್ದರು. ಆದರೆ ಈಗ ಬಹುಜನ ಕೊರವರು ಗ್ರಾಮ, ಪಟ್ಟಣಗಳಲ್ಲಿ ವಾಸಿಸತೊಡಗಿದ್ದಾರೆ. ಆದರೂ ಅನೇಕರಿಗೆ ನಿಗದಿಯಾದ ಸ್ಥಳವೆಂಬುದೇ ಇಲ್ಲ. ಊರುಗಳಲ್ಲಿ ವಾಸಿಸುವ ಕೊರಚರು ಕೊರವರು, ತಮ್ಮ ಸಮಾನ ಜಾತಿಯವರೇ ವಾಸಿಸುವಂಥ ಮನೆಗಳಲ್ಲೇ ಇರುತ್ತಾರೆ. ಅಲೆಮಾರಿ ಕೊರವರು ಊರ ಹೊರಗಡೆ ಕೊಲ್ಲಾರಿಯಾಕಾರದ ತಾತ್ಕಾಲಿಕ ಗುಡಿಸಲನ್ನು ಕಟ್ಟಿ ಅಲ್ಲಿ ವಾಸಿಸುತ್ತಾರೆ. ಇವರು ಗುಂಪಾಗಿ ಬೀಡಾರ ಹಾಕುವರು. ಕೆಲ ದಿನಗಳ ನಂತರ ಅಲ್ಲಿಂದ ಮತ್ತೊಂದೂರಿಗೆ ಹೋಗುವರು. ಹಾಗೆ ಹೋಗುವಾಗ ಗುಡಿಸಲಿನ ವಸ್ತುಗಳನ್ನು, ತಮ್ಮ ಇತರ ಸಾಮಾನುಗಳನ್ನು ಎತ್ತು ಇಲ್ಲವೆ ಕತ್ತೆಗಳ ಮೇಲೆ ಸಾಗಿಸುವರು. ಕಳ್ಳಕೊರವರ ಗುಂಪು ತಮ್ಮ ಬೀಡಾರಕ್ಕಾಗಿ ಅರಣ್ಯದಲ್ಲಿ ಸುರಕ್ಷಿತ ಸ್ಥಳವೊಂದನ್ನು ಆಯ್ದುಕೊಳ್ಳುವರು.

ರಲ್ಲಿ ರೂಢಿಯಲ್ಲಿದೆ. ಕೊರಚರ ಹೆಣ್ಣುಮಗಳು ತನ್ನ ಮೊದಲ ಇಬ್ಬರು ಪುತ್ರಿಯ
ನ್ನ ತನ್ನ ತಮ್ಮ ಅಥವಾ ಅವನ ಮಕ್ಕಳಿಗೆ ಕಡಿಮೆ ತೆರವು ತೆಗೆದುಕೊಂಡು
ಕೊಡಬೇಕೆಂಬ ಸಂಪ್ರದಾಯವಿದೆ. ಒಂದು ವೇಳೆ ತಮ್ಮನು ತಾನೇ ಮದುವೆಯಾಗುವ
ಯೋಗ್ಯತೆ ಇಲ್ಲವೆ ಆತನಿಗೆ ಗಂಡು ಮಕ್ಕಳೂ ಇಲ್ಲದಿದ್ದರೆ ಆ ಸಹೋದರಿಯು ತಾನು
ಬೇರೆ ಅಳಿಯನಿಂದ ಪಡೆದ ತೆರವಿನ ಹಣದ ½ ಭಾಗವನ್ನು ತಮ್ಮನಿಗೆ ಕೊಡಬೇಕಾಗು
ತ್ತದೆ.

ಕೊರಚರಲ್ಲಿ ಮದುವೆಯಾಗುವ ಹೆಣ್ಣಿನ ವಯಸ್ಸು ಗಂಡಿನ ವಯಸ್ಸಿಗಿಂತ ಕೆಲವು ತಿಂಗಳು ಅಥವಾ ವರ್ಷ, ಹೆಚ್ಚಿದ್ದರೂ ನಡೆಯುತ್ತದೆ. ಇದಕ್ಕೆ ಅಕ್ಕನ ಮೊದಲ ಇಬ್ಬರು ಹೆಣ್ಣುಮಕ್ಕಳನ್ನು ಅವಳ ಸೋದರರು ಮದುವೆಯಾಗಬೇಕೆಂಬ ಸಂಪ್ರದಾಯವೇ ಕಾರಣ. ವೃತ್ತಿಭಿನ್ನತೆ ಗಂಡು-ಹೆಣ್ಣಿನ ಕೊಳುಕೊಡುಗೆ ಅಡ್ಡ ಬರದಿದ್ದರೂ ಸಾಮಾನ್ಯವಾಗಿ ಪರಸ್ಪರ ಪರಿಚಿತ ಹಳೆಯ ಸಂಬಂಧಿಗಳಲ್ಲಿಯೆ ವಿವಾಹದ ಕೊಳುಕೊಡೆ ಮಾಡುತ್ತಾರೆ. ಅಪರಾಧೀವೃತ್ತಿಗಗನ್ನು ಬಹುಹಿಂದೆಯೇ ತ್ಯಜಿಸಿ ಊರು, ಪಟ್ಟಣಗಳಲ್ಲಿ ವಾಸಿಸುವವರು ಅಂಥ ವೃತ್ತಿಗಳಲ್ಲಿ ಇನ್ನೂ ತೊಡಗಿರುವ ತಮ್ಮ ಜಾತಿಯವರ ಜೊತೆಗೆ ವಿವಾಹ ಸಂಬಂಧ ಬೆಳೆಸುವುದಿಲ್ಲ.

ಒಂದೆಡೆ ವಾಸಿಸುವ ಕೊರಚರು, ಕೆಲವುಟ್ಟಿಗೆ, ಒಕ್ಕಲಿಗರು ಅಥವಾ ಉಳಿದ ಜಾತಿಯವರು ಅನುಸರಿಸುವ ವಿವಾಹ ಪದ್ಧತಿಗಳನ್ನೇ ಅನುಸರಿಸುತ್ತಾರೆ. ಆದರೆ ಅಲೆಮಾರಿಗಳು ಇನ್ನೂ ತಮ್ಮ ಮದುವೆಯ ವೈಶಿಷ್ಟ್ಯಗಳನ್ನು ಉಳಿಸಿಕೊಂಡಿದ್ದಾರೆ. ಅವರು ಪೀಳೆಶಾಸ್ತ್ರ ಮಾಡುವುದಿಲ್ಲ. ಬಾಜಿಯವರನ್ನು ಕರೆಯುವುದಿಲ್ಲ. ಬಾಸಿಂಗ ಉಪಯೋಗಿಸುವುದಿಲ್ಲ. ಕೆಲವರು ಹಂದರ ಸಹ ನಿಲ್ಲಿಸುವುದಿಲ್ಲ. ಕಂಕಣಬಲ, ವಿವಾಹದ ದಿನಾಂಕಗಳನ್ನು ಬ್ರಾಹ್ಮಣರಿಂದ ಕೇಳುತ್ತಾರೆ. ಆದರೆ ಮದುವೆಯಲ್ಲಿ ಬ್ರಾಹ್ಮಣನ ಪಾತ್ರವೇನೂ ಇರುವುದಿಲ್ಲ. ಸೋಮವಾರ ವಿವಾಹಕ್ಕೆ ಶುಭದಿನ. ಶುಕ್ರವಾರ ಮದುಮಗ ಮದುಮಗಳ ಗುಡಿಸಲಿಗೆ ಹೋಗಿ, ಅವಳಿಗೆ ಕೆಲ ನಾಣ್ಯ ಕೊಡುತ್ತಾನೆ. ಅವಳು ಅವನ್ನು ಸ್ವೀಕರಿಸಿದರೆ ಒಪ್ಪಿಗೆ ಕೊಟ್ಟಂತೆ, ಆಮೇಲೆ ಅರಿಷಣ ಹಚ್ಚಿಕೊಂಡು ತಮ್ಮ ತಮ್ಮ ಗುಡಿಸಿಲಿಗೆ ಹೋಗುತ್ತಾರೆ. ಅಲ್ಲಿ ಭೋಜನ. ಬೇರೆ ಬೇರೆ ಹಳ್ಳಿಗಳಲ್ಲಿ ವಾಸಿಸುವವರಿದ್ದರೆ, ವರನ ಕಡೆಯವರು ಕನ್ಯೆ ಇರುವ ಹಳ್ಳಿಗೆ ಬಂದು ಅವಳ ಗುಡಿಸಿಲ ಬಳಿಯೇ [illegible] ಗುಡಿಸಿಲು ಹಾಕುತ್ತಾರೆ.

ಮದುವೆಯ ದಿನ, ಮನೆನಂತರ ಮದುಮಕ್ಕಳನ್ನು [illegible]ಯಾಗಿ ಪೂರ್ವಾಭಿಮುಖಿ ಗುಡಿಸಲು ಹಾಕುತ್ತಾರೆ. ಒಗೆಯುವರು. ಆಮೇ[illegible] ವಾಸಿಸುವರಿದ್ದರೂ. ಹೀಗೆ ತಾತ್ಕಾಲಿಕವಾಗಿ ನಿಲ್ಲಿಸಿದೆ. ಮುಂದೆಯೇ ವಿವಾಹ ನೆರವೇರಿಸು ತ್ತಾರೆ. ಪಟ್ಟಣವಾಸಿಲ್ಲಿ ತೆರ ಕೊಡುವ ಪದ್ಧತಿ ಇಡುವುದನ್ನು ನಿಲ್ಲಿಸಿದ್ದಾರೆ. ಎಣ್ಣೆ ಕಂತಿಸಲ್ಲಿ ಮುಟ್ಟಿಸಬೇಕಾಗುತ್ತ

ಕಾರ್ಯಸ್ನಾನ ಮುಗಿದ ಮೇಲೆ ಮದುಮಕ್ಕಳು ತಮ್ಮ ತಮ್ಮ ಗುಡಿಸಿಲುಗಳಿಗೆ ಹೋಗುತ್ತಾರೆ. ಅಲ್ಲಿ ಅರಿಷಣ ಹಚ್ಚುತ್ತಾರೆ.

ಸಾಯಂಕಾಲ ೬ ಗಂಟೆಯ ಸುಮಾರಿಗೆ ಮದುಮಕ್ಕಳಿಗೆ ಪುನಃ ಎಣ್ಣೆ ಹಚ್ಚಿ ಸ್ನಾನ ಮಾಡಿಸುತ್ತಾರೆ. ಹೊಸಬಟ್ಟೆ ತೊಡಿಸಿ, ಗುಡಿಸಿಲುಗಳ ಮಧ್ಯೆ ಚಾಪೆಯೊಂದರ ಮೇಲೆ ಅವರನ್ನು ಎದುರು ಬದರಾಗಿ ಕೂಡಿಸುತ್ತಾರೆ. ಅವರ ಬಟ್ಟೆಯ ತುದಿಗಳನ್ನು ಕಟ್ಟುತ್ತಾರೆ. ಅವರ ಮಧ್ಯೆ ಎರಡು ಗಡಿಗೆಗಳನ್ನಿಟ್ಟು ಪೂಜಿಸುತ್ತಾರೆ. ಅವುಗಳ ಮೇಲೆ ಮದುಮಕ್ಕಳು ತಮ್ಮ ಕೈಗಳನ್ನಿಟ್ಟಿರುತ್ತಾರೆ. ಆಮೇಲೆ ಪರಸ್ಪರ ಕಂಕಣ ಬಂಧನ ಮಾಡುತ್ತಾರೆ. ಗಡಿಗೆಗಳಿಗೂ ಕಂಕಣ ಕಟ್ಟುತ್ತಾರೆ. ಸೋದರಮಾವ ಅವರಿಬ್ಬರನ್ನು ತದನಂತರ ಮದುಮಗಳ ಮನೆಗೆ ಕರೆದೊಯ್ಯುತ್ತಾನೆ. ಅಂದಿನರಾತ್ರಿ ಮದುಮಕ್ಕಳು ಉಪವಾಸವಿರುತ್ತಾರೆ.

ಮರುದಿನ ಮುಂಜಾನೆ ಮದುಮಗನ ಇಲ್ಲವೆ ಮದುಮಗಳ, ಅವಿವಾಹಿತ ಸೋದರಮಾವ ನೇರಿಲ ಗಿಡದ ಕೊಲ್ಲೆಯೊಂದನ್ನು ಹಳ್ಳದ ಇಲ್ಲವೆ ಬಾವಿಯಬಳಿ ಇಡುತ್ತಾನೆ. ಮೂವರು ಮುತ್ತೈದೆಯರು, ಇಬ್ಬರು ಪುರುಷರು ಹೀಗೆ ಒಟ್ಟಿಗೆ ಐವರು, ಕಲಶ ಮತ್ತು ಎರಡು ಕೊಡ ತೆಗೆದುಕೊಂಡು ಅಲ್ಲಿಗೆ ಹೋಗುತ್ತಾರೆ. ಕೊಡಗಳಲ್ಲಿ ನೀರು ತುಂಬಿ, ನೇರಿಲ ಕೊಲ್ಲೆಯ ಬಳಿ ಇಟ್ಟು ಪೂಜಿಸುತ್ತಾರೆ. ಆಮೇಲೆ ಅವನ್ನು ಮದುಮಗಳ ಗುಡಿಸಲಿಗೆ ತಂದು, ಕಟ್ಟೆಯಮೇಲೆ ನೇರಿಲ ಕೊಲ್ಲೆಯನ್ನು ನೆಟ್ಟು ಕೊಡಗಳನ್ನು ಅದರ ಬಳಿಯೇ ಹಸೆಹಾಕಿ ಇಡುತ್ತಾರೆ. ಹತ್ತಿಕಾಳು, ಎಣ್ಣೆಯಿಂದ ತುಂಬಿದ ಎರಡು ಮುಚ್ಚಳಗಳನ್ನು ಕೊಡಗಳ ಮೇಲಿಟ್ಟು ಉರಿಸುತ್ತಾರೆ. ಧಾರೆ ಮುಗಿಯುವ ವರೆಗೆ ಅವು ಚೆನ್ನಾಗಿ ಉರಿಯುತ್ತಿದ್ದರೆ ಶುಭವೆಂದು ಅವರ ನಂಬಿಕೆ. ಕಳಸ ಬೆಳಗಿ, ಗುಗ್ಗುಳ ಹಾಕಿ ತೆಂಗು ಒಡೆಯುತ್ತಾರೆ.

ಆಮೇಲೆ ಮದುಮಕ್ಕಳನ್ನು ಅಸ್ಥಳಕ್ಕೆ ಕರೆತಂದು ಎದುರು ಬದುರು ನಿಲ್ಲಿಸುತ್ತಾರೆ. ಮದುಮಗ, ಮದುಮಗಳಿಗೆ ತಾಳಿ ಕಟ್ಟುತ್ತಾನೆ. ಪರಸ್ಪರರು ಅಕ್ಕೀಕಾಳು ಹಾಕುತ್ತಾರೆ. ಮದುಮಕ್ಕಳೂ, ನೇರಿಲ ಕೊಲ್ಲೆತಂದವರೂ ಕೂಡಿಯೇ ಆಮೇಲೆ ಊಟಮಾಡುತ್ತಾರೆ. ಭೋಜನಾನಂತರ ಮದುಮಕ್ಕಳು ಒಟ್ಟಿಗೆ ಕುಳಿತು ಹೂ, ಶ್ರೀಗಂಧ, ಅರಿಷಣ, ಎಲೆಯಡಿಕೆಗಳನ್ನು ವಿನಿಮಯ ಮಾಡುತ್ತಾರೆ, ಹಾಗೂ ಪರಸ್ಪರ ಸೇಸೆಯಿಕ್ಕುತ್ತಾರೆ. ಮದು[illegible]ಂದೂರಿಗೆ ಜೋಗು[illegible] ಮೇಲೆ ಕೂಡಿಸಿ ಸ್ನಾನ ಮಾಡಿಸುತ್ತಾರೆ. ಒದ್ದೆಯ ಬಟ್ಟೆಯ[illegible] ಇತರ ಸಾಮಾನುಗಳ[illegible]ೇರಿಲಕೊಲ್ಲೆಗೆ ಮೂರು ಸಲ ಪ್ರದಕ್ಷಿಣೆ ಹಾಕಿ ನಮಸ್ಕರಿಸು[illegible]ರ ಗುಂಪು ತಮ್ಮ ಬೀಡದ ಗಡಿಗೆಯೊಂದರಲ್ಲಿ ಕೆಂಪು ಬಣ್ಣದ ನೀರು ತುಂಬಿ, ಅದರಲ್ಲಿ[illegible] ವರು. [illegible] ದುಮಕ್ಕಳು ಗಡಿಗೆಯಲ್ಲಿ ಕೈಹಾಕಿ ನಾಣ್ಯಗಳನ್ನು ಎತ್ತಿಕೊಳ್ಳು[illegible]

ಅಂದು ಸಾಯಂಕಾಲ ಮದುಮಕ್ಕಳು ಸಿಂಗರಿಸಿಕೊಂಡು ಗುಡಿಗೆ ಹೋಗುತ್ತಾರೆ. ಮುತ್ತೈದೆಯೊಬ್ಬಳು ಕಳಸ ಹಿಡಿದಿರುತ್ತಾಳೆ. ಉಳಿದವರೂ ಜೊತೆಯಲ್ಲಿರುತ್ತಾರೆ. ಪೂಜಾನಂತರ ಮದುಮಗಳ ಮನೆಗೆ ಬರುತ್ತಾರೆ. ಮುತ್ತೈದೆ ದಂಪತಿಗಳಿಗೆ ಆರತಿ-ಬೆಳಗಿ ಕಾಣಿಕೆ ಪಡೆಯುತ್ತಾಳೆ. ಆಮೇಲೆ ಎರಡನೆಯ ಭೂಮದೂಟವಾಗುತ್ತದೆ. ನೇರಿಲ ಕೊಲ್ಲೆಯನ್ನು ಮತ್ತೆ ಪೂಜಿಸಿ, ಕಾಣಿಕೆಕೊಟ್ಟು, ಅದನ್ನು ತೆಗೆಯುತ್ತಾರೆ. ದಂಪತಿಗಳಿಗೆ ಪುನಃ ಅರಿಷಿಣ ಹಚ್ಚುತ್ತಾರೆ. ಕೊಬ್ಬರಿಬಟ್ಟಲ, ಅರಿಷಣಬೇರು ಎಲೆ ಅಡಿಕೆ ಅಕ್ಕಿಗಳನ್ನು ತಾಯಿ, ಮದುಮಗಳ ಉಡಿಯಲ್ಲಿ ತುಂಬುತ್ತಾಳೆ. ಮದುಮಕ್ಕಳು ಒಬ್ಬರಕೈ ಒಬ್ಬರು ಹಿಡಿದುಕೊಂಡು ಏಳುತ್ತಾರೆ. ಮದುಮಗಳು ತನ್ನ ಉಡಿಯನ್ನು ಮದುಮಗನ ಉಡಿಯಲ್ಲಿ ಹಾಕುತ್ತಾಳೆ. ಅವನು ಅಕ್ಕಿಯನ್ನುಳಿಸಿಕೊಂಡು ಉಳಿದುವನ್ನು ಅವಳಿಗೇ ಹಿಂದಿರುಗಿಸುತ್ತಾನೆ. ಆಮೇಲೆ ಮದುಮಕ್ಕಳು ನೆರೆದ ಹಿರಿಯರಿಗೆ ನಮಸ್ಕರಿಸಿ ಅವರಿಂದ ಕಾಣಿಕೆ ಪಡೆಯುತ್ತಾರೆ.

ಗಂಡಿಗಾಗಿ ನಿಲ್ಲಿಸಿದ ಗುಡಿಸಿಲನ್ನು ಕೆಡವಿ, ಮದುಮಗಳು ಹೊಸಗುಡಿಸಲು ಹಾಕುತ್ತಾಳೆ. ಐದುಜನ ಮುತ್ತೈದೆಯರೊಡಗೂಡಿ ಹೋಗಿ ಬಾವಿಯಿಂದ ನೀರು ತಂದು ಅಡಿಗೆಮಾಡಿ ಅತಿಥಿಗಳಿಗೆಲ್ಲ ಉಣಬಡಿಸುತ್ತಾಳೆ. ಆಗ ಅವಳು ಹೊಸಮನೆಯ ಒಡತಿ ಆದಂತೆ. ಆಮೇಲೆ ಗುಡಿಸಲು ಕೆಡವಿ, ನೇರಿಲ ಟೊಂಗೆಯನ್ನು ಒಯ್ದು ಬಾವಿ ಅಥವಾ ಕೆರೆಯಲ್ಲಿ ಮುಳುಗಿಸುವರು.

ಕೊರಚರಲ್ಲಿ, ಎಲ್ಲ ಕಡೆಗೂ ವಿವಾಹದ ವಿಧಾನ ಹೀಗೇ ಚಾಚೂತಪ್ಪದೆ ಇರುತ್ತದೆಂದು ಹೇಳಲಾಗುವುದಿಲ್ಲ. ಮದುಮಗನ ಮನೆಯ ಮುಂದೂ ವಿವಾಹ ನೆರವೇರುವುದುಂಟು. ಲಗ್ನದ ಹಿಂದಿನ ದಿನ ಮದುಮಗಳು ಮದುಮಗನ ಮನೆಗೆ ಬರುತ್ತಾಳೆ. ಮಾರುದಿನ ಬೆಳಿಗ್ಗೆ ಕಂಬಳಿ ಹಾಸಿ, ಅದರ ಮೇಲೆ ರಂಗೋಲಿಯ ಎರಡು ವರ್ತುಲಗಳಲ್ಲಿ ಸೂರ್ಯ ಚಂದ್ರರನ್ನು ಬರೆದು, ಅಕ್ಕಿಹರವಿ, ದಕ್ಷಿಣೆ ಇಡುವರು. ಮದುಮಕ್ಕಳಿಗೆ ಐದುಜನ ಮುತ್ತೈದೆಯರು ಅರಿಷಿಣ ಹಚ್ಚಿ ಮೂರುಸಲ ಎರೆಯುವರು, ಸಂಜೆ ತರೇದ ಮರದ ಟೊಂಗೆಯೊಂದನ್ನು ಕಡಿದುತಂದು ಹಗ್ಗಕಟ್ಟಿ ಬಾವಿಯಲ್ಲಿ ಮುಳುಗಿಸಿಡುವರು. ಮಧ್ಯರಾತ್ರಿಯ ಹೊತ್ತಿಗೆ ಮುತ್ತೈದೆಯರೊಡಗೂಡಿ ಬಾವಿಗೆ ಹೋಗಿ ಪೂಜಿಸಿ ಟೊಂಗೆಯನ್ನು ಹೊರತೆಗೆದು, ಅದನ್ನು ತಂದು ಮದುಮಗನ ಬಾಗಿಲಮುಂದೆ ನಿಲ್ಲಿಸುವರು. ಮತ್ತು ಅದರ ಮುಂದೆ ಹತ್ತೀಕಾಳಿನ ದೀಪ ಹೊತ್ತಿಸುವರು. ಪೂಜಾನಂತರ ಮದುಮಕ್ಕಳನ್ನು ವರ್ತುಲಗಳಲ್ಲಿ ಕೂಡಿಸಿ ಸೇಸೆ ಇಟ್ಟು, ಅಕ್ಕೀಕಾಳು ಒಗೆಯುವರು. ಆಮೇಲೆ ಬಂದವರಿಗೆಲ್ಲ ಭೋಜನ, ಮದ್ಯ ಸೇವನೆ ನಡೆಯುತ್ತದೆ.

ಕೊರಚರಲ್ಲಿ ತೆರ ಕೊಡುವ ಪದ್ಧತಿ ಇದೆ. ತೆರದ ಹಣವನ್ನು ಒಮ್ಮೆಲೇ ಕೊಡಲಾಗದಿದ್ದರೆ ಕಂತಿನಲ್ಲಿ ಮುಟ್ಟಿಸಬೇಕಾಗುತ್ತದೆ. ಅಲೆಮಾರಿ ಕೊರವರಲ್ಲಿ ಅಳಿಯನಾದ

ವನು ತನಗೊಂದು ಮಗುವಾಗುವವರೆಗೂ ಮಾವನ ಗುಡಿಸಲ ಬಳಿಯೇ ಇರುತ್ತಾನೆ. ತೆರವಿನ ಹಣ ಕೊಡದಿದ್ದರೆ, ಹೆಣ್ಣಿನ ತಂದೆಯು, ಮಗಳನ್ನು ಕರೆದೊಯ್ದು, ಹೆಚ್ಚಿನ ತೆರತೆಗೆದುಕೊಂಡು ಬೇರೊಬ್ಬನಿಗೆ ಮಗಳನ್ನು ಮದುವೆಮಾಡಿಕೊಡುವ ಉದಾಹರಣೆಗಳೂ ಉಂಟು. ಮುಂದುವರಿದ ಕೆಲವು ಕೊರವರಲ್ಲಿ ತೆರದ ಅರ್ಧಹಣ ಮೊದಲು ಕೊಟ್ಟು ಉಳಿದರ್ಧವನ್ನು, ಗೊತ್ತುಪಡಿಸಿದ ಇನ್ನೊಂದುದಿನ ಇಲ್ಲವೆ ನಿಷೇಕದ ದಿನ ಕೊಡಲಾಗುತ್ತದೆ. ಮದುವೆಯಲ್ಲಿ ಎರಡೂ ಪಕ್ಷದವರು ಮುಖ್ಯವಾಗಿ ಗಂಡಿನ ಪಕ್ಷದವರು ಮದ್ಯವನ್ನು ಕುಲಸ್ಥರಿಗೆ ಕೊಡಲೇಬೇಕು. ಹಾಗಾಗದಿದ್ದರೆ ಜಗಳಕ್ಕೆ ಕಾರಣವಾಗುತ್ತದೆ.

ವಿಧವಾ ವಿವಾಹಕ್ಕೆ ಇವರಲ್ಲಿ ನಿರ್ಬಂಧವಿಲ್ಲ. ಅವಳು ತನ್ನ ಮನಸ್ಸಿಗೆ ಬಂದಷ್ಟು ಸಲ ವಿವಾಹವಾಗಬಹುದು. ಆದರೆ ಇಂಥ ಪ್ರಸಂಗಗಳಲ್ಲಿ ಅವಳ ಮೊದಲ ಪತಿ ತೀರಿರಬೇಕು ಇಲ್ಲವೆ ಸೋಡಚೀಟಿಕೊಟ್ಟಿರಬೇಕು. ಇಂಥ ಮದುವೆಗಳು ಬಹಳ ಸರಳ ರೀತಿಯಲ್ಲಿ ನಡೆಯುತ್ತವೆ. ಕುಲದ ನಾಯಕನ ಸಮ್ಮುಖದಲ್ಲಿ, ಮದುವೆಯಾಗ ಬಯಸುವವನು, ಅವಳಿಗೆ ಹೊಸಬಟ್ಟೆ, ಇದ್ದರೆ ಆಭರಣ ಕೊಡುತ್ತಾನೆ. ಮೊದಲ ಗಂಡನಿಂದ ಪಡೆದಿದ್ದ ಹಣವನ್ನು, ಅವನ ವಾರಸುದಾರರಿಗೆ ಹಿಂದಿರುಗಿಸಲಾಗುತ್ತದೆ. ಅಷ್ಟೇ ಹಣವನ್ನು ಹೊಸ ಗಂಡನು ತೆರವಾಗಿ ಕೊಡುತ್ತಾನೆ. ಆಮೇಲೆ ನಾಯಕನು ಅವರಿಬ್ಬರೂ ಗಂಡ-ಹೆಂಡಿರಾದರೆಂದು ಘೋಷಿಸುತ್ತಾನೆ. ತದನಂತರ ಊಟ, ಮದ್ಯಪಾನ ನಡೆಯುತ್ತದೆ. ವ್ಯಭಿಚಾರದ ಆಪಾದನೆಯ ಮೇರೆಗೆ ಗಂಡನು ಹೆಂಡತಿಗೆ ಸೋಡಚೀಟಿ ಕೊಡಬಹುದು. ಅವಳ ಪ್ರಿಯಕರನು ಆಕೆಯ ಗಂಡನಿಗೆ ತೆರದ ಹಣದ ಜೊತೆಗೆ. ಮದುವೆಗಾದ ವೆಚ್ಚವನ್ನೂ ಭರಿಸಬೇಕಾಗುತ್ತದೆ. ವಿವಾಹಿತ ಸ್ತ್ರೀ ಮೇಲು ಜಾತಿಯವನೊಡನೆ ವ್ಯಭಿಚಾರಮಾಡಿದ್ದರೆ ಅವಳಿಗೆ ಕ್ಷಮೆಯಿದೆ. ಕೆಳಜಾತಿಯವ ನೊಡನೆ ಸಂಬಂಧ ಬೆಳಿಸಿದ್ದರೆ, ಅಂಥವಳನ್ನು ಕುಲದಿಂದ ಹೊರಗೆ ಹಾಕಲಾಗುತ್ತದೆ. ವಿವಾಹಿತ ಕೊರವ ಸ್ತ್ರೀಯನ್ನು, ಅದೇ ಕುಲದವನು, ಅವಳ ಇಚ್ಛೆಗೆ ವಿರುದ್ಧವಾಗಿ ಬಲಾತ್ಕರಿಸಲು ಪ್ರಯತ್ನಿಸಿದರೆ. ಅವನ ತಲೆ, ಮೀಸೆ ಬೋಳಿಸಿ, ಉಳ್ಳಿಗಡ್ಡಿ ತಿಕ್ಕಿ, ಕತ್ತೆಯ ಮೇಲೆ ಕೂಡಿಸಿ ಮೆರವಣಿಗೆ ತೆಗೆಯುತ್ತಾರೆ. ಕುಲಕ್ಕೆ ಹೊರಗಾದ ಅವನು ಪುನಃ ಕುಲದಲ್ಲಿ ಸೇರಬಯಸಿದರೆ ತನ್ನ ಕುಲದವರಿಗೆಲ್ಲ ಊಟ ಮತ್ತು ಮದ್ಯಕ್ಕೆ ಹತ್ತುವಷ್ಟು ಹಣವನ್ನು ದಂಡದ ರೂಪದಲ್ಲಿ ಕೊಡಬೇಕಾಗುತ್ತದೆ.

ಅವಿವಾಹಿತ ಸ್ತ್ರೀ ಮೇಲ್ಜಾತಿಯವನೊಡನೆ ಅನೀತಿಯುತ ಸಂಬಂಧ ಬೆಳೆಸಿದ್ದರೆ ಅವಳನ್ನು ದಂಡಹಾಕಿ ಕ್ಷಮಿಸಲಾಗುತ್ತದೆ. ಕೆಳಜಾತಿಯವನಾಗಿದ್ದರೆ ಅವಳಿಗೆ ಜಾತಿಯಿಂದ ಬಹಿಷ್ಕಾರ ಹಾಕುತ್ತಾರೆ. ತನ್ನ ಜಾತಿಯವನನ್ನೇ ಅವಳು ಕೂಡಿದುದು ಕುಲಸ್ಥರಿಗೆ ತಿಳಿದಾಗ ಅವರಿಬ್ಬರಿಗೂ ಕೂಡಿಕೆ ಮಾಡಲಾಗುತ್ತದೆ. ಆ ಮೇಲೆ ಇಬ್ಬರು ಅಥವಾ ಮೂವರು ಅವರೊಡನೆ ತಿರುಪತಿಗೆ ಹೋಗಿ ಪೂಜೆ ಸಲ್ಲಿಸುತ್ತಾರೆ. ಪೂಜಾ

ನಂತರ ಪುರೋಹಿತನು ಅವರಿಬ್ಬರನ್ನೂ ಕೂಡ್ರಿಸಿ ಅಕ್ಕೀಕಾಳು ಹಾಕುತ್ತಾನೆ. ದಂಪತಿಗಳು ಒಬ್ಬರ ಮೇಲೊಬ್ಬರು ಅಕ್ಷತೆ ಹಾಕುತ್ತಾರೆ. ಈ ವಿಧಿಯುಬಳಿಕ ಅವರ ಮದುವೆ ಒಪ್ಪಿತವಾದಂತೆ. ಇದಾಗುವ ತನಕ ಅವರಿಬ್ಬರೂ ಬೇರೆ ಬೇರೆಯೆ ಇರುತ್ತಾರೆ.

**ಜನ್ಮೋತ್ಸವ :** ಸಾಮಾನ್ಯ ಕೊರವರು ಜನ್ಮೋತ್ಸವವನ್ನು ಅಷ್ಟೊಂದು ವಿಜೃಂಭಣೆಯಿಂದ ಆಚರಿಸುವುದಿಲ್ಲ. ಮಗು ಹುಟ್ಟಿದ ಕೂಡಲೆ ಉಗುರು ಬೆಚ್ಚಗಿನ ನೀರಿನಲ್ಲಿ ಅದರ ಸ್ನಾನಮಾಡಿಸುತ್ತಾರೆ. ಕೆಲಸಲ ಬಾಣಂತಿಗೂ ಸ್ನಾನಮಾಡಿಸುತ್ತಾರೆ. ಟೊಂಕವನ್ನು ಬಿಗಿದು, ದೇಹವನ್ನು ಬೆಚ್ಚಗಿಡಲು ವನಸ್ಪತಿ ಔಷಧಿಕೊಟ್ಟು ಅಂಗಾತ ಮಲಗಿಸುವರು. ಐದನೆಯ ಅಥವಾ ಏಳನೆಯ ದಿನ ಕೂಸು, ಬಾಣಂತಿಯರಿಬ್ಬರಿಗೂ ಸ್ನಾನಮಾಡಿಸುವರು. ಇಡೀ ಮನೆಯನ್ನು ಗೋಮಯದಿಂದ ಸಾರಿಸಿ ಕೆಲವು ಜನ ಕುಲಸ್ಥರನ್ನು ಊಟಕ್ಕೆ ಆಹ್ವಾನಿಸುವರು. ಆ ದಿನ ಸಾಯಂಕಾಲ ಮಗುವನ್ನು ತೊಟ್ಟಿಲಲ್ಲಿ ಹಾಕಿ ಹೆಸರಿಡುತ್ತಾರೆ. ಸಾಮಾನ್ಯವಾಗಿ ಹೆಸರುಗಳು ಅವರ ದೇವದೇವತೆಗಳವೇ ಆಗಿರುತ್ತವೆ. ಅವುಗಳಲ್ಲಿ ಕೆಲವು ಕಾಡಿನ ದೇವತೆಗಳ ಹೆಸರೂ ಆಗಿರುತ್ತವೆ. ಸುಂಕ, ಹನುಮ, ಮಾರ, ಎಲ್ಲ, ಮಲ್ಲ, ಮಾಚ ಇತ್ಯಾದಿ ಹೆಸರುಗಳು ಹೆಚ್ಚು ರೂಢಿಯಲ್ಲಿವೆ. ಜೂಲ, ಸೊಟ್ಟ, ಮುಂತಾದ ಹಾಸ್ಯದ ಉಪನಾಮಗಳೂ ಇರುವುದುಂಟು. ಜನ್ಮೋತ್ಸವದ ದಿನ ಮದ್ಯ ಸೇವನೆಯೂ ನಡೆಯುತ್ತದೆ.

ಒಂದು ಅಥವಾ ಕೆಲವು ಮಕ್ಕಳ ಸಾವಿನ ತರುವಾಯ ಕೂಸು ಹುಟ್ಟಿದಾಗ ಕೆಲವೆಡೆ ಒಂದು ವಿಚಿತ್ರ ಪದ್ಧತಿ ಆಚರಿಸಲಾಗುತ್ತದೆ. ಸ್ನಾನಾನಂತರ ಬಾಣಂತಿಯು ವಾಸ್ತವವಾಗಿ ಅಥವಾ ನೆಪಮಾತ್ರಕ್ಕೆ ದೇವರಿಗೆ ಹೊತ್ತ ಹರಕೆಯನ್ನು ತೀರಿಸಲೆಂದು ಕೆಲವು ಮನೆಗಳಿಗೆ ಬಿಕ್ಷೆ ಬೇಡಲು ಹೋಗುತ್ತಾಳೆ. ಆಗ ಅವಳ ಗಂಡನೂ ಕೈಯಲ್ಲಿ ಕೂಸು ಹಿಡಿದುಕೊಂಡು ಹೆಂಡತಿಯ ಹಿಂದೆ ಹೋಗುವನು. ಆ ದೊರೆತ ಬಿಕ್ಷೆಯ ಕ್ಷೆಯಿಂದ ಬೆಳ್ಳಿ ಅಥವಾ ತಾಮ್ರದ ಸರಮಾಡಿಸಿ ಕೂಸಿನ ಕೊರಳಲ್ಲಿ ಹಾಕಲಾಗುವದು. ...ಯ ಮೂಗು ಚುಚ್ಚಿ ಉಂಗುರ ಹಾಕುವುದೂ ಉಂಟು.

**ಧರ್ಮ, ದೇವ-ದೇವತೆಗಳು :** ಒಂದು ಕಡೆ ನೆಲೆನಿಂತು ಹಳ್ಳಿ, ಪಟ್ಟಣಗಳಲ್ಲಿ ...ಸುವ ಕೊರವರು ಮೇಲ್ಜಾತಿಯವರೊಡನೆ ಬಂದ ಸಂಪರ್ಕದ ಫಲವಾಗಿ ಗ್ರಾಮೀಣ ದೇವತೆಗಳನ್ನು ಪೂಜಿಸುತ್ತಾರೆ. ಹನುಮಂತ ದೇವರಲ್ಲಿ ಇವರಿಗೆ ಅಪಾರ ಭಕ್ತಿ. ತೀರ ಹಿಂದುಳಿದವರಲ್ಲಿ ಭೂತಾರಾಧನೆಗೆ ಮಹತ್ವವಿದೆ. ಕೊರಚರ ಮುಖ್ಯ ದೇವತೆ ತಿರುಪತಿಯ ವೆಂಕಟರಮಣ. ಈ ದೇವರನ್ನು ಅವರು ತಿರುಪತಿಯ ತಿಮ್ಮಪ್ಪನೆಂದು ಕರೆಯುತ್ತಾರೆ. ಆಗಾಗ ತಿರುಪತಿಗೆ ಇವರು ಹೋಗುವುದೂ ಉಂಟು. ಮರಗಮ್ಮ. ಮಾತಂಗೆಮ್ಮ. ಹುಲಿಗೆಮ್ಮ. ಎಲ್ಲ... ಇತ್ಯಾದಿ ಶಕ್ತಿದೇವತೆಗಳ ಉಪಾಸನೆಯನ್ನು ಇವರು ಮಾಡುತ್ತಾರೆ. ಕೆಲವಡೆ ...ರನೆಂಬ ಭೂತದ ಪೂಜೆ ಹೆಚ್ಚು ಬಳಕೆ

ಯಲ್ಲಿದೆ. ಕುರಿ, ಆಡುಗಳನ್ನು ಈ ದೇವತೆಗಳಿಗೆ ಬಲಿಕೊಟ್ಟು ಅವುಗಳ ಮಾಂಸಭಕ್ಷಣ ಮಾಡುತ್ತಾರೆ. ಕೊರವರ ವಸತಿಯ ಬಳಿಯೇ ಯಾವುದಾದರೊಂದು ದೇವ ದೇವತೆಯ ಗುಡಿ ಅಥವಾ ಗುಡಿಸಲಿರುತ್ತದೆ. ಅವುಗಳಿಗೆ ಕೊರವರು ತಮ್ಮದೇ ಆದ ವಿಶಿಷ್ಟ ಪೂಜೆ ಸಲ್ಲಿಸುತ್ತಾರೆ. ಇವರು ಉಪವಾಸ ಮಾಡುವುದಿಲ್ಲ. ಹಿಂದುಗಳ ಉಗಾದಿ, ಗೌರೀಹಬ್ಬ, ನವರಾತ್ರಿ, ಹಬ್ಬಗಳನ್ನು ಇವರೂ ಆಚರಿಸುವರು. ವೆಂಕಟರಮಣನು ಮನೆದೇವರಾಗಿರುವವರು ಶನಿವಾರ ದಿವಸ ಅವನ ಪೂಜೆ ಮಾಡುತ್ತಾರೆ. ಅಂದು ಸಂಚಾರೀ ಕೊರವರೇ ಇರಲಿ, ನೆಲೆನಿಂತ ಕೊರವರೇ ಇರಲಿ, ಸ್ನಾನಮಾಡಿ ಸಮೀಪದಲ್ಲಿ ವಿಷ್ಣುವಿನ ಗುಡಿಯಿದ್ದರೆ ಅಲ್ಲಿಗೆ ಹೋಗಿ ಹೂವು ಹಣ್ಣು ಸಮರ್ಪಿಸಿ ಪ್ರಸಾದ ಸ್ವೀಕರಿಸಿ ತದನಂತರ ಊಟ ಮಾಡುತ್ತಾರೆ. ಕೊರವರ ಮುಖ್ಯ ಹೆಣ್ಣುದೇವತೆ ಮೂದೇವಿ. ನಿದ್ರೆಯ ದೇವತೆಯಾದ ಇವಳನ್ನು ಕೊರವ ಹೆಣ್ಣುಮಕ್ಕಳು ವಿಚಿತ್ರ ರೀತಿಯಲ್ಲಿ ಪೂಜಿಸುತ್ತಾರೆ. ಕುಡಿಯುತ್ತ, ಕುಣಿಯುತ್ತ ಆ ದೇವತೆಗೆ ಪ್ರಾಣಿಗಳ ಬಲಿ ಕೊಡುತ್ತಾರೆ. ಮದ್ಯವನ್ನೂ ಹಂಚಲಾಗುತ್ತದೆ. ತಮಗೆ ನಿದ್ರೆ ಬರದಿರಲೆಂದೂ, ಕನ್ನಹಾಕುವ ಮನೆಯವರಿಗೆ ನಿದ್ರೆ ಆವರಿಸಬೇಕೆಂದೂ, ಸಿಕ್ಕಿಬಿದ್ದ ತಮ್ಮ ವೃತ್ತಿಬಾಂಧವರು ಪಾರಾಗಿಬರಲೆಂದೂ ಆ ದೇವತೆಯನ್ನು ಬೇಡಿಕೊಳ್ಳುತ್ತಾರೆ.

**ಮಂತ್ರ, ಮಾಟ, ಮೂಢನಂಬಿಕೆಗಳು** : ಸ್ವತಃ ಕೆಲವು ಕೊರವರ ಹೆಣ್ಣುಮಕ್ಕಳು ಕಣಿಹೇಳುವವರಾಗಿದ್ದರೂ ಅವರು ಅದರಲ್ಲಿ ನಂಬಿಕೆಯಿಡದೆ ಮಾಟ ಮಂತ್ರಗಳಲ್ಲಿ ನಂಬಿಕೆಯುಳ್ಳವರಾಗಿರುತ್ತಾರೆ. ಶಕುನಗಳಲ್ಲಿ ಇವರಿಗೆ ಹೆಚ್ಚು ನಂಬಿಕೆ. ಕಳವು, ದರೋಡೆಗೆ ಹೋಗುವ ಪ್ರಸಂಗದಲ್ಲಿ ಶಕುನ ನೋಡುತ್ತಾರೆ. ಕೊಲ್ಲಾಪುರಮ್ಮ ಅಥವಾ ಎಲ್ಲಮ್ಮ ದೇವತೆಗಳಿಗೆ ಪೂಜೆ ಸಲ್ಲಿಸಿ ಸಂತರ್ಪಣೆ ಮಾಡಿ ತಮ್ಮ ಕಾರ್ಯದಲ್ಲಿ ಯಶಸ್ಸು ಸಿಗಲೆಂದು ಪ್ರಾರ್ಥಿಸುತ್ತಾರೆ. ಒಂದು ಹೋತಿನ ಕೋಡಿಗೆ ಕೆಂಪುದಾರ, ಕೊರಳಲ್ಲಿ ಬೇವಿನ ಟೊಂಗೆ ಅರಿಷಿಣ ಕೊಂಬುಗಳಿಂದ ಕೂಡಿದ ಹಾರವನ್ನು ಕಟ್ಟಿ ಅದನ್ನು ದೇವತೆಯ ಮುಂದೆ ನಿಲ್ಲಿಸುತ್ತಾರೆ. ತೆಂಗು ಒಡೆದು ತಾವು ಕೈಕೊಳ್ಳಲಿರುವ ಸಾಹಸಕಾರ್ಯವನ್ನು ಬಿಡಬೇಕೋ, ಮಾಡಬೇಕೋ ಎಂದು ಕೇಳುತ್ತಾರೆ. ಆಗ ಹೋತು ಮೂತ್ರ ವಿಸರ್ಜಿಸಿದರೆ ಅದು ಶುಭಸೂಚನೆಯಲ್ಲ. ಇದರಂತೆ ದೇವತೆಯ ಎದುರು ಕೋಳಿಯೊಂದನ್ನು ಕೊಯ್ದು ಆದರ ಎದುರು ಕುಳಿತು, ಹಲ್ಲಿ ಯಾವ ದಿಕ್ಕಿನಿಂದ ನುಡಿಯುತ್ತದೆಂದು ಕೇಳುತ್ತಾರೆ. ತಮ್ಮ ಸಾಹಸಕ್ಕೆ ಹೊರಟಾಗ ವಿಧವೆಯರು, ಹಾಲಿನ ಕೊಡ, ಮೂತ್ರಿಸುವ ನಾಯಿ, ಡುರಿಕೆ ಹಾಕುವ ಹೋರಿ ಇತ್ಯಾದಿಗಳನ್ನು ಕಂಡರೆ ಅಪಶಕುನ. ಅದೇ ತಮ್ಮ ಕಾರ್ಯದಲ್ಲಿ ನಿರತರಾದಾಗ ಹೋರಿ ಡುರಿಕೆ ಹಾಕಿದರೆ ಅದು ಶುಭಶಕುನವಂತೆ. ಏಳನೆಯ ಅಂಕಿ ಅವರಿಗೆ ಅಶುಭ. ಅದ್ದರಿಂದ ಅವರು ತಮ್ಮ ಸಾಹಸಕಾರ್ಯಕ್ಕೆ ಏಳನ್ನು ಕೂಡಿಕೊಂಡು ಹೋಗುವುದಿಲ್ಲ. ಕನ್ನ ಹಾಕುವ ಅವರನ್ನು ರಕ್ಷಿಸುತ್ತದೆಯೆಂತೆನ್ನ ಜಾತರು ತಮ್ಮ ಸಾಹಸಕಾರ್ಯಗಳಲ್ಲಿ

( ಕೂಡಿಕೆ ಮಾಡು

ತೊಡಗಿರುವಾಗ ಮನೆಯಲ್ಲಿ ಹೆಂಗಸರು ಕೆಲವೆಡೆ ವಿಚಿತ್ರ ರೀತಿಯಲ್ಲಿ ಶಕುನ ಕೇಳು ತ್ತಾರೆ. ಪೊರಕೆಯಿಂದ ಒಂದು ಉದ್ದನ್ನ ಕಡ್ಡಿ ಕಿತ್ತುಕೊಂಡು ಅದರ ಒಂದು ತುದಿಗೆ ಎಣ್ಣೆಯಲ್ಲಿ ಅದ್ದಿದ ಹಲವಾರು ಚಿಕ್ಕ ಕಡ್ಡಿಯ ತುಂಡುಗಳನ್ನು ಕಟ್ಟುತ್ತಾರೆ. ಅದನ್ನು ನೀರಿನಲ್ಲಿ ಬಿಟ್ಟಾಗ ಅದು ತೇಲಿದರೆ ಎಲ್ಲವೂ ಶುಭ. ಮುಳುಗಿದರೆ ಅಶುಭವೆಂದು ತಿಳಿದು ಕೂಡಲೇ ತಮ್ಮ ಗಂಡಸರನ್ನು ಹುಡುಕಲು ಓಡುತ್ತಾರೆ, ರವಿವಾರ ಸಾಹಸ ಕಾರ್ಯಗಳಿಗೆ ಶುಭದಿನವಲ್ಲ. ಶುಕ್ರವಾರ ಬ್ರಾಹ್ಮಣರ ಇಲ್ಲವೆ ಕೊಮಟಿಗರ ಮನೆಗೆ ಕನ್ನ ಹಾಕುವುದಿಲ್ಲ.

**ಉದ್ಯೋಗ ವೃತ್ತಿ :** ಕೊರವರಲ್ಲಿ ಪಂಗಡಗಳು ಉದ್ಯೋಗಾನುಸಾರವಾಗಿಯೆ ಹೆಸರು ಪಡೆದಿವೆ. ಊರ ಕೊರಚರು ಹಿಂದೆ ಮೂಳಗಳಿಂದ ಉಪ್ಪುತಂದು ಮಾರುವ ಉದ್ಯೋಗಕೈಕೊಂಡಿದ್ದರು. ಸಮುದ್ರದ ಉಪ್ಪಿನ ಉತ್ಪಾದನೆ ಹೆಚ್ಚಿದುದರ ಕಾರಣ ಆ ಉದ್ಯೋಗ ನಿಂತುಹೋಗಿ ಈಗ ಕೆಲವರು ಒಕ್ಕಲುತನವನ್ನು ಕೈಕೊಂಡಿದ್ದಾರೆ ಇನ್ನು ಕೆಲವರು ಚಾಪೆ, ಮೊರ, ಬುಟ್ಟಿ, ತೊಟ್ಟಿಲು ಇತ್ಯಾದಿಗಳನ್ನು ಮಾಡುತ್ತ ಉಪಜೀವಿಸು ತ್ತಿದ್ದಾರೆ. ಆದುದರಿಂದಲೇ ಅವರನ್ನು ದಬ್ಬೆ ಅಥವಾ ಬಿದಿರುಕೊರಚರೆಂದು ಕರೆಯ ಲಾಗುತ್ತದೆ. ಘಟ್ಟದ ಅಥವಾ ಉಪ್ಪಿನ ಕೊರಚರು ರೇಲ್ವೆಮೊದಲಾದ ಸಾರಿಗೆ ಸಾಧನಗಳು ಲಭ್ಯವಿರದಿದ್ದ ಕಾಲದಲ್ಲಿ ಸಮುದ್ರ ತೀರದಿಂದ ಉಪ್ಪನ್ನು ಎತ್ತು, ಕತ್ತೆಗಳ ಮೇಲೆ ಹೇರಿಕೊಂಡು ಬಂದು ದೇಶದ ವಿವಿಧ ಭಾಗಗಳಲ್ಲಿ ಮಾರಿ ಜೀವಿಸುತ್ತಿದ್ದರು. ಹೆಂಡಿರು ಮಕ್ಕಳು ಸಾಮಾನುಗಳ ಜೊತೆಗೇ ಗುಂಪುಗುಂಪಾಗಿ ಹೊರಟು ಊರೂರು ಅಲೆಯುತ್ತ ಉಪ್ಪಿನವ್ಯಾಪಾರ ನಡೆಸುತ್ತಿದ್ದರು. ಈಗ ಅದು ನಿಂತುಹೋಗಿ ಕೆಲವರು ಉಪಜೀವನಕ್ಕೆ ಕಳವಿನ ಹಾದಿ ಹಿಡಿದಿದ್ದಾರೆ. ಕೆಲವರು ಒಂದೆಡೆ ನೆಲೆಸಿ ಒಕ್ಕಲುತನ ಕೈಕೊಂಡಿದ್ದಾರೆ. ಕೋಲಾರ ಜಿಲ್ಲೆಯ ಮುಳಬಾಗಿಲು ತಾಲೂಕಿನ ಉಪ್ಪಿನ ಕೊರಚರು ಇಂದಿಗೂ ಆಮದುಮಾಡಿದ ಉಪ್ಪನ್ನು ಹೆಚ್ಚಿನ ಪ್ರಮಾಣದಲ್ಲಿ ಸಂತೆಗಳಲ್ಲಿ ಖರೀದಿಸಿ ಹಳ್ಳಿ ಹಳ್ಳಿಗಳಿಗೆ ಹೋಗಿ ಮಾರಿ ಉಪಜೀವನ ಸಾಗಿಸುತ್ತಾರಂತೆ. ಎತ್ತಿನ ಕೊರಚರು ಸಾಮಾನು ಸಾಗಿಸುವ ಉದ್ಯೋಗದಲ್ಲಿ ಕತ್ತೆಗಳಿಗಿಂತ ಎತ್ತನ್ನು ಹೆಚ್ಚು ಬಳಸುತ್ತಾರೆ. ಕುಂಚೀಕೊರವರು ನೇಕಾರರಿಗೆ ಬೇಕಾಗುವ ಕುಂಚಿ, ಒಕ್ಕಲಿಗರಿಗೆ ಬೇಕಾಗುವ ನೆಲುವು. ಬುಟ್ಟಿ, ಪೊರಕೆ, ಜಲ್ಲಿ ಮೊದಲಾದವುಗಳನ್ನು ಈಚಲಕಡ್ಡಿ, ದಾಗಡಿಯ ಬಳ್ಳಿಗಳಿಂದ ಮಾಡಿ ಮಾರಿ ಉಪಜೀವಿಸುತ್ತಾರೆ. ಸನಾದಿಕೊರವರು ಗ್ರಾಮವಾಸಿಗಳು, ಇವರು ಮದುವೆ–ಮುಂಜಿ ಮುಂತಾದ ಶುಭಕಾರ್ಯಗಳಲ್ಲಿ ಬಜೆಂತ್ರಿ ಊದುವರು. ಬುಟ್ಟಿ, ಗಳಿಗೆ ತಯಾರಿಸುವುದು ಇತ್ಯಾದಿಗಳನ್ನೂ ಈ ಉದ್ಯೋಗದೊಡನೆ ಅನುಸರಿಸಿದ್ದಾರೆ. ಪಾಮುಲಕೊರವರು ಆಂಧ್ರದಲ್ಲಿ ಹಾವಾಡಿಗ ವೃತ್ತಿಯನ್ನು ಅವಲಂಬಿಸಿದ್ದಾರೆ.

ಬಲಿಜಕೊರವರು ಧಾರ್ಮಿಕ ಕಾರ್ಯಗಳಲ್ಲಿ ಗುಗ್ಗುಳಹಾಕಿ ಹಾಡುವ ಕೆಲಸಮಾಡು ತ್ತಾರೆ.

ಕೊರವರಲ್ಲಿ ಕಳವು, ಲೂಟಿ, ದರೋಡೆ, ಹಾದಿಬಡಿಯುವುದು ಇತ್ಯಾದಿ ಉದ್ಯೋಗಗಳಲ್ಲಿ ನಿರತರಾಗಿರುವವರೇ ಬಹಳ. ಇವರೆಲ್ಲರನ್ನು ಒಟ್ಟಾಗಿ ಕಳ್ಳಕೊರವ ರೆಂದು ಹೇಳಬಹುದು. ಈ ವೃತ್ತಿಗಳನ್ನು ಅವರು ತಮ್ಮ ಮಕ್ಕಳಿಗೆ ಸಣ್ಣವರಿರು ವಾಗಲೇ ಕಲಿಸಲು ಪ್ರಾರಂಭಿಸುತ್ತಾರೆ. ಮಕ್ಕಳನ್ನು ಹೊಡೆದು ಬಡಿದು ಧೈರ್ಯ ಗಟ್ಟಿಯಾಗುವಂತೆ ಮಾಡುವರು. ಹಾಕಿದ ಪ್ರಶ್ನೆಗೆ "ನನಗೆ ಗೊತ್ತಿಲ್ಲ" ಎಂದು ಹೇಳುವಂತೆ ಬಾಲಕರಿಗೆ ಕಲಿಸಲಾಗುತ್ತದೆ. ಕಳವಿನ ವಿವಿಧ ವಿಧಾನಗಳನ್ನು, ಬೇರೆ ಬೇರೆ ಮನೆ ಗಳಲ್ಲಿ ಸುಲಭವಾಗಿ ಪ್ರವೇಶಿಸುವ ಕಲಾಕುಶಲತೆಯನ್ನು ಪ್ರಾರಂಭದಿಂದಲೇ ಬೋಧಿಸ ಲಾಗುತ್ತದೆ. ಮನೆಯ ಚಪ್ಪರಗಳ ಮೇಲಿಂದ, ಗೋಡೆಗೆ ಕನ್ನಹಾಕಿ, ಬಾಗಿಲ ಚಿಲಕದ ಬಳಿ ತೂತು ಕೊರೆದು ಮನೆಯಲ್ಲಿ ಪ್ರವೇಶಿಸುವ ರೀತಿಗಳನ್ನೂ ಹೇಳಿಕೊಡು ತ್ತಾರೆ. ಚಪ್ಪರದಿಂದ ಒಳಗಿಳಿಯುವ ಪೂರ್ವದಲ್ಲಿ ಮೊದಲು ಸಣ್ಣ ಉಸುಕನ್ನು ಸ್ವಲ್ಪ ಚೆಲ್ಲಿ ಕೆಳಗೆ ಪಾತ್ರೆ-ಪಗಡಗಳಿವೆಯೋ ಎಂಬುದನ್ನು ಖಚಿತಪಡಿಸಿಕೊಳ್ಳಲು ಹೇಳುವರು. ಹಗಲು ದರೋಡೆ ಮಾಡುವಾಗ ವಹಿಸಬೇಕಾದ ಎಚ್ಚರಿಕೆಯ ವಿವರ ಗಳನ್ನೂ ಕೊಡುತ್ತಾರೆ. ಒಂದು ವೇಳೆ ಸಿಕ್ಕಿಬಿದ್ದರೆ ತನ್ನ ತಂದೆ-ತಾಯಿಗಳ ಹೆಸರನ್ನು ಅಥವಾ ಗುಂಪಿನ ಹೆಸರನ್ನು ಎಂದೂ ಹೇಳಬಾರದೆಂದು ತಾಕೀತು ಮಾಡುತ್ತಾರೆ.

ಅವರು ಮಾಡುವ ಕಳವು, ದರೋಡೆ ಇತ್ಯಾದಿಗಳು ಬೇರೆಯವರ ದೃಷ್ಟಿಯಲ್ಲಿ ಅಪರಾಧವೆನಿಸಿದರೂ ಕೊರವರಿಗೆ ಅವು ಜೀವನ ವಿಧಾನ ಹಾಗೂ ಜೀವನೋಪಾಯ ಗಳು. ಅವರು ಅವುಗಳನ್ನು ಸಾಹಸದ ಸಂಕೇತವೆಂದು ತಿಳಿಯುತ್ತಾರೆ. ದುರದೃಷ್ಟ ವಶಾತ್ ಸಿಕ್ಕಿಬಿದ್ದು ಜೇಲಿಗೆ ಹೋದರೆ ಅದಕ್ಕಾಗಿ ಅವರು ಭಯಪಡುವುದಿಲ್ಲ. ತಮ್ಮ ಜೀವನದ ಭಾಗವೆಂದು ತಿಳಿದು ಅದನ್ನು ಸಹಿಸಿಕೊಳ್ಳುತ್ತಾರೆ. ಅದೃಷ್ಟ ವಿದ್ದರೆ ಅಲ್ಲಿಂದ ಪಾರಾಗಬಹುದೆಂಬ ನಂಬಿಕೆಯುಳ್ಳವರೂ ಆಗಿರುತ್ತಾರೆ. ಕಳವು ತಮ್ಮ ಜನ್ಮಸಿದ್ಧ ಹಕ್ಕೆಂದು ಅವರ ಭಾವನೆ.

**ಕಾರ್ಯ ವಿಧಾನ :** ಮತ್ತೊಬ್ಬರ ಆಸ್ತಿಯನ್ನು ಕಳವು ಮಾಡುವ ಮತ್ತು ಅದನ್ನು ಬಚ್ಚಿಡುವ ಅನೇಕ ವಿಧಾನಗಳು ಅವರಲ್ಲಿ ಬಳಕೆಯಲ್ಲಿವೆ. ಕೆಲವು ಸಲ ಜನರನ್ನು ಎಚ್ಚರದಪ್ಪಿಸುವ ಔಷಧಿಗಳನ್ನು ಉಪಯೋಗಿಸುತ್ತಾರೆ. ರಾತ್ರಿ ಕತ್ತಲೆ ಯಲ್ಲಿ ಭಿಕ್ಷುಕರಂತೆ ಬಂದು ಮನೆಯ ಹೆಣ್ಣುಮಗಳು ನೀಡಲು ಬಂದಾಗ ಅವಳ ಕೊರಳಲ್ಲಿಯ ಆಭರಣಗಳನ್ನು ಕಿತ್ತಿಕೊಂಡು ಮಾಯವಾಗುತ್ತಾರೆ. ಮುಂಜಾನೆ ನಸುಕಿನಲ್ಲಿ ಹೆಣ್ಣುಮಕ್ಕಳು ಎದ್ದು ಕೆಲಸದಲ್ಲಿ ತೊಡಗಿರುವಾಗ ಅವರ ಆಭರಣಗಳನ್ನು

ಕಸಿದುಕೊಂಡು ಹೋಗುವುದೂ ಉಂಟು. ಮಂದಿ ನೆರೆದಲ್ಲಿ ತಿಳಿಯದಂತೆ ಕಿಸೆಗಳನ್ನು ಕತ್ತರಿಸಿ ಹಣದೋಚುವ ಗಂಟೀಚೋರರೂ ಇರುತ್ತಾರೆ.

ಐದು ಅಥವಾ ಹೆಚ್ಚು ಜನರು ಒಬ್ಬ ನಾಯಕನ ನೇತೃತ್ವದಲ್ಲಿ ಗುಂಪುಗೂಡಿ ತಮ್ಮ ಸಾಹಸ ಕಾರ್ಯಗಳಿಗೆ ಹೊರಡುತ್ತಾರೆ. ಆ ನಾಯಕನು ಚೋರವಿದ್ಯೆಯಲ್ಲಿ ಬಲ್ಲಿದನಾಗಿರುವದರ ಜೊತೆಗೆ ಪೋಲೀಸರ, ಗ್ರಾಮಾಧಿಕಾರಿಗಳ ಜೊತೆ ಹೇಗೆ ವರ್ತಿಸ ಬೇಕೆಂಬುದನ್ನು ತಿಳಿದವನಾಗಿರುತ್ತಾನೆ. ಪೋಲೀಸ ಕಾಯಿದೆ ಮತ್ತು ಅವರ ಅಧಿಕಾರ ವ್ಯಾಪ್ತಿಯನ್ನು ಅರಿತಿರುವ ಅವನು ತಾನೇ ಸ್ವತಃ ಕಳವಿನ ಕಾರ್ಯದಲ್ಲಿ ತೊಡಗಿರ ದಿದ್ದರೂ ತನ್ನ ಗುಂಪಿನವರ ಚಲನವಲನಗಳ ಮೇಲೆ ಕಣ್ಣಿಟ್ಟು ಅವರನ್ನು ನಿಯಂತ್ರಿಸ ಬಲ್ಲವನಾಗಿರುತ್ತಾನೆ. ಕಾದಾಟ ಸಂಭವಿಸಿದರೆ ಹಿಡಿತಕ್ಕೆ ಸಿಗಬಾರದೆಂದು ಮೈಗೆ ಎಣ್ಣೆ ಸವರಿಕೊಂಡಿರುತ್ತಾರೆ. ಭರ್ಚಿ, ಏಣಿ, ಕನ್ನಗತ್ತರಿಗಳನ್ನು ಹಿಡಿದುಕೊಂಡಿರು ತ್ತಾರೆ. ಕೆಲವು ಸಲ ಒಂದೊಂದು ಗುಂಪಿನಲ್ಲಿ ಮೂವತ್ತು ನಲವತ್ತು ಜನರಿರುವುದೂ ಉಂಟು. ಇಂಥ ಡಕಾಯಿತಿಗಳು ಈಗೀಗ ಕಡಮೆಯಾಗಿವೆ. ತಮ್ಮ ವಾಸಸ್ಥಾನ ದಿಂದ ನೂರುಮೈಲು ದೂರವಿರುವ ಪ್ರದೇಶದಲ್ಲಿ ಈ ಗುಂಪುಗಳು ಕನ್ನಹಾಕುವ ಕಾರ್ಯದಲ್ಲಿ ನಿರತವಾಗಿರುತ್ತವೆ. ಯಾವ ಮನೆಗೆ ಕನ್ನಹಾಕಬೇಕೆಂಬುದನ್ನು, ಅದರ ಸುತ್ತಲಿನ ವಾತಾವರಣವನ್ನು ಮುಖಂಡನಾದವನು ಮೊದಲೇ ಅಭ್ಯಸಿಸಿರುತ್ತಾನೆ. ಯಾವ ಯಾವ ಗುಂಪು ಏನೇನು ಕೆಲಸ ಮಾಡಬೇಕೆಂಬುದರ ನಿರ್ದೇಶನವೂ ಈತನದೆ. ಗೊತ್ತುಪಡಿಸಿದ ರಾತ್ರಿ ಮದ್ಯಸೇವನೆ ಮಾಡುತ್ತಾರೆ. ಆದರೆ ಎಚ್ಚರದಪ್ಪುವಷ್ಟು ಕುಡಿಯುವದಿಲ್ಲ. ಬಳಿಕ ಬೇರೆ ಬೇರೆ ದಿಕ್ಕುಗಳಿಂದ ಒಬ್ಬೊಬ್ಬರಾಗಿ ನಿಗದಿಯಾಗಿದ್ದ ಕಳವಿನ ಸ್ಥಳಕ್ಕೆ ಹೋಗುತ್ತಾರೆ. ಮನೆಯಲ್ಲಿರುವ ನಾಯಿಗಳಿಗೆ ಅನ್ನದಲ್ಲಿ ಗಾಂಜಿ ತಪ್ಪಲು ಬೆರೆಸಿ ತಿನ್ನಿಸಿ ಎಚ್ಚರದಪ್ಪಿಸುವರು. ಬಾಗಿಲು ತೆಗೆಯುವ ಪೂರ್ವದಲ್ಲಿ ಮನೆಯವರು ಮಲಗಿರುವ ಬಗ್ಗೆ ಭರವಸೆಮಾಡಿಕೊಳ್ಳುವರು. ಅದಕ್ಕಾಗಿ ಅವರು ಮಾಳಿಗೆ, ಚಪ್ಪರ, ತಗಡುಗಳ ಮೇಲೆ ಉಸುಕನ್ನೊ, ಸಣ್ಣ ಹರಳುಗಳನ್ನೊ ಒಗೆ ಯುತ್ತಾರೆ. ಯಾರೂ ಎಚ್ಚರಗೊಳ್ಳದಿದ್ದರೆ ತಮ್ಮ ಕೆಲಸ ಆರಂಭಿಸುತ್ತಾರೆ. ಹೊರಗಿನಿಂದ ಯಾರಾದರೂ ಬರುತ್ತಿರುವದರ ಸೂಚನೆ ಕೊಡಲು ಕೆಲವರನ್ನು ನೇಮಿಸಿರುತ್ತಾರೆ. ಮನೆ ಮುರಿಯುವ ಕೆಲಸದಲ್ಲಿ ತೊಡಗಿರುವವರನ್ನು ರಕ್ಷಿಸಲು ಕೆಲವರು ಆಯುಧ ಮತ್ತು ಇತರ ಸಾಧನೆಗಳೊಂದಿಗೆ ಸಿದ್ಧರಾಗಿ ನಿಂತಿರುತ್ತಾರೆ. ಕನ್ನಗತ್ತರಿಯಿಂದ ಕನ್ನಹಾಕುತ್ತಿರುವ ವ್ಯಕ್ತಿಗೆ ಸಹಾಯಮಾಡಲು, ಬೀಳುತ್ತಿರುವ ಇಟ್ಟಿಗೆ, ಹೆಂಟೆಗಳನ್ನು ಸಪ್ಪಳವಾಗದಂತೆ ಹಿಡಿದು ತೆಗೆಯಲು ಒಬ್ಬನು ನಿಂತಿರುತ್ತಾನೆ. ಕೆಲವು ಸಲ ಸಣ್ಣ ಹುಡುಗನೊಬ್ಬನನ್ನು ಕನ್ನಗಿಂಡಿಯಿಂದ ಮನೆಯೊಳಗೆ ಕಳಿಸುತ್ತಾರೆ. ಅವನು ಸಾವಕಾಶವಾಗಿ ಬಂದು ಬಾಗಿಲು ತೆಗೆಯುವನು. ಅದು ಸಾಧ್ಯವಾಗದಿದ್ದರೆ ಮನೆಯಲ್ಲಿರುವ ಬೆಲೆ ಬಾಳುವ ವಸ್ತುಗಳನ್ನು ಒಂದೊಂದಾಗಿ ಕಿಂಡಿಯ ಮೂಲಕ

ಹೊರಗೆ ಕೊಡುತ್ತಾನೆ. ಮಲಗಿದವರ ಮೈಮೇಲೆ ಆಭರಣಗಳಿದ್ದರೆ, ಮೊದಲೇ ಎಲ್ಲ ವಸ್ತುಗಳನ್ನೂ ಹೊರಗೆ ಸಾಗಿಸಿ ಕೊನೆಯಲ್ಲಿ ಆಭರಣಗಳಿಗೆ ಕೈಹಾಕಿ ಕಿತ್ತುಕೊಂಡು ಅವರು ಚೀರಾಡುತ್ತಿರುವಂತೆಯೇ ಓಡಿಹೋಗಿ ಬಿಡುತ್ತಾರೆ. ಓಣಿಯುವರೂ ಎದ್ದು ಬಂದು ಮನೆಯುವರಿಂದ ವಿಷಯು ತಿಳಿಯುವ ಹೊತ್ತಿಗೆ ಕಳ್ಳಕೊರವರು ಬೇರೆ ಬೇರೆ ದಿಕ್ಕುಗಳಲ್ಲಿ ಬಹುದೂರ ಸಾಗಿರುತ್ತಾರೆ. ಉಳಿದ ಸಂದರ್ಭಗಳಲ್ಲಿ ಕೊರವರು ಸಾಧು ಗಳಂತೆ ಕಂಡರೂ ತಮ್ಮ ವೃತ್ತಿಯಲ್ಲಿ ತೊಡಗಿರುವಾಗ ಅವರು ಬಹಳ ಭಯಂಕರ ರೆಂಬುದನ್ನು ತಿಳಿದ ಹಳ್ಳಿಗರು ಕಳ್ಳರನ್ನು ಹಿಂಬಾಲಿಸುವ ಧೈರ್ಯವನ್ನೂ ಮಾಡುವುದಿಲ್ಲ. ಗೊತ್ತಾದ ಸ್ಥಳದಲ್ಲಿ ಎಲ್ಲರೂ ಸೇರಿ ಲೂಟಿಯನ್ನು ಹಂಚಿಕೊಂಡು ಬೆಳಗಾಗುವುದರೊಳ ಗಾಗಿ ಮನೆ ಸೇರುವರು. ಲೂಟಿಯನ್ನು ಹಂಚಿಕೊಳ್ಳಲು ಸಮಯವಿಲ್ಲದಿದ್ದರೆ ಅಥವಾ ಯಾರಾದರೂ ಅಲ್ಲಿರುವ ಬಗೆಗೆ ಸಂಶಯ ಬಂದರೆ ಎಲ್ಲವನ್ನೂ ನೆಲದಲ್ಲಿ ಹೂಳಿ ಗುರುತುಮಾಡಿ ಹೋಗಿ ಬಿಡುತ್ತಾರೆ. ಮತ್ತೊಂದು ದಿನ ಅವುಗಳನ್ನು ಹಂಚಿ ಕೊಳ್ಳುತ್ತಾರೆ.

ಕಳವಿನ ಆಸ್ತಿಯನ್ನು ಭಾಗವಹಿಸಿರುವವರೆಲ್ಲ ಸಮವಾಗಿ ಹಂಚಿಕೊಳ್ಳುವರು. ನಾಯಕನಿಗೆ ಮಾತ್ರ ಎರಡುಪಾಲು ಸಲ್ಲುತ್ತದೆ. ಗುಂಪಿನ ಒಬ್ಬ ವ್ಯಕ್ತಿ ಜೇಲಿನಲ್ಲಿದ್ದರೆ ಅವನ ಹೆಂಡತಿಗೆ ಅರ್ಧಭಾಗ ಕೊಡುತ್ತಾರೆ. ಹಿಂದೆ ಗುಂಪಿನಲ್ಲಿದ್ದು ಸಾಹಸತೋರಿ ತೀರ ಮುದುಕರಾದವರಿಗೆ ಒಂದು ಎಂಟಾಂಶ ಭಾಗ ಕೊಡುತ್ತಾರೆ. ಇಷ್ಟೇ ಭಾಗ ದೇವರಿಗೆ ಸಲ್ಲುತ್ತದೆ. ಎಲ್ಲ ಗುಂಪುಗಳಲ್ಲಿಯೂ ಇದೇ ಬಗೆಯು ವಿತರಣೆಯು ವಿಧಾನ ವಿರದಿದ್ದರೂ ಒಂದಿಲ್ಲೊಂದು ವಿಧಾನವನ್ನು ಎಲ್ಲರೂ ಅನುಸರಿಸುತ್ತಾರೆ. ಕಳ್ಳ ಕೊರವರಲ್ಲಿಯೂ ಒಂದು ಬಗೆಯ ನೀತಿ ಸಂಹಿತೆಯಿದೆ. ಗುಂಪಿನ ಪ್ರತಿಯೊಬ್ಬ ಸದಸ್ಯನೂ ಪ್ರಾಮಾಣಿಕನಾಗಿರಬೇಕೆಂಬುದು ಅವುಗಳಲ್ಲಿ ಒಂದು. ಡಕಾಯತಿ, ಕನ್ನಗಳು ಯಶಸ್ವಿಯಾಗದಿದ್ದಾಗ ಗುಂಪಿನ ಪ್ರತಿಯೊಬ್ಬ ವ್ಯಕ್ತಿಯು ನಾಯಕನಿಗೆ ವಿಶೇಷ ಮಂ[illegible] ಕೊಡುತ್ತಾನೆ. ಪ್ರವೇಶಿಸಿದ ಬಾಗಿಲಿನಿಂದಲೇ ಹೊರಗೆ ಬರಬಾರದೆಂಬ ನಿಯ[illegible] ಕೊರವರಲ್ಲಿದೆ. ಊಟಮಾಡಿದವರ ಮನೆಯಲ್ಲಿ ಅವರು ಕಳವು ಮಾಡುವುದಿಲ್ಲ.

**ಸ್ತ್ರೀಯರ ವೃತ್ತಿಗಳು :** ಕೊರವಸ್ತ್ರೀಯರಲ್ಲಿ ಕೆಲವರು ಕಣಿಹೇಳುವ ಮತ್ತ ಹಚ್ಚೆಹಾಕುವ ವೃತ್ತಿಯಲ್ಲಿ ಚತುರರು. ಕಣಿಹೇಳುವವರನ್ನು ಕೊರವಂಜಿಗಳೆಂದು ಕರೆಯುವರು. ಕೊರವಂಜಿಯ ಪಾತ್ರ ಜನಪದ ಹಾಗೂ ಶಿಷ್ಟಸಾಹಿತ್ಯಗಳೆರಡರಲ್ಲೂ ಬರುವುದೆಂಬುದನ್ನು ಈಗಾಗಲೇ ಹೇಳಿಯಾಗಿದೆ. ಕೊರವಂಜಿಯರ ಉಡುಗೆ-ತೊಡುಗೆಗಳು ವೈಭವಯುತವಾಗಿರದಿದ್ದರೂ ಆಕರ್ಷಕವಾಗಿರುತ್ತವೆ. ಬಣ್ಣಬಣ್ಣದ ಸೀರೆ, ಕುಪ್ಪಸಗಳನ್ನು ಉಟ್ಟು, ತೊಟ್ಟು ತುರುಬನ್ನು ಓರಣವಾಗಿ ಓರೆಯಾಗಿ ಕಟ್ಟಿ ಕೊಂಡು, ಕಾಲಿಗೆ ಕಡವನ್ನಿಟ್ಟುಕೊಂಡು, ಕಂಕುಳಲ್ಲಿ ಬಿದಿರಿನ ಬುಟ್ಟಿಯನ್ನಿಟ್ಟು, ಕೈಯಲ್ಲಿ

ಕಣಿಕಡ್ಡಿ ಹಿಡಿದು 'ಹೇಳುವೆ ಕಣಿ, ಕಣಿ ಕೇಳಿರಮ್ಮ' ಎಂದು ಸುಶ್ರಾವ್ಯವಾಗಿ ಹೊಯ್ಯು ವೈಯಾರದಿಂದ ಮನೆಮನೆಗೆ ಬರುತ್ತಾರೆ ಕೊರವಂಜಿಗಳು.

> ಪಚ್ಚೈ ಮಲ್ಲೈ, ಪವಳಮಲ್ಲೈ, ಎಂಗಳ್ ಮಲ್ಲೈ ಅಮ್ಮೊ
> ಪರಮೇಸನ್ ವಾಟುವದುಂ, ,, ,, ,,
> ಕೊಚ್ಚೈ ಮಲ್ಲೈ ಕೊಡಗು ಮಲ್ಲೈ ,, ,, ,,
> ಕುಮರೇಸನ್ ವಾಟುವದುಂ ,, ,, ,,

ಇವರು ಮೊರ, ಕವಡೆ, ನವಿಲಗರಿಗಳನ್ನೂ ಕಣಿಹೇಳುವಾಗ ಉಪಯೋಗಿಸುತ್ತಾರೆ. ಕಣಿಹೇಳುವಾಗ ಇವರು ಬುಟ್ಟಿಯ ಮೇಲೆ ಮೊರ ಇಟ್ಟು ಅದರಲ್ಲಿ ಕಣಿಕೇಳ ಬಯಸುವವರು ಕೊಡುವ ಅಕ್ಕಿ ಎಲೆ ಅಡಕೆಗಳನ್ನಿರಿಸುವಳು. ಕವಡೆಗಳನ್ನೂ ಮುಗ್ಗುಲಲ್ಲಿಡುತ್ತಾಳೆ. ಕಣಿ ಕೇಳಬಯಸುವರ ಅಂಗೈಯನ್ನು ಮೊರದ ಮೇಲೆ ಹಿಡಿದು ಅತ್ತಿತ್ತ ಹೊರಳಿಸಿ ಕಣಿ ಕಡ್ಡಿಯಿಂದ ಅದನ್ನು ಮುಟ್ಟುತ್ತ ದೇವರ ಹೆಸರನ್ನು ಮೊದಲು ಉಚ್ಚರಿಸುವಳು. ಆಮೇಲೆ ಕಣಿ ಹೇಳಲು ಪ್ರಾರಂಭಿಸುತ್ತಾಳೆ, ಕಣಿ ಹೇಳಲು ಹೋಗುವ ಪೂರ್ವದಲ್ಲಿಯೆ ಹೇಗೋ ಬಹುಚಾಣಾಕ್ಷತನದಿಂದ, ಕಣಿಕೇಳವವರ ಬಗೆಗಿನ ಮಾಹಿತಿಯನ್ನು ಸಂಗ್ರಹಿಸಿರುತ್ತಾರೆ. ಕಣಿಕೇಳಿದವರು ಹರುಷಗೊಂಡು ಕೊಡುವ ಕಾಣಿಕೆಯನ್ನು ನಗೆಮೊಗದಿಂದ ಸ್ವೀಕರಿಸುತ್ತ ಕೊರವಂಜಿ ಮುಂದೆ ಸಾಗುತ್ತಾಳೆ. ಒಂದು ಕಾಲಕ್ಕೆ ಸಾಮಾನ್ಯರಲ್ಲದೆ, ಶ್ರೀಮಂತರೂ, ರಾಜ ಮಹಾರಾಜರೂ ಕೊರವಂಜಿಯ ಕಣಿ ಕೇಳಲು ಆತುರರಾಗಿರುತ್ತಿದ್ದರು ಮತ್ತು ಅವರ ಮಾತುಗಳನ್ನು ನಂಬುತ್ತಿದ್ದರು. ಈಗಲೂ ಸಹ ಅನೇಕ ಹಳ್ಳಿಗರು ಜ್ಯೋತಿಷಿಗಳಿಗಿಂತ ಹೆಚ್ಚಾಗಿ ಕೊರವಂಜಿಯ ಕಣಿ ಯನ್ನೇ ಸತ್ಯವೆಂದು ತಿಳಿಯುತ್ತಾರೆ. ಇವರು ಕಣಿ ಹೇಳುವುದಕ್ಕೆ ಯಾವ ಶಾಸ್ತ್ರಾ ಧಾರವೂ ಇಲ್ಲ. ಆದರೆ ತಮ್ಮ ಮಾತಿನ ಮೋಡಿಯ ಮೂಲಕವೇ ಕೇಳುಗರಲ್ಲಿ ನಂಬಿಕೆ ಹುಟ್ಟಿಸುತ್ತಾರೆ. ಇತ್ತಿತ್ತಲಾಗಿ ನಾಗರಿಕತೆಯ ಪ್ರಭಾವದಿಂದ ಇವರ ವೃತ್ತಿಗೆ ಧಕ್ಕೆಯೊದಗಿದ್ದು ಕೊರವಂಜಿಗಳು ಬರುವುದು ಕಡಿಮೆಯಾಗಿದೆ. ಇವರು ಹಾಡುವ ಪದಗಳು ಜನಪದ ಸಾಹಿತ್ಯದಲ್ಲಿ ಪ್ರತ್ಯೇಕ ವಿಭಾಗವಾಗುವಷ್ಟು ವಿಪುಲವಾಗಿದೆ. ಶರಣ ಶರಣೆಯರು ಕೊರವಂಜಿಯ ಹಾಡಿನ ಧಾಟಿಯಿಂದ ಆಕರ್ಷಿತರಾಗಿ ಕೊರವಂಜಿಯ ಹಾಡುಗಳನ್ನು ರಚಿಸಿದ್ದಾರೆ. ಅಂಥ ಹಾಡುಗಳ ಸಂಕಲನವೊಂದನ್ನು ಪೂಜ್ಯ ಡಾ॥ 'ಜಚನಿ'ಯವರು ಪ್ರಕಟಿಸಿದ್ದಾರೆ. ಶರಣ-ಶರಣೆಯರ ಇಂಥ ಹಾಡುಗಳು ಕೆಲವು ಬೆಡಗಿನ ವಚನಗಳನ್ನು ನೆನಪಿಗೆ ತರುತ್ತವೆ. ಈ ಹಾಡುಗಳೂ ಮತ್ತು ಇತರ ಕೊರವಂಜಿಯ ಹಾಡುಗಳೂ ಇನ್ನೂ ವಿಪುಲ ಸಂಖ್ಯೆಯಲ್ಲಿದ್ದು ಅವು ಬೆಳಕು ಕಾಣ ಬೇಕಾದುದು ಅವಶ್ಯ.

ಕೊರವರ ಹೆಣ್ಣುಮಕ್ಕಳಲ್ಲಿ ಕೆಲವರು ಹಚ್ಚೆಹೊಯ್ಯುವ ವೃತ್ತಿಯನ್ನು ಅವಲಂಬಿಸಿದ್ದಾರೆ. ಇವರನ್ನು ಗಾಡಿಗರು, ಕಟಬರು ಎಂದು ಕರೆಯುತ್ತಾರೆ. "ಐದೆ

ಹೊರಗೆ ಕೈಲ್ಲದವಳಿಂಗೆ ಸೌಭಾಗ್ಯದ ಹೂವಿನ ಬೊಟ್ಟೇಕೆ" ಎಂಬ ಬಸವಣ್ಣನವರ ವಚನಗಳ್ಳಿ ಹಚ್ಚೆಯ ಪಾವಿತ್ರ್ಯವನ್ನು ಸೂಚಿಸುವುದರ ಜೊತೆಗೆ ಅದರ ಪ್ರಾಚೀನತೆಯನ್ನು ಅವನ್ನೆರಡನೆಯ ಶತಮಾನದಷ್ಟು ಹಿಂದಕ್ಕೆ ಒಯ್ಯುತ್ತದೆ. ಒಂದು ಕಾಲಕ್ಕೆ ಹಚ್ಚೆ ಚುಚ್ಚಿಸಿಕೊಳ್ಳುವುದು ಸರ್ವೇಸಾಮಾನ್ಯವಾಗಿತ್ತು. "ಹಚ್ಚೆಹುಯ್ಯಿಸಿಕೊಳ್ಳದೋರು ರಾಶಿ ಕಣಕ್ಕೆ ಹೋಗಬಾರದು" ಎಂಬ ನಂಬಿಕೆ ಗ್ರಾಮೀಣ ಜನಗಳಲ್ಲಿತ್ತು. ಹಚ್ಚೆ ಮತ್ತು ಹಲ್ಲುಕಪ್ಪು ಇವೆರಡೇ ನಮ್ಮ ಹಿಂದೆ ಸ್ವರ್ಗಕ್ಕೆ ಬರುವವು ಎಂಬ ಭಾವನೆಯೂ ಅವರದಾಗಿತ್ತು. ಆದುದರಿಂದ ಹಳ್ಳಿಗಳಲ್ಲಿ ಹೆಚ್ಚಾಗಿ ಎಲ್ಲ ಸ್ತ್ರೀಯರೂ ಹಚ್ಚೆ ಚುಚ್ಚಿಸಿಕೊಳ್ಳುತ್ತಿದ್ದರು. ಗಂಡಸರು ಸಹ ಕೆಲವರು ಹಚ್ಚೆ ಹಾಕಿಸಿಕೊಳ್ಳುತ್ತಾರೆ, ಹಣೆ, ಗಲ್ಲ, ಕೆನ್ನೆ, ತೋಳು, ಮುಂಗೈ ಈ ಸ್ಥಳಗಳಲ್ಲಿ ಚೆಂದಕ್ಕಾಗಿ ಹಚ್ಚೆ ಹೊಯ್ಯಿಸಿ ಕೊಳ್ಳುತ್ತಾರೆ. ಮದುವೆಗೆ ಮೊದಲು ಹಚ್ಚೆ ಹಾಕಿಸಿಕೊಳ್ಳುವುದು ಜನಪದದಲ್ಲಿ ನಡೆದು ಬಂದಿರುವ ಒಂದು ಸಂಪ್ರದಾಯ. ಹಸೆಮಣೆ, ಜೋಗಿಜಡೆ, ಗಿಣಿಸಾಲು, ತೋಪಿನಸಾಲು, ಬೊಟ್ಟು, ಮೊದಲಾದ ಚಿತ್ರ ಚಿತ್ತಾರದ ಹಚ್ಚೆಗಳುಂಟು. ಸೋದರ ಮಾವಂದಿರೊ, ಪ್ರಿಯಕರನೊ ತಮ್ಮ ಪ್ರೀತಿಯ ಕುರುಹಾಗಿ ಹಚ್ಚೆ ಹಾಕಿಸುತ್ತಾರೆ. ಕೆಲವರು ತಮ್ಮ ಹೆಸರುಗಳ ಹಚ್ಚೆಯನ್ನೇ ಹಾಕಿಸಿಕೊಳ್ಳುವುದೂ ಉಂಟು.

ಹಚ್ಚೆಯನ್ನು ಹಲವಾರು ಸೂಜಿಗಳನ್ನು ಜೋಡಿಸಿ ಮಾಡಿಕೊಂಡ ಒಂದು ಸಾಧನದಿಂದ ಚುಚ್ಚುತ್ತಾರೆ. ಹಚ್ಚೆಯ ಗಾತ್ರ ಮತ್ತು ಅದರ ವಿನ್ಯಾಸಕ್ಕನುಗುಣವಾಗಿ ಬೇರೆ ಬೇರೆ ಸೂಜಿಗಳಿರುತ್ತವೆ. ಮೊದಲು ಚಿತ್ರವನ್ನು ಹಸಿರು ಬಣ್ಣದಿಂದ ಶರೀರ ಭಾಗದ ಮೇಲೆ ಬಿಡಿಸಿ ಆಮೇಲೆ ಸೂಜಿಯಿಂದ ಚುಚ್ಚುತ್ತಾರೆ. ಕಪ್ಪು ಅಥವಾ ಹಸಿರು ಬಣ್ಣದ ದ್ರವವನ್ನು ಸಣ್ಣ ಕುಪ್ಪಿಗಳಲ್ಲಿ ಇಟ್ಟುಕೊಂಡು ಅದರಲ್ಲಿ ಸೂಜಿಯನ್ನು ಅದ್ದಿ ಅದ್ದಿ ಹಚ್ಚೆಹೊಯ್ಯುವ ಸ್ಥಳವನ್ನು ಚುಚ್ಚುತ್ತಾರೆ. ಚುಚ್ಚುವ ಗತ್ತಿಗೆ ತಕ್ಕಂತೆ ಹಾಡುವ ಹಾಡಿನ ಧಾಟಿ ಇರುತ್ತದೆ. ಹಚ್ಚೆ ಚುಚ್ಚುವಾಗ ಹಾಡುವುದು ಸರ್ವೇ ಸಾಮಾನ್ಯ. ಹಚ್ಚೆ ಚುಚ್ಚಿಸಿಕೊಳ್ಳುವವರು ತಮಗಾಗುತ್ತಿರುವ ವೇದನೆಯನ್ನು ಅವರ ಮಧುರ ಹಾಡನ್ನು ಕೇಳುತ್ತ ಕೆಲಮಟ್ಟಿಗೆ ಮರೆಯುತ್ತಾರೆ. "ಗಂಗವ್ವ ಚುಚಿಗೊಂಡ ಹಣಚಿಬಟ್ಟು ಗರತಿತನತಂತ, ಕುಂಕುಮತಂತ" ಇತ್ಯಾದಿ ಮಂಗಲ ಹಾಡುಗಳನ್ನು ಹಾಡುತ್ತಾರೆ. ಒಳ್ಳೆಯ ಪತಿ, ಪುತ್ರ ಸಕಲ ಸೌಭಾಗ್ಯ ಸನ್ಮಂಗಲುಗಳು ಹಚ್ಚೆಚುಚ್ಚಿಸಿ ಕೊಳ್ಳುವವಳಿಗೆ ಉಂಟಾಗಲೆಂಬ ಆಶಯದ ಪದಗಳನ್ನು ಹಾಡುತ್ತಾರೆ. ಸಣ್ಣಮಕ್ಕಳಿಗೆ ಹಚ್ಚೆಚುಚ್ಚುವಾಗ ಹಾಸ್ಯದ ಹಾಡುಗಳನ್ನು ಹೇಳುವದು ಸಾಮಾನ್ಯ. "ಕಡ್ಲೆತಿನ್ನು ಕುರುಕುರು ಹೂಸಬಿಡು ಟುರುಟುರು" ಈ ಬಗೆಯ ಹಾಸ್ಯದ ಹಾಡುಗಳಿಂದ ನಗಿಸಿ ಮಕ್ಕಳು ನೋವು ಮರೆಯುವಂತೆ ಮಾಡುತ್ತಾರೆ. ಕೆಲವೆಡೆ ಗೊಂದಲಿಗರು, ಕಿಳ್ಳಿ ಕೇತರು ಹಚ್ಚೆ ಚುಚ್ಚುವರಾದರೂ ಕೊರವರು ಅದನ್ನು ಒಂದು ವೃತ್ತಿಯನ್ನಾಗಿ, ಒಂದು ಕಲೆಯನ್ನಾಗಿ ಬೆಳೆಸಿಕೊಂಡು ಬಂದಿದ್ದಾರೆ. ಜನಪದರ ಕಲೆಗಳಲ್ಲಿ ಒಂದಾದ

ಹಚ್ಚೆ ಚುಚ್ಚುವುದನ್ನು ಅವರು ಬಿಡಿಸುವ ವಿವಿಧಬಗೆಯ ಚಿತ್ರ ವಿನ್ಯಾಸಗಳನ್ನು ಸಂಗ್ರಹಿಸಿ ಕಲೆಯ ದೃಷ್ಟಿಯಿಂದ ಅಭ್ಯಸಿಸಬೇಕಾದುದು ಅವಶ್ಯ. ಹಚ್ಚೆಹೊಯ್ಯು ವವರ ಹಾಡುಗಳಿಗೆ ವಿಶಿಷ್ಟ ಬಗೆಯ ಧಾಟಿಯಿದೆ. ಅವು ಸಾಮಾನ್ಯವಾಗಿ ತ್ರಿಪದಿಯ ಛಂದದಲ್ಲಿರುತ್ತವೆ. ಆ ಹಾಡುಗಳಲ್ಲಿ ಕೆಲವನ್ನು ಕೇವಲ ಹಚ್ಚೆ ಹಾಕುವವರು ಮಾತ್ರ ಹಾಡಿದರೆ ಬೇರೆಯವರು ಹಾಡುವ ಮತ್ತೆ ಕೆಲವು ಹಾಡುಗಳೂ ಉಂಟು. ಅಂಥ ಕೆಲವು ಹಾಡುಗಳ ಸಂಗ್ರಹ ಮಾಡಿದವರಿದ್ದಾರೆ. (ಪದವವೇ ನಮ್ಮ ವಿದ್ಯೆಯಲ್ಲಿ-ಬೆಂಗಳೂರು ವಿಶ್ವವಿದ್ಯಾಲಯದ ಪ್ರಕಟನೆ). ಇನ್ನೂ ಸಂಗ್ರಹಿಸಬೇಕಾದ ಹಾಡುಗಳು ಅನೇಕ ಇವೆ. ಆ ಕಾರ್ಯ ನಡೆಯಬೇಕಾಗಿದೆ.

ಪಾತ್ರದ ಕೊರವರು ಎಂಬ ಇನ್ನೊಂದು ಚಿಕ್ಕಪಂಗಡದ ಹೆಂಗಸರು ಸೂಳೆಗಾರಿಕೆ ಯನ್ನು ಜೀವನಾಧಾರ ಮಾಡಿಕೊಂಡಿದ್ದಾರೆ. ಇವರು ಈ ವೃತ್ತಿಗಾಗಿ ಹೆಣ್ಣುಮಕ್ಕಳ ಅಪಹರಣಮಾಡುತ್ತಾರೆ ಇಲ್ಲವೆ ತಮ್ಮ ಮಕ್ಕಳನ್ನು ಮಾರುತ್ತಾರೆಂದು ತಿಳಿದು ಬರುತ್ತದೆ. ತಮಿಳು ನಾಡಿನ ಕೆಲವೆಡೆ ಇವರು ನೃತ್ಯಮಾಡುವುದರಲ್ಲಿ ಪ್ರವೀಣ ರಾಗಿದ್ದು ಉತ್ತಮ ಜೀವನ ಸಾಗಿಸುತ್ತಿದ್ದಾರಂತೆ. ಇವರನ್ನು ಪಾತ್ರದ ಕೊರವಿಗಳೆಂದೂ ಕರೆಯುತ್ತಾರೆ.

**ಆಡಳಿತ :** ಊರುಗಳಲ್ಲಿ ವಾಸಿಸುವ ಕೊರವರಲ್ಲಿ ಸೆಟ್ಟಿ ಅಥವಾ ಯಜಮಾನನು ಜಗಳಗಳನ್ನು ಬಗೆಹರಿಸುತ್ತಾನೆ. ಮದುವೆ ಮತ್ತು ಇತರ ಸಮಾರಂಭಗಳಲ್ಲಿ ಇವನ ಉಪಸ್ಥಿತಿ ಅಗತ್ಯ. ಅಲೆಮಾರಿ ಕೊರಚರು ಹಲವಾರು ಪಂಗಡಗಳಲ್ಲಿ ಪಿಂಗಡಣೆ ಗೊಂಡಿರುತ್ತಾರೆ. ಪ್ರತಿ ಪಂಗಡಕ್ಕೆ ಒಬ್ಬ ನಾಯಕನಿದ್ದು ನಾಯಕತ್ವ ವಂಶಪರಂಪರೆ ಯಾಗಿ ಬರದೆ ಯೋಗ್ಯತೆಯನ್ನವಲಂಬಿಸಿ ಬರುತ್ತದೆ. ಪಂಗಡದಲ್ಲಿ ಅವನಿಗೆ ಹೆಚ್ಚಿನ ಮನ್ನಣೆ. ಎಲ್ಲ ಜಗಳಗಳನ್ನು ಬಗೆಹರಿಸುವವನೂ ಅವನೆ. ತಮ್ಮ ಲೂಟಿಯ ಅಥವಾ ಕಳವಿನ ಪ್ರಾಪ್ತಿಯನ್ನು ಹಂಚಿಕೊಳ್ಳುವಾಗ ನಾಯಕನಿಗೆ ಹೆಚ್ಚಿನಪಾಲು ಸಿಕ್ಕುತ್ತದೆ. ಇದಕ್ಕೆ ಪ್ರತಿಯಾಗಿ ಅವನು ಜೇಲಿಗೆ ಹೋದ ಪಂಗಡದ ಸದಸ್ಯರನ್ನು ಬಿಡುಗಡೆ ಮಾಡಿಸಲು ಪ್ರಯತ್ನಿಸುವದರ ಜೊತೆಗೆ ಅವರ ಸಂಸಾರದ ರಕ್ಷಣೆಯ ವ್ಯವಸ್ಥೆಯನ್ನೂ ಮಾಡಬೇಕಾಗುತ್ತದೆ. ಆಗಾಗ ಗುಂಪುಗಳ ಸದಸ್ಯರು ಒಂದೆಡೆ ಸೇರಿ ನಾಯಕನ ನೇತೃತ್ವದಲ್ಲಿ ತಮ್ಮ ಜಗಳಗಳನ್ನು ಬಗೆಹರಿಸಿಕೊಳ್ಳುತ್ತಾರೆ. ಪಂಗಡದ ಇಬ್ಬರು ವ್ಯಕ್ತಿಗಳಲ್ಲಿ ತಂಟೆತಲೆದೋರಿದಾಗ ತೊಂದರೆಗೊಳಗಾದವನು ಕುಲದ ಮುಖಂಡರ ಸಭೆಗೆ ಅಹವಾಲು ಸಲ್ಲಿಸುತ್ತಾನೆ. ಜಗಳಕ್ಕೆ ಸಂಬಧಪಟ್ಟ ಇಬ್ಬರೂ ಸಭೆಯ ನಿರ್ಣಯ ವನ್ನು ಒಪ್ಪುತ್ತೇವೆ ಎಂಬುದರ ಸಂಕೇತವಾಗಿ ಕೈಕೈಕೂಡಿಸುತ್ತಾರೆ ಮತ್ತು ತಲಾ ಒಂದೊಂದು ರೂಪಾಯಿ ಮದ್ಯ ವಿತರಣೆಗಾಗಿ ಕೊಡುತ್ತಾರೆ. ಸಭೆ ಒಂದು ನಿರ್ಣಯಕ್ಕೆ ಬರದೇ ಇದ್ದಾಗ ಮತ್ತೊಂದು ಸಲ ಸೇರುವುದಾಗಿ ಘೋಷಿಸಲಾಗುತ್ತದೆ. ಎರಡನೆಯ ಸಲ ಸಭೆ ಸೇರಿದಾಗ ಜಗಳಮಾಡಿದವರಲ್ಲಿ ಪ್ರತಿಯೊಬ್ಬನೂ ಮತ್ತೆ

ಒಂದೊಂದು ರೂಪಾಯಿಕೊಡಬೇಕು. ಆಗಲೂ ನಿರ್ಣಯ ಸಾಧ್ಯವಾಗದಿದ್ದರೆ ಮೂರನೆಯ ಸಲ ಸಭೆ ಸೇರುತ್ತದೆ. ಆಗ ತಲಾ ಮೂರೂವರೆ ರೂಪಾಯಿ ಕೊಡ ಬೇಕಾಗುತ್ತದೆ. ಇದೇ ಕೊನೆಯ ಸಭೆ. ಸಭೆಗೆ ಹಾಜರಾಗಲು ತಪ್ಪಿದವನು ಕುಲದ ಸದಸ್ಯತ್ವ ಕಳೆದುಕೊಳ್ಳುತ್ತಾನೆ. ಮೂರನೆಯ ಸಭೆಯಲ್ಲಿಯೂ ಒಂದು ನಿರ್ಣಯ ಸಾಧ್ಯವಾಗದಿದ್ದಾಗ 'ದಿವ್ಯ'ಗಳ ಸಹಾಯದಿಂದ ನಿರ್ಣಯಕ್ಕೆ ಬರುತ್ತಾರೆ. ಸಮತೂಕದ ಎರಡು ಗಡಿಗೆಗಳಲ್ಲಿ ಸಮಪ್ರಮಾಣದ ಅಕ್ಕಿ ಮತ್ತು ನೀರು ಹಾಕಿ ಅಷ್ಟೇ ಕಟ್ಟಿಗೆಯಿಂದ ಎರಡಕ್ಕೂ ಉರಿ ಮಾಡುತ್ತಾರೆ. ಯಾರ ಗಡಿಗೆಯಲ್ಲಿ ಅಕ್ಕಿ ಮೊದಲು ಕುದಿಯ ಲಾರಂಭಿಸುವುದೊ ಅವನಂತೆ ನ್ಯಾಯ ನಿರ್ಣಯವಾಗುತ್ತದೆ. ಸೋತವನು ಗೆದ್ದವನಿಗೆ ನ್ಯಾಯಕ್ಕಾದ ಎಲ್ಲ ವೆಚ್ಚವನ್ನೂ ಕೊಡಬೇಕಾಗುತ್ತದೆ. ಎರಡೂ ಪಾತ್ರೆಗಳಲ್ಲಿ ಒಮ್ಮೆಲೇ ಅಕ್ಕಿ ಕುದಿಯತೊಡಗಿದರೆ ಮತ್ತೆ ಬೇರೆ ವಿಧಾನಗಳನ್ನು ಅನುಸರಿಸುತ್ತಾರೆ. ಹಣದ ಬಗೆಗೆ ತಂಟೆಯುಂಟಾಗಿದ್ದರೆ ಅಷ್ಟು ಹಣವನ್ನು ಒಂದು ಪಕ್ಷದವರು ತರುತ್ತಾರೆ. ಅದನ್ನು ದೇವತೆಯ ಮೂರ್ತಿಯ ಪಕ್ಕದಲ್ಲಿ ಇಡಲಾಗುತ್ತದೆ. ಹಣವು ತನ್ನದೆಂದು ವಾದಿಸುವವನು ಅದನ್ನು ತೆಗೆದುಕೊಳ್ಳುವಂತೆ ಕೇಳಲಾಗುತ್ತದೆ. ಹಣ ತೆಗೆದು ಕೊಂಡವನಿಗೆ ಅಥವಾ ಅವನ ಕುಟುಂಬದ ಸದಸ್ಯರಿಗೆ ನಿರ್ದಿಷ್ಟ ದಿನಗಳಲ್ಲಿ ಯಾವ ಕೆಡಕೂ ಸಂಭವಿಸದಿದ್ದರೆ ಆ ಹಣ ಆತನದೆಂದೇ ತಿಳಿಯಲಾಗುತ್ತದೆ. ಹೀಗೆ ಜಗಳ ಗಳನ್ನು ಬಗೆಹರಿಸುವ ಇನ್ನೂ ಅನೇಕ ವಿಧಾನಗಳು ಇವರಲ್ಲಿವೆ. ಉದಾ : ಆಣೆ ಮಾಡುವುದು ಇತ್ಯಾದಿ.

**ವಾರಸುದಾರಿಕೆ ಮತ್ತು ದತ್ತಕ ಕ್ರಮ :** ವಾರಸುದಾರಕೆಗೆ ಸಂಬಂಧಿಸಿ ದಂತೆ ಸಾಮಾನ್ಯ ಹಿಂದೂ ಕಾಯಿದೆಗಳೇ ಇವರಿಗೂ ಅನ್ವಯಿಸುತ್ತದೆ. ಅಲೆಮಾರಿ ಗಳಿಗೆ ಹೆಚ್ಚಿನ ಆಸ್ತಿ ಇರುವುದಿಲ್ಲ. ಆದುದರಿಂದ ವಾರಸುದಾರಿಕೆಯ ಪ್ರಶ್ನೆ ಉದ್ಭವಿಸುವುದಿಲ್ಲ. ಆದರೂ ವಸ್ತುರೂಪದ ಆಸ್ತಿಯ ಬಗೆಗೆ ಜಗಳ ಉದ್ಭವಿಸಿದಾಗ ತಮ್ಮ ತಮ್ಮಲ್ಲಿಯೇ ಬಗೆಹರಿಸಿಕೊಳ್ಳುತ್ತಾರೆ. ತಂದೆಯ ಇಚ್ಛೆಗೆ ವಿರುದ್ಧವಾಗಿ ಮಕ್ಕಳು ಪಾಲುಬೇಡಲು ಬರುವುದಿಲ್ಲ. ಸಭೆಯಲ್ಲಿ ತೆಗೆದುಕೊಂಡ ನಿರ್ಣಯಗಳ ವಿರುದ್ಧ ನಡೆಯುವವರಿಗೆ ಸಾಮಾಜಿಕ ಬಹಿಷ್ಕಾರದ ಬೆದರಿಕೆ ಇರುತ್ತದೆ. ಮಕ್ಕಳಿಲ್ಲ ದವನು ಮುಖ್ಯವಾಗಿ ತನ್ನ ಸಹೋದರನ ಮಗನನ್ನು ದತ್ತು ತೆಗೆದುಕೊಳ್ಳಬಹುದು. ತನ್ನ ಸಹೋದರನನ್ನೇ ದತ್ತು ತೆಗೆದುಕೊಳ್ಳಲು ಬರುವುದಿಲ್ಲ. ದತ್ತಕ ಪುತ್ರನ ಹಳೆಯ ಉಡದಾರ ತೆಗೆದು ಕುಲಸ್ಥರ ಎದುರಿನಲ್ಲಿ ಹೊಸ ಉಡದಾರ ಹಾಕಿದರೆ ದತ್ತಕ ಕಾರ್ಯ ಮುಗಿಯಿತು. ಬಳಿಕ ಕುಲಸ್ಥರಿಗೆಲ್ಲ ಊಟ ಮಾಡಿಸಲಾಗುತ್ತದೆ. ಇದನ್ನು ಬಿಟ್ಟು ಬೇರಾವ ಕಾರ್ಯಗಳೂ ನಡೆಯುವುದಿಲ್ಲ.

ಕೊರವರು, ಒಕ್ಕಲಿಗ, ಬಣಜಿಗ, ಕುರುಬ ಮೊದಲಾದ ಮೇಲು ಜಾತಿಯ ಗಂಡು ಹೆಣ್ಣುಗಳನ್ನು ತಮ್ಮ ಕುಲಕ್ಕೆ ಸೇರಿಸಿಕೊಳ್ಳುತ್ತಾರೆ. ಆಗ ಒಂದು ಸಮಾರಂಭ

ನಡೆಯುತ್ತದೆ. ಪಂಗಡಕ್ಕೆ ಸೇರಬಯಸುವ ವ್ಯಕ್ತಿಗೆ ಸ್ನಾನ ಮಾಡಿಸಿ ಅವನ ನಾಲಗೆಯನ್ನು ಕಾಸಿದ ಬಂಗಾರದ ಕಡ್ಡಿಯಿಂದ ಅಥವಾ ಬೇವಿನ ಕಡ್ಡಿಯಿಂದ ಸುಡುತ್ತಾರೆ. ಕೆಲವುಸಲ ಅವನು ಸ್ವಲ್ಪ ಅರಿಷಿಣ ಹಾಗೂ ಸೀಗೆಕಾಯಿಪುಡಿ ನುಂಗಬೇಕಾಗುತ್ತದೆ. ದೇವಾಲಯದಲ್ಲಿ ಅವನು ತೀರ್ಥಪ್ರಸಾದ ಸ್ವೀಕರಿಸಿದ ಮೇಲೆ ಮುಖಂಡನು, ಅವನು ತಮ್ಮ ಕುಲದಲ್ಲಿ ಸೇರಿದನೆಂದು ಪ್ರಕಟಿಸುತ್ತಾನೆ. ಹೊಸದಾಗಿ ಕುಲಕ್ಕೆ ಸೇರಿದವನು ಕುಲಸ್ಥರಿಗೆಲ್ಲ ಊಟ ಹಾಕಿಸಿ ಅವರ ಜೊತೆಯಲ್ಲಿಯೇ ಊಟ ಮಾಡುತ್ತಾನೆ. ಸಾಯಂಕಾಲ ತನ್ನ ಖರ್ಚಿನಿಂದ ಎಲ್ಲರಿಗೂ ಮದ್ಯ ಕುಡಿಸುತ್ತಾನೆ.

**ಆಹಾರ, ವೇಷಭೂಷಣ, ಭಾಷೆ:** ಕೊರವರು ಕುರಿ, ಆಡು, ಕೋಳಿ, ಹಂದಿಗಳ ಮಾಂಸ ತಿನ್ನುತ್ತಾರೆ. ಎಲ್ಲ ಬಗೆಯ ಮೀನುಗಳ ಸೇವನೆಯೂ ಇದೆ. ಚಿಗರೆ, ಮೊಲಗಳ ಬೇಟೆಯಾಡಿ ಅವುಗಳ ಮಾಂಸವನ್ನೂ ಆಹಾರಕ್ಕೆ ಬಳಸುವರು. ಆಕಳಿನ ಮಾಂಸವನ್ನು ತಿನ್ನುವುದಿಲ್ಲ. ಮಂಗಗಳನ್ನು ಕೊಲ್ಲುವುದಿಲ್ಲ. ಮದ್ಯಸೇವನೆ ಇವರಲ್ಲಿ ಸರ್ವೇಸಾಮಾನ್ಯ. ಈ ಮಾಂಸಾಹಾರವಲ್ಲದೆ ಸಸ್ಯಾಹಾರವೂ ಇವರ ಊಟದಲ್ಲಿ ಬರುತ್ತದೆ. ಗಂಡಸರು ಚೊಣ್ಣ, ರುಮಾಲು ಹಾಕಿಕೊಂಡು ಮೈಮೇಲೆ ಕಂಬಳಿ ಇಲ್ಲವೆ ಶ್ಯಾಲು ಹೊದೆಯುವರು. ನಡುಕಟ್ಟು ಹಾಕಿರುತ್ತಾರೆ. ಕೆಲವರು ಕೋಟು ಹಾಕುವುದೂ ಉಂಟು. ಕಿವಿಯಲ್ಲಿ ಮೋಟಿ ಮುರುವು ಧರಿಸುತ್ತಾರೆ. ಒಂದು ಕೈಯಲ್ಲಿ ಬೆಳ್ಳಿ ಅಥವಾ ತಾಮ್ರದ ಬಳೆ ಇರುತ್ತದೆ. ಊರುಗಳಲ್ಲಿ ವಾಸಿಸುವ ಸನಾದಿ ಕೊರವರು ಮೈತುಂಬ ಬಟ್ಟೆ ಧರಿಸುವರು. ಸ್ತ್ರೀಯರು (ಸಂಚಾರಿ ಕೊರವ) ಹಚ್ಚೆ ಚುಚ್ಚಿಸಿಕೊಳ್ಳುತ್ತಾರೆ. ತಾಯಿಯಾಗುವ ಪೂರ್ವದಲ್ಲಿ ಅವರು ಹಚ್ಚೆ ಹಾಕಿಸಿಕೊಳ್ಳುವುದು ಸಂಪ್ರದಾಯ. ಮೊದಲಸಲ ಹಚ್ಚೆ ಹಾಕಿಸಿಕೊಳ್ಳುವಾಗ ಸೋದರತ್ತೆಯನ್ನು ಆಮಂತ್ರಿಸುತ್ತಾರೆ. ಸಮಾರಂಭವೇರ್ಪಡಿಸಿ ಅವಳಿಗೆ ಊಟ ಮಾಡಿಸಿ ಸೀರೆ ಕೊಡುತ್ತಾರೆ. ಇವರು ಸೀರೆ ಉಡುತ್ತಾರಾದರೂ ಕುಪ್ಪಸ ತೊಟ್ಟುಕೊಳ್ಳುವುದಿಲ್ಲ. ಸನಾದಿ ಕೊರಚ ಸ್ತ್ರೀಯರು ಹಾಗೂ ಊರ ಕೊರವರು ಕುಪ್ಪಸ ತೊಡುತ್ತಾರೆ. ಸಂಚಾರೀ ಕೊರಚ ಸ್ತ್ರೀಯರು ಗಾಜಿನ ಮಣಿಗಳಿಂದ ಮಾಡಿದ ಸರಗಳನ್ನೂ ಧರಿಸುತ್ತಾರೆ. ಬಳೆ ಕುಂಕುಮಗಳನ್ನೂ ಬಳಸುವರು.

ಕೊರವರು ಆಯಾ ಪ್ರದೇಶಗಳಿಗನುಗುಣವಾಗಿ ಕನ್ನಡವನ್ನೊ, ತೆಲುಗನ್ನೊ, ತಮಿಳನ್ನೊ ಬಲ್ಲವರಾಗಿರುತ್ತಾರೆ, ತಮ್ಮ ತಮ್ಮಲ್ಲಿಯೇ ಮಾತಾಡುವಾಗ ಬೇರೆ ಬೇರೆ ಭಾಷೆಗಳಿಂದ ಆಯ್ದುಕೊಂಡ ಶಬ್ದಗಳ ಅಪಭ್ರಂಶಗಳಿಂದ ಕೂಡಿದ ಭಾಷೆಯನ್ನು ಬಳಸುತ್ತಾರೆ.

**ಶವ ಸಂಸ್ಕಾರ:** ಸತ್ತವರನ್ನು ಹುಗಿಯುವ ಪದ್ಧತಿ ಕೊರವರಲ್ಲಿದೆ. ಸತ್ತ ಕೂಡಲೇ ಶವದ ಸ್ನಾನ ಮಾಡಿಸಿ ಗಂಡಸಾಗಿದ್ದರೆ ಹಣೆಗೆ ನಾಮ, ಹೆಂಗಸಾಗಿದ್ದರೆ ಕುಂಕುಮ ಹಚ್ಚುತ್ತಾರೆ. ಶವವನ್ನು ಹೊಸ ಬಟ್ಟೆಯಲ್ಲಿ ಸುತ್ತಿ ಬಿದಿರಿನ ಚಟ್ಟದಮೇಲೆ ಸ್ಮಶಾನಕ್ಕ ಒಯ್ಯುವರು ಅದನ್ನು ಹೊರುವವರು ಸಾಮಾನ್ಯವಾಗಿ ಸತ್ತವನ ಸಗೋತ್ರ ಸಂಬಂಧಿಗಳಾಗಿರುತ್ತಾರೆ. ಅರ್ಧ ಹಾದಿ ನಡೆದ ಮೇಲೆ ಸಿದಿಗೆಯನ್ನು ಇಳಿಸುವರು. ಮುಖ್ಯ ದುಃಖಿಯು ಬಲದಿಂದ ಎಡಕ್ಕೆ ಶವಕ್ಕೆ ಪ್ರದಕ್ಷಿಣೆ ಹಾಕುತ್ತಾನೆ. ಹೆಣದ ತಲೆಯ ಬಳಿ ನಿಂತು ಹೊಸ ಗಡಿಗೆ ಒಡೆದು ಸಿದಿಗೆಯ ಸುತ್ತಲೂ ಅನ್ನವನ್ನು ಸೂರಾಡುವನು. ಬಳಿಕ ಹೆಣ ಹೊರುವವರು ಬದಿಗಳನ್ನು ಬದಲಿಸಿ ನೇರವಾಗಿ ಸ್ಮಶಾನಕ್ಕೆ ಬರುವರು. ಹೆಣವನ್ನು ದಕ್ಷಿಣಕ್ಕೆ ತಲೆಮಾಡಿ ಕುಣಿಯಲ್ಲಿಟ್ಟು ಬಳಿಕ ಮುಖ್ಯ ದುಃಖಿತನು ಮೊದಲು ಒಂದು ಹಿಡಿ ಮಣ್ಣು ಹಾಕುತ್ತಾನೆ. ಆಮೇಲೆ ಉಳಿದವರು ಮಣ್ಣು ಹಾಕುತ್ತಾರೆ, ಸಮಾಧಿ ಮುಚ್ಚಿದ ನಂತರ ಮುಖ್ಯ ದುಃಖಿತನು ಉರಿಯುವ ಕಟ್ಟಿಗೆ ಹಿಡಿದು ಕುಣಿಯ ಸುತ್ತಲೂ ಸುತ್ತುತ್ತಾನೆ. ಆಮೇಲೆ ಅದನ್ನು ಹೆಣದ ತಲೆಯಿದ್ದ ಭಾಗದಲ್ಲಿ ಆರಿಸುವನು. ಸಮಾಧಿಯ ಮೇಲೆ ತುಸು ಚಿಲ್ಲರೆ ಹಣ ಇಡಲಾಗುವುದು. ಅದನ್ನು ಹೊಲೆಯನು ತೆಗೆದುಕೊಳ್ಳುತ್ತಾನೆ. ಶವ ಸಂಸ್ಕಾರಾ ನಂತರ ಎಲ್ಲರೂ ಹಳ್ಳ ಅಥವಾ ಬಾವಿಯಲ್ಲಿ ಸ್ನಾನಮಾಡಿ ಸತ್ತವನ ಮನೆಗೆ ಬಂದು ವ್ಯಕ್ತಿ ಸತ್ತ ಜಾಗದಲ್ಲಿಟ್ಟ ಉರಿಯುವ ದೀಪವನ್ನು ನೋಡಿ ತಮ್ಮ ತಮ್ಮ ಮನೆಗಳಿಗೆ ತೆರಳುವರು. ಮೂರನೆಯ ಮತ್ತು ಐದನೆಯ ದಿನ ಮುಖ್ಯ ದುಃಖಿತನು ತನ್ನ ಕೆಲವು ಬಂಧುಗಳೊಡಗೂಡಿ ಸಮಾಧಿಯ ಬಳಿ ಹೋಗಿ ಅನ್ನ ಮತ್ತು ನೀರು ಅರ್ಪಿಸುತ್ತಾನೆ. ಸತ್ತವನ ಆತ್ಮ ಕಾಗೆಗಳಲ್ಲಿರುತ್ತದೆಂದೂ ಕಾರಣ ಆ ಅನ್ನವನ್ನು ಕಾಗೆಗಳು ತಿನ್ನ ಬೇಕೆಂದೂ ಅವರ ನಂಬಿಕೆ, ಮೂರನೆಯ ಇಲ್ಲವೆ ಐದನೆಯ ದಿನ ಸೂತಕ ಮುಗಿಯು ತ್ತದೆ. ಅಂದು ಎಲ್ಲ ಸಂಬಂಧಿಗಳು ಸ್ನಾನಮಾಡಿ ಸೂತಕ ಕಳೆದುಕೊಳ್ಳುತ್ತಾರೆ. ತಿಂಗಳ ಕೊನೆಗೆ ಅಥವಾ ಮೂರು ತಿಂಗಳೊಳಗೆ ಯಾವುದಾದರೊಂದು ದಿನ ಸತ್ತವನನ್ನು ದೈವದಲ್ಲಿ ಕೂಡ್ರಿಸಿಕೊಳ್ಳುವ ಕಾರ್ಯ ನಡೆಯುತ್ತದೆ. ಮೃತನ ಬಂಧುಗಳಿಗೂ ಎಲ್ಲ ಕುಲಸ್ಥರಿಗೂ ಅಂದು ಭೋಜನವಿರುತ್ತದೆ. ಸತ್ತವನ ಹೆಸರಿನಲ್ಲಿ ಒಂದು ಕಲಶ ವಿಟ್ಟು ಪೂಜೆ ಸಲ್ಲಿಸಿ ಎಡೆ ಹಿಡಿಯುತ್ತಾರೆ. ಕೊರವರು ಶ್ರಾದ್ಧಮಾಡುವುದಿಲ್ಲ. ದಸರಾ ಅಥವಾ ಮಹಾಲಯ ಅಮಾವಾಸ್ಯೆಯ ದಿನ ಗುಡಿಸಲಿನ ಮಧ್ಯ ಒಂದು ಕಲಶವಿಟ್ಟು ಪೂಜಿಸಿ, ಹೊಸ ಬಟ್ಟೆ ಇಟ್ಟು, ಧೂಪಹಾಕಿ, ದೀಪ ಬೆಳಗಿ, ತೆಂಗು ಒಡೆದು ಹಿರಿಯರ ಹಬ್ಬ ಮಾಡುತ್ತಾರೆ.

**ಸಾಮಾಜಿಕ ಸ್ಥಿತಿ:** ಸಮಾಜದ ಕುಲಶ್ರೇಣಿಯಲ್ಲಿ ಇವರ ಸ್ಥಿತಿ ಹೇಳಿ ಕೊಳ್ಳುವಂತಹುದಿಲ್ಲ. ನಾಯಿಂದ, ಅಗಸ, ಮೇದಾರ ಮೊದಲಾದವರಿಗಿರುವಂತಹ ಸ್ಥಾನಮಾನಗಳು ಊರಲ್ಲಿ ವಾಸಿಸುವ ಕೊರವರಿಗೆ ಇರುವವಾದರೂ, ಸಂಚಾರಿ ಕೊರ

ವರಿಗೆ ಆ ಭಾಗ್ಯವೂ ಇಲ್ಲ. ಹಳ್ಳಿಗಳಲ್ಲಿ ಕೊರವರು ಬ್ರಾಹ್ಮಣರ ಕೇರಿಗಳನ್ನು ಬಿಟ್ಟು ಉಳಿದ ಕುಲದವರು ವಾಸಿಸುವ ಸ್ಥಳಗಳಲ್ಲೇ ವಾಸಿಸುತ್ತಾರೆ. ಬಿದಿರಿನ ಕೆಲಸ ಮಾಡುವ ಮೇದರು ಇವರನ್ನು ತಮಗಿಂತ ಕಡಿಮೆಯೆಂದು ಭಾವಿಸುತ್ತಾರೆ. ಕೊರವರ ಮನೆಯಲ್ಲಿ ಹೊಲೆಯರು, ಮಾದಿಗರು ಮಾತ್ರ ಊಟ ಮಾಡುತ್ತಾರೆ. ಮೇಲುಕುಲದವರ ದೇವಾಲಯಗಳಲ್ಲಿ ಇವರಿಗೆ ಪ್ರವೇಶವಿಲ್ಲ. ಆದರೆ ಸರಕಾರ ಇತ್ತೀಚೆ ಇಂಥ ಹಿಂದುಳಿದ ಜನಾಂಗಗಳ ಬಗ್ಗೆ ವಹಿಸಿರುವ ಆಸ್ಥೆ, ಅವರ ಸುಧಾರಣೆಗೆ ಕೈಕೊಂಡ ಯೋಜನೆಗಳ ಫಲವಾಗಿ ಈಗ ಪರಿಸ್ಥಿತಿ ಸುಧಾರಿಸುತ್ತಿದೆ.

ಒಟ್ಟಿನಲ್ಲಿ ಕೊರಚರು ಅಥವಾ ಕೊರವರು ದಕ್ಷಿಣಭಾರತದ ಮೂಲನಿವಾಸಿಗಳೆಂಬುದು ನಿಜ. ತಮಿಳುನಾಡಿನ ಕಳ್ಳಕೊರವರೇ ಬೇರೆ ಬೇರೆ ಪ್ರಾಂತಗಳಲ್ಲಿ ಹಬ್ಬಿ ಬೇರೆ ಬೇರೆ ಹೆಸರಿನಿಂದ ಜೀವಿಸುತ್ತಿರುವರೆಂದು ವಿದ್ವಾಂಸರ ಮತ. ಭಾರತದ ಎಲ್ಲ ಕಡೆಗೂ ಇವರು ಕಂಡುಬರುತ್ತಾರೆ. ಹೊಟ್ಟೆಹೊರೆಯಲು ಪ್ರಾಮಾಣಿಕ ಉದ್ಯೋಗ ದೊರೆಯದೆ, ಕಳ್ಳತನವನ್ನೇ ಸುವ್ಯವಸ್ಥಿತ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದ್ದಾರೆ, ಜಿಪ್ಸಿಗಳನ್ನು ಹೋಲುವ ಸಂಚಾರಿ ಕೊರವರು ಒಂದೆಡೆ ನೆಲೆಸಿಲ್ಲದೆ ಹಳ್ಳಿಯಿಂದ ಹಳ್ಳಿಗೆ ತಿರುಗುತ್ತಾರೆ. ಪೋಲೀಸ ರಿಕಾರ್ಡುಗಳಲ್ಲಿ ಇವರನ್ನು ಅಪರಾಧಿ ಜನಾಂಗವೆಂದು ನಮೂದಿಸಲಾಗಿದೆ. ಇವರದು ಸುವ್ಯವಸ್ಥಿತ ಒಕ್ಕಟ್ಟಿನ ಜನಾಂಗ. ಕಳವು ಮಾಡುವಾಗ ಇವರು ಕೊಲೆ ಮಾಡದಿರುವುದು ಒಂದು ವಿಶೇಷ. ಪೋಲಿಸರಿಗೂ ಚಳ್ಳಕಾಯಿ ತಿನ್ನಿಸುವಷ್ಟು ಬುದ್ಧಿವಂತರಿವರು. ಈಗೀಗ ಒಂದೆಡೆ ನೆಲಸಲಾರಂಭಿಸಿದ್ದಾರೆ, ಸರಕಾರದ ಬಿಗಿಕ್ರಮದಿಂದಾಗಿ.

## ಗ್ರಂಥಋಣ


೧. The Mysore Tribes and Castes Vol. III
H. V. Nanjundayya and
Rao Bahadur L. K. Anantha Krishna Iyer

೨. Castes and Tribes of Southern India Vol. III
Edgar Thurston.

೩. Mysore Gazetteer Vol. I : Rice.

೪. Mysore Census Report 1901.

೫. Hindu Costoms and Manners Part I : Abbe Dubois.

೬. ಕೊರವಂಜಿ ಸಾಹಿತ್ಯ : ಡಾ. ಜ. ಚ. ನಿ. (ಸಂಪಾದಿತ).

೭. ಶ್ರೀಕೃಷ್ಣ ಪಾರಿಜಾತ : ಸಂಪಾದಕ, ಕುಲಕರ್ಣಿ.

# ಅಧ್ಯಕ್ಷರ ಭಾಷಣ

**ಶಾಂತರಸ**

ಕನ್ನಡಿಗರ ಸಮಾಜ ತನ್ನದೇ ಆದ ವಿಶಿಷ್ಟ ಗುಣಗಳುಳ್ಳದು: ಅದರಲ್ಲಿಯೂ ಉತ್ತರಕರ್ನಾಟಕದವರ ಬದುಕು ಇನ್ನಿತರ ಕರ್ನಾಟಕ ಭಾಗದವರಿಗಿಂತ ಅನೇಕ ವಿಷಯ ಗಳಲ್ಲಿ ವಿಭಿನ್ನತೆ ಉಳ್ಳದು, ವೈಶಿಷ್ಟ್ಯವುಳದು. ಈ ಭಾಗದ ವಿವಿಧ ವೃತ್ತಿಕಾರರು ಇಲ್ಲಿಯ ಸಮಾಜ ರಚನೆಯ ಅಂಗಗಳಾಗಿದ್ದಾರೆ. ಕಾಯಕದ ದೃಷ್ಟಿಯಿಂದ, ಆರ್ಥಿಕ ದೃಷ್ಟಿಯಿಂದ ಇವರನ್ನು ಕಡೆಗಣಿಸುವಂತಿಲ್ಲ. ಸಮಾಜದ ಸುಭದ್ರತೆ ಇವರಿಂದ ಎನ್ನಬಹುದು.

ಒಂದು ಸರ್ವಾಂಗ ಸುಂದರ ಸಮಾಜಕ್ಕೆ ಏನೇನು ಬೇಕು, ಅವೆಲ್ಲ ಕನ್ನಡ ಸಮಾಜಕ್ಕಿದ್ದುವು ಎಂದು ವೃತ್ತಿಗಾರರನ್ನು ನೆನೆದಾಗ ವೇದ್ಯವಾಗುವುದು. ದುಡಿಮೆ, ಗಳಿಕೆ, ಅರ್ಥ, ದೇವರು, ಧರ್ಮ, ವಿನೋದ, ಆಟ, ಹಾಸ್ಯ ಕುಣಿತ, ಮಾಟ, ವೈದ್ಯ– ಎಲ್ಲವೂ ಈ ವೃತ್ತಿಗಳಲ್ಲಿ ಅಡಕವಾಗಿ ಸಮಾಜಪುರುಷನನ್ನು ಆರೋಗ್ಯವಂತನನ್ನಾಗಿ ಮಾಡಿದ್ದುವು.

ಇಲ್ಲಿ ಇನ್ನೊಂದನ್ನು ನೆನೆಯದೆ ಇರುವುದು ಸಾಧ್ಯವಿಲ್ಲ. ಸಮಾಜದಲ್ಲಿ ಇನ್ನೊಂದು ಭಾಗವೂ ಇತ್ತು. ಅದು 'ಶಿಷ್ಟಭಾಗ'. ಓದು, ಬರಹ, ಪಾಂಡಿತ್ಯ, ಗೌರವ ಮುಂತಾದವು ಇವರ ಅಧೀನ; ಇವರ ಧರ್ಮ ದೇವರು, ನೀತಿ, ಆಟ, ವಿನೋದ ಬೇರೆ. ಸಮಾಜದ ಪ್ರತಿಷ್ಠಿತರೆಂದರೆ ತಾವೇ ಎಂದು ಹೇಳಿಕೊಳ್ಳುವ ಇವರು ಜಾನಪದ ವೃತ್ತಿಗಾರರೆಂದರೆ ಕೀಳು, ಕಡಿಮೆ ಎಂದು ಭಾವಿಸಿದವರು. ಶಿಷ್ಟತೆಯ ಕಟ್ಟಿಗೆ ಬಿದ್ದು ಕೃತಕ ಬದುಕಿಗೆ ದಾಸರಾದ ಇವರು ಜಾನಪದ ವೃತ್ತಿಗಾರರ ಗೆಯ್ಮೆಯಿಂದ, ಆಟ ವಿನೋದಗಳಿಂದ

ಸಮಾಜ ಆರ್ಥಿಕವಾಗಿ, ನೈತಿಕವಾಗಿ ಬಲಗೊಂಡಿದೆ ಎಂಬುದನ್ನು ಮರೆವವರು. ಮತ್ತು ಈ ಮರೆವಿನಲ್ಲಿ ಮರೆವು ಎಂಬಂತೆ, ದೇಹತೃಪ್ತಿಗೆ ದೇವದಾಸಿಯರೊಡನೆ ಸಲ್ಲಾಪ ಮಾಡುವರು. ರೋಗ ಬಂದಾಗ ಜನಪದ ವೈದ್ಯಕ್ಕೆ ಮೊರೆಹೋಗುವರು; ಕಣಿ ಕೇಳುವರು, ಕಷ್ಟಪರಿಹಾರಕ್ಕೆ ಮಾಟ ಮಂತ್ರ ಅಂತ್ರಕ್ಕೆ ಶರಣಾಗುವರು.

'ಶಿಷ್ಟತೆ'ಯನ್ನು ಅಲ್ಲಗಳೆಯಲಾಗದಿದ್ದರೂ ಜಾನಪದಕ್ಕಿರುವ ಸತ್ವ ಶಕ್ತಿ ಅದಕ್ಕಿಲ್ಲ; ಜಾನಪದ ಮೂಲ, ಸತ್ಯ; ಶಿಷ್ಟತೆ ಆಭಾಸ. ತಾಯಿಮೊಲೆಹಾಲು ಜಾನಪದವಾದರೆ, ಡಬ್ಬಿಯ ಹಾಲು ಶಿಷ್ಟತೆ. ಜಾನಪದ ಅಂತಃಸ್ಸತ್ವ; ಶಿಷ್ಟತೆ ಬಹಿರಂಗದ ಆಡಂಬರ. ಜಾನಪದದಲ್ಲಿ ಹೃದಯವಂತಿಕೆ ಕಂಡರೆ ಶಿಷ್ಟತೆಯಲ್ಲಿ ಮಡಿ ವಂತಿಕೆ ಕಂಡುಬರುತ್ತದೆ.

'ಶಿಷ್ಟತೆ–ಜಾನಪದ' ಇವೆರಡೂ ಸಮಾಜದಲ್ಲಿ ಎದ್ದುಕಾಣುವ ವಿಚಾರಗಳಾದರೂ ಬಹುಜನ ಸಮಾಜ ಜಾನಪದವೇ ಆಗಿತ್ತು; ಆಗಿದೆ. ಶಿಷ್ಟತೆಯನ್ನೂ ಜಾನಪದವನ್ನೂ ಕೂಡಿಯೇ ಬದುಕಿಸುವ ಶಕ್ತಿ ಜಾನಪದ ವೃತ್ತಿಕಾರರದು.

ಕಾಲು ಶತಮಾನದಿಂದೀಚೆ ಈ ವೃತ್ತಿಕಾರರ ಸಂಖ್ಯೆ ಕಡಿಮೆಯಾಗತೊಡಗಿದೆ, ಈಗಂತೂ ತೀರ ಕಡಿಮೆಯಾಗಿದೆ; ಕೆಲವು ವೃತ್ತಿಕಾರರಂತೂ ಇಲ್ಲವಾಗಿದ್ದಾರೆ. ಆ ವೃತ್ತಿಗಳು ಅಳಿಸಿಹೋಗತೊಡಗಿವೆ.

ಆಯಗಾರರು ಹಳ್ಳಿಗಳಿಂದ ಸಂಪೂರ್ಣ ಮರೆಯಾಗತೊಡಗಿದ್ದಾರೆ. ಆಧುನಿಕ ಜೀವನದ ಆವಶ್ಯಕತೆಗಳು ಇದಕ್ಕೆ ಬಹುಮಟ್ಟಿಗೆ ಕಾರಣವಾಗಿದ್ದರೂ, ವ್ಯವಸಾಯದಲ್ಲಿ ಆದ ಬದಲಾವಣೆ, ಪ್ರಗತಿ ಇದಕ್ಕೆ ಮುಖ್ಯ ಕಾರಣವೆನ್ನಬಹುದು. ನೀರಾವರಿ ಪ್ರದೇಶದ ವ್ಯವಸಾಯಕ್ಕೆ, ಎಲ್ಲಿ ಟ್ರ್ಯಾಕ್ಟರ್ ಮುಂತಾದ ಯಂತ್ರಗಳ ಬಳಕೆ ಇದೆ, ಅಲ್ಲಿ ಊರಿನ ಕಮ್ಮಾರ, ಬಡಿಗರು ಉಪಯೋಗಕ್ಕೆ ಬರುವುದಿಲ್ಲ; ಮಣ್ಣಿನ ಮಡಿಕೆ ಕುಡಿಕೆಗಳ ಉಪ ಯೋಗ ಕಡಿಮೆಯಾಗಿ ಕುಂಬಾರರ ಆಯಗಾರಿಕೆ ನಿಲ್ಲುವ ಪರಸ್ಥಿತಿ ಉಂಟಾಗಿದೆ; ಏಕೆ ನಿಂತೇಹೋಗಿದೆ. ಹಳ್ಳಿಗಳಲ್ಲಿಯೂ ಹೆಚ್ಚಾಗಿ ಇಸ್ತ್ರಿ ಮಾಡಿದ ಪ್ಯಾಂಟು, ಬುಷ್‌ರಟು; ಅಂಗಿಗಳ ಬಳಕೆ ಹೆಚ್ಚಾಗಿರುವಾಗ ಆಯಗಾರ ಅಗಸ ಇಲ್ಲವಾಗುತ್ತಿದ್ದಾನೆ. ಮಿಣಿ, ಬಾರುಕೋಲು ಮುಂತಾದವುಗಳನ್ನೂ ಕಾಲಿಗೆ ಮೆಟ್ಟುಗಳನ್ನೂ ಮಾಡಿಕೊಡುತ್ತಿದ್ದ ಮಾದಿಗ, ಸಮಗಾರ ಈಗ ಸಾಮಾಜಿಕ ಅಂತಸ್ತಿನ ಕಾರಣದಿಂದ ಆಯಗಾರನಾಗಿರಲು ನಿರಾಕರಿಸುತ್ತಿದ್ದಾನೆ; ಸಾಮಾಜಿಕ ಮತ್ತು ಆಡಳಿತಗಳಲ್ಲಿ ಆದ ಬದಲಾವಣೆಗಳಿಂದ ತಳವಾರ, ಬೇಗಾರ, ವಾಲೀಕಾರ, ಗೌಡ, ಶಾನುಭಾಗ ಮುಂತಾದ ಆಯಗಾರರು ಬೇರೆ ಉದ್ಯೋಗ, ವೃತ್ತಿಗಳನ್ನು ಅವಲಂಬಿಸಿದ್ದಾರೆ. ಅಲ್ಲದೆ, ಬೇರೆ ಕೆಲಸಗಳಿಂದ ಆದಾಯ ಹೆಚ್ಚು ಸಿಕ್ಕುತ್ತಿರುವಾಗ ಊರಲ್ಲಿ ಆಯಗಾರನಾಗಿರಲು ಬಯಸದೆ ವಲಸೆ

ಹೋಗುವುದೂ ಹೆಚ್ಚಾಗಿದೆ. ಹೀಗೆ ಹಳ್ಳಿಯ ಸಾಮಾಜಿಕ, ಆರ್ಥಿಕ ಜೀವನಕ್ಕೆ ಒಂದು ವಿಧವಾಗಿ ಬುನಾದಿ ಎನಿಸಿದ ಆಯಗಾರರು ಇಲ್ಲವಾಗುತ್ತಿದ್ದಾರೆ; ಇಲ್ಲವಾಗಿದ್ದಾರೆ.

ಆಯಗಾರರನ್ನುಳಿದು ಇತರ ವೃತ್ತಿಗಾರರೆಲ್ಲ ಅಲೆಮಾರಿಗಳೇ; ಜಾನಪದ ವೈದ್ಯರು ಮಾತ್ರ ಕೆಲಕೆಲ ಊರುಗಳಲ್ಲಿ ಒಂದೇ ಕಡೆ ನೆಲಸಿದಂತೆ ಕಂಡುಬರುತ್ತದೆ. ಆಯಗಾರರಿಂದ ಸಮಾಜಕ್ಕೆ ಆರ್ಥಿಕ ನೆಲೆಗಟ್ಟು ದೊರಕಿದರೆ ಇತರ ವೃತ್ತಿಕಾರರಿಂದ ನೀತಿ, ನೇಮ, ಧರ್ಮ, ಆಟ, ವಿನೋದ, ಹಾಸ್ಯ, ಆನಂದ- ಒಟ್ಟು ಬದುಕನ್ನು ಹಸನುಗೊಳಿಸಿ, ಅದಕ್ಕೆ ಒಳ್ಮೆನಲ್ಮೆಗಳನ್ನು ತಂದುಕೊಡುವ ಸಾಧನಗಳೆಲ್ಲವೂ ದೊರಕುತ್ತವೆ. ಇಲ್ಲಿ ಸಹಜ ಕಲೆಯಿದೆ, ಹಾಡಿದೆ, ಜೊತೆಗೆ ಹುರುಳಿದೆ. ಸಂತೋಷದ ಬುಗ್ಗೆಗಳಾದ ಆಟಗಳಿವೆ, ವೇಷಗಳಿವೆ, ಮೋಜಿವೆ. ಬದುಕನ್ನು ಪ್ರೀತಿಸಿ, ಅದರ ಸವಿಯನ್ನು ಸವಿದು ಅದನ್ನು ಸರ್ವರಲ್ಲಿ ಹಂಚುವ ಮನೋಭಾವವನ್ನೂ ಶಕ್ತಿಯನ್ನೂ ಜನಪದಕ್ಕೆ ಈಯುತ್ತಾರೆ ಈ ವೃತ್ತಿಕಾರರು. ಇವರು ಹಲವರು ನಡೆದಾಡುವ ನಾಟಕಗಳು, ರಂಗಭೂಮಿಗಳು, ಕೆಲವರು ಇತಿಹಾಸಕಾರರು, ಅದನ್ನು ಯಾವಾಗಲೂ ಜೀವಂತವಿಟ್ಟಿರುವವರು; ಕೆಲವರು ಕಣ್ಣೆದುರಿಗೆ; ಮನದೆದುರಿಗೆ ದೇವರನ್ನು ತಂದು ನಿಲ್ಲಿಸುವವರು. ಕೆಲವರು ತಮ್ಮ ಇರುವಿಕೆಯಿಂದ, ಕಾಯಕದಿಂದ 'ನೀತಿ'ಯನ್ನು ನೆಲೆಗೊಳಿಸುವವರು.

ಯಾರು ಸಮಾಜಕ್ಕೆ ಅಂತಸ್ಸತ್ವವನ್ನು, ಆನಂದವನ್ನು ತಮ್ಮ ತಮ್ಮ ವೃತ್ತಿಗಳಿಂದ ನೀಡುತ್ತಿದ್ದರೊ ಅವರು ಇಂದು ಮರೆಯಾಗತೊಡಗಿದ್ದಾರೆ; ಜಾನಪದ ಜೀವನದ ಬಹುಭಾಗವನ್ನು ಆಕ್ರಮಿಸಿಕೊಂಡಿರುವ ಇವರ ಮರೆಯಾಗುವಿಕೆಯಿಂದ ಜೀವನದ ಬಣ್ಣವೇ ಅಳಿಸಿ ಹೋಗತೊಡಗಿದೆ. ಆಧುನಿಕತೆ ನಮ್ಮ ಹಳ್ಳಿಗಳಿಗೆ ಕಾಲಿಕ್ಕಿ ಒಳ್ಳೆಯದಕ್ಕಿಂತಲೂ ಅನಾಹುತವನ್ನೇ ಹೆಚ್ಚು ಮಾಡಿದೆ ಎನಿಸುತ್ತದೆ; ಆಧುನಿಕತೆ ಬೇಡವೆಂದಲ್ಲ; ಆದರೆ ನಮ್ಮ ವೃತ್ತಿಕಾರರು ಇದರ ಹೊಡತಕ್ಕೆ ಸಿಲ್ಲದಾಗಿದ್ದಾರೆ. ಒಂದು ಕಡೆಗೆ ಆಯಗಾರರು ತಮ್ಮ ವೃತ್ತಿಗಳನ್ನು ಬಿಟ್ಟು ಬೇರೆ ವೃತ್ತಿಗಳನ್ನು ಅವಲಂಬಿಸಿದರೆ ಇನ್ನೊಂದು ಕಡೆಗೆ ಜಾನಪದ ಕವಿಗಳು, ಕಲಾವಿದರು, ಜಾನಪದ ವೈದ್ಯರು, ಜಾನಪದ ನೃತ್ಯಗಾರರು ಪ್ರೋತ್ಸಾಹವಿಲ್ಲದೆ ನರಳಿ ನಶಿಸಿಹೋಗುವ ಸ್ಥಿತಿಯಲ್ಲಿದ್ದಾರೆ; ಅವರಿಗಾಗಿ ಸಮಾಜದಲ್ಲಿ ಯಾವ ಗೌರವವೂ ಇಲ್ಲ. ಸಾಮಾನ್ಯರಿಂದಲೂ ಇಲ್ಲ. ಶಿಷ್ಟರಿಂದ ಒಂದಿನ ಕಾಲದಲ್ಲಿಯೂ ಇವರಿಗೆ ಗೌರವವಿರಲಿಲ್ಲ; ಇವರ ಗೌರವದಿಂದ ಆಗಬೇಕಾದುದೇನೂ ಇಲ್ಲ, ಆದರೆ ಬಹುಜನಸಮಾಜ ಈಗ ಇವರ ಬಗ್ಗೆ ತೋರಿಸುತ್ತಿರುವ ಅನಾಸ್ಥೆ ಬಹು ಅಪಾಯಕಾರಿಯಾದುದು. ಅವರನ್ನೂ ಅವರ ಕಲೆಗಳನ್ನೂ ಗೌರವದಿಂದ ಕಾಣುವ ಕಾಲ ಮತ್ತೆ ಬರಬೇಕು; ಅದು ಬರದಿದ್ದರೆ ನಮಗೆ ಆನಂದವಿಲ್ಲ, ನಿಜವಾದ ಕಲೆಯಿಲ್ಲ, ಜೀವನಕ್ಕೆ ಬಲವಿಲ್ಲ. ಸಾಹಿತ್ಯಪರಿಷತ್ತೋ, ಸಂಗೀತ ಅಕಾಡೆಮಿಯೋ, ಜಾನಪದ ಸಮ್ಮೇಳನಗಳೋ ಹೀಗೆ ಕೆಲವು ನಿಟ್ಟಿನಿಂದ ಇವರಿಗೆ ಪ್ರೋತ್ಸಾಹ ಸಿಕ್ಕರೆ ಸಾಲದು. ಸಮಗ್ರ ಜನಪದವೇ ಅವರನ್ನು ಪ್ರೀತಿಯಿಂದ ಕಾಣುವ

ಅವಕಾಶ ಒದಗಬೇಕು. ಇಂಥ ಸಮ್ಮೇಳನ ನಡೆಸುವುದರಿಂದ, ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಜಾನಪದ ಸಾಹಿತ್ಯ, ಕಲೆ ಪಠ್ಯವನ್ನಾಗಿ ಮಾಡುವುದರಿಂದ ಈ ವೃತ್ತಿಗಾರರ ಬಗ್ಗೆ ಒಂದಿಷ್ಟು ತಿಳಿವಳಿಕೆಯಾದರೂ ಆಗುವಂತಾಗಿದೆ. ಆದರೆ ಜನರ ದೃಷ್ಟಿಯಲ್ಲಿ ಜಾನಪದ ವೃತ್ತಿಕಾರರು ಅತ್ಯಂತ ಕೀಳು, ಬೆಲೆಯಿಲ್ಲದವರು, ಹೊಟ್ಟೆ ಹೊರೆಯಲು ಏನೋ ಮಾಡುವವರು. ಈ ಮನೋಭಾವನೆ ದೂರಾಗಿ ಅವರ ಬಗ್ಗೆ, ಅವರ ಕಲೆಗಳ ಬಗ್ಗೆ, ಅವರ ವೃತ್ತಿಗಳ ಬಗ್ಗೆ ಆಸಕ್ತಿ, ಗೌರವ ಸಾರ್ವತ್ರಿಕವಾಗಿ ಉಂಟಾದರೆ ಅವರು ಅವರ ವೃತ್ತಿಗಳು ಮತ್ತೊಮ್ಮೆ ಚೇತರಿಸಿಕೊಂಡು ಬದುಕಿ ಉಳಿದಾವು.

ಮರಗಮುರುಗಿಯವರು, ಚೌಡಿಕೆಯವರು, ಬುಡುಬುಡುಕಿಯವರು, ಸಾರುವ ಅಯ್ಯನವರು, ದಾಸರು, ಕವಲೆತ್ತಿನವರು, ವೇಷಗಾರರು ಮೊದಲಾದವರು ಇಂದು ಭಿಕ್ಷಾವೃತ್ತಿಗಿಳಿದಿದ್ದಾರೆ: ಅವರ ಕಲೆಗಳು ಭಿಕ್ಷೆಯ ಸಾಧನಗಳಾಗಿವೆ. ಹಿಂದೆ ಇವು ಶುದ್ಧ ಕಲೆಗಳಾಗಿದ್ದುವು: ಅವರ ಕಲಾಪ್ರದರ್ಶನಕ್ಕೆ ಜನ ಪ್ರತಿಫಲ ಕೊಡುತ್ತಿದ್ದರೇ ವಿನಾ ಅದು ಭಿಕ್ಷೆಯಾಗಿರಲಿಲ್ಲ. ಇವತ್ತು ಪ್ರೋತ್ಸಾಹವಿಲ್ಲದೆ ಹೋಗಿ ಆ ಕಲಾವಿದರು ತಮ್ಮ ಕಲೆಗಳೊಂದಿಗೆ ಭಿಕ್ಷೆಗಿಳಿದಿದ್ದಾರೆ. ಈ ಪರಿಸ್ಥಿತಿ ದೂರಾಗಬೇಕಾದರೆ ಅವರಿಗೆ ಸರ್ವವಿಧದ ಪ್ರೋತ್ಸಾಹ ಬೇಕು.

(೨)

ಈ ಗೋಷ್ಠಿಯಲ್ಲಿ ಚರ್ಚಿತವಾಗದ ವಿಷಯಗಳು ಇವು: ಹೆಳವರು, ಮೋಡಿಕಾರರು, ಮರಗಮುರುಗಿಯವರು, ಬುಡುಬುಡುಕಿಯವರು, ಜನಪದ ವೈದ್ಯ ಮತ್ತು ಮಾಟ ಮಂತ್ರ ತಂತ್ರದವರು ಮತ್ತು ಕೊರವಂಜಿ.

ಹೆಳವರು ಇತಿಹಾಸಕಾರರು: ಇವರು ಅಲೆಮಾರಿಗಳೂ ಹೌದು, ಊರಲ್ಲಿ ಒಂದೆಡೆ ನೆಲೆಸುವವರು ಹೌದು. ಇವರ ವಾಸ ಅಗಸೆಯಮುಂದೆ. ಸಾವು, ಜನನ, ಊರಿನ ಪ್ರಮುಖ ಘಟನೆಗಳು, ಮನೆತನಗಳ ಚರಿತ್ರೆ– ಇವರು ಬರೆದಿಡುತ್ತಿದ್ದರು. ಇವರಲ್ಲಿ ಕೆಲವರು ಅನೇಕ ಊರುಗಳ ಚರಿತ್ರೆ ಬರೆಯುತ್ತಿದ್ದರು: ಊರೂರು ಅಲೆದಾಡಿ ಚರಿತ್ರೆ ಸಂಗ್ರಹಿಸುತ್ತಿದ್ದರು. ನಮ್ಮ ಕಡೆ ಇವರು ಊರೂರಿಗೆ ಬರುವಾಗ ಎಡಗಾಲನ್ನು ಹಿಂದಕ್ಕೆ ಮಡಿಚಿ ಕಟ್ಟಿಕೊಂಡು ಹೆಳವರೆಂದು ತೋರಿಸಿಕೊಳ್ಳಲು ಎತ್ತಿನ ಮೇಲೆ ಕುಳಿತು ಬರುತ್ತಿದ್ದರು.

ನಮ್ಮ ಹಳ್ಳಿಗಳ ಚರಿತ್ರೆ ಹೆಳವರ ಕಡತಗಳಲ್ಲಿ ಹುದುಗಿದೆ: ಎಷ್ಟೋ ಕಡೆಗೆ ಅದು ಹಾಳಾಗಿಯೂ ಹೋಗಿದೆ. ಹೆಳವರ ಮನೆತನಗಳಲ್ಲಿ ಮುಂಬಂದವರು ಈ ವೃತ್ತಿಯನ್ನು ಕೈಬಿಟ್ಟುದರಿಂದ ಮುಂದಿನ ಇತಿಹಾಸ ಬರೆಯಲಿಲ್ಲ; ಹಿಂದಿನದನ್ನು

ಕಾಪಾಡಲಿಲ್ಲ. ಹೀಗಾಯಿತು ಸ್ಥಿತಿ. ಸುಮಾರು ೪೦-೫೦ ವರ್ಷಗಳಿಂದ ಈ ಹೆಳವರು ತಮ್ಮ ವೃತ್ತಿಯಿಂದ ನಿವೃತ್ತಿಯಾಗಿದ್ದಾರೆ.

ನಾಡಿನ ಶಿಷ್ಟ ಇತಿಹಾಸಕಾರನಿಗಿಂತ ಹೆಳವ ಹೆಚ್ಚಿನವನೆನಿಸುತ್ತದೆ. ನಾಡಿನ ಶಿಷ್ಟ ಇತಿಹಾಸಕಾರ ರಾಜ ರಾಣಿಯರ ಕಥೆ, ಯುದ್ಧಗಳ ವಿಷಯ, ಇನ್ನಿತರ ಮುಖ್ಯ ಘಟನೆ ಗಳನ್ನು ಇತಿಹಾಸಕ್ಕೆ ಅಳವಡಿಸಿದರೆ, ಹೆಳವ ಸಾಮಾನ್ಯ ಜನರ ಚರಿತ್ರೆ ಬರೆಯುವವನು. ಇವನ ಚರಿತ್ರೆಯಿಂದ ನಾಡಿನ ಅಂತಸ್ಸತ್ವ, ನಿಜವಾದ ಜನಜೀವನ, ನಿಜವಾದ ಸಂಸ್ಕೃತಿ ನಿಚ್ಚಳವಾಗಿ ತಿಳಿದುಬರುತ್ತದೆ.

ನಾಡಿನುದ್ದಕ್ಕೂ ಸಂಚರಿಸಿ ಹೆಳವರು ಬರೆದಿಟ್ಟ ಚರಿತ್ರೆ ಸಂಗ್ರಹಿಸಿ ಅದನ್ನು ಸಂಪಾದಿಸಿ ಸಂಸ್ಕರಿಸಿ ಪ್ರಕಟಿಸುವ ಎತ್ತುಗಡೆ ಈಗ ನಡೆಯಬೇಕು.

**

ಮೋಡಿಕಾರರ ವಂಶಗಳೇ ಈಗ ಬಹುಮಟ್ಟಿಗೆ ಇಲ್ಲದಂತಾಗಿವೆ. ನಾನು ಚಿಕ್ಕವ ನಿದ್ದಾಗ ಇವರ ಅನೇಕ ಪ್ರದರ್ಶನಗಳನ್ನು ನೋಡಿದ್ದೇನೆ. ಊರಿಂದೂರಿಗೆ ಹೋಗಿ ಇವರು ತಮ್ಮ ಪ್ರದರ್ಶನಗಳನ್ನೀಯುತ್ತಿದ್ದರು.

ಮೋಡಿ ಇದೊಂದು ವಿದ್ಯೆ, ಕಲೆ, ಕಸುಬು. ಅದ್ಭುತಶಕ್ತಿ ಈ ಮೋಡಿ ಕಸುಬಿಗೆ ಉಂಟು. ಮಂತ್ರಶಕ್ತಿ ಎನ್ನಬೇಕು ಇವರದೇ. ಯಾವುದು ಅಸಾಧ್ಯವೋ ಅದನ್ನು ಈ ಮೋಡಿಕಾರರು ಬೇವಿನ ತೊಪ್ಪಲು ಉಗ್ಗಿ ಹಾವು, ಚೇಳು, ಜೇನುನೊಣ, ರೂಪಾಯಿ ಸೃಷ್ಟಿಸುವುದು, ನೆಟ್ಟ ಕಂಬಕ್ಕೆ ಹೊಡೆದರೆ ವಿರೋಧಿಯ ಮೈಯಲ್ಲಿ ಬಾಸುಳ ಮೂಡಿ ರಕ್ತ ಒಸರುವುದು, ಮಂತ್ರ ಹಾಕಿದರೆ ವೈರಿ ಉಟ್ಟ ಬಟ್ಟೆ ಮೇಲಕ್ಕೆ ಹಾರುವುದು.

ಮೋಡಿಕಾರರು ಎರಡು ಬಣಗಳಾಗಿ ಮೋಡಿ ಹಾಕಿದರೆ ಅದು ಅದ್ಭುತವಾಗಿರು ತ್ತದೆ. ಎರಡು ಬಣಗಳ ಮಾಂತ್ರಿಕಶಕ್ತಿಯ ಪರೀಕ್ಷೆಯಾಗುವುದು. ಒಮ್ಮೊಮ್ಮೆ ಮರಣಾಂತಿಕ ಸ್ಪರ್ಧೆಗಳೂ ಈ ಬಣಗಳಲ್ಲಿ ನಡೆಯುತ್ತವೆ. ವಿರೋಧಿ ಬಣ ದೊರಕ ದಿದ್ದಾಗ ತಮ್ಮಲ್ಲಿಯೇ ಎರಡು ಗುಂಪುಗಳಾಗಿ ಇವರು ಮೋಡಿಹಾಕುವರು.

ಬಹು ಅದ್ಭುತಗಳನ್ನುಳ್ಳ ಈ ಕಲೆ ಪೂರ್ಣ ನಶಿಸಿಹೋಗುವ ಹಂತದಲ್ಲಿದೆ. ಪ್ರೋತ್ಸಾಹವಿಲ್ಲದ್ದಕ್ಕಾಗಿ ಮೋಡಿಕಾರ ಮನೆತನಗಳು ಬೇರೆ ವೃತ್ತಿಗಳನ್ನು ಅವಲಂಬಿಸಿ ಕೊಂಡಿದ್ದಾರೆ. ಈ ಕಲೆಯನ್ನು ಉಳಿಸಿ ಬೆಳೆಸುವ ಕೆಲಸ ಅವಶ್ಯವಾಗಿ ಆಗಬೇಕಾದುದು.

**

ದುರುಗಮುರುಗಿ ಒಂದು ಕಲಾತ್ಮಕ ವೃತ್ತಿ. ಹಾಡು, ನೃತ್ಯ, ಚಮತ್ಕಾರ, ಪೂಜೆ—ಇವುಗಳ ಸಮ್ಮಿಳನ ದುರುಗಮುರುಗಿ. ನಮ್ಮ ಕಡೆಗೆ ಇದಕ್ಕೆ ಬುರುಬುರು

ಸುಂಕಲಮ್ಮ ಎನ್ನುತ್ತಾರೆ. ವಾದ್ಯದ ಬುರುಬುರು ಶಬ್ದ ಮತ್ತು ಆ ದೇವತೆಯ ಹೆಸರು ಕೂಡಿ ಇದಕ್ಕೆ ಈ ಹೆಸರು ಬಂದಿದೆ. ಸುಂಕಲಮ್ಮ ಎಂಬುದು ಮಾರಿದೇವತೆಯ ಇನ್ನೊಂದು ಹೆಸರು.

ಈ ವೃತ್ತಿಯಲ್ಲಿ ಒಂದು ಗಂಡು ಒಂದು ಹೆಣ್ಣು ಇರುವರು. ಗಂಡು ಗುಡಿಯಂತಹ ಒಂದು ಗೂಡನ್ನು ಹೊತ್ತುಕೊಂಡಿರುತ್ತಾನೆ; ಅವನ ಹೆಗಲ ಮೇಲೆ ದಪ್ಪನೆಯ ದೊಡ್ಡ ಬಾರುಕೋಲು ಇರುತ್ತದೆ. ಹೆಣ್ಣು ಕೊರಳಲ್ಲಿ ಡೋಲಿನಂತಹ ಒಂದು ವಾದ್ಯ ಇಳಿಬಿಟ್ಟುಕೊಂಡು ಬುರುಬುರು ಬುರುಬುರು ಬಾರಿಸುತ್ತಿರುತ್ತಾಳೆ; ಆತ ಮೈಗೆ ಬೇವಿನ ಎಲೆಗಳ ಸರ ಕಟ್ಟಿಕೊಂಡಿರುತ್ತಾನೆ.

ಒಂದು ಓಣಿಯಲ್ಲಿ ದೇವರ ಗುಡಿಯನ್ನು ಇಳುಹಿ ಆ ಗಂಡು ಕುಣಿಯ ತೊಡಗುತ್ತಾನೆ: ಜೊತೆಗೆ ಹಾಡುತ್ತಾನೆ. ಮಧ್ಯೆಮಧ್ಯೆ ದೊಡ್ಡ ಬಾರುಕೋಲಿನಿಂದ ಮೈಗೆ ಹೊಡೆದುಕೊಳ್ಳುತ್ತಾನೆ, ಆ ಹೆಣ್ಣು ವಾದ್ಯ ಬಾರಿಸುತ್ತಿರುತ್ತಾಳೆ. ಕೊನೆಗೆ ಓಣಿಯವರು ನೀರು ಕುಂಕುಮ ಧೂಪ ನೀಡುತ್ತಾರೆ; ಆತ ಮಾರಿದೇವತೆಗೆ ಪೂಜೆ ಮಾಡುತ್ತಾನೆ. ಜನರು ಮೊರಗಳಲ್ಲಿ ಜೋಳ ಕೊಡುತ್ತಾರೆ. ಆತ ಅವುಗಳನ್ನು ಬುಟ್ಟಿಯಲ್ಲಿ ಹಾಕಿಕೊಂಡು, ಒಂದಿಷ್ಟು ಜೋಳವನ್ನು ಮುಷ್ಟಿಯಲ್ಲಿ ಹಿಡಿದು ಜೋಳ ನೀಡಿದವರ ಮೊರದಲ್ಲಿ ಮೂರು ಚಿಕ್ಕ ಕುಂಪೆ ಇಡುತ್ತಾನೆ: ಅವರು ಆ ಕುಂಪೆಯ ಜೋಳಸಹಿತ ಮೊರವನ್ನು ಮನೆಯೊಳಗೊಯ್ಯುತ್ತಾರೆ.

ಈ ಮಾರಿದೇವತೆ ಜಾನಪದ ದೇವತೆ. ಅವರ ಇಷ್ಟಾರ್ಥಗಳನ್ನು ಕೊಡುವ ಮಹಾತಾಯಿ. ಜನರು ಏನೇನೋ ಬೇಡಿಕೊಂಡು ಏನೇನೋ ಕೊಡುವೆವೆಂದು ಹೇಳಿಕೊಂಡಿರುತ್ತಾರೆ. ಹೆಚ್ಚಾಗಿ ಅವರು ದುರುಗಮುರುಗಿಯವರಿಗೆ ಹಳೆಯ ಬಟ್ಟೆಗಳನ್ನು ಕೊಡುತ್ತಾರೆ.

ಇಲ್ಲಿ ಒಂದು ಮಾತನ್ನು ಹೇಳದೆ ಇರಲು ಆಗುವುದಿಲ್ಲ. ಈ ಜಾನಪದ ವೃತ್ತಿಗಳನ್ನು ಹಿಂದೆ ಶರಣರು ಬಳಸಿಕೊಂಡು ಅವುಗಳನ್ನು ಕಾಯಕದ ಮಟ್ಟಕ್ಕೇರಿಸಿದರು; ಉದಾತ್ತೀಕರಿಸಿ ಸಾಮರಸ್ಯದ ಸ್ಥಿತಿಗೆ ತಂದು ನಿಲ್ಲಿಸಿದರು. ಕಲಕೇತ ಬೊಮ್ಮಯ್ಯ, ಬಹುರೂಪಿ ಚೌಡಯ್ಯ, ಕಂಕರೀಕಕ್ಕಯ್ಯ, ಘಟ್ಟಿವಾಳಯ್ಯ, ಢಕ್ಕೆಯಬೊಮ್ಮಣ್ಣ, ವೀರ ದೇವಮ್ಮ, ಸಿದ್ಧದೇವಮ್ಮ, ಶಿವಮಾಯಿದೇವಿ-ಇವರು ಜಾನಪದ ಕಲೆಗಳನ್ನು ಉದ್ಧರಿಸಿದ ಶರಣಶರಣೆಯರು. ಭೃಂಗಿಯಶಾಟ, ಕೋಡಂಗಿಯಾಟ ಕಲಕೇತ ಬೊಮ್ಮಯ್ಯನದು. ಬಹುರೂಪಿ ಚೌಡಯ್ಯ ವೇಷಗಾರ; ಆತನ ಜಾತಿಗಾರ ಆಟಗಳು ನಾಡಿನುದ್ದಗಲಕ್ಕೆ ಬಹಳ ಪ್ರಸಿದ್ಧವಾಗಿದ್ದುವು; ಕಂಕರೀವಾದ್ಯಬಾರಿಸಿ ಕುಣಿಯುವುದು ಕಕ್ಕಯ್ಯನ ಕಾಯಕ;

ಜಾನಪದ ನೃತ್ಯಗಾರ ಘಟ್ಟಿವಾಳಯ್ಯ: ದುರುಗಮುರುಗಿ ಢಕ್ಕೆಯಬೊಮ್ಮಣ್ಣ; ಪುರಾಣ ಹೇಳುವುದು. ಕೀರ್ತನೆ ಮಾಡುವುದು. ಕುಣಿದು ಹಾಡುವುದು ವೀರದೇವಮ್ಮ, ಸಿದ್ಧ ದೇವಮ್ಮ ಮತ್ತು ಶಿವಮಾಯಿದೇವಿಯವರ ಕಾಯಕಗಳಾಗಿದ್ದುವು.

ದುರುಗಮುರುಗಿಯ ಕಾಯಕ ಕೈಕೊಂಡಿದ್ದ ಢಕ್ಕೆಯಬೊಮ್ಮಣ್ಣ ಶ್ರೇಷ್ಠಶರಣ. ಶ್ರೇಷ್ಠ ವಚನಕಾರ. ಈ ಕಾಯಕದಿಂದ ಆತ ಶಿವಾನುಭವ ಪ್ರಚಾರಮಾಡಿದ. ಶರಣರ ತತ್ವಗಳನ್ನು ಸರಳಗೊಳಿಸಿ ಜನಮನಕ್ಕೆ ಮುಟ್ಟಿಸಿದ. ದುರುಗಮುರುಗಿಯ ಬಗ್ಗೆಯೇ ಆತನ ವಚನಗಳಿವೆ. ಆತನ ಮಾರಿ, ಮಾರಿಯಲ್ಲ ಮಹಾದೇವಿ. ತನ್ನ ಮಾರಿಯನ್ನು ಕುರಿತು ಆತ ಹೀಗೆ ಹೇಳುತ್ತಾನೆ.

"...ಬಲ್ಲಬಲ್ಲವರೆಲ್ಲರ ತನ್ನಲ್ಲಿಯೇ ಅಡಗಿಸುತ,
ಅರಿದವರೆಲ್ಲರಿಗೆ ದೇವಿಯಾಗಿ,
ಮರೆದವರಿಗೆ ಮಾರಿಯಾಗಿ,
ಮೊರದೊಳಗೆ ಕೊಂಡು ಬಂದಿದ್ದೇನೆ...."
ಮೊರಕ್ಕೆ ಮೂರು ಗೋಟು, ತಾಯಿಗೆ ಅಯಿದು ಬಾಯಿ,
ಬೇಡುವಾತನ ಬಾಯಿವೊಂದೆಯಾಯಿತ್ತು,
ಢಕ್ಕೆಯ ದನಿಯ ಕೇಳಿ ಬೆಚ್ಚುವುದಕ್ಕೆ ಮುನ್ನವೆ
ಕಾಲಾಂತಕ ಭೀಮೇಶ್ವರಲಿಂಗವನರಿಯಿರಣ್ಣಾ"

ಬುಡುಬುಡಿಕೆಯವರು ಕಣಿ ಹೇಳುವುದರಲ್ಲಿ ಹೆಸರಾದವರು. ಚಿಕ್ಕ ಡಮರು ದಂತಹ ವಾದ್ಯ ಬಾರಿಸುತ್ತ, ಹಾಡು ಹಾಡುತ್ತ ಇವರು ಬರುವರು. ಉದ್ದನ್ನ ನಿಲುವಂಗಿ, ಧೋತರ. ರುಮಾಲು, ಹೆಗಲಿಗೆ ಇಳಿಬಿದ್ದ ಸೆಲ್ಲೆ ಇವರ ವೇಷ. ಒಂದು ಗತ್ತಿನಿಂದ ಬುಡುಬುಡು ಎಂಬ ವಾದ್ಯದ ಜೊತೆಗೆ ಹೇಳುವ ಅವರ ಕಣಿಯ ಹಾಡು ಕೇಳಲು ಸೊಗಸಾಗಿರುತ್ತದೆ.

ಇತ್ತೀಚೆಗೆ ಈ ಸಂತಾನ ಕಡಿಮೆಯಾಗಿದೆ. ಇವರಲ್ಲಿ ಅನೇಕ ಜನ ಒಳ್ಳೆ ವೇಷಭೂಷಿತರಾಗಿ ಪಟ್ಟಣಗಳ ಹೋಟೆಲುಗಳಲ್ಲಿ ಇಳಿದುಕೊಂಡು ಹಸ್ತಸಾಮುದ್ರಿಕ, ಭವಿಷ್ಯ ಹೇಳುವವರಾಗಿದ್ದಾರೆ. ನಮ್ಮ ಜಿಲ್ಲೆಯ ಲಿಂಗಸೂಗೂರು ತಾಲೂಕಿನ ಹತ್ತಿರ ನಾಗರಹಾಳು, ಮೋಟ್ಯಾಳು ಎಂಬ ಎರಡು ಹಳ್ಳಿಗಳಿವೆ: ಆ ಊರುಗಳ ಮುಕ್ಕಾಲು ಜನ ಬುಡುಬುಡಿಕೆಯವರೇ. ಅಭ್ಯಾಸಕ್ಕೆ ಯೋಗ್ಯವಾದ ಊರುಗಳು ಅವು.

ನಮ್ಮ ಜಿಲ್ಲೆಯ ಅನುಭಾವಿ ಕವಿಗಳು ಬುಡುಬುಡಿಕೆಸ ಹೆಸರಿನಿಂದ ಅನು ಭಾವದ ಹಾಡುಗಳನ್ನು ಹಾಡಿದ್ದಾರೆ; ಬುಡುಬುಡುಕಿತನವನ್ನು ಲಿಂಗಾಂಗ ಸಾಮರಸ್ಯದ ಎತ್ತರಕ್ಕೆ ಒಯ್ದಿದ್ದಾರೆ. ಗೊಬ್ಬೂರ ಹಂಪಣ್ಣ ಕವಿಯ ಈ ಪದ್ಯ ನೋಡಿರಿ:

ಬುಡ ಕಡೆಯಿಲ್ಲದ ಬುಡುಬುಡಿಕೆನು ನನ್ನ
ನುಡಿಯು ಸ್ಮೃತಿಗೆ ತಾರಣ್ಣ । ನಿನ್ನ
ಕಡೆಮೊದಲ್ಹೇಳುವೆನಣ್ಣ ॥ಪ॥

ನಡುದಂತರದೀ ಊರಿಗೆ ನಡೆತಂದಿ
ಬುಡದ ಗ್ರಾಮ ಬ್ಯಾರೆಣ್ಣಾ । ನಿನ್ನ
ಬುಡದ ಗ್ರಾಮ ಬ್ಯಾರೆಣ್ಣ ॥ ೧ ॥

ಚಾರು ಚಿತ್ತರಕಲ್ ದುರ್ಗವು ಪೂರ್ವದಿ
ನಿನ್ನ ಗ್ರಾಮಣ್ಣಾ । ಮತ್ತು ಪೂರ್ವದಿ ನಿನ್ನ ಗ್ರಾಮಣ್ಣಾ
ನಾರಿಯೊಬ್ಬಳ ಸಂಗದಿ ಬಂದಿ ಊರು ಸೇರಿದಿ ನೋಡಣ್ಣಾ
ಬಂದೀ ಊರು ಸೇರಿದಿ ನೋಡಣ್ಣಾ

ಊರು ಒಳ್ಳೇದಲ್ಲ ಸಾಲಾವಳಿಯಿಲ್ಲ
ರೋಗಗಳ್ಹೆಚ್ಚಿದವಣ್ಣಾ
ಬಹಳ ರೋಗಗಳ್ಹೆಚ್ಚಿದವಣ್ಣಾ
ಧಾರವಾಡ ಹುಬ್ಬಳ್ಳಿಗೆ ಹೋಗಿ
ಸೇರು ಸುಖದಲಿರುವೆಣ್ಣಾ
ನೀ ಮತ್ತು ಸೇರು ಸುಖದಲಿರುವೆಣ್ಣಾ

ಹೀಗೆ ಊರ ಹೆಸರುಗಳನ್ನು ಹೇಳುತ್ತ ಹೋಗುತ್ತಾನೆ.

ಪರದೇಶದ ಬುಡುಬುಡಿಕೆನು ನಾನು
ನಿನ್ನ ಗುರುತು ಬೇಡುವೆನಣ್ಣಾ
ನೋಡಣ್ಣಾ । ನೀನಿನ್ನರಿತು ಕೊಡಲಿ ಬೇಕಣ್ಣಾ
ಹರಿದುಹೋಗುವದೆ ಹಳೆ ಅಂಗಿ ವಲ್ಲಿ
ಇರಲಿ ದಾನ ಮಾಡಣ್ಣಾ
ನನಗಿನ್ನಿರಲಿ ದಾನಮಾಡಣ್ಣಾ

ಮಣಿಪುರ ವರಘನ ವೃಷಭನ ಗೂಳಿ
ಚಿನುಮಯ ಚಿದ್ರೂಪಣ್ಣಾ
ಇವ ತಾ ಚಿನುಮಯ ಚಿದ್ರೂಪಣ್ಣಾ
ಅನುಪಮನದ್ವಯನಿವನ ವಾಕ್ಯವನು
ಅನುಮಾನವಿಲ್ಲದೆ ನಂಬಣ್ಣಾ
ನಿನ್ನ ಪಾಲಿಗಿರುವ ಸಾಂಬಣ್ಣಾ

**

ಜಾನಪದ ವೈದ್ಯ ಅನೇಕ ನಿಟ್ಟಿನಲ್ಲಿ ಉಪಯುಕ್ತವಾದುದು. ಇದು ಮೂಢ ನಂಬಿಕೆಗೆ ಆಶ್ರಯವಿತ್ತಂತೆ ಕಂಡರೂ ಅವೈಜ್ಞಾನಿಕವಾಗಿಲ್ಲ. ಆದರೂ ಇದು ಜನರ ನಂಬುಗೆಯ ಮೇಲೆಯೇ ಬೆಳೆದುನಿಂತಿದೆ ಎಂದು ಹೇಳಲೇಬೇಕಾಗುತ್ತದೆ. ಸ್ಥಳೀಯ ವಾಗಿ ದೊರಕುವ ಗಿಡಮೂಲಿಕೆಗಳನ್ನು ಬಳಸಿ ಔಷಧ ಕೊಟ್ಟರೂ ಈ ವೈದ್ಯರು ಜನರ ಮಾನಸಿಕ ಒಲವು ನಿಲುವುಗಳನ್ನು ಅರಿತು ಅವರಿಗೆ ಕೆಲ ನೇಮಗಳನ್ನು, ಆಚರಣೆ ಗಳನ್ನು ಹೇಳಿ ರೋಗ ಕಳೆಯುತ್ತಿದ್ದರು. ಮಾನಸಶಾಸ್ತ್ರದ ನೆರವಿನಿಂದ ಇತ್ತೀಚೆಗೆ ರೋಗ ಕಳೆಯುವ ಒಂದು ಹೊಸ ವಿಧಾನ ವೈದ್ಯಶಾಸ್ತ್ರದಲ್ಲಿ ಪ್ರಾಮುಖ್ಯತೆ ಗಳಿಸ ತೊಡಗಿದೆ. ಈ ನಿಟ್ಟಿನಿಂದ ನಮ್ಮ ಜನಪದ ವೈದ್ಯವನ್ನು ಅಭ್ಯಾಸ ಮಾಡಬೇಕು; ಉಪಯುಕ್ತ ವಿಷಯಗಳು ಸಂಗ್ರಹವಾಗುವುದರಲ್ಲಿ ಸಂಶಯವಿಲ್ಲ.

ಜಾನಪದ ವೈದ್ಯದ ಕೆಲ ವಿಚಿತ್ರ, ಆದರೂ ಜನರಿಗೆ ಅದರಿಂದ ಉಪಯೋಗ ವಾಗುತ್ತಿರುವ ವಿಧಾನಗಳು ಇಲ್ಲಿವೆ :

ಬಸುರಿ ಹೆಣ್ಣು ತೀವ್ರ ಹಡೆಯದಿದ್ದರೆ ಹೆಜ್ಜೆ ಕಿತ್ತದೆ ಬಾವಿಯ ನೀರು ಕುಡಿ ಸುವುದು.

ಜ್ವರ ಬಂದರೆ ನೀರು ಮಂತ್ರಿಸಿ ಕೊಡುವುದು, ಮೋರೆ ಮಂತ್ರಿಸುವುದು, ತೂಪಿರಿಯುವುದು.

ಮಗುವಿಗೆ ಒಂದೇಸವನೆ ಜೊಲ್ಲು ಸುರಿಯುತ್ತಿದ್ದರೆ ಒಂದೇ ಹೆಸರಿರುವ ಗಂಡ ಹೆಂಡಿರು ಆ ಮಗುವಿನ ಬಾಯಲ್ಲಿ ವಿಭೂತಿಪುಡಿ ಉದುರಿಸುವರು.

ಮಗುವಿನ ತಾಯಿಯ ಮೊಲೆಯು ನರ ತೊಡಕಿದರೆ ಚಿಲಕ ಇಳಿ ತೆಗೆಯುವುದು, ಮಣ್ಣುಹೆಂಟೆ ಇಳಿ ತೆಗೆಯುವುದು ಇಲ್ಲವೆ ಕಾಲುಮುಂದಾಗಿ ಬಾಯಿ ಮೇಲಾಗಿ ಹುಟ್ಟಿ ದವರ ಎಡಗಾಲು ಇಳಿ ತೆಗೆಯುವುದು.

ಹುಣ್ಣುಗಳಿಗೆ ಕಲ್ಲುಮೂರ್ತಿಗಳ ಮೇಲಿನ ಹುರಿಮಂಜ ತಂದು ಹಚ್ಚುವುದು. ಉಗುರುಸುತ್ತಾದರೆ ಕೋಣನ ಮೂಗಿನಲ್ಲಿ ಬೆರಳು ಇಡಿಸುವುದು. ಬೀಸುವಕಲ್ಲು ಎತ್ತುವುದು.

ಈ ವಿಷಯದಲ್ಲಿ ಅಂತ್ರ ಮಂತ್ರಗಳೂ ಬಹಳ ಕೆಲಸ ಮಾಡುತ್ತವೆ. ತಾಯಿತ ಕಟ್ಟುವುದು, ಕರಿಯ ದಾರ, ಕವಡಿ. ಕೇರು, ಗಜುಗ ಮುಂತಾದವುಗಳನ್ನು ಮಂತ್ರಿಸಿ ಕಟ್ಟುವುದು—ಜನರಲ್ಲಿ ಬಳಕೆ ಇದೆ.

'ಮಾಟ' ಬಳಕೆಯಲ್ಲಿತ್ತು, ಹೆಚ್ಚಾಗಿ ಇದು ದುರುಪಯೋಗವಾಗುತ್ತಿತ್ತು. ಕಣ್ಣುಕಟ್ಟು, ಮೋಸ, ಇಂದ್ರಜಾಲ ಬಲ್ಲವರು ಬಹಳ ಕಡಿಮೆಯಿರುತ್ತಿದ್ದರು. ದಿಗ್ಬಂಧನ

ಮಾಡುವುದು, ವೈರಿಗಳಿಗೆ ಮಾತಾಡಲು ಬರದಂತೆ ಮಾಡುವುದು, ಇಲ್ಲಿ ಮಂಡಲ ಬರೆದ ಗೊಂಬೆಗೆ ಹೊಡೆದರೆ ದೂರದ ವೈರಿಗೆ ಪೆಟ್ಟಾಗುವುದು. ಇಲ್ಲಿ ಮಂತ್ರ ಹಾಕಿದರೆ ಇನ್ನೊಂದು ಸ್ಥಳದಲ್ಲಿರುವ ವೈರಿಗೆ ರೋಗ ಬರುವುದು ಮುಂತಾದ ದುಷ್ಟ ಕೆಲಸಗಳು ಹಿಂದೆ ನಡೆಯುತ್ತಿದ್ದುವು. ಮದ್ದು ಮಾಡಿಸುವುದು ಇಂದಿಗೂ ಪ್ರಸಿದ್ಧವೇ ಆಗಿದೆ. ಈ ಮಾಟದಿಂದ ಏನಾದರೂ ಒಳ್ಳೆಯದು ಗಳಿಸುವುದು ಸಾಧ್ಯವೇ ಎಂಬುದನ್ನು ಈಗ ತಿಳಿದು ನೋಡಬೇಕಾಗಿದೆ.

ಮಾಟದ ಇನ್ನೊಂದು ರೀತಿ ಇಂದ್ರಜಾಲ ತೋರಿಸುವುದು. ಈ ಮಾಟಗಾರರು ಎಂದರೆ ಜಾದೂಗಾರರು ಅನೇಕ ಚಮತ್ಕಾರಗಳನ್ನು ಮಾಡಿತೋರಿಸುವರು. ಜಾತ್ರೆಗಳಲ್ಲಿ, ಸಂತೆಗಳಲ್ಲಿ ಇವರು ಚಮತ್ಕಾರಗಳನ್ನು ತೋರಿಸುತ್ತಿದ್ದರು. ಚಮತ್ಕಾರದ ಜೊತೆಗೆ, ಕೈಚಳಕದ ಜೊತೆಗೆ ಇವರಿಗೆ ಮಾಂತ್ರಿಕಶಕ್ತಿಯೂ ಇರುತ್ತಿತ್ತು. ರೂಪಾಯಿ ಮಾಡುವುದು, ಜೇರೆಕಡೆಯ ತಿಂಡಿ ತಿನಿಸುಗಳನ್ನು ಬರಿಸುವುದು ಮುಂತಾದ ಮಾಟಮಾಡಿ ತೋರಿಸುತ್ತಿದ್ದರು. ಇಂದು ಬಹುದೊಡ್ಡವರು ಮಾಡುವ ಪವಾಡಗಳನ್ನು ನಮ್ಮ ಮಾಟಗಾರರೂ ಮಾಂತ್ರಿಕರು ಮಾಡಿ ತೋರಿಸುತ್ತಿದ್ದರು. ಈ ಜನ ಈಗ ಇಲ್ಲವಾಗಿದ್ದಾರೆ. ಅಲ್ಲೊಬ್ಬರು ಇಲ್ಲೊಬರು ಇದ್ದಾರೆ. ಈ ವಿದ್ಯೆ ನಶಿಸಿಹೋಗುವ ಮುನ್ನ ಅದನ್ನು ಉಳಿಸಿ ಕಾಪಾಡಿಕೊಳ್ಳಬೇಕು.

**

"ಕೊರವಂಜಿ" ನಮ್ಮ ನಾಡಿಗೆ ಹಳಬಳು. ನಮ್ಮ ಪುರಾಣಕಾವ್ಯಗಳಲ್ಲಿ, ನಾಟಕಗಳಲ್ಲಿ ಈಕೆ ಕಾಣಿಸಿಕೊಂಡಿದ್ದಾಳೆ; ಕೊರವಂಜಿಯನ್ನು ಕುರಿತು ಅನೇಕ ಯಕ್ಷಗಾನಗಳಿವೆ.

ಹಿಂದೆ ಪಾರ್ವತಿ ಕೊರವಂಜಿಯಾಗಿ ಕಣಿಹೇಳಿದಳಂತೆ. ಆಕೆಯ ಮಕ್ಕಳಾದ ಈ ಕೊರವರಿಗೆ ಕಣಿಹೇಳುವ ಹಕ್ಕು ದೈವದತ್ತವಾಗಿ ಬಂತು. ಈ ಅಲೆಮಾರಿ ಜನರು ಬೆತ್ತದ ಕೆಲಸ ಮಾಡುತ್ತಾರೆ. ಬೇಟೆಯಾಡುತ್ತಾರೆ. ಇವರಲ್ಲಿ ಹೆಂಗಸರು ಮಾತ್ರ ಕಣಿಹೇಳುತ್ತಾರೆ: ಆ ಹಕ್ಕು ಗಂಡಸರಿಗಿಲ್ಲ.

ವಿಚಿತ್ರ ವೇಷ ಭೂಷಣಗಳಿಂದ ಹಾಡು ಹೇಳುತ್ತ ಮನೆಮನೆತಿರುಗಿ ಭವಿಷ್ಯ ಹೇಳುವ ಕೊರವಂಜಿ ಹಿಂದೆ ಬಹಳ ಜನಪ್ರಿಯಳಾಗಿದ್ದಳು. ಅವಳು ಈಗ ಕಾಣಸಿಗಳು.

ನಮ್ಮ ಜಾನಪದ ಅನುಭಾವಿಗಳು ಕೊರವಿಯನ್ನು ಕುರಿತು ಹಾಡಿದ್ದಾರೆ; ಕೂಡಲೂರು ಬಸವಲಿಂಗ ಶರಣರ ಪದ್ಯ ಬಹು ಅರ್ಥಪೂರ್ಣವಾಗಿದೆ.

**

ನಮ್ಮ ಜಿಲ್ಲೆಯಲ್ಲಿ ಬಹಳಷ್ಟು ವೃತ್ತಿಕಾರರಿದ್ದಾರೆ. ಅವರನ್ನು ಕುರಿತು ಒಂದು ಸಮಗ್ರ ಅಧ್ಯಯನ–ಸಮಾಜಶಾಸ್ತ್ರದ ದೃಷ್ಟಿಯಿಂದ–ಮಾಡುವ ಒಂದು ಕಾರ್ಯಕ್ರಮ ಹಾಕಿಕೊಂಡಿದ್ದೇವೆ. ಮೂರು-ನಾಲ್ಕು ವರ್ಷಗಳಲ್ಲಿ ಆ ಕಾರ್ಯ ಮುಗಿಸಬೇಕೆಂದಿದ್ದೇವೆ. ಈ ವೃತ್ತಿಕಾರರ ಬಗೆಗೆ ಸಮಗ್ರ ಉತ್ತರಕರ್ನಾಟಕದಲ್ಲಿ ಇಂಥ ಒಂದು ಅಧ್ಯಯನ ನಡೆಯಬೇಕಾದುದು ಅವಶ್ಯವಾಗಿದೆ.

ಈ ಸಮ್ಮೇಳನದ ಕಾಲಕ್ಕೆ ಈ ವೃತ್ತಿಕಾರರಲ್ಲಿ ಕೆಲವರನ್ನಾದರೂ ಇಲ್ಲಿಗೆ ಕರೆಯಿಸ ಬಹುದಾಗಿತ್ತು. ಮುಂದಿನ ಸಮ್ಮೇಳನಗಳಲ್ಲಿ ಆಯಾ ವಿಷಯಗಳಿಗೆ ಸಂಬಂಧಿಸಿದವ ರನ್ನು ಸಮ್ಮೇಳನಕ್ಕೆ ಕರೆಯಿಸುವ ವ್ಯವಸ್ಥೆ ಆಗಲೆಂದು ಹಾರಯಿಸುವೆ.

ಇನ್ನೊಂದು ಮಾತು ಮುಖ್ಯವಾದುದು. ಉತ್ತರ ಕರ್ನಾಟಕದ ಮತ್ತು ಹಳೆಯ ಮೈಸೂರಿನ ಜಾನಪದ ಸಾಹಿತ್ಯದಲ್ಲಿ ಬಹಳಷ್ಟು ಅಂತರವಿದೆ, ಅದನ್ನು ಶಾಸ್ತ್ರೀಯವಾಗಿ ಅಭ್ಯಾಸಮಾಡಬೇಕು.

ಇಂಥ ಕೆಲಸಕ್ಕೆ ಕ್ಷೇತ್ರಕಾರ್ಯ ಅಗತ್ಯ. ಅದಕ್ಕಾಗಿ ಶ್ರಮ, ಅವಧಿ, ಹಣ ಅವಶ್ಯ. ಈ ಕೆಲಸಕ್ಕೆ ತೊಡಗುವವರಿಗೆ ಬಜೆಟ ಮತ್ತು ತಿರುಗಾಡಲು ಒಂದಿಷ್ಟು ಹಣದ ನೆರವು ವಿಶ್ವವಿದ್ಯಾಲಯದಿಂದ ಬೇಕು.

ಈ ವೃತ್ತಿಕಾರರು ಬಳಸುವ ವಾದ್ಯಗಳನ್ನು ಮತ್ತು ಉಪಕರಣಗಳನ್ನು ಸಂಗ್ರಹಿಸುವ ಕಾರ್ಯ ನಡೆಯಬೇಕು.

ಅನೇಕ ಶರಣರು ಈ ವೃತ್ತಿಗಳನ್ನು ಉದಾತ್ತೀಕರಿಸಿದರೆಂದು ಈ ಮೊದಲು ಹೇಳಿದೆ. ಈ ವೃತ್ತಿಕಾರರ ಅಧ್ಯಯನ ನಡೆಸುವವರು ಈ ವಿಷಯವನ್ನು ನೆನಪಿಟ್ಟು ಕೊಂಡು ಅಧ್ಯಯನ ಮುಂದುವರಿಸಿದರೆ ಉಪಯುಕ್ತ ಮಾಹಿತಿ ದೊರಕೀತೆಂದು ಆಶಿಸುವೆ.

## ಗೋಷ್ಠಿ : ೨

---

ಲಾವಣಿಕಾರರು : ಡಾ. ಬಿ. ಬಿ. ಹೆಂಡಿ

ಕಿಳ್ಳೇಕೇತರು : ಪ್ರೊ. ಮಹೇಶ ತಿಪ್ಪಶೆಟ್ಟಿ

ಸಿದ್ಧಿಕೆಸಿದ್ಧಿಯವರು : ಪ್ರೊ. ಜ್ಯೋತಿ ಹೊಸೂರ

ಕವಲೆತ್ತಿನವರು : ಡಾ. ಎಂ. ಎಸ್. ಲಠ್ಠೆ

ವೇಷಗಾರರು : ಡಾ. ಎಂ. ಎಂ. ಕಲಬುರ್ಗಿ

ಡೊಂಬರು : ಪ್ರೊ. ದೇವೇಂದ್ರಕುಮಾರ ಹಕಾರಿ

ಹಾವಾಡಿಗರು : ಪ್ರೊ. ಸೋಮಶೇಖರ ಇಮ್ರಾಪುರ

ಅಧ್ಯಕ್ಷರ ಭಾಷಣ :
ಡಾ. ಕೆ. ಜಿ. ಶಾಸ್ತ್ರಿ

# ಲಾವಣಿಕಾರರು

ಬಿ. ಬಿ. ಹೆಂಡಿ

ಜನಪದ ಸಾಹಿತ್ಯ ಹಾಗೂ ಹಾಡುಗಾರಿಕೆಯ ಪ್ರಮುಖ ಪ್ರಕಾರಗಳಲ್ಲೊಂದಾದ ಲಾವಣಿ ಕರ್ನಾಟಕದಲ್ಲಿಯೂ ಭಾರತದ ಇತರ ಅನೇಕ ಪ್ರಾಂತಗಳಲ್ಲಿಯೂ ಬೆಳೆದು ಉಳಿದು ಬಂದಿರುವುದು ವೃತ್ತಿಕಾರರ ಕೈಯಲ್ಲಿ. ಆದರೆ ಭಾರತೀಯ ಯಾವುದೇ ಪ್ರಾಂತದಲ್ಲೂ ಲಾವಣಿಕಾರರದೇ ಎಂಬ ವಿಶಿಷ್ಟ ಜನಾಂಗವಿದ್ದ ಬಗೆಗೆ ತಿಳಿದು ಬರುವುದಿಲ್ಲ. ಅಶಿಕ್ಷಿತ ಹಾಗೂ ಅಲ್ಪಶಿಕ್ಷಿತರಾದ ಎಲ್ಲ ಜಾತಿಯವರಲ್ಲಿಯೂ ಲಾವಣಿ ರಚಿಸಿದವರು, ಹಾಡಿದವರೂ ಕಂಡುಬರುವುದರಿಂದ ಇದನ್ನು ವಿಶಿಷ್ಟ ಕುಲ ಅಥವಾ ಜಾತಿಯ ಸಂಪ್ರದಾಯದಲ್ಲಿ ಎಣಿಸಲು ಬರುವಂತಿಲ್ಲ. ಪೂರ್ವದ ಲಾವಣಿಗಳನ್ನು ಗಮನಿಸಿದರೆ ಈ ಸಾಹಿತ್ಯದ ವಸ್ತು ಸಮಗ್ರ ಹಿಂದು ಜನಪದ ಸಂಪ್ರದಾಯವನ್ನು ಪ್ರತಿನಿಧಿಸುವಂತಹದೆಂದು ವಿದಿತವಾಗುತ್ತದೆ. ಇತ್ತೀಚೆಗೆ ರಚಿತವಾಗಿರುವ ಕಾಂಗ್ರೆಸ್ ಪ್ರಚಾರ, ಒಕ್ಕಲುತನ, ಸಂತತಿ ನಿಯಂತ್ರಣಾದಿ ಪ್ರಚಾರದ ಹಾಡುಗಳು ಒಟ್ಟು ದೇಶ ಮತ್ತು ಸಮಗ್ರ ಜನಪದ ಜೀವನವನ್ನೇ ಪ್ರತಿನಿಧಿಸುತ್ತಿವೆಯೆನ್ನಬೇಕು.

ಕನ್ನಡದಲ್ಲಿ ಲಾವಣಿ ಸಾಹಿತ್ಯಕ್ಕೆ ತೌರು ಉತ್ತರ ಕರ್ನಾಟಕ. ಅದರಲ್ಲಿಯೂ ಬೆಳಗಾಂವಿ, ವಿಜಾಪೂರ, ಕಲಬುರ್ಗಿ ಜಿಲ್ಲೆಗಳು ಲಾವಣಿಗಳ ಗಂಡು ಮೆಟ್ಟು. ಅಲ್ಲಿಯೆ ಅವು ಹುಲಸಾಗಿ ಜೀವಂತ ಜಾನಪದ ಸಂಪರ್ಕಹೊಂದಿ ಬೆಳೆದು ಬಂದಿವೆ. ಇಂದಿಗೂ ಲಾವಣಿ ರಚಿಸುವವರು, ಹಾಡುವ ಮೇಳದವರು ಈ ಭಾಗದಲ್ಲಿ ಪ್ರಚಾರದಲ್ಲಿದ್ದಾರೆ. ಉತ್ತರ ಕರ್ನಾಟಕದಲ್ಲಿ ಸ್ವತಃ ಲಾವಣಿ ಹಾಡುಗಳನ್ನು ಕಟ್ಟಿದ ಸಣ್ಣದೊಡ್ಡ ಕವಿಗಳ ಸಂಖ್ಯೆ ಸುಮಾರು ಎಂಬತ್ತರಷ್ಟಾಗುತ್ತದೆ. ಹೆಸರು ಸ್ಥಳಾದಿಗಳು ಗೊತ್ತಾಗದೆ ಇದ್ದವರೂ

ಅನೇಕರಿದ್ದಾರೆ. ಕೇವಲ ಹಾಡಿಕೆ ಮಾಡುವ ವೃತ್ತಿಗಾಯಕರ ಸಂಖ್ಯೆ ಅನೇಕ ನೂರಾದೀತು.

ಕನ್ನಡದಲ್ಲಿ ಈಗ ಜನಪ್ರಿಯವಾಗಿ ಹಾಡಿಕೆಯಲ್ಲಿರುವ ಲಾವಣಿ ಪದ್ಧತಿಗೆ ಪೇಶವೆ ಕಾಲದಲ್ಲಿ ಮರಾಠಿಯಲ್ಲಿ ಸಮೃದ್ಧವಾಗಿ ಬೆಳೆದ ಲಾವಣಿ ಮತ್ತು ಆ ಹಿಂದೆಯೇ ಅಲ್ಲಿ ಬೆಳೆದಿದ್ದ ಪೊವಾಡಾಗಳೇ ಪ್ರೇರಕಗಳೆಂದು ಹೇಳುವುದು ಸೂಕ್ತವೆಂದು ತೋರುತ್ತದೆ. ಇಷ್ಟೇ ಅಲ್ಲ, ಉತ್ತರ ಹಿಂದುಸ್ತಾನದಲ್ಲಿ, ಹಿಂದಿಯಲ್ಲಿ ರಚಿತವಾದ ಲಾವಣಿಗಳಿಗೂ ಮರಾಠಿ ಲಾವಣಿಗಳೇ ಮೂಲವೆಂದು ಅಲ್ಲಿ ಜನವಾಡಿಕೆಯುಂಟು. ಲಾವಣಿಗೆ 'ಮರಹಟೀಗಾನಾ' ಅಥವಾ 'ಮರಹಟಿಬಾಜಿ' ಎಂದು ಹಿಂದಿಯಲ್ಲಿ ಕ್ವಚಿತ್ತಾಗಿ ಕರೆಯುವುದುಂಟು. ಇದಕ್ಕೆ ಕಾರಣವೇನೆಂಬುದಕ್ಕೆ ಅಲ್ಲಿ ವದಂತಿಯೊಂದು ಲಾವಣಿಕಾರರಲ್ಲಿ ಬೆಳೆದು ಬಂದಿದೆ. ಅಕಬರನ ಕಾಲದಲ್ಲಿ (೧೫೫೬–೧೬೦೫) ಶಹಾಅಲಿ ಮತ್ತು ತುಕನ್‌ಗೀರ (೧೫೭೦–೧೬೪೫) ಎಂಬ ಇಬ್ಬರು ಲಾವಣಿಕಾರರಿದ್ದರಂತೆ. ಇವರಲ್ಲಿ ಶಹಾ ಅಲಿಗೆ ಅಕಬರನು ಬಹುಮಾನವಾಗಿ ತನ್ನ ಕಿರೀಟದಲ್ಲಿದ್ದ ಕಲ್ಗಿ (ಪಕ್ಷಿಯ ಗರಿ) ಯನ್ನೂ ತುಕನ್‌ಗೀರನಿಗೆ ಕಲ್ಗಿಯ ಬಲಕ್ಕೆ ಕಿರೀಟದಲ್ಲಿ ಧರಿಸುತ್ತಿದ್ದ ಹೂವಿನ ಗುಚ್ಛವ (ತುರಾಯಿಯ) ನ್ನೂ ಕೊಟ್ಟನಂತೆ. ಅಂದಿನಿಂದ ಅವರಿಬ್ಬರೂ ಕ್ರಮವಾಗಿ ಕಲ್ಗಿ ಮತ್ತು ತುರಾ ಸಂಪ್ರದಾಯಕ್ಕೆ ಮೊದಲಿಗರಾದರಂತೆ.[೧] ಈ ಸಂತ ತುಕನ್‌ಗೀರ ಮಹಾರಾಷ್ಟ್ರದಲ್ಲಿ ಜನಿಸಿದವನು. ತುಕನ್‌ಗೀರನಿಂದ ಅಥವಾ ಮಹಾರಾಷ್ಟ್ರದಲ್ಲಿ ಆ ಪೂರ್ವದಲ್ಲಿಯೇ ಪ್ರಚುರಗೊಂಡಿದ್ದ ಲಾವಣಿ ಸಾಹಿತ್ಯದ ಪ್ರಭಾವದಿಂದ, ಹಿಂದಿಯಲ್ಲಿ ಲಾವಣಿ ಸಾಹಿತ್ಯ ಬೆಳೆಯಿತೆಂಬುದು ಈ ವದಂತಿಯ ಆಶಯ. ಆದರೆ ಲಾವಣಿ ಸಾಹಿತ್ಯ ಸಂಪೂರ್ಣವಾಗಿ ಮರಾಠಿ ಮೂಲದ್ದೇ ಎಂಬುದನ್ನು ಒಪ್ಪದೆ, 'ಇದರ ಆರಂಭ ಭಾರತದ ತುಂಬ ಕೃಷಿ ಸಂಪ್ರದಾಯಸ್ಥರಲ್ಲಿ ಹೊಲ ಗದ್ದೆಗಳಲ್ಲಾಯಿತೆಂದು' ಅಭಿಪ್ರಾಯ ಪಡುವವರೂ ಉಂಟು.[೨] ಪ್ರಸಿದ್ಧರೂ ಲಾವಣಿಯ ಸಮೃದ್ಧ ಹಾಗೂ ಶ್ರೀಮಂತ ಬೆಳವಣಿಗೆಗೆ ಮಹಾರಾಷ್ಟ್ರವೇ ತಾಯ್ನೆಲವೆನ್ನುವುದನ್ನೂ ಭಾರತದ ಇತರ ಭಾಷೆಗಳಲ್ಲಿಯ ಲಾವಣಿಗಳಿಗೆ ಪ್ರೇರಣೆ ಹಾಗೂ ಮಾದರಿ ಮರಾಠಿ ಲಾವಣಿಯೆಂಬುದನ್ನೂ ಅಲ್ಲಗಳೆಯುವಂತಿಲ್ಲ.

ಮರಾಠಿಯಲ್ಲಿ ಲಾವಣಿ ಸಾಹಿತ್ಯ ಎಷ್ಟು ಪೂರ್ವದ್ದು ಎಂಬ ಬಗೆಗೆ ಬಹಳಷ್ಟು ಸಂಶೋಧನಾಭ್ಯಾಸ ಆಗಿದೆ. ಈ ಸಾಹಿತ್ಯ ವಿಭಾಗದಲ್ಲಿ ಖ್ಯಾತ ಸಂಶೋಧಕರೆಂದು

---

೧. ನೋಡಿ : ಡಾ. ಪುಣ್ಯಮಚಂದ ಅವರ 'ಹಿಂದೀಲಾವಣೀ–ಸಾಹಿತ್ಯ ಪರ್ ಹಿಂದಿ ಸಂತ ಸಾಹಿತ್ಯಕಾ ಪ್ರಭಾವ' (ಪು. ೨೫, ೩೦–೩೧) ಪ್ರಕಾಶಕ ಸರಸ್ವತೀ ಪುಸ್ತಕ ಸದನ, ಮೋತೀಕಟರಾ. ಆಗ್ರಾ-೩.

೨. ನೋಡಿ : ಅದೇ, ಪು. ೩೦–೩೧.

ಹೆಸರಾದ ಪ್ರೊ. ಧೋಂಡ ಅವರು ೧೯೬೫ ರಲ್ಲಿ ಹೀಗೆ ಬರೆದಿದ್ದರು; 'ಶಾಹೀರೀ ಕವಿತೆ ಯೆಂದರೆ ಪೋವಾಡಗಳು ಮತ್ತು ಲಾವಣಿಗಳು. ಇವುಗಳಲ್ಲಿ ಪೋವಾಡಗಳು ಶಿವಾಜಿಯ ಕಾಲದಿಂದಲೂ ಲಾವಣಿಗಳು ಉತ್ತರ ಪೇಶವೆ ಕಾಲದಿಂದಲೂ ಉಪಲಬ್ಧವಾಗು ತ್ತಿರುವುದರಿಂದ ಪೋವಾಡಗಳ ರಚನೆ ಶಿವಾಜಿ ಕಾಲದಲ್ಲಿಯೂ ಲಾವಣಿಗಳ ರಚನೆಯು ಪೇಶವೆ ಕಾಲದಲ್ಲಿಯೂ ಆರಂಭವಾಯಿತೆಂದು ಅಭಿಪ್ರಾಯ ಪಡುವುದು ಸರಿಯಾಗ ಲಾರದು. ಬೆಳಕಿಗೆ ಬಂದಿರುವವುಗಳಿಗೆ ಹೊರತಾಗಿ ಅನೇಕ ಶಾಹಿರಿಗಳು ಕಾಲಗರ್ಭ ದಲ್ಲಿ ಹುದುಗಿಕೊಂಡಿರಬಹುದೆಂದು ಭಾವಿಸಲು ಅವಕಾಶವಿದೆ. ಅವು ಮುಂದೆ ಉಪಲಬ್ಧವಾಗುವ ಸಂಭವ ತೀರಾ ಕ್ಷೀಣವಾಗಿದ್ದರೂ ಅವುಗಳ ಗುರುತನ್ನು ಪ್ರಾಚೀನ ವಾಙ್ಮಯದಲ್ಲಿ ತೋರಿಸಲು ಬರುತ್ತದೆ.'[೩] ಮರಾಠಿಯ ಜನಪ್ರಿಯ ಲಾವಣಿಕಾರರಾದ ಹೋನಾಜಿ ಬಾಳಾ, ಸಗನಭಾವು, ರಾಮ ಜೋಶಿ, ಅನಂತ ಫಂದಿ, ಪ್ರಭಾಕರ ಮುಂತಾದ ಪ್ರಸಿದ್ಧ ಲಾವಣಿಕಾರರು ಕೃತಿರಚನೆ ಮಾಡಿದುದು ಪೇಶವೆ ಕಾಲದಲ್ಲಿ. ಎರಡನೆಯ ಬಾಜೀರಾಯನ ಕಾಲದ ನಂತರ ಮರಾಠಿ ಲಾವಣಿ ಅತ್ಯಂತ ಉನ್ನತಿಗೇರಿತು. ರಾಮಜೋಶಿ (೧೭೫೦–೭೦) ಕಾಲದಲ್ಲಿ ಪರಿಪುಷ್ಟವಾಗಿ ಬೆಳೆದು ನಿಂತ ಲಾವಣಿ ಸು. ೧೭೦೦ ರ ಹೊತ್ತಿಗೆ ಜನ್ಮತಾಳಿರಬೇಕೆಂದು ಮೊದಮೊದಲು ಸ್ಥೂಲವಾಗಿ ಅಭಿಪ್ರಾಯ ಇಟ್ಟುಕೊಳ್ಳಲಾಗಿದ್ದಿತು. ಆದರೆ ಇತ್ತೀಚಿನ ಸಂಶೋಧನೆ ಅದರ ಕಾಲ ಮಿತಿಯನ್ನು ಜ್ಞಾನದೇವನ ಕಾಲಮಾನ (೧೨೭೫–೧೨೯೬) ದಷ್ಟು ಹಿಂದಕ್ಕೆ ಒಯ್ಯುತ್ತಿದೆ.

ಪುಣೆಯ ಭಾರತೀಯ ಇತಿಹಾಸಮಂಡಳ ಹಸ್ತಪ್ರತಿ ಭಂಡಾರದಲ್ಲಿ ಒಂದು ಲಾವಣಿ ದೊರೆತಿದ್ದು ಅದರ ಹೆಸರು 'ಕರಾಡಾಚ್ಯಾ ಭವಾನೀ ವರೀಲ ಲಾವಣೀ' ಎಂದಿದೆ. ಅದನ್ನು ಮ. ಮ. ಪೋತದಾರ ಎಂಬವರು ಕ್ರಿ. ಶ. ೧೯೧೫ ರಲ್ಲಿ ಪ್ರಕಟಿ ಸಿದ್ದರೂ ಅದರ ಕರ್ತೃ, ಮನ್ಮಥ ಶಿವಲಿಂಗನ ಕಾಲದ ಬಗೆಗೆ ಯಾವ ನಿರ್ಣಯವನ್ನೂ ಅವರು ನೀಡಿರಲಿಲ್ಲ. ವೀರಶೈವ ಸಂತನಾದ ಈ ಮನ್ಮಥ ಶಿವಲಿಂಗನ ಬಗೆಗೆ ಇತ್ತೀಚೆ ಬಹಳಷ್ಟು ಸಂಶೋಧನೆಯಾಗಿದೆ. ಇವನ ಇನ್ನೊಂದು ಗ್ರಂಥ 'ಪರಮ ರಹಸ್ಯ' ವೆಂಬುದು ವೀರಶೈವಶಾಸ್ತ್ರಕ್ಕೆ ಸಂಬಂಧಿಸಿದುದು. ಇದರಲ್ಲಿ ಗ್ರಂಥರಚನೆಯ ಕಾಲ ಕ್ರಿ. ಶ. ೧೬೦೦ ಎಂದು ಹೇಳಲಾಗಿದೆ. ಈ ಆಧಾರದಿಂದ ಗ್ರಂಥಕರ್ತನು ಜೀವಿ ಸಿದ್ದುದು ಕ್ರಿ. ಶ. ೧೫೬೦ ರಿಂದ ೧೬೧೩ ರ ವರೆಗೆ ಎಂದೂ ಆ ಕಾರಣದಿಂದ ಪ್ರಸ್ತುತ ಲಾವಣಿ ಕನಿಷ್ಠಪಕ್ಷ ೧೬೦೦ಕ್ಕೆ ಹಿಂದೆ ರಚಿತವಾದುದೆಂದೂ ನಿರ್ಣಯಿಸಲಾಗಿದೆ. ಹೊಸ ಲಾವಣಿಗಳು ದೊರೆಯುವ ವರೆಗೆ ಮನ್ಮಥ ಶಿವಲಿಂಗರಚಿತ ಈ ಲಾವಣಿಯೆ ಅತಿ ಪೂರ್ವದ ಉಪಲಬ್ಧ ರಚನೆಯೆಂದು ಸ್ವೀಕರಿಸಲಾಗಿದೆ.[೪]

---

೩. ಡಾ. ಗಂಗಾಧರ ಮೊರಜೆ, 'ಮರಾಠೀ ಲಾವಣೀ ವಾಙ್ಮಯ ರಚನಾ' ಪೃ. ೨.
೪. ಅದೇ ಪೃ. ೩.

ಮನ್ಮಥ ಶಿವಲಿಂಗನ ಗುರುವಿನ ಹೆಸರು 'ನಾಗನಾಥ' ಅಥವಾ 'ನಾಗೇಶ' ಎಂದಿದೆ. ಮನ್ಮಥ ಶಿವಲಿಂಗನಿಗಿಂತಲೂ ಹಿಂದೆ ಪೊವಾಡಗಳ ರಚನೆಯಾಗುತ್ತಿದ್ದು ೧೪ ನೆಯ ಶತಕದಲ್ಲಿ ಅಜ್ಞಾನಸಿದ್ಧ ಮತ್ತು ಬಹಿರಾಪೀಸಾ ಎಂಬಿಬ್ಬರು ರಚಿಸಿದ ಎರಡು ಪೊವಾಡಗಳು ಪ್ರಸಿದ್ಧಗೊಂಡಿವೆ. ಇವರಲ್ಲಿ ಅಜ್ಞಾನಸಿದ್ಧನು ತನ್ನ ಗುರುವಿನ ಹೆಸರು ನಾಗನಾಥನೆಂದು ಹೇಳಿದ್ದಾನೆ. ಈ ನಾಗನಾಥನ ಕಾಲವನ್ನು ಶ್ರೀ ಚಾಂದೋರ ಕರ ಅವರು ಶಕೆ ೧೨೫೦–೧೩೪೦ ಎಂದರೆ ಕ್ರಿ. ಶ. ೧೩೨೮–೧೪೧೮ ಎಂದು ನಿರ್ಣಯಿ ಸುತ್ತಾರೆ. ಈ ನಾಗೇಶನೇ ಹೆಣ್ಣಿನ 'ನಾಗೇಶಿ' ಪಕ್ಷಕ್ಕೆ ಮೂಲಗುರುವಾಗಿರಬೇಕೆಂದು ತರ್ಕಿಸಲಾಗಿದೆ.[೫] ಈ ಪ್ರಕಾರ ಕನ್ನಡ ಲಾವಣಿಯಲ್ಲಿ ಬರುವ ಹರದೇಶಿ (ಹರಿದಾಸ) ಮತ್ತು ನಾಗೇಶ ಎಂಬ ಸಂಪ್ರದಾಯಗಳೂ ಮೂಲತಃ ಮಹಾರಾಷ್ಟ್ರದಿಂದಲೇ ಬಂದವುಗಳೆಂದು ಈಗಿನ ಮಟ್ಟಿಗೆ ತೋರುತ್ತದೆ.

ಕನ್ನಡದಲ್ಲಿ ಲಾವಣಿಸಾಹಿತ್ಯಕ್ಕೆ ತೀರಾ ಪ್ರಾಚೀನ ನೆಲೆಯನ್ನು ಗುರುತಿಸಲು ಸಾಧ್ಯವಾಗಿಲ್ಲ. ಸುಮಾರು ಇನ್ನೂರು ವರುಷಗಳಷ್ಟು ಮಾತ್ರ ಇದರ ಚರಿತ್ರೆ ಹಿಂದೆ ಹೋಗಬಹುದು ಎಂದು ವಿದ್ವಾಂಸರ ತರ್ಕವಾಗಿದೆ. ಹದಿನೇಳನೆಯ ಶತಮಾನದ ಗುಣಚಂದ್ರನ 'ಛಂದಸ್ಸಾರಂ' ಗ್ರಂಥದಿಂದ ಎತ್ತಿತೋರಿಸಲಾದ ಲಕ್ಷಣಪದ್ಯ ಲಾವ(ಣಿ) ಳಿಯ ಪಾದ ಮಿತಿಯ ಅನಿರ್ದಿಷ್ಟತೆ ಮತ್ತು ಅಂತ್ಯಪ್ರಾಸಗಳೆಂಬ ಎರಡು ಲಕ್ಷಣ ಗಳನ್ನು ಮಾತ್ರ ಸೂಚಿಸುತ್ತದೆ. ಇದಕ್ಕೆ ಲಕ್ಷ್ಯವಾದ ಲಾವಣಿ ಹಾಡುಗಳೇನಾದರೂ ಕನ್ನಡದಲ್ಲಿದ್ದವೆ ಎಂಬುದಕ್ಕೆ ಆಧಾರಗಳಿನ್ನೂ ಸಿಕ್ಕಿಲ್ಲ. ಲಾವಣಿಕಾರರು ತಮ್ಮ ಹಾಡು ರಚಿತವಾದ ಕಾಲವನ್ನು ಸಾಮಾನ್ಯವಾಗಿ ಹೇಳಿಕೊಂಡಿರುವುದಿಲ್ಲ. ಆದರೆ ಕೆಲವು ಲಾವಣಿಗಳಲ್ಲಿ, ಅಲ್ಲಿನ ಘಟನೆ ಜರುಗಿದ ಸಂವತ್ಸರಾದಿಗಳನ್ನು ಖಚಿತವಾಗಿ ಹೇಳಿರು ವುದು ಕಂಡುಬರುತ್ತದೆ. ಫ್ಲೀಟರು ಸಂಗ್ರಹಿಸಿದ ಐತಿಹಾಸಿಕ ಲಾವಣಿಗಳಲ್ಲಿ 'ಆದಾಯ ತೆರಿಗೆ'ಯ ವಸ್ತು ಪರಮಧೂತನಾಮ ಸಂವಚ್ಚರ (೧೮೬೮) ಪರಜೋತ್ಪತ್ತ್ಯ ಸಂವಚ್ಚರ (೧೮೬೯) ಗಳಿಗೆ ಸಂಬಂಧಿಸಿದುದು. ಸಂಗೊಳ್ಳಿ ರಾಯಣ್ಣನ ದಂಗೆ ಕ್ರಿ. ಶ. ೧೮೨೯ ರಲ್ಲಿ ಜರುಗಿದುದು. 'ಹಲಗಲಿ ಬೇಡರು' ಹಾಡಿನ ವಸ್ತು ೧೮೫೭ ರ ನಿಶ್ಯಸ್ತ್ರೀಕರಣ ಕಾಯ ದೆಯ ಪ್ರತಿಕ್ರಿಯೆ. 'ಸಂಗ್ಯಾನ ಅಪರಾಧ ಮತ್ತು ಸಾವು' ಹಾಡಿನ ಘಟನೆ ನಡೆದದ್ದು 'ಸಕೆ ಸತ್ತರಾಸೆ ಪಂಚಾಐಂಸಿ (ಶಕ ೧೭೮೫) ರುದ್ರೋದ್ಗಾರಿ ಸಂವತ್ಸರಾ' ಎಂದು ನಮೂದಿಸಲಾಗಿದೆ. ಕಳೆದ ಶತಮಾನದ ಧಾತುನಾಮ ಸಂವತ್ಸರ (ಶಕ ೧೭೯೮)ರಲ್ಲಿ ಬಿದ್ದ ಭೀಕರ ಬರಗಾಲದ ಕಣ್ಣುಕಟ್ಟು ಚಿತ್ರಕೊಡುವ ಲಾವಣಿಯೊಂದು ಸ್ಪಷ್ಟವಾಗಿ ಕಾಲವನ್ನು ಸೂಚಿಸುತ್ತದೆ. ಲಾವಣಿಕಾರರು ಸಾಮಾನ್ಯತಃ ಆಯಾ ಕಾಲದ ವೃತ್ತ ಪತ್ರಿಕಾಕಾರರೂ, ಇತಿಹಾಸಕಾರರೂ ಇದ್ದಂತಿರುತ್ತಾರೆ, ಒಂದು ಮಹತ್ವದ ಘಟನೆ ನಡೆದ ನಂತರ ಅದರ ನೆನಪು ಇನ್ನು ಜನರ ಚಿತ್ತದಲ್ಲಿ ಜೀವಂತವಾಗಿರುವಾಗಲೆ ಆ

೫. ಡಾ. ಗಂಗಾಧರ [illegible] ಮರಾಠೀ ಲಾವಣೀ ವಾಙ್ಮಯ ರಚನಾ' ಗ್ರಂಥ ಪು. ೩

ವಸ್ತುವನ್ನು ಬಳಸಿಕೊಂಡ ಮೊದಲ ಲಾವಣಿ ಹುಟ್ಟುತ್ತದೆ. ಅವುಗಳ ಯಶಸ್ಸನ್ನು ಕಂಡು ಅನಂತರದ ವೃತ್ತಿಲಾವಣಿಕಾರರೂ ಅದೇ ವಸ್ತುವನ್ನಾಧರಿಸಿ ತಮ್ಮ ಆವೃತ್ತಿಗಳನ್ನು ರಚಿಸುತ್ತಾರೆ. ಹೀಗಾಗಿ ಒಂದೇ ವೃತ್ತಾಂತವನ್ನವಲಂಬಿಸಿದ ಅನೇಕಾನೇಕ ಹಾಡುಗಳು ಬಳಕೆಯಲ್ಲಿ ಬರುವುದುಂಟು. ಆದುದರಿಂದ ಹಾಡುಗಳಲ್ಲಿಯ ವೃತ್ತಾಂತದ ಕಾಲಕ್ಕೂ ಆ ವೃತ್ತಾಂತವನ್ನು ಬಳಸಿಕೊಂಡು ಹುಟ್ಟಿದ (ವೃತ್ತಾಂತದ ಕಾಲವನ್ನು ಸ್ಪಷ್ಟವಾಗಿ ನಮೂದಿಸುವ) ಲಾವಣಿಗೂ ಬಹಳವೆಂದರೆ ಒಂದೆರಡು ವರುಷದ ಅಂತರವಿರುತ್ತದೆನ್ನಬೇಕು. ಈಗ ಸಿಕ್ಕುವ ಸ್ಪಷ್ಟವಾಗಿ ಕಾಲಮಾನವನ್ನು ಸೂಚಿಸುವ ಲಾವಣಿಗಳಲ್ಲಿ ಕಿತ್ತೂರ ಬಂಡಾಯ ವೃತ್ತಾಂತಕ್ಕೆ ಸಂಬಂಧಿಸಿದವೇ ಅತಿ ಹಳೆಯುವಾಗಿರುವ ಪ್ರಯುಕ್ತ ಅವುಗಳಲ್ಲಿ ಕೆಲವಾದರೂ ೧೮೨೫ ರಿಂದ ೧೮೪೦-೪೨ ರ ಅವಧಿಯಲ್ಲಿ ರಚಿತವಾದವುಗಳೆನ್ನಬೇಕು, ೧೮೪೦ ಕ್ಕೂ ಎಷ್ಟು ಹಿಂದೆ ಲಾವಣಿಗಳ ರಚನೆ ಕನ್ನಡದಲ್ಲಿ ಪ್ರಾರಂಭವಾಗಿರಬಹುದೆಂಬುದಕ್ಕೆ ಇನ್ನೂ ಖಚಿತವಾದ ಆಧಾರಗಳನ್ನು ಒದಗಿಸಬೇಕಾಗಿದೆ.

(ಈಗ ಕನ್ನಡದಲ್ಲಿರುವ ಲಾವಣಿಗಳ ಶೈಲಿ ಹಾಗೂ ಹಾಡುಗಾರಿಕೆ ನೆರೆಯ ಪ್ರಾಂತವಾದ ಮಹಾರಾಷ್ಟ್ರದ ಲಾವಣಿಗಳ ತೀವ್ರ ಪ್ರಭಾವಕ್ಕೊಳಗಾಗಿರುವಂತಹದು. ಸಖಿ, ಖ್ಯಾಲಿ, ಕಲ್ಗಿ, ತುರಾ, ಹರದೇಸಿ-ನಾಗೇಶಿ- ಮುಂತಾದ ಪಾರಿಭಾಷಿಕ ಪದಗಳು ಮುಖ್ಯ ಹಾಡನ್ನು ನುಡಿಗಳಿಗೆ ಬದಲಾಗಿ ಚೌಕಗಳಾಗಿ ವಿಭಾಗಿಸುವುದು. ಆದಿ ಪ್ರಾಸವನ್ನು ತ್ಯಜಿಸಿರುವುದು, ಇಡಿಯ ಚೌಕಿಗೆಲ್ಲ ಒಂದೇ ಅಂತ್ಯಪ್ರಾಸ ಯೋಜಿಸಿಕೊಂಡಿರುವುದು- ಈ ಮುಂತಾದ ಲಕ್ಷಣಗಳು ಮರಾಠಿ ಪ್ರಭಾವದತ್ತ ಬೆರಳಿಟ್ಟು ತೋರಿಸುತ್ತವೆ. ಮೂಲತಃ ಕನ್ನಡದಲ್ಲಿ ಲಾವಣಿರಚನೆ ನಡೆದಿದ್ದಿತೆಂಬುದಕ್ಕೆ ಸೂಚನೆಗಳೇನೂ ದೊರೆಯುತ್ತಿಲ್ಲ. ಆದರೂ ನಮ್ಮ ಜನಪದ ಹಾಡುಗಳಲ್ಲಿ ವೀರಗೀತೆಗಳೂ ಶೃಂಗಾರಗೀತೆಗಳೂ ಬೇರೊಂದು ರೂಪದಲ್ಲಾದರೂ ಇದ್ದಿರಲೇ ಇಲ್ಲವೆನ್ನಲಾಗದು.) ನಮ್ಮ ಕಾವ್ಯಗಳಲ್ಲಿ 'ಪವಾಡ' (ಶೌರ್ಯ-ಪರಾಕ್ರಮ) ಮತ್ತು 'ಪವಾಡಿ' (ವೀರರ ಶೌರ್ಯಾದಿಗಳನ್ನು ಹೊಗಳಿ ಹಾಡುವವರು) ಎಂಬ ಶಬ್ದಗಳು ಸಿಕ್ಕುತ್ತಿದ್ದು ಅವು ಮರಾಠಿಯ 'ಪೊವಾಡಿ'ಯಿಂದ ಕನ್ನಡಕ್ಕೆ ಬಂದುವಾಗಿರದೆ, ನಮ್ಮಲ್ಲಿಯ ಪವಾಡವೆ ಮರಾಠಿಯಲ್ಲಿ ಪೊವಾಡವಾಗಿ ವಿಶೇಷ ರೀತಿಯಲ್ಲಿ ಬೆಳವಣಿಗೆ ಹೊಂದಿರಲು ಸಾಧ್ಯ. ಇದು ಸಂಶೋಧಿಸಬೇಕಾದ ವಿಷಯ. ಸಾಂಸ್ಕೃತಿಕವಾಗಿ ಮಹಾರಾಷ್ಟ್ರಕ್ಕಿಂತ ಹೆಚ್ಚು ಪ್ರಾಚೀನತೆಯನ್ನು ಪಡೆದಿರುವ ಕನ್ನಡನಾಡು ಮೊದಮೊದಲು 'ಪವಾಡ'- ವೀರಗೀತೆಗಳ ಜನಪದ ಮಾದರಿಯನ್ನು ಮಹಾರಾಷ್ಟ್ರಕ್ಕೆ ಕೊಟ್ಟಿರಬಹುದು. ಆದರೆ ಜನಪದ ಸಾಹಿತ್ಯ ಬಾಯಿಮಾತಿನ ಬದುಕನ್ನು ಬಾಳಿದುದರಿಂದ ನಮ್ಮ ತೀರಾ ಹಿಂದಿನ ಜನಪದ ವೀರಗೀತೆಗಳು ಕಣ್ಮರೆಯಾಗಿರಬಹುದು. ಗ್ರಾಮ್ಯ ಶೃಂಗಾರದ ವಸ್ತುವುಳ್ಳ ಹಾಡುಗಳೂ ಹಿಂದೆ ನಮ್ಮ ಜನಪದ ಸಾಹಿತ್ಯದಲ್ಲಿ ಇದ್ದಿರಬೇಕೆಂಬುದಕ್ಕೆ ನಮ್ಮ ಶಿಷ್ಟಸಾಹಿತ್ಯದಲ್ಲಿ ದೊರೆಯುವ,

ಅರವಟ್ಟಿಗೆಯಲ್ಲಿ ನೀರು ಹನಿಸುವ, ಹೊಲಗದ್ದೆಗಳಲ್ಲಿ ಹಕ್ಕಿಯನ್ನು ಸೋವ, ಇನ್ನಿಗಳ ವರ್ಣನಾಭಾಗ ಸೂಚಕವಾಗಿವೆ. ಪಸಿದ್ವರೂ ಮರಾಠಿಯಲ್ಲಿಯ ಪೋವಾಡಲಾವಣಿ ಮಾದರಿಯ ಹಾಡುಗಾರಿಕೆ ಬೇರೊಂದು ಸ್ವತಂತ್ರ ರೀತಿಯಲ್ಲಿ ನಮ್ಮಲ್ಲಿಯೂ ಹಿಂದೆ ಇದ್ದಿತೇ ಹೇಗೆಂಬ ಬಗೆಗೆ ಸಂಶೋಧನೆ ನಡೆದು ತೀರ್ಮಾನವಾಗಬೇಕಿದೆ.

ಈ ವಿಷಯಕವಾಗಿ ನಮ್ಮ ಗಮನಕ್ಕೆ ಬಂದ ಲಾವಣಿಯೆಂದು ಕರೆಯಲಾದ ಮೂರು ವಿಶಿಷ್ಟ ಹಾಡುಗಳ ಉದಾಹರಣೆಗಳನ್ನು ಇಲ್ಲಿ ಕೊಡ ಬಯಸುವೆ. ಹದಿನೆಂಟನೆಯ ಶತಮಾನದ ಕೊನೆಯ ದಶಕ ಅಥವಾ ೧೮೦೦ ರ ಸುಮಾರಿನಲ್ಲಿ ಜನಿಸಿ ಸು. ೧೮೬೦ ರ ವರೆಗೆ ಬಾಳಿರಬಹುದಾದ ಬೈಲಹೊಂಗಲದ ದುರದುಂಡೀಶನೆಂಬ ಕವಿಯು ರಚಿಸಿದ 'ಪ್ರಭುದೇವರ ಯಕ್ಷಗಾನ' ಎಂಬ ಒಂದು ಕೃತಿಯಲ್ಲಿ ಮೂರು ಹಾಡುಗಳನ್ನು ಲಾವಣಿಗಳೆಂದು ಕರೆಯಲಾಗಿದೆ.[೬] ಈ ಯಕ್ಷಗಾನದ ಪ್ರತಿಮಾಡಿದ ಕಾಗದದಲ್ಲಿ ೧೮೫೮ ರ ವಾಟರ ಮಾರ್ಕ ಇರುವುದರಿಂದ ಸುಮಾರು ೧೮೬೦ ರಲ್ಲಿ ಇದನ್ನು ಪ್ರತಿಮಾಡಿರಬಹುದು. ಕವಿಯು ತನ್ನ ವೃದ್ಧಾಪ್ಯದಲ್ಲಿ ಈ ಕೃತಿಯನ್ನು ರಚಿಸಿದಂತೆ ಹೇಳಿರುವುದರಿಂದಲೂ ಈತನಿಗೆ ಕಿತ್ತೂರ ಮಲ್ಲಸರ್ಜನಿಂದ ಉಂಬಳಿ ದೊರೆತಂತೆ ತಿಳಿದು ಬರುವುದರಿಂದಲೂ ಇವನ ಕಾಲ ಸು. ೧೮೦೦ ರಿಂದ ೧೮೬೦ ಎಂದು ಇಟ್ಟುಕೊಳ್ಳಬಹುದು. ಈ ಯಕ್ಷಗಾನದಲ್ಲಿ ಲಾವಣಿಗಳೆಂದು ಕರೆಯಲಾದ ಹಾಡುಗಳು ಕೆಳಗಿನಂತಿವೆ :

೧ [ಸಂದರ್ಭ : ಅಲ್ಲಮನು ಮಧುಕೇಶ್ವರ ದೇವಾಲಯದಲ್ಲಿ ಮದ್ದಳೆ ಬಾರಿಸಲು ಪ್ರಾರಂಭಿಸಿದಾಗ ನಾದಕ್ಕೆ ಉನ್ಮತ್ತಳಾದ ಮಾಯೆ ಆತನಲ್ಲಿಗೆ ತನ್ನ ಗೆಳತಿಯನ್ನು ಕಳುಹಿಸುವಳು. ಆಕೆ ಬಂದು ಅಲ್ಲಮನ ರೂಪಕ್ಕೆ ಬೆರಗಾಗಿ ಅವನ ಪರಿಚಯ ಮಾಡಿಕೊಂಡು ಮನದಲ್ಲಿ ಇಂತೆನ್ನುವಳು:]

ಲಾವಣಿ : ಬೆರಗಾಂತಳು ಬಾಲಿ | ಸದ್ಗುಣ ವಿಶಾಲಿ ||ಪಲ್ಲ||
ಅರಿದಾಯ್ತು ಇವನ ಸೌಂದರವ ಬಣ್ಣಿಸಲ್ |

ಹರನೆಂಬೆನೆ ಉರಿನೇತ್ರ ಗಾಣೆನಾ |
ಸುರಪತಿ ಬಂದಿಹನೆಂಬೆನೆ ತನು ಭಗ
ಕುರುಹಂ ಕಾಣೆನು ಸ್ಮರನೆಂಬೆನೆ ವಪು

---

೬. ಇದನ್ನು ನನ್ನ ಗಮನಕ್ಕೆ ತಂದವರು ನನ್ನ ಸಹೋದ್ಯೋಗಿ ಶ್ರೀ ಎಸ್. ಡಿ. ಸವದತ್ತಿಮಠ ಅವರು. ಈ ಕವಿಯ ಬಗೆಗೆ 'ಕಾಲ' ಪತ್ರಿಕೆ ಸಂ. ೧. ಸಂ. ೧ ರಲ್ಲಿ 'ಉತ್ತರ ಕರ್ನಾಟಕದ ಅಪೂರ್ವ ಯಕ್ಷಗಾನ ಕವಿ ದುರದುಂಡೀಶ' ಎಂಬ ಒಂದು ಲೇಖನ ಬರೆದಿದ್ದಾರೆ. ಅದರಲ್ಲಿ ಕವಿಯು ಜೀವಿಸಿದ್ದ ಕಾಲದ ಬಗೆಗೆ ಚರ್ಚೆಯಿದೆ.

ಉರಿನೇತ್ರಂ ದಹಿಸಲ್ಕೆ ಉಗ್ರನುರೆ
ಶರೀರ ನಿರ್ಗತನು ಮಾದ ನಂದಿಕೇ
ಶ್ವರನೆಂಬೆನೆ ವೃಷಭಾಂಕ ಮುಖಲ್ಲವು
ನೆರೆ ಗುಹನೆಂಬೆನೆ ಷಣ್ಮುಖಗಾಣೆನು |
ಧರೆಯೊಳಿವ ಶ್ರೀ ವೀರಭದ್ರನೆನೆ
ಪರಕಿಸಿ ರೌದ್ರಾನನ ಗಾಣೆನು. ಮೀ
ಣರವರಿಸದೆ ಮಾಧವನೆಂಬೆನೆ ತನು
ವಿರದೆ ಕೃಷ್ಣ ಚಿನ್ಹಿತಮದಿಲ್ಲ. ಭಾ
ಸ್ಕರನೆಂಬೆನೆ ತೀಕ್ಷಣ ಮದಿಲ್ಲ. ಉಡು
ವರನೆಂಬೆನೆ ಕ್ಷಯರೋಗಿಯಲ್ಲನಿವ
ಸುರನೊ ನರನೋ ಪುರ
ಹರನೋ ಅಸುರನೋ
ಉರಗ ವರನೋ ಮೇಣಿವರೊಳಾವನೋ
ನೆರೆಯದೆನಗೆ ಬುದ್ಧಿಯು ಮಂದಾಗೆ ॥
ಬೆರಗಾಂತಳು ಬಾಲಿ | ಸದ್ಗುಣ ವಿಶಾಲಿ |

೨ [ಸಂದರ್ಭ: ಅಲ್ಲಮನಿಗೆ ಮಾರುಹೋದ ಮಾಯೆ ತನ್ನ ಗೆಳತಿಯಂ ಮುಖಾಂತರ, ತನಗೆ ವಿದ್ಯೆ ಕಲಿಸಲು ಆತನನ್ನು ಒಪ್ಪಿಸಿ, ಮನೆಗೆ ಕರೆತರಿಸುತ್ತಾಳೆ]

ಲಾವಣಿ: ನಡೆತಂದನಾಗಳೆ ಮಾಯಾತೀತಂ ॥ಪ॥

ಮಡದಿ ಕರೆಯಲಾ ಮೃಡಸಮರೂಪಂ
ನಡೆದು ಬಂದನೆಡವಿಡದೆ ಮಂದಿರಕೆ
ಸಡಗರದಿಂದಡಿಯಿಡುತಲಾಗ ಸಖಿ
ನುಡಿಯಾಡುತಲಡಿಗಡಿಗೆ ನಿಲ್ಲುತಂ
ಪೊಡಕರಿಸುತ್ತೆ ಪೊಲ್ಮಡಿಯುತ್ತೆ ಬರಲುರೆ
ಜಡಜಾಂಬಕಿ ಕರತಂದು ಪೋಲಿಯೊಳೆ
ಬಿಡದೀರ್ವರ ಪೋಗಿಸುತ್ತೆ ಮಂಚದೊಳ್
ಧೃಡದಿಂ ಕುಳ್ಳಿರಿಸುತ್ತೆ ನಾಗದಳ
ಪಡಕೆ ಮುಖ್ಯಭೋಗ ದ್ರವ್ಯಗಳಂ
ಮಡಗಿ ತಾಣ ದೀವಿಗೆಯನಿಟ್ಟು ನೆರೆ
ಷಡುರಸಾನ್ನಪ್ಪರಿಪಾಕವಿರಿಸಿ ನೀ
ಗೊರ್ಡವನಿಟ್ಟು ಪರಿಪರಿಯ ಪರಿಮಳದ

ಪುಡಿದುಂಬಿದ ಕರಡಿಗೆಯನಿರಿಸಿ ಮುದ
ವಡೆದ ಮನದಿ ಕದವಿಕ್ಕಿ ಸಕಳಿಯುಂ
ನಡೆದಳಾಗಲೇನೆಂಬೆನು ರಂಭೆ ॥ ಮಾಯಾತೀತಂ॥

೨. [ಸಂದರ್ಭ : ತನ್ನನ್ನು ತ್ಯಜಿಸಿ ಹೊರಬಿದ್ದ ಅಲ್ಲಮನನ್ನು ಮಾಯೆ ಸಂಧಿಸಿ ಮನೆಗೆ ತಿರುಗಿ ಬರುವಂತೆ ಒತ್ತಾಯಿಸುತ್ತಾಳೆ. ವಾದವಿವಾದದಲ್ಲಿ ತನ್ನ ಸಾಮರ್ಥ್ಯದ ಬಗೆಗೆ ಕೊಚ್ಚಿಕೊಳ್ಳುತ್ತಾಳೆ.]

ಲಾವಣಿ : ನೀಯೇನನಾಡುವಿಯೊ ಧೂರ್ತ ಯತಿವರರ
ಧ್ಯಾನಗೆಡಿಸಿ ಧೃತಿಗಳಿದೆ. ನಿನ್ನ ಪಾ
ಡೇನು ವೇದ ನಾಲ್ಕೆನ್ನ ಪಾದದನ
ವೆನಗೆ ಜೀಯಾಗುಲಿವುತಿಹವು ಕೇಳ್
ಸಾನು ರಾಗದೊಳ್ಪಸ್ಮಾಸುರನಂ
ನಾನಳಿದೆನು ನಾರಾಯಣಿ ಪೆಸರಿಂ
ಮೌನಿ ಪರಾಶರನನ್ನು ಗೆಲ್ದೆನಾ
ಮಾನಿನಿ ಮತ್ಸ್ಯವಿಗಂಧಿಯಳಿಂ ಮ
ತ್ತೇನನೆಂಬೆ ಹರತನು ತಲಿಯಿಗಳಂ
ನಾನುರೆ ಸೆಳೆದಾ ಶಿವನಂ ಗೆಲ್ದೆನು
ಆನಂದದಿ ಹರಿಯುರವ ಸೆಳೆದೆನುರೆ
ಮಾಣದ ಜನ ಜಿಂಹೆಯ ಸೆಳೆದೆಂ ಭಗ
ಕೂನಿಟ್ಟೆನು ಸುರವರನಂಗದೊಳುರೆ
ಕ್ಷೀಣ ರೋಗಿ ಮಾಡ್ದೆನು ಚಂದ್ರಮನಂ
ಧ್ಯಾನಿಸಿ ಗುರುವಿನ ಪತ್ನಿಗೆಳಸಿ ನೆರೆ
ಕ್ಷೋಣಿಯೊಳುರೆ ಸುಗ್ರೀವನ ಸತಿಯಿಂ
ಜಾಣ ವಾಲಿ ಸಾಹಸವಂ ಗೆಲ್ದೆನಂ
ನೀನೆನಗೆ ತೃಣವೆಂದೆ ।
ನಾಮುಂದೆ ॥

ಮತಿಹೀನ ಕೀಚಕನ ಕೊಂದೆ ।
ದುಸ್ವಾಸ ಮಾನವನುಗಳಿದೆ ಛಲದಿಂದೆ ಭರದಿಂದೆ ॥
ದಾನವ ರಾವಣನ ಕೊಂದೆ । ಒಂದೊಂದೆ ॥
ಕೂನಿಟ್ಟು ಪೇಳುವಡೆ ಜ್ಞಾನಿಗಳಿಗೆಯನುಮಾನ ಜೈಸನಾ ಬಂದೆ ॥

ಈ ಮೂರು ಹಾಡುಗಳನ್ನು ಲಾವಣಿಯೆಂದು ಕರೆದುದು ಬಹುತರ ಅಲ್ಲಿರುವ ಶೃಂಗಾರಯುತ ವಸ್ತುವಿನಿಂದಾಗಿದೆಯೆಂದು ತೋರುತ್ತದೆ. ನಾಗೇಶಿ ಹಾಡುಗಳಲ್ಲಿ ಬರುವ ಹೆಣ್ಣಿನ ಹೆಗ್ಗಳಿಕೆಯನ್ನು ಬಣ್ಣಿಸುವ ಭಾಗ ಇಲ್ಲಿಯೂ ಇದೆ. ಆದರೆ ಇತರೆಲ್ಲ ಲಕ್ಷಣಗಳಲ್ಲಿ ಈ ಹಾಡುಗಳು ಪ್ರಚಲಿತ ಲಾವಣಿಗಳಿಂದ ವಿಭಿನ್ನವಾಗಿವೆ; ಆದಿಪ್ರಾಸ ನಿಯಮ ಪಾಲನೆಯಿದೆ. ಅಂತ್ಯಪ್ರಾಸವನ್ನು ತ್ಯಜಿಸಲಾಗಿದೆ. ಸಂಗೀತದ ಲಯದ ಜೊತೆಗೆ ಮಾತ್ರಾಗಣ ಅಂಶಗಣದ ಲಯವನ್ನು ಪಾಲಿಸಲಾಗಿದೆ. ರೂಢಿಯಲ್ಲಿರುವ ಲಾವಣಿ ಧಾಟಿಗಳಿಗೆ ಇವನ್ನು ಹೊಂದಿಸಿ ಹಾಡುವುದೂ ಕಷ್ಟ. ಲಾವಣಿಯ ಹಾಡುಗಾರಿಕೆ ಜನಪದ ಮಟ್ಟದಲ್ಲಿ ಜನಪ್ರಿಯವಾಗುತ್ತಲಿದ್ದ ಸಂದರ್ಭದಲ್ಲಿ ಶಿಷ್ಟ, ಅರೆಶಿಷ್ಟ ಸಾಹಿತ್ಯದಲ್ಲಿ ಶೃಂಗಾರಯುತ ವಸ್ತುವಿನ ನಿರೂಪಣೆಗೆ ರಗಳೆಯನ್ನೆ ಲಾವಣಿಯನ್ನಾಗಿ ಮಾರ್ಪಡಿಸಿಕೊಳ್ಳಲೆಳಸಿದ ಪ್ರಯತ್ನವಿದೆಂದು ತೋರುತ್ತದೆ. ಈ ಮಾದರಿಯ ಲಾವಣಿಗಳೇನಾದರೂ ಮತ್ತೆ ದೊರಕಿದಲ್ಲಿ ಮರಾಠಿ ಪ್ರಭಾವದಿಂದ ಬಂದ ಲಾವಣಿಗಳಿಗಿಂತ ಭಿನ್ನವಾದ, ಶುದ್ಧ ಕನ್ನಡ ಜಾಯಮಾನವುಳ್ಳ ಲಾವಣಿಗಳೂ ಸೃಷ್ಟಿಯಾಗುತ್ತಿದ್ದವೆಂದು ನಿರ್ಣಯಿಸಲು ಸಾಧ್ಯವಾಗಬಹುದು. ಆದರೆ ಆ ವರೆಗೆ ನಮ್ಮಲ್ಲಿರುವ ಲಾವಣಿ ಸಾಹಿತ್ಯಕ್ಕೆ ಪ್ರೇರಣೆಯಿತ್ತುದು ಮರಾಠಿ ಲಾವಣಿ ಸಾಹಿತ್ಯವೆಂದೇ ಒಪ್ಪಿಕೊಳ್ಳುವುದು ಸೂಕ್ತವಾಗಿದೆ. ಪ್ರೇರಣೆ ಎಲ್ಲಿಂದಲೇ ಇರಲಿ ಕನ್ನಡ ಲಾವಣಿಕಾರರು ತಮ್ಮ ರಚನೆಗಳಿಗೆ ಕನ್ನಡ ಜಾಯಮಾನವನ್ನಿತ್ತರೆಂಬುದನ್ನು ಮರೆಯಲಾಗದು. ನಮ್ಮ ಪ್ರಾಂತದಲ್ಲಿ ಬೆಳಗಿ ಹೋದ ವೀರರ, ಸಂತರ, ಗ್ರಾಮೀಣ ಗಣ್ಯರ ಚರಿತ್ರೆಗಳನ್ನು ಹಾಡಿದರು. ಆಯಾ ಕಾಲ ಪ್ರದೇಶಗಳಲ್ಲಿ ಘಟಿಸಿದ ಬಂಡಾಯ, ಬರಗಾಲ ಮೊದಲಾದವುಗಳನ್ನು ಚಿತ್ರಿಸಿದರು. ನಾಡಿನ ಜನತೆಯಲ್ಲಿ ಪರಂಪರಾಗತವಾಗಿ ಬಂದ ಸಾಮಾಜಿಕ, ಸಾಂಸಾರಿಕ ನೀತಿ ಪ್ರಣಾಲಿಯನ್ನು ಬೋಧಿಸಿದರು. ಜನಪದ ಆಡುನುಡಿಯಲ್ಲಿಯ ಸೊಗಸು, ಶಕ್ತಿಗಳನ್ನು ಯಶಸ್ವಿಯಾಗಿ ದುಡಿಸಿಕೊಂಡರು. ಹೀಗೆ ಆಧುನಿಕ ಕನ್ನಡ ಸಾಹಿತ್ಯದ ನವೋದಯಕ್ಕೆ ಮುನ್ನ ನಮ್ಮ ಲಾವಣಿಕಾರರು ಹೊಸ ವಸ್ತು, ಭಾಷೆ ಹಾಗೂ ಅಭಿವ್ಯಕ್ತಿಯನ್ನು ಬಳಕೆಗೆ ತಂದರು. ಈ ಶತಮಾನದ ಆದಿದಶಕಗಳಲ್ಲಿ ನವೋದಯ ಧೋರಣೆಗಳನ್ನು ರೂಪಿಸಿದ ಅಧ್ವರ್ಯುಗಳು ದುರದೃಷ್ಟದಿಂದ ಈ ದೇಶೀ ಸತ್ತ್ವದತ್ತ ತಕ್ಕ ಗಮನ ಹರಿಸಲಿಲ್ಲವೆನ್ನಿಸುತ್ತದೆ. ಉತ್ತರ ಕರ್ನಾಟಕದಲ್ಲಿ ಬೇಂದ್ರೆ, ಆನಂದಕಂದ, ಮಧುರಚೆನ್ನರಂತಹ ಹಲವರು ಲಾವಣಿಕಾರರ ಸತ್ವವನ್ನು ಅಳವಡಿಸಿಕೊಂಡರಾದರೂ ದಕ್ಷಿಣದಿಂದ ಹೆದ್ದೊರೆಯಂತೆ ಹರಿದು ಬರುತ್ತಿದ್ದ ರೋಮ್ಯಾಂಟಿಕ್ ಧೋರಣೆಯಲ್ಲಿ ಇದು ಕಿರುನಾಲೆಯಂತೆ ಕರಗಿ ಹೋಯಿತು. ಒಂದು ವೇಳೆ ರೋಮ್ಯಾಂಟಿಕ್ ಧೋರಣೆಯ ಜೊತೆಜೊತೆಯಲ್ಲಿಯೇ ನಮ್ಮ ಲಾವಣಿಕಾರರು ಪ್ರಚಲಿತಕ್ಕೆ ತಂದಿದ್ದ ದೇಶೀಯ ಧೋರಣೆಯೂ ಬೆಳೆದು ಬಂದಿದ್ದರೆ ನಮ್ಮ ನವೋದಯ ಸಾಹಿತ್ಯದ ಸ್ವರೂಪ ಬೇರೆ ತೆರನಾಗುತ್ತಿತ್ತೆನ್ನಬಹುದು.

## ಉತ್ತರ ಕರ್ನಾಟಕದ ಕೆಲವು ಪ್ರಮುಖ ಲಾವಣಿಕಾರರು

[ಈ ವಿಷಯ ಸಂಗ್ರಹಕ್ಕೆ ನನ್ನ ಸಂಶೋಧಕ ವಿದ್ಯಾರ್ಥಿಯಾದ ಶ್ರೀ ಎಸ್. ಎಂ. ಬಿರಾದರ ನೆರವಾಗಿದ್ದುದನ್ನು ಇಲ್ಲಿ ಸ್ಮರಿಸುವೆ]

| | ಕವಿಯ ಹೆಸರು/ಕಾವ್ಯನಾಮ | ಊರು/ತಾಲೂಕಾ/ಜಿಲ್ಲಾ | ಕಾಲ/ಪಂಗಡ |
|---|---|---|---|
| | ೧ | ೨ | ೩ |
| ೧ | ಹೆಬ್ಬಳ್ಳಿ ಫುಂಡ–ಬಸವ | ಹೆಬ್ಬಳ್ಳಿ, ಹುಬ್ಬಳ್ಳಿ, ಧಾರವಾಡ | ೧೮೩೦– (ಲಾವಣಿ ರಚಿಸಿದ್ದು) |
| ೨ | ಕುರ್ತಕೋಟಿ ಕಲ್ಮೇಶ–(ಮುದ್ರಿಕೆ) | | ೧೮೫೭–೬೦ (ಲಾವಣಿ ರಚಿಸಿದ್ದು) |
| ೩ | ಅಪ್ಪು | ಬೈಲಹೊಂಗಲ / ಬೆಳಗಾಂವ | ೧೮೬೩– (ಲಾವಣಿ ರಚಿಸಿದ್ದು) ಹರದೇಶಿ |
| ೪ | ಕವಿ ಗುರುಸಿದ್ಧ s/o ವಸ್ತಾದ ಹನಮಂತ್ರಾವ | ಹುಬ್ಬಳ್ಳಿ / ಧಾರವಾಡ | ೧೮೭೦– (ಲಾವಣಿ ರಚಿಸಿದ್ದು) ಹರದೇಶಿ |
| ೫ | ಗೋಪಾಳ ದುರದುಂಡಿ [ಇದು ತೇರದಾಳ ಕವಿಗಳ ಗುಂಪಿನ ಹೆಸರು] ಈ ಗುಂಪಿನ ಕವಿಗಳು : ಆರೇರ ರಾಮಣ್ಣ, ಉಪ್ಪಾರ ವೆಂಕಣ್ಣ, ಉಪ್ಪಾರ ತುಕಾರಾಮು, ಮಾಲಗಾರ ಜೋತೆಪ್ಪ | ತೇರದಾಳ, ಜಮಖಂಡಿ, ಬಿಜಾಪೂರ | ೧೮೦೦–೧೯೭೦ ? ಹರದೇಶಿ |
| ೬ | ಶಿಶುನಾಳ ಶರೀಫ | ಶಿಶುವಿನಹಾಳ, ಸಿಗ್ಗಾವಿ, ಧಾರವಾಡ | ೧೮೧೮–೧೮೯೯ |

| ೧ | ೨ | ೩ |
|---|---|---|
| ೭ ಬಾಳಗೋಪಾಳ s/o ಭೀಮರಾಯ | ಬೆಲ್ಲದಬಾಗೇವಾಡಿ. ಹುಕ್ಕೇರಿ, ಬೆಳಗಾಂವ | ೧೮೩೦–೧೯೧೦ ಪರದೇಶಿ |
| ೮ ಗೋಕಾವಿ ಮಲ್ಲೇಶಪ್ಪ s/o ಅಯ್ಯಪ್ಪ ಪತ್ತಾರ | ಗೋಕಾಕ, ಗೋಕಾಕ, ಬೆಳಗಾಂವ | ೧೮೩೨–೧೯೧೭ ನಾಗೇಶಿ |
| ೯ ರಾಣು ಕುಬಣ್ಣ (ಕಾವ್ಯನಾಮ) ಕುಬಣ್ಣ s/o ಘಟಿಗೆಪ್ಪ ಸಿಂಪಿಗ | ಮುರಗೋಡ. ಸೌದತ್ತಿ, ಬೆಳಗಾಂವ | ೧೮೩೩–೧೯೨೬ ನಾಗೇಶಿ |
| ೧೦ ಇಂಚಲದ ಕೆಂಚನಾಯ್ಕ (ಕಾ. ನಾ.) ಕೆಂಚನಾಯ್ಕ s/o ಈರಪ್ಪನಾಯ್ಕ ಜಕ್ಕಪ್ಪನವರ | ಇಂಚಲ, ಸೌದತ್ತಿ, ಬೆಳಗಾಂವ | ೧೮೦೦–೧೯೦೦ (?) |
| ೧೧ ಮಹಲಿಂಗ s/o ಬಸಪ್ಪ ಅಚಲೇರಿ 'ಮಹಾಲಿಂಗ–ಮಹಾರುದ್ರ'–(ಕಾ. ನಾ.) | ದೇಗಾಂವ, ಆಳಂದ, ಕಲಬುರ್ಗಿ | ೧೮೪೨–೧೯೩೨ ಪರದೇಶಿ |
| ೧೨ ಬಡೇಸಾ 'ಹದರಿ ಬಡೇಸಾ' (ಕಾ. ನಾ.) | ಹದರಿ, ಅಕ್ಕಲಕೋಟೆ, ಸೋಲಾಪೂರ | ೧೮೫೦–೧೯೧೦ ನಾಗೇಶಿ |
| ೧೩ ಲಕ್ಷ್ಮಣ | ಗೋಕಾಕ, ಗೋಕಾಕ. ಬೆಳಗಾಂವ | ೧೮೫೦–೧೯೪೨ ನಾಗೇಶಿ |
| ೧೪ ಹಸನಸಾಬ s/o ಮಮ್ಮಾಸಾಬ ನಾಯ್ಕೋಡಿ–'ಮಲ್ಲಾ-ಹಸನ' (ಕಾ. ನಾ.) | ಬೀಬೀ ಇಂಗಳಗಿ, ಸಿಂದಗಿ, ಬಿಜಾಪೂರ | ೧೮೫೮–೧೯೧೬ ನಾಗೇಶಿ |
| ೧೫ ಕ್ಯಾಮಣ್ಣ ಹಾವನಾಳಿ 'ಸಾತು–ಕ್ಯಾಮಣ್ಣ' (ಕಾ. ನಾ.) | ಗೋಕಾಕ, ಗೋಕಾಕ, ಬೆಳಗಾಂವ | ೧೮೬೨–೧೯೪೨ ಪರದೇಶಿ |
| ೧೬ ಬಸವಣೆಪ್ಪಾ s/o ಸಿದ್ದಪ್ಪ ನಾಟಿಕಾರ 'ಭಾಗಣ್ಣ' (ಕಾ. ನಾ.) | ಧಂಗಾಪೂರ, ಆಳಂದ. ಕಲಬುರ್ಗಿ | ೧೮೭೦–೧೯೭೦ |
| ೧೭ ಸರೋತ್ತಮ | ಅಮ್ಮಾಪೂರ, ಸುರಪೂರ, ಕಲಬುರ್ಗಿ | ೧೮೭೦–೧೯೩೦ ಪರದೇಶಿ |

| | ೧ | ೨ | ೩ |
|---|---|---|---|
| ೧೮ | ಗುಂಡಪ್ಪ s/o ಪರ್ವತಪ್ಪ ಹೆಬ್ಬಾಳ 'ಗುಂಡು-ಭದ್ರ' (ಕಾ. ನಾ.) | ದೇಗಾಂವ, ಆಳಂದ, ಕಲಬುರ್ಗಿ | ೧೮೭೭–೧೯೨೭ ಹರದೇಶಿ |
| ೧೯ | ಅಂಬಾದಾಸ s/o ವಿಠೋಬಾ ಗೊಂದಲಿಗ | ಕಲಬುರಗಿ, ಕಲಬುರಗಿ, ಕಲಬುರಗಿ | ೧೮೭೭–೧೯೩೨ ನಾಗೇಶಿ |
| ೨೦ | ಹೈದರಲಿ | ನರೋಣಾ, ಆಳಂದ, ಕಲಬುರ್ಗಿ | ೧೮೭೭–೧೯೩೭ ಹರದೇಶಿ |
| ೨೧ | ಈರಣ್ಣ | ಅಮ್ಮಾಪೂರ, ಸುರಪೂರ. ಕಲಬುರ್ಗಿ | ೧೮೮೦–೧೯೪೫ ಹರದೇಶಿ |
| ೨೨ | ಮೌಲಾಲಿ s/o ಚಂದ್ರಾಮ ತಳವಾರ, 'ಕ್ವಾರಳ್ಳಿ ಮೌಲಾಲಿ' (ಕಾ. ನಾ.) | ಕೋರಳ್ಳಿ, ಸಿಂದಗಿ, ಬಿಜಾಪೂರ | ೧೮೮೪–೧೯೫೪ ನಾಗೇಶಿ |
| ೨೩ | ಖಾಶಿಮಸಾಬ, 'ಆಲೂರ-ಖಾಶಿಮ' (ಕಾ. ನಾ.) | ಆಲಗೂರ ? ? | ೧೮೮೫–೧೯೫೦ ನಾಗೇಶಿ |
| ೨೪ | ಪರಪ್ಪ | ಬಿದರಿ, ಜಮಖಂಡಿ, ಬಿಜಾಪೂರ | ೧೮೮೮–೧೯೪೩ ಹರದೇಶಿ |
| ೨೫ | ಹಣಮಂತಪ್ಪ ಟಣಕೆದಾರ 'ಅಮ್ಮಾಪೂರ ಹಣಮಂತ' (ಕಾ. ನಾ.). | ಅಮ್ಮಾಪೂರ, ಸುರಪೂರ, ಕಲಬುರ್ಗಿ | ೧೮೯೦–೧೯೪೬ ಹರದೇಶಿ |
| ೨೬ | ಬಸಯ್ಯ ಮಠಪತಿ 'ಭೀಮ-ಬಸಯ್ಯ' (ಕಾ. ನಾ.) | ಎಳಮೇಲಿ, ಸಿಂದಗಿ, ಬಿಜಾಪೂರ | ೧೮೯೦–೧೯೫೫ ಹರದೇಶಿ |
| ೨೭ | ಹುಸೇನಿ 'ಯಾದವಾಡದ ಹುಸೇನಿ' (ಕಾ. ನಾ.) | ಯಾದವಾಡ, ಗೋಕಾಕ, ಬೆಳಗಾಂವ | ೧೮೯೬–೧೯೭೬ ನಾಗೇಶಿ |
| ೨೮ | ಅಣ್ಣಾರಾಯಗೌಡ s/o ಮಲಕಪ್ಪಗೌಡ, ಪಾಟೀಲ | ಅಗರಖೇಡ, ಜಮಖಂಡಿ, ಬಿಜಾಪೂರ | ೧೮೯೭–೧೯೬೭ ಹರದೇಶಿ |
| ೨೯ | ಸಮ್ಮದಸಾಹೇಬ s/o ಅಬ್ದುಲಸಾಹೇಬ | ಬೆಳ್ಳೂಡಿ, ರಾಣೆಬೆನ್ನೂರ, ಧಾರವಾಡ | ೧೮೯೯– |
| ೩೦ | ಕಲಾಶ. 'ಮುಳಸಾವಳಗಿ-ಕಲಾಶ' (ಕಾ. ನಾ.) | ಮುಳಸಾವಳಗಿ, ಸಿಂದಗಿ, ಬಿಜಾಪೂರ | ೧೯೦೦–೧೯೫೦ ಹರದೇಶಿ |

| ೧ | ೨ | ೩ |
|---|---|---|
| ೩೧ ರುದ್ರಯ್ಯ s/o ರಾಚಯ್ಯ 'ಶಿವಲಿಂಗ ಕವಿ' (ಕಾ. ನಾ.) | ಹುಲಕುಂದ, ರಾಮದುರ್ಗ, ಬೆಳಗಾಂವ | ೧೯೦೦-೧೯೫೫ ಹರದೇಶಿ/ನಾಗೇಶಿ |
| ೩೨ ಖಾಜಾಬಾಯಿ s/o ಜಮಾಸಾಬ ನದಾಫ 'ಹಲಸಂಗಿ ಖಾಜಾ' (ಕಾ. ನಾ.) | ಹಲಸಂಗಿ, ಇಂಡಿ, ಬಿಜಾಪೂರ | -೧೯೨೫ ಹರದೇಶಿ |
| ೩೩ ಹುಸನಸಾಹೇಬ 'ಕೊಳ್ಳುರ ಹುಸನ' (ಕಾ. ನಾ.) | ಕೊಳ್ಳೂರ, ಬಸವಕಲ್ಯಾಣ, ಬೀದರ | ೧೯೦೦-೧೯೬೪ |
| ೩೪ ಮಲಿಕಸಾಹೇಬ | ಮಹಾಲಿಂಗಪೂರ, ಮುಧೋಳ, ಬಿಜಾಪೂರ | -೧೯೦೨ ಹರದೇಶಿ |
| ೩೫ ಹಜರತಸಾಹೇಬ s/o ಇಮಾಮಸಾಹೇಬ, ಮುಜಾವರ, 'ದ್ಯಾಗಾಂಯಿ ಹಜರತ' (ಕಾ. ನಾ.) | ದೇಗಾಂವ, ಆಳಂದ, ಕಲಬುರ್ಗಿ | ೧೯೦೩- ಹರದೇಶಿ |
| ೩೬ ಗುಡುಲಾಲ s/o ನಬಿಸಾಹೇಬ, ಕ್ವಾಟಿ 'ಚಾಂದಕೋಟಿ ಗುಡು' (ಕಾ. ನಾ.) | ಚಾಂದಕವಠೆ, ಸಿಂದಗಿ, ಬಿಜಾಪೂರ | ೧೯೦೬-೧೯೫೮ ನಾಗೇಶಿ |
| ೩೭ ಮಹಮ್ಮದ ಸಾಹೇಬ s/o ಮೋದಿನ ಸಾಹೇಬ, ಮುಚಖೇಡ | ಓರಿಸಾವಳಗಿ, ಕಲಬುರ್ಗಿ, ಕಲಬುರ್ಗಿ | ೧೯೦೬- ಹರದೇಶಿ/ನಾಗೇಶಿ |
| ೩೮ ಸಿದ್ರಾಮಪ್ಪ s/o ಭದ್ರಪ್ಪ ಸಾಖರೆ | ಸಲಗರ, ಆಳಂದ, ಕಲಬುರ್ಗಿ | ೧೯೦೭-೧೯೬೭ ಹರದೇಶಿ |
| ೩೯ ಬಸಪ್ಪ s/o ಸಂಗಪ್ಪ ಬೆಟಗೇರಿ 'ಭೀಮಕವಿ' (ಕಾ. ನಾ.) | ಹುಲಕುಂದ, ರಾಮದುರ್ಗ, ಬೆಳಗಾಂವ | ೧೯೦೯-೧೯೭೦ ಹರದೇಶಿ |
| ೪೦ ಅಪ್ಪಣ್ಣ s/o ಚೂಡಪ್ಪ ಹರಿಜನ 'ಬಾಳಿಗೇರಿ ಅಪ್ಪಣ್ಣ' (ಕಾ. ನಾ.) | ಬಾಳ್ಗೇರಿ, ಅಥಣಿ, ಬೆಳಗಾಂವ | ೧೯೧೦-೧೯೭೫ ನಾಗೇಶಿ |

| ೧ | ೨ | ೩ |
|---|---|---|
| ೪೧ ರಾಮುಸಿಂಗ ರಜಪೂತ 'ಎಳಿಮೇಲಿ ರಾಮುಸಿಂಗ' (ಕಾ. ನಾ.) | ಆಲಮೇಲ, ಸಿಂದಗಿ, ಬಿಜಾಪೂರ | ೧೯೧೦-೧೯೭೨ ಹರದೇಶಿ |
| ೪೨ ಕಲ್ಲಪ್ಪ s/o ಗಂಗಪ್ಪ ಕ್ಷತ್ರಿಯ 'ಕಣ್ಣೀ ಕಲ್ಲಪ್ಪ' (ಕಾ. ನಾ.) | ಕಡಣಿ, ಸಿಂದಗಿ, ಬಿಜಾಪೂರ | ೧೯೧೦-೧೯೭೫ ಹರದೇಶಿ |
| ೪೩ ಮೀರಾಸಾಹೇಬ s/o ಕಮಾಲಸಾಹೇಬ ಜಾತಗಾರ 'ಪಂಚಾಕ್ಷರಿ' (ಕಾ. ನಾ.) | ಮಹಾಗಾಂವ, ಕಲಬುರ್ಗಿ, ಕಲಬುರ್ಗಿ | ೧೯೧೭- ನಾಗೇಶಿ |
| ೪೪ ಲಾಲಸಾಬ s/o ಬಂದಗಿಸಾಬ ಜಂಬಗಿ 'ಖಾಸಿಮ-ಲಾಲಸಾಬ' (ಕಾ. ನಾ.) | ಇಂಗಳೇಶ್ವರ, ಬಸವನಬಾಗೇವಾಡಿ, ಬಿಜಾಪೂರ | ೧೯೨೨- ಹರದೇಶಿ/ನಾಗೇಶಿ |
| ೪೫ ಮೀರಾಸಾಹೇಬ | ಪರಮಾನಂದವಾಡಿ, ರಾಯಬಾಗ, ಬೆಳಗಾಂವ | ೧೯೨೨- |
| ೪೬ ಹಸನ ಸಾಹೇಬ | ಹುಲಗಬಾಳ, ಅಥಣಿ, ಬೆಳಗಾಂವ | ೧೯೨೬- |
| ೪೭ ಸಂಗಪ್ಪ s/o ಬಸಪ್ಪ ಬೆಟಗೇರಿ 'ಕಂದಭೀಮಕವಿ' (ಕಾ. ನಾ.) | ಹುಲಕುಂದ, ರಾಮದುರ್ಗ, ಬೆಳಗಾಂವ | ೧೯೩೧- |
| ೪೮ ಅಂಬಾರಾಯ ಕೊಡಲಹಂಗರಗಿ | ದೇಗಾಂವ, ಆಳಂದ, ಕಲಬುರ್ಗಿ | ೧೯೩೨- |
| ೪೯ ಭೀಮಸಿಂಗ | ಶಿವಣಗಿ, ? ? | ಹರದೇಶಿ |

| ೧ | ೨ | ೩ |
|---|---|---|
| ೫೦ ಮಾರುತಿ | ಶಿವಣಗಿ, ? ? | ಪರದೇಶಿ |
| ೫೧ ಸಂಗನಬಸವ | ಭೆಂಡಿಗೇರಿ, ಬೆಳಗಾಂವ, ಬೆಳಗಾಂವ | ಪರದೇಶಿ |
| ೫೨ ಗದಿಗಯ್ಯ | ನಂದಗಡ. ಖಾನಾಪೂರ, ಬೆಳಗಾಂವ | ಪರದೇಶಿ |
| ೫೩ ಸಿದ್ಧಲಿಂಗ | ಭೆಂಡಿಗೇರಿ. ಬೆಳಗಾಂವ, ಬೆಳಗಾಂವ | ಪರದೇಶಿ |

[ಲಾವಣಿಕಾರರ ಮೇಲ್ಕಾಣಿಸಿದ ಕಾಲವನ್ನು ಹಾಡಿಕೆಗಾರರ ಹೇಳಿಕೆಯ ಆಧಾರ ಮತ್ತು ಅವರ ಲಾವಣಿಗಳಲ್ಲಿಯೆ ಆಕಸ್ಮಾತ್ತಾಗಿ ಸಿಕ್ಕುವ ಸಂವತ್ಸರಾದಿಗಳ ಉಲ್ಲೇಖದ ಆಧಾರದಿಂದ ಕೊಡಲಾಗಿದೆ]

# ಕಿಳ್ಳೀಕೇತರು

ಮಹೇಶ ತಿಪ್ಪಶೆಟ್ಟಿ

ಕಿಳ್ಳೀಕೇತ ಜಾತಿಯ ಸಾಂಪ್ರದಾಯಿಕ ಸಾಮಾಜಿಕ ಜೀವನ ನಿರೂಪಿಸಲು ಇಲ್ಲಿ ಯತ್ನಿಸಲಾಗಿದೆ. ಆಧುನಿಕತೆಯ ಅಲೆಗೆ ಸಿಕ್ಕು ಕೆಲವು ಆದಿವಾಸಿ ಜನಾಂಗಗಳು ಗುರುತಿಸಲಾಗದಷ್ಟು ಬದಲಾವಣೆ ಹೊಂದಿವೆ. ಸದಾ ನಾಗರಿಕ ಸಮಾಜದ ಸಂಪರ್ಕದಲ್ಲಿರುವ ಈ ಕೆಲವು ಜನಾಂಗಗಳಲ್ಲಿ ಇಂದು ಅಸಂಖ್ಯಾತ ಮಾರ್ಪಾಡು ಕಾಣಬಹುದು. ಈಗ ದೊರೆಯುವ ಅಲ್ಪ ಮಾಹಿತಿಯನ್ನಾದರೂ ಇವುಗಳ ಬಗೆಗೆ ಸಂಗ್ರಹಿಸಿಡುವುದು ಸಾಮಾಜಿಕ ಮಾನವ ಶಾಸ್ತ್ರಜ್ಞರ ಪ್ರಥಮ ಕಾರ್ಯವಾಗಿದೆ. ಇಲ್ಲಿ ವರ್ಣಿಸಿದ ಕಿಳ್ಳೀಕೇತರ ಸಾಂಪ್ರದಾಯಿಕ ಸಾಮಾಜಿಕ ಜೀವನವು ಕೇವಲ ಪಳಿಯುಳಿಕೆ ಅಥವಾ ಅವಶೇಷ ಎನ್ನುವಮಟ್ಟಿಗೆ ಮಾತ್ರ ಉಳಿದಿದೆ. ಇವರ ಜೀವನಪದ್ಧತಿಯಲ್ಲಿ ಪ್ರಾದೇಶಿಕ ಭಿನ್ನತೆಯನ್ನೂ ಕಾಣಬಹುದು.

ಕಿಳ್ಳೀಕೇತ ಎಂಬ ಹೆಸರು ಹೇಗೆ ಬಳಕೆಯಲ್ಲಿ ಬಂದಿತೆಂಬುದು ವಾದಗ್ರಸ್ಥ ವಿಷಯವಾಗಿದ್ದರೂ, ಈ ಜಾತಿಯ ಸಾಂಪ್ರದಾಯಿಕ ವೃತ್ತಿಯ ಬಗ್ಗೆ ಯಾವುದೇ ಭಿನ್ನಾಭಿಪ್ರಾಯಗಳು ಇಲ್ಲ. ಚರ್ಮದ ಗೊಂಬೆಗಳ ಆಟ ಆಡಿಸಿ ಗ್ರಾಮೀಣ ಜನತೆಗೆ ಮನರಂಜನೆಯೊಂದಿಗೆ ವೈದಿಕ ಉಚ್ಚ ಸಂಸ್ಕೃತಿಯ ಕಥಾಭಾಗಗಳನ್ನು ಗ್ರಾಮೀಣ ಜನತೆಗೆ ಪ್ರಚುರಪಡಿಸುತ್ತಿದ್ದರು.

ಭಾರತದಲ್ಲಿ ಹಲವು ಜಾತಿಗಳು ತಮ್ಮ ಉಗಮದ ಬಗ್ಗೆ ದಂತಕಥೆಗಳನ್ನು ರೂಪಿಸಿಕೊಂಡು ಅತೀ ಪ್ರಾಚೀನ ಕಾಲದಿಂದ ತಮ್ಮ ಅಸ್ತಿತ್ವವನ್ನು ಸಾಬೀತುಪಡಿಸಿ

ಕೊಳ್ಳಲು ಯತ್ನಿಸುತ್ತಿವೆ. ಈ ನಿಯಮಕ್ಕೆ ಕಿಳ್ಳೀಕೇತ ಜಾತಿಯು ಹೊರತಾಗಿಲ್ಲ. ಸರಸ್ವತಿಯ ಮನರಂಜನೆಗಾಗಿ ಬ್ರಹ್ಮನಿಂದ ಈ ಜಾತಿ ಸೃಷ್ಟಿಯಾಗಿದೆಯೆಂದು ಹೇಳಲಾಗುತ್ತದೆ. ಅವರ ವಂಶಜಳೊಬ್ಬಳು ಮಹಾರಾಷ್ಟ್ರದ ಕಾಳಾಚಾರಿ ಎಂಬವನೊಡನೆ ಅನೈತಿಕ ಸಂಬಂಧವನ್ನಿಟ್ಟುಕೊಂಡಿದ್ದಳು. ಅವಳಿಗೆ ಏಳುಜನ ಮಕ್ಕಳಿದ್ದರು. ಕಾಳಾಚಾರಿಯೆ ಇವರಿಗೆ ತೊಗಲುಗೊಂಬೆ ಮಾಡುವ ಹಾಗೂ ಆಡುವ ವಿದ್ಯೆ ಕಲಿಸಿದನೆಂದು ಹೇಳಲಾಗುತ್ತದೆ. ಆದರೆ ಈ ಕಥೆಯಲ್ಲಿ ಯಾವದೇ ಸತ್ಯಾಂಶ ಇಲ್ಲವೆಂದು ಕೆಲವು ತಜ್ಞರ ಅಭಿಪ್ರಾಯ. ಕಲಿಯುಗದ ಆರಂಭದಲ್ಲಿ ಗೊಂಬೆ ಕುಣಿಸುವ ವೃತ್ತಿ ದೇವರಿಂದಲೇ ಈ ಜಾತಿಗೆ ನೇಮಕವಾಯಿತೆಂದು, ಆದ್ದರಿಂದ 'ಕಲಿ'ಕ್ಯಾತ ಎಂಬ ಪದ 'ಕಿಳ್ಳೀಕ್ಯಾತ'ವಾಯಿತೆಂದು ಹೇಳಲಾಗುತ್ತದೆ. ಕೀಳು ಕಥಾ ಎಂಬ ಪದವು ಕ್ರಮೇಣವಾಗಿ ಅಪಭ್ರಂಶಹೊಂದಿ ಕಿಳ್ಳೀಕ್ಯಾತವಾಗಿರಬಹುದೆಂದು ಕೆಲವು ತಜ್ಞರ ವಾದ. ಇವರು ಹೇಳುವ ಕಥೆಗಳು ಕೀಳಾಗಿರದಿದ್ದರೂ ವ್ಯಕ್ತಪಡಿಸುವ ಶೈಲಿ ಮಾತ್ರ ಕೆಳಮಟ್ಟದ್ದಾಗಿರುತ್ತದೆ. ಮಹಾರಾಷ್ಟ್ರದಲ್ಲಿ ಈ ಜಾತಿಗೆ 'ಕಟಬು ಜಾತ್' ಎಂದು ಕರೆಯಲಾಗುತ್ತದೆ. ಕಟಬು ಎನ್ನುವುದು ತೊಗಲುಗೊಂಬೆ ಆಟದಲ್ಲಿ ಬರುವ ಒಂದು ವಿದೂಷಕನ ಪಾತ್ರ. ಕಿಳ್ಳಿ ಎಂದರೆ ಚೇಷ್ಟೆ, ತುಂಟ, ಹುಡುಗಾಟಿಕೆ ಎಂದು ಕನ್ನಡ ನಿಘಂಟಿನ ಅರ್ಥ. ಇವರ ಆಟದಲ್ಲಿ ತುಂಟತನದ ಅಶ್ಲೀಲ ಪದಗಳ ಬಳಕೆ ಹೆಚ್ಚು. ಆ ದೃಷ್ಟಿಯಿಂದ ಕಿಳ್ಳಿ ಎಂಬ ಪದವೇ ಜಾತಿಗೂ ಅನ್ವಯವಾಗಿರಬಹುದು. ಆದರೂ ಮರಾಠಿಯ 'ಕಟಬು' ಹಾಗೂ ಕನ್ನಡದ 'ಕಿಳ್ಳೀ' ಶಬ್ದಗಳಿಗಿರುವ ಸಂಬಂಧವು ಇನ್ನೂ ಹೆಚ್ಚು ಸಂಶೋಧನೆಗೆ ಒಳಪಡಬೇಕಾದ ವಿಷಯವಾಗಿದೆ. ಸಂಸ್ಕೃತ ಮೂಲದಿಂದಲೇ ಎಲ್ಲ ವಿಷಯದ ಮೂಲವನ್ನು ವಿಶ್ಲೇಷಿಸುವ ಹವ್ಯಾಸ ಇಂದು ಹೆಚ್ಚು ಕಾಣುತ್ತಿದೆ. ಭಾಷಾವಿಜ್ಞಾನಿ ಬ್ರೂ ಎಂಬವರ ಪ್ರಕಾರ 'ಕೇಲಿಕ್ಯಾತ' ಎಂಬ ಸಂಸ್ಕೃತ ಪದ ಅಪಭ್ರಂಶ ರೂಪ ತಾಳಿ ಕಿಳ್ಳೀಕ್ಯಾತವಾಗಿದೆ.

ಕಿಳ್ಳೀಕ್ಯಾತ ಜಾತಿ ಹಾಗೂ ಆ ಹೆಸರಿನ ವಾದ ವಿವಾದಗಳು ಏನೇ ಇದ್ದರೂ ಕರ್ನಾಟಕದ ಜಾತಿಗಳ ಸಾಮಾಜಿಕ ಸ್ತರವಿನ್ಯಾಸದಲ್ಲಿ ಈ ಜಾತಿ ತೀರ ಕೆಳಗಿನ ಸ್ಥಾನವನ್ನು ಹೊಂದಿದೆ. ಆದರೂ ಹರಿಜನರಿಗಿರುವಂತೆ ವಿಶೇಷವಾದ ಪ್ರತ್ಯೇಕ ವಾಸಸ್ಥಾನ ಗ್ರಾಮಗಳಲ್ಲಿ ಇವರಿಗಿಲ್ಲ. ವಡ್ಡ, ಪೆದ್ದ, ಗೊಂದಲಿಗ, ಕುರುಬ ಮುಂತಾದ ಕೆಳಜಾತಿಗಳೊಂದಿಗೆ ಇವರು ವಾಸಿಸುತ್ತಾರೆ. ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿ ಈ ಜಾತಿಯ ಜನರನ್ನು ಕಾಣಬಹುದೆಂದರೂ ಎಲ್ಲ ಗ್ರಾಮಗಳಲ್ಲಿ ಇವರನ್ನು ಕಾಣುವುದು ದುಸ್ತರ. ಈ ಹಿಂದೆ ಕರ್ನಾಟಕ ಸರಕಾರವು ಈ ಜಾತಿಯನ್ನು ಅಲೆಮಾರಿ ಜನಾಂಗವೆಂದು ಗುರುತಿಸಿತ್ತು. ಇತ್ತೀಚೆಗೆ ಹಿಂದುಳಿದ–ಸ್ಪೃಶ್ಯ ಜನಾಂಗವೆಂದು ಇದನ್ನು ಕರೆಯಲಾಗಿದೆ. ಕಿಳ್ಳೀಕ್ಯಾತ, ಕಟಬು, ಛತ್ರಿ ಎಂಬ ಪ್ರಾದೇಶಿಕ ಹೆಸರಿನಿಂದಲೂ ಇವರನ್ನು ಕರೆಯಲಾಗುತ್ತದೆ. ಕರ್ನಾಟಕದ ಕಿಳ್ಳೀಕ್ಯಾತರು 'ಆರೆ' ಕುಲದವರೆಂದು ಕೂಡ

ಹೇಳಿಕೊಳ್ಳುತ್ತಾರೆ. ಆಂಧ್ರದ ಅನಂತಪುರ ಜಿಲ್ಲೆಯಲ್ಲಿ ಇವರನ್ನು ಅರೆಮರಾಠಿಗಳೆಂದು ಕರೆಯುತ್ತಾರೆ. ಮಹಾರಾಷ್ಟ್ರದ ಮೂಲ ಹೊಂದಿದ ಇವರು ಇಂದಿಗೂ ಮರಾಠಿ ಯನ್ನೇ ಮನೆಬಳಕೆ ಭಾಷೆಯನ್ನಾಗಿ ಉಪಯೋಗಿಸುತ್ತಾರೆ. ಆದರೆ ಹೊರಗಿನ ಎಲ್ಲ ಸಾಮಾಜಿಕ ಸಂಪರ್ಕಗಳಿಗಾಗಿ ಹಾಗೂ ತೊಗಲುಗೊಂಬೆಯ ಆಟಕ್ಕೂ ಸಹಿತ ಕನ್ನಡ ವನ್ನೇ ಅವಲಂಬಿಸಿದ್ದಾರೆ. ಇವರು ಉಪಯೋಗಿಸುವ ಮರಾಠಿ ಭಾಷೆ ತೀರ ಅಪ ಭ್ರಂಶ ಸ್ವರೂಪವೆಂದು ಹೇಳಲಾಗುತ್ತದೆ.

ರಾಬರ್ಟ ರೆಡ್‌ಫಿಲ್ಡ್‌ರ ಸ್ಥಾನಿಕ ಸಂಪ್ರದಾಯ (Little Tradition) ಹಾಗೂ ವಿಶಾಲ ಸಂಪ್ರದಾಯ (Great Tradition) ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ಈ ಜಾತಿ ಹಾಗೂ ಇದರ ವೃತ್ತಿಯನ್ನು ವಿಶ್ಲೇಷಿಸಿದಾಗ ಇದು ಸ್ಥಾನಿಕ ಸಾಂಪ್ರದಾಯದ ಕ್ಷೇತ್ರಕ್ಕೆ ಸೇರಿದ ಅಂಶವೆಂದು ಹೇಳಬಹುದು. ಸೂತ್ರದ ಗೊಂಬೆಯ ಆಟದಲ್ಲಿ ಕಾಣುವ ನಯ ನಾಜೂಕನ್ನು ತೊಗಲುಗೊಂಬೆಯ ಆಟದಲ್ಲಿ ಕಾಣುವ ಸಾಧ್ಯತೆ ಕಡಿಮೆ. ವೈದಿಕಮಾರ್ಗ ಅನುಸರಿಸಿದ ಸೂತ್ರದಗೊಂಬೆ ಆಟವು ಉಚ್ಚ ಸಂಸ್ಕೃತಿಯನ್ನು ಪ್ರತಿ ನಿಧಿಕರಿಸಿದರೆ ಕೆಳಮಟ್ಟದ ಮಾರ್ಗ ಅನುಸರಿಸಿ ತೊಗಲುಗೊಂಬೆಯ ಆಟವು ಅವೈದಿಕ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ಹಿಂದೂ ಸಾಂಪ್ರದಾಯವು ಕೆಲವು ವಸ್ತುಗಳನ್ನು ಮಡಿ ಮೈಲಿಗೆ ಸಂಕೇತಕ್ಕೆ ಬಳಸಿಕೊಂಡಿದೆ. ಚರ್ಮ ಸ್ಪರ್ಶಕ್ಕೆ ಅರ್ಹವಲ್ಲದಿದ್ದರೂ ಕೆಲವು ಪ್ರಾಣಿಗಳ ಚರ್ಮ ಶ್ರೇಷ್ಠ ಹಾಗೂ ಸ್ಪರ್ಶಕ್ಕೆ ಅರ್ಹ. ಉದಾಹರಣೆಯಾಗಿ— ಚಿಗರಿ, ಹುಲಿ, ಸಿಂಹಗಳ ಚರ್ಮ. ಕಿಳ್ಳೀಕೇತರು ತೊಗಲುಗೊಂಬೆಗಳನ್ನು ಚಿಗರಿಯ ಚರ್ಮದಿಂದ ನಿರ್ಮಿಸಿದರೂ ಕೆಲವೊಮ್ಮೆ ಇತರ ಪ್ರಾಣಿಗಳ ಚರ್ಮವನ್ನು ಉಪ ಯೋಗಿಸುವದುಂಟು, ಆದ್ದರಿಂದ ಚರ್ಮದೊಂದಿಗೆ ವ್ಯವಹರಿಸುವ ಈ ಜಾತಿ ಅವೈದಿಕ ಸಂಸ್ಕೃತಿಯ ಅಂಗವಾಗಿದೆ. ಅವೈದಿಕ ಸಂಸ್ಕೃತಿಯನ್ನು ಇದು ಪ್ರತಿನಿಧಿ ಸಿದರೂ ವೈದಿಕ ಸಂಸ್ಕೃತಿಯ ಬಹುತೇಕ ಎಲ್ಲ ಕಥೆಗಳನ್ನು ಇವರು ಹೇಳುತ್ತಾರೆ. ಕೇವಲ ವೃತ್ತಿಗಾಗಿ ಸಂಸ್ಕೃತ ಕಥಾಭಾಗಗಳನ್ನು ಇವರು ಹೇಳುತ್ತಾರೆಯೇ ಹೊರತು ಅಲ್ಲಿರುವ ಜೀವನಪದ್ಧತಿಯನ್ನು ಇವರು ಅಳವಡಿಸಿಕೊಂಡಿಲ್ಲ. ಆ ಜೀವನವಿಧಾನಕ್ಕೆ ಬೇಕಾಗುವ ಶೈಕ್ಷಣಿಕ, ಆರ್ಥಿಕ ಹಾಗೂ ಸಾಮಾಜಿಕ ಅಂಶಗಳ ಬೆಂಬಲ ಇವರಿಗೆ ಇರಲಿಲ್ಲ.

ಭಾರತದಲ್ಲಿ ಭೂ ಒಡೆತನಕ್ಕೂ ಹಾಗೂ ಜಾತಿಯ ಅಂತಸ್ತಿಗೂ ನಿಕಟವಾದ ಸಂಬಂಧವಿದೆ. ಹೆಚ್ಚು ಭೂ ಒಡೆತನ ಹೊಂದಿದ ಜಾತಿಗಳು ಮೇಲಿನ ಸ್ಥಾನವನ್ನು ಆಕ್ರಮಿಸಿವೆ. ಈ ಜಾತಿಗೆ ಭೂ ಒಡೆತನ ಕಡಿಮೆ. ಆದರೂ ಕೆಲವು ಗ್ರಾಮಗಳಲ್ಲಿ ಇವರಿಗೆ ಉಂಬಳಿ ಜಮೀನು ಇದೆಯೆಂದು ಹೇಳಲಾಗುತ್ತದೆ. ಕೆಲವೊಂದು ಗ್ರಾಮ ಗಳಲ್ಲಿ ಪ್ರತಿವರ್ಷ ತೊಗಲುಗೊಂಬೆ ಆಟ ಆಡಬೇಕೆಂಬ ಕಾರಣದಿಂದ ಜಮೀನನ್ನು ವೃತ್ತಿಯನ್ನು ಹಾಕಿಕೊಡಲಾಗಿದೆ. ಆದರೆ ಈ ವೃತ್ತಿಯನ್ನು ಕೈಬಿಟ್ಟವರು ಕೇವಲ

ಸಂಪ್ರದಾಯಕ್ಕಾಗಿ ಹಾಗೂ ಉಂಬಳಿ ಜಮೀನು ಪಡೆದ ಕಾರಣಕ್ಕಾಗಿ ಬೇರೆಯವ ರನ್ನು ಕರೆಯಿಸಿ ಆಟ ಆಡಿಸುವದುಂಟು. ಕೇವಲ ಸಂಪ್ರದಾಯಿಕ ವೃತ್ತಿಯಿಂದ ಜೀವನನಿರ್ವಹಣೆ ಕಠಿಣ, ಕೃಷಿಯ ಕೂಲಿಕಾರರಾಗಿ, ಮೀನು ಹಿಡಿಯುವ, ಎಮ್ಮೆ ಬೋಳಿಸುವ ಹಾಗೂ ಇತರ ವೃತ್ತಿಯಲ್ಲಿ ಇವರನ್ನು ಕಾಣಬಹುದು. ಸ್ತ್ರೀಯರು ಹಚ್ಚೆ ಚುಚ್ಚುವ ವೃತ್ತಿಯಲ್ಲಿ ತೊಡಗಿದ್ದಾರೆ. ಇವರು ಕೃಷಿ ಕೆಲಸ ಮಾಡುತ್ತಿದ್ದರೂ ನೈಪುಣ್ಯತೆ ಪಡೆದ ವ್ಯವಸಾಯ ಕಾರ್ಯಗಳಿಗೆ ಇವರನ್ನು ತೊಡಗಿಸಿಕೊಳ್ಳುವುದಿಲ್ಲ ವೆಂಬುದು ಗಮನಿಸಬೇಕಾದ ಅಂಶ (ಉದಾ :— ಬಿತ್ತುವ ಕೆಲಸ).

ಎಲ್ಲಪ್ಪ, ಫಕೀರಪ್ಪ, ಬಸಪ್ಪ, ಹನುಮಪ್ಪ ಮುಂತಾದವುಗಳು ಇವರ ಉಪ ಯೋಗಿಸುವ ಸಾಮಾನ್ಯ ಹೆಸರುಗಳು. ಸ್ತ್ರೀಯರಿಗೂ ಸಹಿತ ಇಂತಹ ಹೆಸರುಗಳನ್ನೇ 'ಅವ್ವ' ಪ್ರತ್ಯಯದಿಂದ ಉಪಯೋಗಿಸುತ್ತಾರೆ. ಸವದತ್ತಿ ಎಲ್ಲವ್ವ, ಮುನಿರಾಬಾದಿನ ಹುಲಿಗೆವ್ವ, ತುಳಜಾಪುರದ ಅಂಬಾಭವಾನಿ ಇವರ ಮನೆದೇವತೆಗಳಾಗಿವೆ. ಅಂದರೆ ಇವರು ಶಕ್ತಿಯ ಆರಾಧಕರೆಂದು ಹೇಳಬಹುದು. ಉಡಿಗೆ ತೊಡಿಗೆಗಳಲ್ಲಿ ಪ್ರಾದೇಶಿಕ ಬಟ್ಟೆಗಳನ್ನೇ ಉಪಯೋಗಿಸುತ್ತಾರೆ. ಪುರುಷರಿಗೆ ಪಂಜೆ [ಧೋತರ], ಅಂಗಿ, ಪಟಗ ಅಥವಾ ರುಮಾಲು. ಸ್ತ್ರೀಯರು ಸೀರೆ ಕುಬಸಗಳನ್ನು ಉಪಯೋಗಿಸುತ್ತಾರೆ. ಹಿಂದೂಗಳ ಬಹುತೇಕ ಎಲ್ಲ ಹಬ್ಬಗಳನ್ನು ಇವರು ಆಚರಿಸುತ್ತಾರೆ. ಮುಸ್ಲೀಮರ ಮೋಹರಂನಲ್ಲಿ ವಿಶೇಷ ಆಸ್ಥೆಯಿಂದ ಭಾಗವಹಿಸುತ್ತಾರೆ. ಮೊಹರಂ ಹಬ್ಬದಲ್ಲಿ ಕೆಂಪು ಲಾಡಿ ಹಾಕಿ ಫಕೀರರಾಗುವ, ಪರಕೆ ಹೊತ್ತು ಹುಲಿಯಾಡುವ, ಸಕ್ಕರೆ ಓದಿಸುವ, ಬಲಿ ಕೊಡುವ ಸಾಂಪ್ರದಾಯಗಳಲ್ಲಿ ಪಾಲ್ಗೊಳ್ಳುವರು.

ಇವರ ಜೀವನದ ಯಾವುದೇ ಕ್ರಿಯಾ ವಿಧಿಗಳಿಗೆ ಉದಾಹರಣೆಯಾಗಿ : ಜನನ, ವಿವಾಹ, ಮರಣ ಮುಂತಾದವುಗಳಿಗೆ ಪುರೋಹಿತರ ಆಗಮನ ಹಾಗು ಪವಿತ್ರ ಮಂತ್ರೋಚ್ಚಾರಣೆಗಳಿಲ್ಲ. ನಾಮಕರಣ ಕ್ರಿಯಾ ವಿಧಿಯನ್ನು ಹಿರಿಯ ಅತ್ತೆ ಅಥವಾ ಅಕ್ಕ ಪೂರೈಸುತ್ತಾಳೆ. ಇದೇ ಜಾತಿಯಲ್ಲಿ ವೈದಿಕ ವೃತ್ತಿ ಅನುಸರಿಸುವ ಉಪಜಾತಿ ಗಳೂ ಇಲ್ಲ. ಹೆಚ್ಚು ಸಂಪ್ರದಾಯಸ್ಥರು ಜನಿವಾರ ಧರಿಸುತ್ತಾರೆ. ನೂಲು ಹುಣ್ಣಿಮೆಯ ದಿವಸ ಹಿರಿ ಸಹೋದರಿ ಇದನ್ನು ತೊಡಿಸುತ್ತಾಳೆ. ಮೊದಮೊದಲು ಬ್ರಾಹ್ಮಣ ಪುರೋಹಿತನು ವಿವಾಹ ಸಂದರ್ಭದಲ್ಲಿ ಮಾಂಗಲ್ಯಧಾರಣೆಗೆ ಉಪಸ್ಥಿತ ನಿರುತ್ತಿದ್ದನಂತೆ. ಆದರೆ ಒಂದು ಸಂದರ್ಭದಲ್ಲಿ ಆ ವೈದಿಕನು ಕಿಳ್ಳೀಕ್ಯಾತ ಕನ್ಯೆಯ ಮೊಲೆ ಮುಟ್ಟಿದಕ್ಕಾಗಿ ಅವರನ್ನು ಬಹಿಷ್ಕರಿಸಲಾಯಿತೆಂದು ಹೇಳಲಾಗುತ್ತದೆ. ಹೆಂಡತಿಯನ್ನು ಆಳುವ ಪುರುಷನೇ ಮಡದಿಗೆ ತಾಳಿ ಕಟ್ಟುವದು ಶ್ರೇಷ್ಠ ಪದ್ಧತಿಯೆಂದು ಇವರ ನಂಬಿಕೆ. ಮೀನು ಹಿಡಿಯುವ ಕಿಳ್ಳೀಕ್ಯಾತರಿಗೂ ಹಾಗು ಇತರ ಕಿಳ್ಳೀ ಕ್ಯಾತರಿಗೂ ವಿವಾಹ ಸಂಬಂಧ ಏರ್ಪಡುವದಿಲ್ಲ. ಸಾಮಾನ್ಯವಾಗಿ ಒಳಬಾಂಧವ್ಯ ವಿವಾಹ ಪದ್ಧತಿಯನ್ನೇ ಅನುಸರಿಸುತ್ತಾರೆ. ಇವರಲ್ಲಿ ಪ್ರಮುಖವಾಗಿ ಕೆಳಗಿನ ಬೆಡಗು

ಗಳಿವೆ. ಗಣಾಚಾರಿ ಅಥವಾ ವನಕಾಶಿ, ಶಿವಾಚಾರಿ, ನೆಕನಾರಿ, ಪಚಂಗಿ, ಅಟಕ, ಸಾಳೆ, ಸಿಂಧೆ, ಮೊಹರೆ, ಐವಟ, ಪಾಕುದಾಸ, ಡೊಡಕರ, ಪಮಡಕರ ಮುಂತಾದವುಗಳು. ಒಂದೇ ಗೋತ್ರದವರಲ್ಲಿ ವಿವಾಹ ಸಂಬಂಧ ಏರ್ಪಡುವದಿಲ್ಲ. ಏಕೆಂದರೆ ಒಬ್ಬನೇ ಮೂಲ ಪುರುಷನಿಂದ ಈ ಬೆಡಗುಗಳು ಪ್ರಾರಂಭವಾಗಿವೆ. ಇವರಲ್ಲಿ ಸಹೋದರ ಬಂಧುತ್ವ ಇರುತ್ತದೆ ಎಂದು ನಂಬಲಾಗಿದೆ. ಸಾಮಾನ್ಯವಾಗಿ ವರನ ಕಡೆಯವರೇ ವಧುವಿನ ಆಯ್ಕೆ ಮಾಡುತ್ತಾರೆ. ವಿಶೇಷವಾಗಿ ಹಳೆಯ ಸಂಬಂಧಗಳನ್ನೇ ಪುನರ್ ಸ್ಥಾಪಿಸಿಕೊಳ್ಳುವ ಸಂಪ್ರದಾಯ ಹೆಚ್ಚು. ಕನ್ಯಾಶುಲ್ಕ [ತೆರವು] ಕೊಡುವ ಪದ್ಧತಿಯನ್ನು ಇಂದಿಗೂ ಅನುಸರಿಸುತ್ತಾರೆ. ಉಡಿಕೆ, ಕೂಡಿಕೆ ಪದ್ಧತಿಗಳು ಇರುವದಲ್ಲದೇ ಅರ್ಹ ವಿಧವೆ, ವಿಧುರರ ಪುನರ್ ವಿವಾಹದ ಸಂಪ್ರದಾಯವಿದೆ. ವಿವಾಹ ವಿಚ್ಛೇದನೆಗೆ ಅವಕಾಶ ಇದೆ. ಸಾಮಾನ್ಯವಾಗಿ ಹಿಂದೂಗಳು ಅನುಸರಿಸುವ ಕ್ರಿಯಾ ವಿಧಿಗಳನ್ನೇ ವಿವಾಹದಲ್ಲಿ ಅನುಸರಿಸುತ್ತಾರೆ.

ಜನನ ಹಾಗು ವಿವಾಹದ ಸುತ್ತಲು ವಿಶೇಷ ಕ್ರಿಯಾವಿಧಿಗಳು ಇರದಿದ್ದರೂ ಮರಣ ಹೊಂದಿದವರಿಗಾಗಿ ಕೆಲವು ವಿಶೇಷ ಸಂಪ್ರದಾಯಗಳನ್ನು ಆಚರಿಸುತ್ತಾರೆ. ಶವವನ್ನು ಕುಳಿತ ಭಂಗಿಯಲ್ಲಿ ಹೂಳುವ ಪದ್ಧತಿ ಆಚರಣೆಯಲ್ಲಿದೆ. ಶವವನ್ನು ಸ್ಮಶಾನಕ್ಕೆ ಒಯ್ಯುವಾಗ ಅದರ ಹಿಂದೆ ನವಣೆ ಅಥವಾ ಇತರ ಸಣ್ಣ ಕಾಳುಗಳನ್ನು ಚೆಲ್ಲುತ್ತ ಹೋಗುವರು. ನಿಧನ ಹೊಂದಿದವರ ಆತ್ಮ ಭೂತವಾಗಿ ತಿರುಗಿ ಮನೆ ಪ್ರವೇಶಿಸದಿರಲಿ ಎನ್ನುವ ನಂಬಿಕೆಯ ಹಿನ್ನೆಲೆಯಲ್ಲಿ ಈ ಸಂಪ್ರದಾಯ ಆಚರಿಸಲಾಗುವುದು. ಅಂದರೆ ಭೂತ ಪಿಶಾಚಿಗಳಲ್ಲಿ ಇವರಿಗೆ ನಂಬಿಕೆ ಇದೆ ಎನ್ನಬಹುದು. ಶವ ಸಂಸ್ಕಾರವಾದ ಮೇಲೆ ಸ್ವಲ್ಪ ಮಾಂಸವನ್ನು ಬೇಯಿಸಿ ಎರಡು ರೊಟ್ಟಿಗಳ ಮಧ್ಯದಲ್ಲಿ ಇಟ್ಟು ಮನೆಯ ಯಾವದೇ ಭಾಗದಲ್ಲಿ ಅದನ್ನು ಹುಗಿಯುತ್ತಾರೆ. ಮೂರು ದಿನದ ಕೂಳು ಎಂಬ ವಿಧಿಯನ್ನು ಆಚರಿಸುವದು. ಅಂದು ಅನ್ನ ಬೇಯಿಸಿ ಅದಕ್ಕೆ ಬೆಲ್ಲ ಬೆರಸಿ ಸ್ಮಶಾನದಲ್ಲಿ ಶವವನ್ನು ಹುಗಿದ ಸ್ಥಳದಲ್ಲಿ ಅದನ್ನಿಡುವರು. ಕಾಗೆ ಬಂದು ಆ ಅನ್ನ ಸ್ಪರ್ಶಿಸಿದನಂತರ ಆ ಕಡೆಗೆ ತಿರುಗಿ ನೋಡದೆ ಮನೆಗೆ ಮರಳುತ್ತಾರೆ. ನಂತರ ಐದನೆ ಅಥವಾ ಒಂಭತ್ತನೆ ದಿನಕ್ಕೆ 'ದಿವಸ' ಮಾಡುವರು. ಸಾಮಾನ್ಯವಾಗಿ ನಿಧನ ಹೊಂದಿದ ವ್ಯಕ್ತಿಗಳ ಸಾಂಕೇತಿಕ ರೂಪಗಳನ್ನು [ಮುಖ] ಲೋಹದಲ್ಲಿ ತಯಾರಿಸಿ ಜಗಲಿಯ ಮೇಲಿಟ್ಟು ಪೂಜಿಸುವರು. ಮಹಾನವಮಿಯ ಹಿರಿಯರ ಹಬ್ಬದಂದು ನಿಧನ ಹೊಂದಿದ ಎಲ್ಲ ಪಿತೃಗಳ ವಿಶೇಷ ಪೂಜೆ ಮಾಡುವರು. ಅಂದು ತಮ್ಮ ಮನೆ ದೇವತೆಗಳಾದ ಎಲ್ಲಮ್ಮ ಮುಂತಾದವರನ್ನು ಮನೆ ಹೊರಗಿಟ್ಟು ಕೇವಲ ಪೂರ್ವಜರ ಪ್ರತಿ ರೂಪಗಳನ್ನು ಮಾತ್ರ ಜಗಲಿಯ ಮೇಲೆ ಪ್ರತಿಷ್ಠಾಪಿಸುವರು. ಬೇಟೆಯಾಡಿ ತಂದ ಪ್ರಾಣಿಗಳ ಮಾಂಸವನ್ನು ಅಂದು ಪಿತೃಗಳಿಗೆ ನಿವೇದಿಸುವರು. ಮೂರನೇ ದಿನದ ದೇವತಾ ಪೂಜೆಗೆ ಕೇವಲ ಸಸ್ಯಾಹಾರ ಬಳಸುತ್ತಾರೆ. ಮದ್ಯಪಾನ, ಮಾಂಸಾ

ಹಾರಗಳಿಗೆ ಸಂಪ್ರದಾಯದ ಬೆಂಬಲವಿದೆ. ಆದರೆ ಆಧುನಿಕತೆಯ ಸಂಕೇತವಾಗಿ ಸಸ್ಯಾಹಾರಿಗಳು ಮಾಂಸಾಹಾರ ಪ್ರಾರಂಭಿಸಿದ ಮೇಲೆ, ಅದು ಹೆಚ್ಚುತ್ತಿರುವ ವೆಚ್ಚ ವನ್ನು ಸರಿದೂಗಿಸುವದು ಇವರಿಗೆ ಕಠಿಣವೆನಿಸಿದೆ. ಒಂದು ದೃಷ್ಟಿಯಿಂದ ಶ್ರೇಷ್ಠ ಜಾತಿಯ ಹಾಗು ತಮಗೂ ಏನು ಅಂತರ ಉಳಿಯಲಿಲ್ಲ ಎಂಬ ಮಾನಸಿಕ ಸಮಾಧಾನವೂ ಇದೆ.

ಭಾರತದಲ್ಲಿ ಒಂದೊಂದು ಜಾತಿಯ ಬಗ್ಗೆ ಗಾದೆ ಮಾತುಗಳ ರೂಪದಲ್ಲಿ ಅವುಗಳ ಸಾಮಾಜಿಕ ಸ್ವರೂಪವನ್ನು ವಿವರಿಸುವ ಅಭಿಪ್ರಾಯಗಳುಂಟು. ಉದಾ: ಬ್ರಾಹ್ಮಣರ ಠಕ್ಕತನ, ಚಾಣಾಕ್ಷತೆ, ತಿಂದೋಡಿತನ ವರ್ಣಿಸುವ ಅನೇಕ ಜನಪದ ಅಭಿಪ್ರಾಯಗಳಿವೆ. ಸದಾ ತುಂಟತನದಲ್ಲಿ ತೊಡಗಿದ ಯಾವದೇ ಜಾತಿಯವನನ್ನು 'ಕಿಳ್ಯಾ' ಎಂದು ಕರೆಯುವದುಂಟು. ಅವರ ಸಾಮಾಜಿಕ ನೈತಿಕ ಜೀವನ ಶಿಥಿಲ ವೆನ್ನುವದಕ್ಕೆ ಕೆಳಗಿನ ಅನ್ಯ ಜಾತಿಯವರ ಕೊಂಕು ನುಡಿ ಸಾಕ್ಷಿ– 'ಕಿಳ್ಳೀಕ್ಯಾತ ಕಳ್ಯಾಗ ಹೇತ ಮನಿಗೆ ಬಂದ ಮಕ್ಕಳನ ಹೆಟ್ಬ್ಯಾs'.

ಕಿಳ್ಳೀಕೇತರ ತೊಗಲುಗೊಂಬೆ ಆಟಕ್ಕೆ ಹಾಗು ವರಣ ದೇವರ ಕೃಪೆಗೆ ಗ್ರಾಮೀಣ ಜನತೆ ಇಂದಿಗೂ ಸಂಬಂಧ ಕಲ್ಪಿಸಿದೆ. ಸರಿಯಾಗಿ ಮಳೆ ಬರಲು ಈ ಆಟ ಅವಶ್ಯ ವೆಂದು ಸಾಂಪ್ರದಾಯಕವಾಗಿ ನಂಬಲಾಗಿದೆ. ಗ್ರಾಮದೇವತೆಗಳ ಜಾತ್ರೆ, ಕಾರ್ತಿಕೋ ತ್ಸವಗಳ ಸಂದರ್ಭಗಳಲ್ಲಿಯೂ ಈ ಆಟವನ್ನು ಏರ್ಪಡಿಸುವದುಂಟು. ಯಾವದೇ ಸಮಯ-ಸಂದರ್ಭಗಳಿಲ್ಲದೆ ಸಂಚಾರಿ ತಂಡಗಳು ಗ್ರಾಮದ ಅಥವಾ ಓಣಿಯ ಪ್ರಮುಖ ರನ್ನು ಸಂಪರ್ಕಿಸಿ ಆಟ ಆಡುವದುಂಟು. ಈಗಾಗಲೇ ಹೇಳಿದಂತೆ ಕಿಳ್ಳೀಕ್ಯಾತರು ಜಾತಿಯಿಂದ ಕೀಳಾದರೂ ವೈದಿಕ ಸಂಸ್ಕೃತಿಯ ಕಥೆಗಳನ್ನು ಹೇಳುತ್ತಾರೆ. ಸಂಸ್ಕೃತ ಪದಗಳ ಉಚ್ಚಾರಣೆಯನ್ನು ಅವರ ಬಾಯಿಂದಲೇ ಕೇಳಬೇಕು. ಒಮ್ಮೊಮ್ಮೆ ತೀರ ಅಶ್ಲೀಲ ಪದ ಪ್ರಯೋಗ ಮಾಡಿ ಇಲ್ಲವೆ ಲೈಂಗಿಕ ಪ್ರಸಂಗಗಳನ್ನು ವರ್ಣಿಸಿ ಜನತೆಗೆ ಮನರಂಜನೆ ಒದಗಿಸುತ್ತಾರೆ. ಪೌರಾಣಿಕ ಕಥೆಗಳಲ್ಲಿಯೂ ಇಂದಿನ ಸಾಮಾಜಿಕ ಸ್ಥಿತಿಯ ವಿಡಂಬನೆಯನ್ನು ಮಾಡುತ್ತಾರೆ. ತೀರ ಮಡಿವಂತರು ಇವರ ಆಟ ನೋಡಲು ಹಿಂಜರಿಯುವ ಕಾಲ ಇತ್ತು.

ಗ್ರಾಮಗಳಲ್ಲಿ ಈ ತೊಗಲು ಗೊಂಬೆ ಆಟಆಡಿಸಲು ನಿಶ್ಚಿತ ವೇದಿಕೆ ಅಥವಾ ರಂಗಮಂದಿರವಿಲ್ಲ. ಜನರು ಕುಳಿತುಕೊಳ್ಳಬಹುದಾದ ವಿಶಾಲ ಬಯಲಿನಲ್ಲಿ ರಂಗ ಮಂಟಪ ಸಿದ್ಧಪಡಿಸುತ್ತಾರೆ. ಆಟ ಆಡಲು ವಿಶೇಷವಾಗಿ ದಿಕ್ಕು, ನಕ್ಷತ್ರ ಮತ್ತು ಕಾಲವನ್ನು ಪರಿಗಣಿಸುವದಿಲ್ಲ. ರಾತ್ರಿ ವೇಳೆಯಲ್ಲಿಯೇ ಆಟ ನಡೆಯುತ್ತದೆ. ಆಟ ನಡೆಯುವ ಸಂಜೆ ಸಾರ್ವಜನಿಕರಿಂದ ಆಟದಲ್ಲಿ ಭಾಗವಹಿಸುವ ಕಿಳ್ಳೀಕ್ಯಾತರಿಗೆ ಆಹಾರ ಸಂಗ್ರಹಿಸಿ ಊಟ ಹಾಕುತ್ತಾರೆ. ಮೇಲೆ ಹಣ ಹಾಗು ಧಾನ್ಯ ಸ್ವರೂಪದ ಕಾಣಿಕೆ

...ಶನ್ನು ಕೊಡುತ್ತಾರೆ. ಎತ್ತರಿಸಿದ ಕಟ್ಟೆಯ ಮೇಲೆ ಪ್ರೇಕ್ಷಕರಿಗೆ ಎದರಾಗುವಂತೆ ರಂಗಸ್ಥಳ ನಿರ್ಮಾಣವಾಗುತ್ತದೆ. ರಂಗ ಮಂದಿರವನ್ನು ಆಟ ಆಡುವವರಾಗಲಿ, ಆಡಿಸುವವರಾಗಲೀ ನಿರ್ಮಿಸುತ್ತಾರೆ. ಪೂಜೆಗಾಗಿ ಊದಿನಕಡ್ಡಿ, ತೆಂಗಿನಕಾಯಿಯನ್ನು ಉಪಯೋಗಿಸುವದುಂಟು. ಆಟದ ಮಧ್ಯಾಂತರದಲ್ಲಿ ತಂಬಾಕು, ಎಲೆ, ಅಡಿಕೆ, ಇತ್ಯಾದಿಗಳ ಸರಬರಾಜ ಇವರಿಗೆ ಇರುತ್ತದೆ. ಒಟ್ಟಿಗೆ ಇದೊಂದು ಕಡಿಮೆ ವೆಚ್ಚದ ಗ್ರಾಮೀಣ ಮನರಂಜನೆ ಎಂದು ಹೇಳಬಹುದು. ಆಟ ಮುಕ್ತಾಯವಾದ ಮೇಲೆ ಕಥೆಗಾರನು ಹನುಮಂತ ದೇವರಿಗೆ ಕಾಯಿ ಒಡೆಸುವ ವಾಡಿಕೆ ಇದೆ.

ಹಾಡು, ಕಥೆಗಳು ವಂಶ ಪರಂಪರೆಯಾಗಿ ಹಿರಿಯ ತಲೆಮಾರಿನಿಂದ ಕಿರಿಯ ತಲೆ ಮಾರಿಗೆ ಸಾಗಿ ಬಂದಿದೆ. ಸಂದರ್ಭ, ಸಂಭಾಷಣೆಗಳಾವವು ಲಿಖಿತ ರೂಪದಲ್ಲಿ ದೊರೆಯುತ್ತಿಲ್ಲ, ಬಹುತೇಕವಾಗಿ ರಾಮಾಯಣ, ಮಹಾಭಾರತದಲ್ಲಿ ಬರುವ ಸಂದರ್ಭಗಳನ್ನು ಆಡುತ್ತಾರೆ. ವಿಶೇಷವಾಗಿ ಸೀತಾಪಹರಣ, ಕರ್ಣಾರ್ಜುನರ ಯುದ್ದ, ವಿರಾಟಪರ್ವಯುದ್ಧ, ಅಭಿಮನ್ಯು ಯುದ್ಧ ಮುಂತಾದವುಗಳು ಜನಪ್ರಿಯ ಕಥಾಭಾಗಗಳಾಗಿವೆ.

ಆಧುನಿಕ ಚಲನ ಚಿತ್ರದ ಬೆಳವಣಿಗೆಯ ಇತಿಹಾಸ ಹೇಗೆಯೇ ಇರಲಿ, ಕಿಳ್ಳೀ ಕೇತರ ತೊಗಲುಗೊಂಬೆ ಆಟ ಮಾತ್ರ ಚಲನ ಚಿತ್ರದ ಮೂಲ ಸ್ವರೂಪ ಅಥವಾ ಅದಕ್ಕೆ ಹೆಚ್ಚು ಸಮೀಪವಾದುದೆಂದು ಹೇಳಬಹುದು. ಕುಟುಂಬದ ಗಂಡು ಹೆಣ್ಣುಮಕ್ಕಳು ಒಟ್ಟಾಗಿಯೇ ಇದರಲ್ಲಿ ಭಾಗವಹಿಸುವದುಂಟು. ಸುಮಾರು ನಾಲ್ಕರಿಂದ ಎಂಟು ಜನ ಇದರಲ್ಲಿ ಭಾಗವಹಿಸುತ್ತಾರೆ. ಮಾನವನ ಆಕೃತಿ ಬರುವಂತೆ ತೊಗಲಿನ ತುಂಡುಗಳನ್ನು ಕತ್ತರಿಸಿ ಅವಯುವಗಳು ಚಲಿಸಲು ಬರುವಂತೆ ಜೋಡಿಸಿರುತ್ತಾರೆ. ಅವುಗಳಿಗೆ ವಿಶೇಷ ಆಭರಣ ಹಾಗು ಉಡಿಗೆಗಳ ಅಲಂಕಾರವು ಬಣ್ಣದಲ್ಲಿಯೇ ಇರುತ್ತದೆ. ಕಣ್ಣು, ಕಿವಿ, ಮೂಗು, ಬಾಯಿಗಳಿಗೆ ಗುರುತಿಸಲ್ಪಡಬಹುದಾದ ಬಣ್ಣ ಇರುತ್ತದೆ. ಈ ಗೊಂಬೆ ಗಳನ್ನು ಕುಣಿಸಲು, ತಿರುಗಿಸಲು ಅನುಕೂಲವಾಗುವಂತೆ ನೀಳವಾದ ಸಣ್ಣ ಬಿದರಿನ ಕೋಲಿಗೆ ಅಂಟಿಸಿರುತ್ತಾರೆ. ಗೊಂಬೆಗಳನ್ನು ವಿಶೇಷ ಹದ ಮಾಡಿದ ಜಿಗರೆಯ ಚರ್ಮದಿಂದ ನಿರ್ಮಿಸಿರುತ್ತಾರೆ. ಹೊಸ ತಲೆಮಾರಿಗೆ ಗೊಂಬೆ ತಯಾರಿಸುವ ಕಲೆ ಗೊತ್ತಿಲ್ಲ. ಈ ಗೊಂಬೆಯನ್ನು ತಯಾರಿಸುವ ಚರ್ಮ ಪಾರದರ್ಶಕದಷ್ಟು ತೆಳುವಾಗಿ ರುತ್ತದೆ. ಇವು ಹಗಲಿನಲ್ಲಿ ಕಾಡು ಸ್ವರೂಪದವುಗಳಾಗಿ ಕಂಡರೂ ರಾತ್ರಿ ಬೆಳಕಿನ ಸ್ಪರ್ಶವಾಗಿ ಪರದೆಯ ಮೇಲೆ ಅವುಗಳ ನೆರಳು ಬಿದ್ದಾಗ ಅವುಗಳಿಗಿರುವ ಸೌಂದರ್ಯ, ಘನತೆ, ಗಾಂಭೀರ್ಯಗಳೇ ಬೇರೆ.

ಸುಮಾರು ನಾಲ್ಕರಿಂದ ಆರು ಅಡಿ ಚೌರಸ ಆಕಾರದ ಮಂಟಪದಲ್ಲಿ ಆಟ ನಡೆಯುತ್ತದೆ. ಪ್ರೇಕ್ಷಕರಿರುವ ದಿಕ್ಕಿಗೆ ಬಿಳಿ ಪರದೆ ಕಟ್ಟಿ ಉಳಿದ ಭಾಗವನ್ನು ದಪ್ಪನಾದ ಗುಡಾರ ಅಥವಾ ಕಂಬಳಿಯಿಂದ ಮುಚ್ಚಲಾಗಿರುವದು. ರಜತ ಪರದೆ

ವ ಕಡೆಗೆ ನೆಲದಿಂದ ಸುಮಾರು ನಾಲ್ಕು ಅಡಿಯುವರೆಗೆ ದಪ್ಪನಾದ ಹೊದಿಕೆ ುತ್ತದೆ. ಇದರಿಂದಾಗಿ ಪರದೆಯ ಮೇಲೆ ಗೊಂಬೆಗಳ ಛಾಯೆ ಮಾತ್ರ ುತ್ತದೆಯೆ ಹೊರತು, ಗೊಂಬೆಗಳನ್ನು ಚಾಲಿಸುವವನು ಪ್ರೇಕ್ಷಕರಿಗೆ ಕಾಣಿಸುವದಿಲ್ಲ. ಗಮಂಟಪದ ಒಳಗೆ ಹಾಗೂ ರಜತ ಪರದೆಯ ಹಿಂಭಾಗದಲ್ಲಿ ಘಾಳವಾದ ಹರಳೆಣ್ಣೆಯ ದೀಪ ಇಟ್ಟಿರುತ್ತಾರೆ. ಇತ್ತೀಚೆಗೆ ಪೆಟ್ರೋಮ್ಯಾಕ್ಸ್ [Gas] ಅಥವಾ ವಿದ್ಯುತ್ ದೀಪಗಳನ್ನು ಬಳಸುವದುಂಟು. ದೀಪ ಹಾಗು ಪರದೆಯ ಮಧ್ಯ ಗೊಂಬೆಗಳು ಚಲಿಸಿದಾಗ ಕತೆಗಾರನು ಪಾತ್ರಗಳಿಗೆ ತಕ್ಕ ಹಾಡು, ಸಂಭಾಷಣೆ ಹೇಳಿದಾಗ ಗೊಂಬೆಗಳು ಜೀವತಳೆದು ಕುಣಿದಂತೆ ಕಾಣುತ್ತವೆ. ಸಾಮಾನ್ಯವಾಗಿ ಕತೆಗಾರನೊಬ್ಬನೆ ರಂಗ ಮಂದಿರದೊಳಗಿದ್ದು ಉಳಿದ ಹಿಮ್ಮೇಳದವರು ಹಾಗು ವಾದ್ಯಗಾರರು ರಂಗ ಮಂದಿರದ ಹೊರಗಿನ ಪಕ್ಕದಲ್ಲಿ ಇರುವದುಂಟು. ಪಾತ್ರಗಳ ಪ್ರವೇಶಕ್ಕೆ ತಕ್ಕಂತೆ ಗೊಂಬೆಗಳನ್ನು ಒಳಗೆ ಕತೆಗಾರನು ಹೊಂದಿಸಿಟ್ಟುಕೊಂಡಿರುತ್ತಾನೆ. ಈ ಆಟ ಸುಮಾರು ನಾಲ್ಕರಿಂದ ಆರು ತಾಸುಗಳವರೆಗೆ ನಡೆಯುತ್ತದೆ. ಸ್ತ್ರೀ ಹಾಗು ಪುರುಷ ಪಾತ್ರಗಳ ಸಂಭಾಷಣೆಗಳನ್ನು ಮೊದಲು ಕಿಳ್ಳೀಕ್ಯಾತರ ಗಂಡು ಹೆಣ್ಣುಗಳೇ ಹೇಳುತ್ತಿದ್ದರು. ಇತ್ತೀಚೆಗೆ ಪುರುಷನೊಬ್ಬನೆ ಗಂಡು, ಹೆಣ್ಣುಗಳ ಸ್ವರ ಹೊರಡಿಸಿ ಒನ್ನಲೆ ಸಂಭಾಷಣೆ ಹೊರಡಿಸುವನು. ಹಿಮ್ಮೇಳನದವರು ಸಂಗೀತಕ್ಕಾಗಿ ಉಪಯೋಗಿಸುವ ಪ್ರಮುಖ ಸಾಧನೆಗಳೆಂದರೆ ಡೋಲು ತಾಲ ಮುಖವಾಣೆ [ಬಿದರಿನ ಕೊಳವೆಯ ಒಂದು ಭಾಗಕ್ಕೆ ಜೇಡನ ಪರಿ ಅಂಟಿಸಿ, ಮಧ್ಯ ಭಾಗದ ತೂತಿನಿಂದ ಊದಲಾಗುವದು] ಮುಂತಾದವುಗಳು. ಇತ್ತೀಚೆಗೆ ಹಾರ್ಮೋನಿಯಂ ಕೂಡ ಉಪಯೋಗಿಸಲಾಗುತ್ತದೆ. ಸಂಭಾಷಣೆ, ಹಾಡು, ಸಂಗೀತ ಮುಂತಾದವುಗಳೆಲ್ಲಾ ಉತ್ತರ ಕರ್ನಾಟಕದ ಬಯಲಾಟ ಅಥವಾ ದೊಡ್ಡಾಟದ ಸ್ವರೂಪವನ್ನೇ ಹೋಲುತ್ತವೆ. ಆಟ ಪ್ರಾರಂಭವಾಗುವ ಮೊದಲು ಗಣೇಶ ಹಾಗು ಸರಸ್ವತಿಯರ ಸ್ತೋತ್ರವಾಗುತ್ತದೆ. ಮೊದಲು ಪರದೆಯ ಮೇಲೆ ವಿಘ್ನೇಶ್ವರನ ಪ್ರವೇಶವಾಗುತ್ತದೆ. ಯಾವಾಗಲು ಗೊಂಬೆಗಳು ಪರದೆಯ ಬಲಗಡೆಯಿಂದ ಪ್ರವೇಶಿಸಿ ಎಡಗಡೆಗೆ ನಿರ್ಗಮಿಸುತ್ತವೆ. ಕೀಳು ಜಾತಿಯ ಕಿಳ್ಳಿಕೇತರು ಉಚ್ಚ ಸಂಸ್ಕೃತಿಯ ಕಥಾ ಭಾಗಗಳನ್ನು ಜನರಿಗೆ ಹೇಳಿ ಮನರಂಜನೆ ಒದಗಿಸುತ್ತಿದ್ದರು. ಹಿಂದೂ ಸಮಾಜದಲ್ಲಿ ಹಲವು ಪದರುಗಳಿದ್ದರೂ. ಇದು ಏಕತೆಯನ್ನು ತರುವ ಸಾಧನವಾಗಿತ್ತೆಂದು ಹೇಳಬಹುದು. ನಿರುಪಯುಕ್ತ ಗೊಂಬೆಗಳನ್ನು ಹೊಳೆಗೆ ಅರ್ಪಿಸುವದುಂಟು. ದೃಶ್ಯ ಹಾಗು ಶ್ರವಣ ಮಾಧ್ಯಮಗಳನ್ನು ಬಳಸಿಕೊಂಡ ಕಿಳ್ಳೀಕೇತರ ತೊಗಲು ಗೊಂಬೆಯಾಟವು ಮಾನವನ ನಾಗರಿಕತೆಯಷ್ಟೆ ಪ್ರಾಚೀನ ಕಲೆಯಾಗಿದೆ. ಇದರ ವ್ಯಾಪ್ತಿ, ಆಳ. ಇತಿಹಾಸದ ವಿವೇಚನೆ ಇಲ್ಲಿ ಅಪ್ರಸ್ತುತ. ಆದರೂ ಸಂಕ್ಷಿಪ್ತವಾಗಿ ಹೇಳಬೇಕೆಂದರೆ ಭಾರತ, ಚೀನ, ಮಲೇಶಿಯಾ, ಜಾವಾ. ಟರ್ಕಿ.ಮತ್ತು ಗ್ರೀಕ್ ದೇಶಗಳಲ್ಲಿ ಈ ಕಲೆಯನ್ನು ಕಾಣಬಹುದು. ಗೊಂಬೆಗಳ ರಚನೆ ಹಾಗು ಗಾತ್ರದಲ್ಲಿ ಸ್ಥಾನಿಕ ಸಂಸ್ಕೃತಿಯ ಪ್ರಭಾವ ಕಾಣಬಹುದು.

ತೊಗಲುಗೊಂಬೆಯ ಆಟವು ಕೆಲವು ಆಂತರಿಕ ಹಾಗು ಬಾಹ್ಯ ಕಾರಣಗಳಿಗಾಗಿ ತನ್ನ ಮೊದಲಿನ ಜನಪ್ರಿಯತೆಯನ್ನು ಕಳೆದುಕೊಳ್ಳತೊಡಗಿದೆ. ಮೊದಲನೆಯದಾಗಿ ಗ್ರಾಮೀಣ ಸಮುದಾಯದಲ್ಲಿ ಸಂಘಟನೆಯ ಕೊರತೆ ಇಂದು ಕಾಣುತ್ತಿದೆ. ಇದರಿಂದಾಗಿ ಕಿಳ್ಳೀಕ್ಯಾತರ ಆಟದಂತಹ ಸಮುದಾಯ ಮನರಂಜನೆಗಳು ಮಾಯವಾಗತೊಡಗಿವೆ. ಎರಡನೆಯದಾಗಿ ತೊಗಲುಗೊಂಬೆ ಆಟವು ಸಾಂಪ್ರದಾಯಿಕ ಮಾರ್ಗವನ್ನೇ ಅನುಸರಿಸುತ್ತಿದೆ. ಇದರಲ್ಲಿ ಹೊಸತನ ನಾವಿನ್ಯತೆ ತರುವ ಪ್ರಯತ್ನಗಳು ನಡೆದಿಲ್ಲ. ಮೂರನೆಯದಾಗಿ ಇಂದು ಸಾರ್ವಜನಿಕ ಮನರಂಜನ ಕ್ಷೇತ್ರದಲ್ಲಿ ರೇಡಿಯೊ, ಚಲನ ಚಿತ್ರ, ದೂರದರ್ಶನ [ಟಿ.ವ್ಹಿ] ಮುಂತಾದವುಗಳು ಹೆಚ್ಚು ಪ್ರಭಾವಶಾಲಿ ಮಾಧ್ಯಮಗಳಾಗಿವೆ. ಇವುಗಳೊಂದಿಗೆ ತೊಗಲುಗೊಂಬೆ ಆಟ ಸ್ಪರ್ಧಿಸಲು ಅನರ್ಹವಾಗಿದೆ. ಕೊನೆಯದಾಗಿ ತೊಗಲುಗೊಂಬೆ ಆಟದ ಕಥೆ, ಹಾಡು, ತಾಂತ್ರಿಕತೆ ಮುಂತಾದವುಗಳೆಲ್ಲಾ ಅನೌಪಚಾರಿಕವಾಗಿ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಸಾಗಿ ಬಂದಿವೆ. ಆದ್ದರಿಂದ ಇದರಲ್ಲಿ ಬದಲಾವಣೆ ತರಲು ಈ ವೃತ್ತಿಯವರು ಅಸಮರ್ಥರಾಗಿದ್ದಾರೆ.

ಇಂದು ಗೊಂಬೆಯಾಟದ ಕಲೆಯು ತನ್ನ ಕೊನೆಯ ಹಂತದಲ್ಲಿದೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಮೊದಲಿನಂತೆ ಗ್ರಾಮೀಣ ಜನತೆಯ ಬೆಂಬಲ ಆಕರ್ಷಣೆ ಈ ಆಟಕ್ಕಾಗಿ ಉಳಿದಿಲ್ಲ. ಅಲ್ಲದೆ ಆರ್ಥಿಕವಾಗಿ ಹೀನಸ್ಥಿತಿಯಲ್ಲಿರುವ ಕಿಳ್ಳೀಕ್ಯಾತರಿಗೂ ಇದು ಲಾಭದಾಯಕ ವೃತ್ತಿಯಾಗಿರುವುದಿಲ್ಲ. ಹೊಸ ತಲೆಮಾರಿನವರು ಈ ಆಟವನ್ನು ನಿರ್ಲಕ್ಷಿಸುತ್ತಿದ್ದಾರೆ. ಈ ಕಲೆ ಇನ್ನೆಷ್ಟು ಕಾಲ ಬದುಕಬಲ್ಲದು ಅಥವಾ ಬದುಕಲು ಸಾಧ್ಯವೇ ಎನ್ನುವುದೇ ಈಗಿನ ಸಮಸ್ಯೆ. ಹಲವಾರು ಅಕ್ಯಾಡೆಮಿಗಳು, ವಿಶ್ವವಿದ್ಯಾಲಯಗಳು ಸುಸಂಘಟಿತವಾಗಿ ಪ್ರಯತ್ನಿಸಿದರೆ ಈ ಕಲೆಯನ್ನು ಬೆಳೆಸುವ ಸಾಧ್ಯತೆ ಇರದಿದ್ದರೂ ಉಳಿಸುವ ಸಾಧ್ಯತೆ ಇದೆಯೆಂದು ಹೇಳಬಹುದು.

● ●

---

**ಆಕರಗಳು :**


೧. ಕನ್ನಡ ಜಾನಪದ ಸಾಹಿತ್ಯ : ಡಾ. ಬೆಟಗೇರಿ ಕೃಷ್ಣಶರ್ಮ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

೨. ಉತ್ತರ ಕರ್ನಾಟಕದ ಜಾನಪದ ರಂಗಭೂಮಿ : ಚಂದ್ರಶೇಖರ ಕಂಬಾರ,
ಮನ್ವಂತರ ಪ್ರಕಾಶನ ಧಾರವಾಡ, ೧೯೬೫

೩. ಜನಪದ ಜೀವನ ಮತ್ತು ಕಲೆ : ಡಾ. ಎಲ್. ಆರ್. ಹೆಗಡೆ,
ಸಮಾಜ ಪುಸ್ತಕಾಲಯ ಧಾರವಾಡ, ೧೯೭೭

೪. ಅನಕ್ಷರಸ್ಥರ ಪಾಠಶಾಲೆ ತೊಗಲುಬೊಂಬೆ : ಶಂಪಾ ದೈತೋಟ
ಪ್ರಜಾವಾಣಿ, ೨೫-೯-೭೭


ನೆನಕೆ : ವಿಷಯಸಂಗ್ರಹಣೆಗೆ ಸಹಕರಿಸಿದ ಮಿತ್ರ ಸತ್ಯನಾರಾಯಣನಿಗೆ ಋಣಿ.

# ಸಿದ್ಧಿಕಸಿದ್ಧಿಯುವರು

**ಜ್ಯೋತಿ ಹೊಸೂರ**

ಜನಾಂಗಿಕ (?) ಅಧ್ಯಯನದ ಗುರಿ ಇಟ್ಟುಕೊಂಡಿರುವ ಪ್ರಸ್ತುತ ಪ್ರಬಂಧದ ವಿಷಯ–'ಸಿದ್ಧಿಕಸಿದ್ಧಿಯುವರು'. 'ಸಿದ್ಧಿಕಸಿದ್ಧಿಯುವರು' ಅನ್ನುವುದು ಒಂದು ಜನಾಂಗಕ್ಕೆ (ಇಲ್ಲವೆ ಜಾತಿಗೆ ?) ಸಂಬಂಧಿಸಿದವರನ್ನು ನಿರ್ದೇಶಿಸುವ ಪದವೆಂಬ ಗ್ರಹಿಕೆ ಇಲ್ಲಿದೆ. ಆದರೆ ಈ ಗ್ರಹಿಕೆ ಎಷ್ಟರ ಮಟ್ಟಿಗೆ ಸರಿಯೆಂಬುದನ್ನು ಈಗ ಅರಿತುಕೊಳ್ಳಬೇಕಾಗಿದೆ. ಆದ್ದರಿಂದ 'ಸಿದ್ಧಿಕಸಿದ್ಧಿಯುವರು' ಪದ ನಿರ್ದೇಶಿಸುವ ಅರ್ಥ ಮತ್ತು ಜನಾಂಗಿಕ (?) ಹಿನ್ನೆಲೆಯಲ್ಲಿ ಅದರ ಔಚಿತ್ಯ ಕುರಿತು ಮೊದಲು ಚರ್ಚಿಸುವುದು ಅಗತ್ಯ.

ಸಿದ್ಧಿಕಸಿದ್ಧಿಯುವರೆಂದರೆ ಸಿದ್ಧಿಕಸಿದ್ಧಿ ಅಥವಾ ಸಿದ್ಧಿಕಬಕರಾ ಎಂಬ ಸೋಗು ಹಾಕುವವರೆಂಬುದಂತೂ ಸ್ಪಷ್ಟ. ಆದರೆ ಕೇವಲ ಸಿದ್ಧಿಕಸಿದ್ಧಿಯ ಸೋಗವೊಂದನ್ನೇ ವೃತ್ತಿ ಮಾಡಿಕೊಂಡು ತಮ್ಮ ಉಪಜೀವನ ಸಾಗಿಸುವ ಜನಾಂಗ (ಅಥವಾ ಜಾತಿ ?) ಯಾವುದೂ ಕರ್ನಾಟಕದಲ್ಲಿ ಇಲ್ಲ. ಅಂದರೆ 'ಸಿದ್ಧಿಕಸಿದ್ಧಿಯುವರು' ಎಂಬ ಜನವರ್ಗ ಇಲ್ಲ. ಈ ಬಗ್ಗೆ ಎಲ್ಲಿಯೂ ಲಿಖಿತ ಉಲ್ಲೇಖಗಳು ಸಿಕ್ಕುವುದಿಲ್ಲ; ಮತ್ತು ಈ ವರೆಗೆ ಸಂದರ್ಶಿಸಿದ ವಿವಿಧ ವ್ಯಕ್ತಿಗಳು ಹಾಗು ವಿವಿಧ ಜಾತಿ–ಪಂಗಡಗಳ ಯಾರಿಂದಲೂ ಮೌಖಿಕ–ಮಾಹಿತಿ-ಕೂಡ ಸಿಕ್ಕಿಲ್ಲ. ಇದಕ್ಕೆ ಪ್ರತಿಯಾಗಿ ಸಿದ್ಧಿಕಸಿದ್ಧಿಯ ಸೋಗನ್ನು ಹಾಕುವವರು 'ಜಾತಿಗಾರ' ಎಂಬ ಜಾತಿ (?) ಗೆ ಸಂಬಂಧಿಸಿದವರೆಂಬ ಮಾಹಿತಿ ಸಿಕ್ಕುತ್ತದೆ. ಜಾತಿಗಾರರನ್ನು ಸಂದರ್ಶಿಸಿದಾಗ ತಮ್ಮ ಜನರು ಹಾಕುವ ಪ್ರಮುಖ ಸೋಗುಗಳಲ್ಲಿ ಸಿದ್ಧಿಕಸಿದ್ಧಿಯ ಸೋಗು ಬಹಳ ಜನಪ್ರಿಯವಾದುದೆಂಬುದಾಗಿ ಹೆಮ್ಮೆಯಿಂದ ಹೇಳುತ್ತಾರೆ; ಮತ್ತು ತಮ್ಮನ್ನು ಹೊರತುಪಡಿಸಿ ಬೇರಾವ ಜಾತಿಯವರೂ

ಈ ಸೋಗು ಹಾಕುವುದಿಲ್ಲವೆಂಬುದಾಗಿ ಸ್ಪಷ್ಟೀಕರಿಸುತ್ತಾರೆ. ಉಪಜೀವನಕ್ಕಾಗಿ ತಾವು ಹಾಕುವ ಇನ್ನುಳಿದ ಸೋಗುಗಳ ವಿವರಣೆಯನ್ನೂ ನೀಡುತ್ತಾರೆ. ಅಲ್ಲದೆ ಲಾಗ ಹಾಕುವುದೇ ಮುಂತಾದ ಕಸರತ್ತುಗಳಲ್ಲಿ ತಾವು ಪಳಗಿದವರೆಂದೂ ಕಸರತ್ತುಗಳ ಪ್ರದರ್ಶನವೇ ತಮ್ಮ ಜಾತಿ ವಿಶಿಷ್ಟತೆಯೆಂದೂ ಅವರು ನಿರೂಪಿಸುತ್ತಾರೆ. ಆದ್ದರಿಂದ ಜಾತಿಗಾರರನ್ನು ಜಾನಪದ ವೃತ್ತಿ ಕಲಾವಿದರೆಂದು ಗಣಿಸಬೇಕಾಗುತ್ತದೆ.

ಕೋಶಗಳಲ್ಲಿ– ಜಾತಿಗಾರ ಎಂಬ ಪದಕ್ಕೆ ಲಾಗು ಹಾಕುವ ಮತ್ತು ಸೋಗು ಹಾಕುವ ಉದ್ಯೋಗದವ: ಸಂಚಾರಿ ಹಾಸ್ಯಗಾರ– ವಿದೂಷಕ[೧] ಎಂಬುದಾಗಿ ಅರ್ಥ ಕೊಡಲಾಗಿದೆ. ಆದ್ದರಿಂದ ಮೇಲಿನ ಮಾತುಗಳ ಸಮರ್ಥನೆಗೆ ಕೋಶಗಳಲ್ಲಿಯ ಈ ಅರ್ಥ ಪೂರಕವಾಗುತ್ತದೆಂದು ಹೇಳಬಹುದು.

ಈ ಹಿನ್ನೆಲೆಯಲ್ಲಿ, ಸಿದ್ಧಿಕಸಿದ್ಧಿಯವರು ಅಂದರೆ ಜಾತಿಗಾರ ಜಾತಿಗೆ ಸೇರಿದವರು, ಮತ್ತು ಸಿದ್ಧಿಕಸಿದ್ಧಿ ಅಥವಾ ಸಿದ್ಧಿಕಬಕರಾ ಎಂಬ ವಿಶಿಷ್ಟ ಸೋಗು ಹಾಕುವವರೆಂದು ಅರ್ಥ. ಆದ್ದರಿಂದ ಪ್ರಬಂಧದ ಉದ್ದೇಶದಂತೆ ವಿಶಿಷ್ಟ ವೃತ್ತಿಕಲಾವಿದರೆಂದರೆ ಜಾತಿಗಾರರೇ. ಹೀಗಾಗಿ, ಜಾತಿಗಾರರು ಮತ್ತು ಸಿದ್ಧಿಕಸಿದ್ಧಿಯವರು ಇವೆರಡೂ ಪದಗಳನ್ನು ಪ್ರಬಂಧಮುದ್ದಕ್ಕೂ ತಾತ್ಕಾಲಿಕವಾದ ಪ್ರಸ್ತುತ ಪ್ರಯೋಜನಕ್ಕಾಗಿ ಬಳಸಿಕೊಳ್ಳಲಾಗಿದೆ.

ಇದೇ ಪ್ರಸಂಗದಲ್ಲಿ ಸುಳಿದು ಬರಬಹುದಾದ ಸಂಶಯವೊಂದಕ್ಕೆ ಸಮಾಧಾನ ಕಂಡುಕೊಳ್ಳಬೇಕಾಗುತ್ತದೆ. ಸಿದ್ಧಿಕಸಿದ್ಧಿಯವರು ಅಂದಕೂಡಲೇ ಕಾರವಾರ ಜಿಲ್ಲೆಯ ಗಿರಿಜನರಲ್ಲಿ ಪ್ರಮುಖರಾಗಿರುವ 'ಸಿದ್ಧಿಗಳು' ಎಂಬ ಜನಾಂಗದ ನೆನಪು ಕೆಲವರಿಗೆ ಬರಬಹುದು, ಆದರೆ ಕಾರವಾರ ಕಡೆಯ ಈ 'ಸಿದ್ಧಿ'ಗಳು ಜಾನಪದ ವೃತ್ತಿ ಕಲಾವಿದರಲ್ಲ. ಅವರು ಒಕ್ಕಲುತನ, ಬೇಟೆ, ರೈತ ಕಾರ್ಮಿಕತನ ಮುಂತಾದ ವೃತ್ತಿಗಳಿಂದ ಉಪಜೀವನ ಸಾಗಿಸುತ್ತಾರೆ.[೨] ಆದ್ದರಿಂದ ಇವರಿಗೂ ಸಿದ್ಧಿಕಸಿದ್ಧಿಯವರಿಗೂ ಯಾವುದೇ ಬಗೆಯ ಸಂಬಂಧ ಕಲ್ಪಿಸಲು ಅವಕಾಶವಿಲ್ಲ.

ಇನ್ನು ಮೇಲೆ. ಸಿದ್ಧಿಕಸಿದ್ಧಿಯವರ ಅರ್ಥಾತ್ ಜಾತಿಗಾರ ಜನವರ್ಗದ ಅಧ್ಯಯನಕ್ಕೆ ಮೊದಲು ಮಾಡಲಡ್ಡಿಯಿಲ್ಲ.

---

೧. (i) ಜಾತಿಗಾರ– ಲಾಗಹಾಕುವ ಮತ್ತು ಸೋಗು ಹಾಕುವ ಉದ್ಯೋಗದವ, ರಸಿಕ. ಉಂಡಾಡಿ (ಕನ್ನಡ–ಕನ್ನಡ ಕಸ್ತೂರಿಕೋಶ; ೧೯೫೭, ಪುಟ ೩೬೬).

(ii) ಜಾತಿಗಾಜ = a kind of strolling merry-andrew. (ಕಿಟ್ಟೆಲ್ಲರ ಕನ್ನಡ ಇಂಗ್ಲೀಷ ನಿಘಂಟು: ೧೯೬೯. ಸಂಪುಟ–೨; ಪುಟ ೬೮೪).

೨. ಡಾ. ಎಲ್. ಆರ್. ಹೆಗಡೆ : ಸಿದ್ಧಿಯರ ಕಥೆಗಳು (೧೯೭೮) ಪುಟ ೨೨–೨೩.

**ವಾಸಿಸುವ ಪ್ರದೇಶ :**

ಸಿದ್ಧಿಕಸಿದ್ಧಿಯೆಂಬ ಸೋಗಿನ ಸರ್ವಸ್ವಾಮ್ಯವನ್ನು ಹೊಂದಿರುವ ಜಾತಿಗಾರರು ಸಂಚಾರಿ ಜನ. ಅವರಿಗೆ ನಿರ್ದಿಷ್ಟ ಊರೆಂಬುದು ಇಲ್ಲ. ಆದರೂ ಹಿಂದಿನ ಸಂಸ್ಥಾನಿಕರು, ದೇಸಾಯಿ–ನಾಡಗೌಡರು ಮೊದಲಾದವರು ಇವರ ಸೋಗು–ಕಸರತ್ತು ಗಳನ್ನು ನೋಡಿ ಮೆಚ್ಚಿ, ಹಲವಾರು ಊರುಗಳಲ್ಲಿ ಭೂಮಿ ಇನಾಮಾಗಿ ಕೊಟ್ಟಿದ್ದಾರೆ. ಮುಧೋಳ ತಾಲೂಕಿನ ಮುಂಟೂರ, ಜಮುಖಂಡಿ ತಾಲೂಕಿನ ಸಾವಳಗಿ. ಗೋಠೆ, ಗದ್ವಾಳ ಮುಂತಾದ ಹಲವೆಡೆ ತಮ್ಮ ಹಿರಿಯರಿಗೆ ಇನಾಮುವಾಗಿ ದೊರೆತ ಭೂಮಿ ಗಳಿರುವುದಾಗಿ ಈ ಜಾತಿಕಾರರಲ್ಲಿಯ ವಯೋವೃದ್ಧರು ಒಳ್ಳೆಯ ಅಭಿಮಾನದಿಂದ ಹೇಳುತ್ತಾರೆ. ಹೀಗೆ ಇನಾಮ ದೊರೆತ ಜಮೀನುಗಳು ಹೆಚ್ಚಾಗಿ ವಿಜಾಪೂರ ಜಿಲ್ಲೆ ಯಲ್ಲಿಯೇ ಇರುವುದು ಗಮನಾರ್ಹ ಸಂಗತಿ. ಆದರೆ ಇಂಥ ಬಹುಪಾಲು ಜಮೀನು ಗಳು ಇಂದು ಇವರ ಕೈಯಲ್ಲಿ ಇಲ್ಲ. ಕೆಲವನ್ನು ಇವರು ಮಾರಿಕೊಂಡಿದ್ದಾರೆ; ಇನ್ನು ಕೆಲವು ಜಮೀನುಗಳು ರೈತರಿಗೆ ದಕ್ಕಿ ಹೋಗಿವೆ. ಏಕೆಂದರೆ ಜಮೀನು ಇನಾಮಾಗಿ ಪಡೆದರೂ ಸಾಮಾನ್ಯವಾಗಿ ಇವರು ಒಕ್ಕಲುತನ ವೃತ್ತಿಗಿಳಿದಿಲ್ಲ. ಮತ್ತು ಆ ಊರು ಗಳಲ್ಲಿ ಇವರು ಶಾಶ್ವತವಾಗಿ ನೆಲೆಸಿಯೂ ಇಲ್ಲ. ತಮ್ಮ ಕಸರತ್ತು ಪ್ರದರ್ಶಿಸುತ್ತ ಸೋಗು ಹಾಕುತ್ತ ಊರೂರು ಸುತ್ತುವ ವೃತ್ತಿಯನ್ನೇ ಜಾತಿಗಾರರು ಒಗ್ಗಿಸಿಕೊಂಡಿ ದ್ದಾರೆ. ಹೀಗಿದ್ದರೂ ವರ್ಷದಲ್ಲಿ ಒಂದೆರಡು ಸಲ ನಿರ್ದಿಷ್ಟ ಸಮಯಗಳಲ್ಲಿ ಇನಾಮಿ ಜಮೀನುಗಳಿರುವ ತಮ್ಮ ಊರುಗಳಿಗೆ ಹೋಗಿ, ಜಮೀನಿನ ಲಾವಣಿ (ಇಲ್ಲವೆ ಪಾಲು ಇತ್ಯಾದಿ) ವಸೂಲ ಮಾಡಿ ಅಲ್ಲಿಯ ದೇವರು ದಿಂಡರುಗಳಿಗೆ ತಮ್ಮ ಪೂಜೆ ಸಲ್ಲಿಸಿ ಮತ್ತೆ ತಮ್ಮ ಸಂಚಾರ ಆರಂಭಿಸುವ ಸಂಪ್ರದಾಯ ಇವರಲ್ಲಿದೆ.

ಕರ್ನಾಟಕದಲ್ಲಿ ತಾವು ತಿರುಗದ ಹಳ್ಳಿಯಿಲ್ಲ; ನೋಡದ ಪಟ್ಟಣವಿಲ್ಲವೆಂದು ಅವರು ಹೇಳುತ್ತಾರೆ. ತಿರುಗಾಟಕ್ಕೆ ಅನುಕೂಲವಾಗುವಂತೆ ಅತಿಕಡಿಮೆ ಪ್ರಾಪಂಚಿಕ ಸಲಕರಣೆಗಳು. ಹೋದಲ್ಲೆಲ್ಲ ಐದ್ಹತ್ತು ಮಿನಿಟುಗಳಲ್ಲಿ ಸಿದ್ಧಗೊಳಿಸುವ ಢೇರೆಯೇ ಅವರ ಮನೆ. ಢೇರೆ ಮಾತ್ರ ಬಿಳಿಯ ಬಣ್ಣದ ಬಟ್ಟೆಯದೇ ಇರಬೇಕೆಂಬುದು ಇವರ ಸಾಂಪ್ರದಾಯಿಕ ನಂಬುಗೆ.

ಜಾತಿಗಾರರ ಸಂಚಾರ ಉತ್ತರ ಕರ್ನಾಟಕದಲ್ಲಿಯೇ ಹೆಚ್ಚು. ಹೈದ್ರಾಬಾದ ಕರ್ನಾಟಕದ ಕಡೆಗೂ ಸಂಚರಿಸುವುದುಂಟು. ಕ್ವಚಿತ್ತಾಗಿ ಮೈಸೂರು ಭಾಗದ ಕಡೆಗೂ ಹೋಗುತ್ತಾರೆ.

**ಆಡುವ ಭಾಷೆ ಮತ್ತು ಧರ್ಮ :**

ಜಾತಿಗಾರರ ಮಾತೃಭಾಷೆ ಉರ್ದು. ಇವರ ಉರ್ದುವಿನ ಮೇಲೆ ಕನ್ನಡದ ದಟ್ಟ ಪ್ರಭಾವವಾಗಿದೆ. ತಮ್ಮ ವಸತಿ ಬಿಟ್ಟು ಹೊರಬಿದ್ದರೆ ಕನ್ನಡಭಾಷೆ ಆಡುತ್ತಾರೆ.

ಇವರ ಸೋಗುಗಳಿಗೆ ಬೇಕಾಗುವ ಸಾಹಿತ್ಯವೆಲ್ಲ ಕನ್ನಡದಲ್ಲಿಯೇ ಇದೆ. ಹೀಗಾಗಿ ಇವರು ಒಳ್ಳೆಯ ಕನ್ನಡಭಾಷೆ ಆಡುತ್ತಾರೆ. ಕೆಲವರು ಸೋಗುಗಳಿಗೆ ತಕ್ಕಂತೆ ಪ್ರಾಸಂಗಿಕವಾಗಿ ಚುಟುಕು, ಹಾಡು ರಚಿಸಿಕೊಂಡು ತಾತ್ಕಾಲಿಕ ಅಗತ್ಯಗಳನ್ನು ಪೂರೈಸಿ ಕೊಳ್ಳುವಷ್ಟರ ಮಟ್ಟಿಗೆ ಕನ್ನಡದ ಮೇಲೆ ಪ್ರಭುತ್ವ ಸಾಧಿಸಿಕೊಂಡಿರುತ್ತಾರೆ.

ತಮ್ಮ ಭಿಕ್ಷುಕರಂಥ ವೃತ್ತಿಗಳಿಗೆ ಸಹಾಯಕವಾಗಲೆಂದು (ಗಡಿಭಾಗಕ್ಕೆ ಹೋದಾಗ) ಹಲಕೆಲವರು ಮರಾಠಿ ಭಾಷೆಯನ್ನೂ ವ್ಯವಹಾರಕ್ಕಾಗಿ ಅರಿತಿರುತ್ತಾರೆ.

ಜಾತಿಗಾರರ ತಂಡಗಳನ್ನು ಸಂದರ್ಶಿಸಿ ನಿಮ್ಮ ಜಾತಿ-ಧರ್ಮ ಯಾವುದೆಂದು ಕೇಳಿದರೆ 'ಮುಸಲ್ಮಾನ' ಎಂಬುದಾಗಿ ಹೇಳುತ್ತಾರೆ. ಮುಸಲ್ಮಾನರಲ್ಲಿಯ ಶೇಖ, ಸಯ್ಯದ, ಮೊಗಲ ಮತ್ತು ಪಠಾಣ ಎಂಬ ಪ್ರಮುಖ ಪಂಗಡಗಳಲ್ಲಿ ತಾವು ಶೇಖ ಪಂಗಡಕ್ಕೆ ಸೇರಿದವರೆಂದು ವಿವರಿಸುತ್ತಾರೆ. ಅಷ್ಟೇ ಅಲ್ಲ, ತಮ್ಮದು ಉಳಿದೆಲ್ಲ ಮುಸಲ್ಮಾನರಿಗಿಂತಲೂ ಒಂದು ಪಾವಲಿಯಷ್ಟು (ರೂಪಾಯಿಯಲ್ಲಿ) ಹೆಚ್ಚಿನ ಕುಲ ವೆಂದು ತಮ್ಮ ಅಗ್ಗಳಿಕೆ ಹೇಳಿಕೊಳ್ಳುತ್ತಾರೆ. ತಾವು ಕೈ ಮುಂದೆ ಮಾಡಿ, ಬೇಡಿ ಪಡೆದು ಬದುಕಿದರೂ ತಮ್ಮ ಶ್ರೇಷ್ಠತೆಯನ್ನು ಅವರು ಮರೆತಿಲ್ಲ. 'ಕೈ ಮಾರಿಕೊಂಡಿದ್ದರೂ ಕುಲ ಮಾರಿಕೊಂಡಿಲ್ಲ' ಎಂಬ ಗಾದೆ ಹೇಳಿ ತಮ್ಮ ಮಾತನ್ನು ಸಮರ್ಥಿಸಿಕೊಳ್ಳು ತ್ತಾರೆ.

**ಪೂರ್ವೇತಿಹಾಸ :**

ಜಾತಿಗಾರರ ಪೂರ್ವೇತಿಹಾಸ ಕುತೂಹಲಕಾರಿಯಾಗಿದೆ. ನೀವು ಎಂಥ ಮುಸ ಲ್ಮಾನರೆಂದು ಕೇಳಲು ಈಗ ಮೂಡಲಗಿಯಲ್ಲಿ (ಗೋಕಾಕ ತಾಲೂಕ) ವಾಸವಾಗಿರುವ ಸುಮಾರು ೮೫ ವರ್ಷ ವಯಸ್ಸಿನ ಹಣ್ಣುಮುದುಕ ಶ್ರೀ ಖಾಜಾಸಾಹೇಬ ಸಾಬು ಜಾತಿಗಾರ ಎಂಬಾತನು ತಾವು ಹಿಂದೂ ಮುಸಲ್ಮಾನರೆಂದು ಹೇಳಿದನು. ಹಿಂದೂ ಗಳಾಗಿದ್ದ ತಮ್ಮ ಪೂರ್ವಜರು ವಿಜಾಪೂರದ ಆದಿಲಶಹನ ಆಳಿಕೆಯಲ್ಲಿ ಪರಿಸ್ಥಿತಿಯ ಒತ್ತಡದಿಂದಾಗಿ ಮತಾಂತರಗೊಂಡ ಘಟನೆಯ ಬಗ್ಗೆ ತಾನು ಅಜ್ಜ-ಮುತ್ತಜ್ಜರಿಂದ ಕೇಳಿದ ಕತೆಯೊಂದನ್ನು ಹೇಳಿದನು :

"ನಮ್ಮ ಪೂರ್ವಜರು ವಿವಿಧ ಸೋಗು ಹಾಕುವ ಮತ್ತು ಕಸರತ್ತು ಪ್ರದರ್ಶಿ ಸುವ ಹಿಂದುಗಳು. ಅವರು ವಿಜಾಪೂರದ ಬಾದಶಹನ ಅಪ್ಪಣೆಯಂತೆ ದಿನಕ್ಕೊಂದು ಹೊಸ ಸೋಗು ಹಾಕಿ ಅವನ ಮುಂದೆ ಪ್ರಯೋಗಿಸುತ್ತಿದ್ದರು. ವರ್ಷ ಮುಗಿಯುವು ದಕ್ಕೆ ಇನ್ನೂ ಒಂದು ದಿನವಿರುವಾಗ ಇವರ ಸೋಗುಗಳೆಲ್ಲ ತೀರಿದವು. ಬೇರೆ ಸೋಗು ಗಳು ದೊರೆಯದಿರಲು ಬಾದಶಹನ ಗುರುವಿನ ಸೋಗನ್ನೇ ಹಾಕಿದರು. ತಮ್ಮ ಗುರು ಗಳು ಆಗಮಿಸುತ್ತಲಿದ್ದಾರೆಂಬ ಸಮಾಚಾರ ಅರಸನಿಗೆ ಮುಟ್ಟುವಂತೆ ಏರ್ಪಡಿಸಿದರು.

ಬಾದಶಹನು ಭಕ್ತಿಭಾವದಿಂದ ಪುಳಕಿತನಾಗಿ ಗುರುಗಳನ್ನು ಸ್ವಾಗತಿಸಿದನು. ಅವರ ಪಾದಗಳ ಮೇಲೆ ತಲೆ ಇಡಬೇಕೆನ್ನುವಾಗ, ರಾಜನಿಂದ ನಮಸ್ಕರಿಸಿಕೊಳ್ಳುವುದು ತಪ್ಪೆಂದು ಭಾವಿಸಿ ನಿಜಸಂಗತಿ ತಿಳಿಸಿದರು. ಸಿಟ್ಟಿಗೆದ್ದ ಅರಸ ಅವರ ತಲೆಗಡಿಯಲು ಅಜ್ಞಾಪಿಸಿದ. ಅನಂತರ ಅಂಗಲಾಚಿ ಬೇಡಿಕೊಳ್ಳಲು ಮುಸಲ್ಮಾನರಾಗಬೇಕೆಂಬ ಕರಾರಿನ ಮೇಲೆ ತನ್ನ ಆಜ್ಞೆ ಹಿಂತೆಗೆದುಕೊಂಡನು. ಅಂದಿನಿಂದ ನಮ್ಮ ಜನರು ಮುಸಲ್ಮಾನರಾದರು. ಹೀಗೆ ಮತಾಂತರಗೊಂಡರೂ ಜಾತಿಗಾರ ಎಂಬ ಅವರ ಜಾತಿ (?) ಸೂಚಕ ಹೆಸರು ಅವರ ಬೆನ್ನು ಬಿಟ್ಟಿಲ್ಲ, ತಮ್ಮ ಪೂರ್ವಜರು ಹೀಗೆ ಮತಾಂತರಗೊಂಡರೂ ಹಿಂದೂ ಪ್ರಭಾವ ತಮ್ಮಲ್ಲಿ ಬಹಳಿರುವುದಾಗಿ ಶ್ರೀ ಖಾಜಾ ಸಾಹೇಬನೇ ಸ್ಪಷ್ಟೀಕರಿಸುತ್ತಾನೆ: "ಹಿಂದೂ ಜನರ ಹಬ್ಬ ಹರಿದಿನ; ಹುಣ್ಣಿವೆ ಅಮಾವಾಸ್ಯೆ ಇತ್ಯಾದಿಗಳನ್ನು ಶ್ರದ್ಧೆಯಿಂದ ಆಚರಿಸುತ್ತೇವೆ. ಆದ್ದರಿಂದಲೇ ನಾವು ಹಿಂದೂ ಮುಸಲ್ಮಾನರು" ಎಂಬುದಾಗಿ ಅವನು ವಿವರಿಸುತ್ತಾನೆ.

ಮತಾಂತರದ ಬಗೆಗಿನ ಖಾಜಾಸಾಹೇಬನ ಕತೆಯನ್ನು ಸಮರ್ಥಿಸುವ ಖಚಿತ ಆಧಾರಗಳಾವೂ ಸಿಕ್ಕುವುದಿಲ್ಲ. ಆದರೂ ಅವನ ಕತೆಯನ್ನು ಅಂತೆಗಳ ಕಂತೆ ಎಂದು ಸಂಪೂರ್ಣ ಅಲ್ಲಗಳೆಯಲಾಗದು. ಸಾಂಸ್ಕೃತಿಕ ಸಂಕರಕ್ಕೆ ಸಂಬಂಧಿಸಿದ ಇಂಥ ಕತೆಗಳಲ್ಲಿ ಸತ್ಯಾಂಶಗಳ ಎಳೆಗಳಿರುವ ಸಾಧ್ಯತೆ ಇಲ್ಲದಿಲ್ಲ.

ಹಲವು ವೇಷಗಳನ್ನು ಜನತೆಯ ಮುಂದೆ ಪ್ರದರ್ಶಿಸುವ ಮೂಲಕ ಗಳಿಸಿ, ಉಪಜೀವಿಸುವ ಜನವರ್ಗವು ೧೨ನೆಯ ಶತಮಾನದ ಆದಿಯಿಂದಲೂ ಕರ್ನಾಟಕದಲ್ಲಿ ಇದ್ದ ಬಗ್ಗೆ ಉಲ್ಲೇಖಗಳಿವೆ.

ಕ್ರಿ. ಶ. ೧೧೧೨ರಲ್ಲಿ ಬಾಳಿದ್ದ ಕವಿ ನಯಸೇನನು ತನ್ನ 'ಧರ್ಮಾಮೃತ' (೪-೪೬) ದಲ್ಲಿ "ಬಹುರೂಪಿಯಂತೆ ಪೊತ್ತಿಂಗೊಂದಂದ ಮಾಗದೆ" ಎಂಬುದಾಗಿ ಹೊತ್ತಿಗೊಂದು ವೇಷ ಧರಿಸುವ ಬಹುರೂಪಿಗಳನ್ನು ಉಲ್ಲೇಖಿಸಿದ್ದಾನೆ.

ಬಹುರೂಪಿ ಕಾಯಕದ ಚೌಡಯ್ಯ ಹನ್ನೆರಡನೆಯ ಶತಮಾನದ ಪ್ರಮುಖ ಶಿವಶರಣರಲ್ಲೊಬ್ಬನಾಗಿದ್ದಾನೆ. ಈತನು ತಾನು ರಚಿಸಿದ ವಚನಗಳಲ್ಲಿ ಬಹುರೂಪಿ ಕಾಯಕದ ಪ್ರಸ್ತಾಪ ಮಾಡಿದ್ದಾನೆ.[೩] ಈ ಚೌಡಯ್ಯನನ್ನು ಪಂತಿಯ ಹಾಡುಗಳಲ್ಲಿ ಹೆಸರಿಸಲಾಗಿದೆ.[೪]

---

೩. ಪ್ರೊ. ಸಂ. ಶಿ. ಭೂಸನೂರಮಠ : ಪ್ರಭುದೇವರ ಶೂನ್ಯಸಂಪಾದನೆ (೧೯೬೫) ಪುಟ ೩೭೮–೩೭೯.

೪. ಡಾ. ಜಿ. ಎಸ್. ಗದ್ದಗಿಮಠ : ಕನ್ನಡ ಜಾನಪದ ಗೀತಗಳು (೧೯೬೩) ಪು. ೨೪೯–೨೫೭.

ಶ್ರೀ ತ. ಸು. ಶಾಮರಾಯರ 'ಶಿವಶರಣ ಕಥಾರತ್ನಕೋಶ'ದಲ್ಲಿ "ಜಾತಿಕಾರರು—ಇವರು ಲಿಂಗಧಾರಣೆ ವಿಭೂತಿಗಳೊಡನೆ ಬಸವಣ್ಣನನ್ನು ಕಾಣಲು, ಆತನು ಅವರನ್ನು ಶಿವರೂಪೆಂದು ವಂದಿಸಿದನು. ಅವನ ಪ್ರಭಾವದಿಂದ ಅವರೆಲ್ಲರೂ ನಿಜ ಜಂಗಮರಾದರು. (ಪುಟ ೧೬೧)" ಎಂದು ಹೇಳಲಾಗಿದೆ. ತಮ್ಮೀ ಹೇಳಿಕೆಗೆ ಶ್ರೀ ಫ. ಗು. ಹಳಕಟ್ಟಿಯವರ 'ಬಸವೇಶ್ವರ ಷಟ್‌ಸ್ಥಲ ವಚನ ಕಥಾಸಾರ'ವು ಆಕರವೆಂದು ಶ್ರೀ ಶಾಮರಾಯರು ನಮೂದಿಸಿದ್ದಾರೆ. ಆದ್ದರಿಂದ ಹನ್ನೆರಡನೆಯ ಶತಮಾನದಲ್ಲಿ ಬಹುರೂಪ ಧರಿಸುವ ವೇಷಗಾರರಿಗೆ ಜಾತಿಗಾರರು ಎಂಬುದಾಗಿಯೂ ಕರೆಯಲಾಗುತ್ತಿತ್ತೆಂದು ನಿರ್ಧರಿಸಬಹುದಾಗಿದೆ. ಮತ್ತು ಇವರು ಹಿಂದುಗಳೆಂಬುದಾಗಿ ಬೇರೆ ಹೇಳಬೇಕಾಗಿಲ್ಲ.

ಶಾಂತಿಲಿಂಗದೇಶಿಕ (ಕ್ರಿ. ಶ. ೧೬೭೨) ಕವಿಯು ಬಹುರೂಪಿ ಚೌಡಯ್ಯನಿಗೆ ಸಂಬಂಧಿಸಿದ ಕತೆಯೊಂದರಲ್ಲಿ "...ಭಾಸ್ಕರಭಟ್ಟನ ಮಗ ಅಚ್ಯುತನೆಂಬವನು ಗಾನ, ನರ್ತನ, ಜಾತಿಗಾಜಿ ವಿದ್ಯಮಂ ಕಲಿತು..."[೫] ಎಂಬುದಾಗಿ 'ಜಾತಿಗಾಜಿ' ಪದವನ್ನು ಒಂದು ಬಗೆಯ ವಿದ್ಯೆ ಎಂಬ ಅರ್ಥದಲ್ಲಿ ಪ್ರಯೋಗಿಸಿದ್ದಾನೆ. ಮತ್ತೊಂದೆಡೆಯಲ್ಲಿ "...ಜಾತಿಕಾಜಿ ವಿದ್ಯದಲ್ಲಿ ಹದಿನೆಂಟು ಜಾತಿಯ ನೂಱೊಂದು ಕುಲದ ವೇಷಮಂ ತೊಟ್ಟು ಭಾಷೆಯನಾಡುವಲ್ಲಿ..."[೬] ಎಂದು ಆ ಪದ ಪ್ರಯೋಗಿಸಿರುವುದರಿಂದ ಜಾತಿಕಾಜಿ ವಿದ್ಯೆಯ ಸ್ವರೂಪದ ಬಗ್ಗೆ ತುಸು ಸೂಚನೆ ಪಡೆಯಬಹುದಾಗಿದೆ. ಬಹುರೂಪಿ ಚೌಡಯ್ಯನು ಅಚ್ಯುತನೆಂಬವನನ್ನು ತನ್ನ ವಿದ್ಯಾಬಲದಿಂದ ಸೋಲಿಸಿದುದನ್ನು ವಿವರಿಸುವಾಗ ಮೇಲಿನ ಮಾತು ಬಂದಿದೆ. ಹದಿನೆಂಟು ಜಾತಿಯ ನೂರೊಂದು ಕುಲದ ವೇಷ ತೊಡುವುದು 'ಜಾತಕಾಜ ವಿದ್ಯ' ಒಂದಂಗವಾಗಿರಬಹುದೆಂದು ಊಹಿಸಬಹುದು. 'ಜಾತಿಕಾಜಿ ವಿದ್ಯೆ'ಯಿಂದ ಉಪಜೀವಿಸುವವರೆಲ್ಲರೂ ಜಾತಿಗಾರರು ಎಂಬ ಜನವರ್ಗದವರಾದರು. ಇಂದು ಜಾತಿಗಾರರನ್ನು ಸಂದರ್ಶಿಸಿ ಅವರ ವೃತ್ತಿಗಳ ಬಗ್ಗೆ ಕೇಳಲು—ಲಾಗ ಹಾಕುವುದು; ವಿವಿಧ ದೈಹಿಕ ಕಸರತ್ತು ಪ್ರದರ್ಶಿಸುವುದು ತಮ್ಮ ಹಿರಿಮೆಯ ಕಾಯಕವೆಂದು ಹೇಳುತ್ತಾರೆ. ಆದ್ದರಿಂದ ವಿವಿಧ ಕುಲ-ಜಾತಿಗಳ ವೇಷ ಧರಿಸುವುದು; ವಿಡಂಬಕ ವೇಷ ಧರಿಸುವುದು; ರಾಮಾಯಣ–ಮಹಾಭಾರತ, ಪುರಾಣಾದಿಗಳಲ್ಲಿಯ ಪ್ರಸಂಗಗಳ ವೇಷ ಧರಿಸುವುದು 'ಜಾತಿಕಾಜಿ ವಿದ್ಯೆ'ಯ ಒಂದು ಅಂಗವಾದರೆ, ಲಾಗ ಮತ್ತು ಕಸರತ್ತುಗಳ ಪ್ರದರ್ಶನ ಇನ್ನೊಂದು ಅಂಗವಾಗಿರಬಹುದು. ಇವೆಲ್ಲವುಗಳಲ್ಲಿಯೂ ಕುಶಲರಾಗಿದ್ದವರು—ಪಳಗಿದವರು—ಚಾಲಾಕರು

---

೫. ಸಂ: ಡಾ. ಆರ್. ಸಿ. ಹಿರೇಮಠ ಮತ್ತು ಡಾ. ಎಂ. ಎಸ್. ಸುಂಕಾಪೂರ : ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ (೧೯೬೪) ಪುಟ ೨೨೨.

೬. ಅದೇ, ಪುಟ ೨೨೩.

ಆಗಿದ್ದುದರಿಂದ ಇವರಿಗೆ 'ಜಾತಿಕಾಜಿ' ಎಂಬ ಹೆಸರು ಬಂದಿರಬೇಕು. 'ಜಾತಿಕಾಜಿ' ಎಂಬುದು ಚಾಲಾಕತನದಲ್ಲಿ ಶ್ರೇಷ್ಠ ಎಂಬರ್ಥದ ಲಾಕ್ಷಣಿಕ ಪದವಾಗಿದೆ.[2]

ಹನ್ನೆರಡನೆಯ ಶತಮಾನಕ್ಕಿಂತ ಮೊದಲಿನಿಂದಲೂ ತಮ್ಮ ಕುಶಲಕಲೆಯನ್ನು ಜನತೆ ಎದುರು ಪ್ರದರ್ಶಿಸುತ್ತ ಉಪಜೀವಿಸುತ್ತಿದ್ದ ಈ ಬಗೆಯ ಜನವರ್ಗದಲ್ಲಿ ಕಾಲಾನುಕ್ರಮದಲ್ಲಿ ಎರಡು ಮುಖ್ಯ ಪಂಗಡಗಳಾಗಿ ಅವು ಬೇರ್ಪಟ್ಟಿರುವ ಸಾಧ್ಯತೆಗಳಿವೆ. ವಿಜಾಪೂರದ ಆದಿಲಶಾಹ ಆಳಿಕೆಯುವಧಿಯಲ್ಲಿ ನಡೆದ ಘಟನೆ ವಿವರಿಸುವ ಪರಂಪರಾಗತ ಕತೆಯ ಅನಂತರವೇ ಎರಡು ಪಂಗಡಗಳು ಬೇರ್ಪಟ್ಟಿರಬಹುದು. ಒಂದು ಗುಂಪಿನವರು ರಾಮಾಯಣ ಮಹಾಭಾರತ, ಪುರಾಣಾದಿ ಪ್ರಸಂಗಗಳನ್ನು ಪ್ರದರ್ಶಿಸುವ 'ಬಹುರೂಪಿ'ಗಳಾಗಿ ಅಥವಾ 'ವೇಷಗಾರ'ರಾಗಿ ಉಳಿದರು. ವೃತ್ತಿ ಕಾರಣದಿಂದ 'ಬಹುರೂಪಗಾರರು' ಅಥವಾ 'ವೇಷಗಾರ'ರು ಎಂಬ ಹೆಸರೇ ಅನ್ವರ್ಥಕವಾಗಿ ಅವರ ಪಂಗಡಕ್ಕೆ (ಜಾತಿಗೆ) ಬಂದಿತು. ಅವರು ಪರಂಪರೆಯ ಹಿಂದೂ ಧರ್ಮದವರಾಗಿಯೇ ಮುಂದುವರಿದರೆಂದು ಹೇಳಬೇಕಾಗಿಲ್ಲ. ಆದರೆ, ಮುಸಲ್ಮಾನರಾಗಿ ಮತಾಂತರಗೊಂಡವರಿಗೆ ಹೊಸಧರ್ಮದ ಪ್ರಣಾಲಿಯಿಂದಾಗಿ ಹಿಂದೂ ದೇವ-ದೇವತೆಗಳ, ಪುರಾಣಾದಿ ಪ್ರಸಂಗಗಳ ವೇಷ ಪ್ರದರ್ಶಿಸುವುದು ಅಸಾಧ್ಯವಾಗಿರಬೇಕು. ಆಗ ತಮ್ಮ ಪರಂಪರೆಯ ವೃತ್ತಿ ಕಲೆಗಾರಿಕೆಯಲ್ಲಿ ಹೊಸ ಧರ್ಮ ಧೋರಣೆಗೆ ಸಮ್ಮತವಾಗುವಂತೆ ಮಾರ್ಪಾಡು ಮಾಡಿಕೊಂಡಿರಬೇಕು. ಆ ಕಾರಣದಿಂದ ತಮ್ಮ ಸಾಂಪ್ರದಾಯಿಕ ದೈಹಿಕ ವಿದ್ಯೆಗಳಾದ ಲಾಗ ಹಾಕುವುದು ಮತ್ತು ಕಸರತ್ತು ಪ್ರದರ್ಶಿಸುವುದನ್ನೇ ಅಭಿವೃದ್ಧಿ ಪಡಿಸಿಕೊಂಡಿರಬೇಕು. ಹಾಗೂ ಅವರಲ್ಲಿ ಗಾನ, ನರ್ತನಾದಿಗಳೆಡೆಗೆ ಒಲವಿದ್ದವರು ಮತ್ತು ದೈಹಿಕ ಸಂಪತ್ತಿನ ಕೊರತೆಯಿದ್ದವರು ಹಿಂದೂ ದೇವ-ದೇವತೆ ಮತ್ತು ಪುರಾಣಾದಿ ಪ್ರಸಂಗಗಳ ವೇಷ ಬಿಟ್ಟು ಕೇವಲ ವಿಡಂಬಕ-ವೇಷಗಳನ್ನು ಮಾತ್ರ ಪ್ರದರ್ಶಿಸುವುದನ್ನು ಆಯ್ದುಕೊಂಡಿರಬೇಕು. ವಿಡಂಬಕ ಸೋಗುಗಳು ಜನಮನದಲ್ಲಿ ನಗೆಯ ಬುಗ್ಗೆ ಎಬ್ಬಿಸಿ ಅವರನ್ನು ತಣಿಸಬಲ್ಲವೆಂಬ ಪ್ರಜ್ಞೆಯೇ ಕಾರಣವಾಗಿರಬೇಕು. ಹೀಗೆ, ದೇವ-ದೇವತೆಗಳ ಮತ್ತು ಪೌರಾಣಿಕ ಪ್ರಸಂಗಗಳ ಧಾರ್ಮಿಕ ಆಕರ್ಷಣೆಗೆ ಪ್ರತಿಯಾಗಿ ಪ್ರಭಾವಶಾಲಿ ಮತ್ತು ಆಕರ್ಷಕ ಏರ್ಪಾಡನ್ನು ಮಾಡಿಕೊಂಡಿರಬೇಕು. ಈ ಹೊಸ ಸೋಗುಗಳಲ್ಲಿ ವೇಷಗಾರಿಕೆಯ ನೈಪುಣ್ಯ ಪ್ರದರ್ಶನಕ್ಕೆ ಅವಕಾಶವಿಲ್ಲ: ಮತ್ತು ಬಹುರೂಪಗಳನ್ನು ಪ್ರದರ್ಶಿಸುವುದಕ್ಕೂ ಅವಕಾಶವಿಲ್ಲ. ಆದ್ದರಿಂದ 'ಬಹುರೂಪಗಾರರು' ಅಥವಾ 'ವೇಷಗಾರರು' ಎಂಬ ವೃತ್ತಿವಾಚಕ (ಜಾತಿ ಸೂಚಕ) ಪದ ಅವರಿಂದ ದೂರ ಸರಿಯಿತು. ಮತ್ತು ದೈಹಿಕ ಚಾಲಾಕಿತನ ಮತ್ತು ವಿಡಂಬಕ ವೇಷಗಳಲ್ಲಿಯ ಕುಶಲತೆಗಳ ತಮ್ಮ ಪೂರ್ವದ ಪರಂಪರೆಯನ್ನು ಕಾಯ್ದುಕೊಂಡ ಅವರಿಗೆ 'ಜಾತಗಾರ' ಎಂಬ ಸಾಂಪ್ರದಾಯಿಕ ಹೆಸರೂ ವೃತ್ತಿವಾಚಕ (ಜಾತಿ

2. ಜಾತಿಮುತ್ತು, ಜಾತಿವಂತ ಕುದುರೆ ಮುಂತಾದ ಪದಗಳನ್ನು ಗಮನಿಸಬಹುದು.

ಸೂಚಕ)

ಎದ್ರಿಸಿ-

ಸೂಚಕ) ವಾಗಿ ಉಳಿದುಕೊಂಡಿತು. ಈ ರೀತಿ, ಹಿಂದೂ ಮೂಲದ ಬಹುರೂಪಿ ಅಥವಾ ವೇಷಗಾರ ಮತ್ತು ಮುಸಲ್ಮಾನರಾಗಿ ಮತಾಂತರಗೊಂಡ ಜಾತಗಾರ ಎಂಬ ಎರಡು ಪಂಗಡಗಳು ಪ್ರತ್ಯೇಕಗೊಂಡು ಸ್ವತಂತ್ರವಾಗಿ ಬೆಳೆದುಬಂದಿರಬೇಕು.

ಮುಸಲ್ಮಾನರಾಗಿ ಮತಾಂತರಗೊಂಡ ಜಾತಿಗಾರರು ಇಂದಿಗೂ ದೇವ–ದೇವತೆ ಮತ್ತು ಪುರಾಣಾದಿಗಳ ಪ್ರಸಂಗಗಳಿಗೆ ಸಂಬಂಧಿಸಿದ ವೇಷಗಳನ್ನು ಹಾಕುವುದಿಲ್ಲ. ಮತ್ತು ಹಿಂದೂ ಬಹುರೂಪಿ ಅಥವಾ ವೇಷಗಾರರು ಲಾಗ–ಕಸರತ್ತುಗಳ ಪ್ರದರ್ಶನ ಮಾಡುವುದಿಲ್ಲ; ಹಾಗು ಸಿದ್ಧಿಕಸಿದ್ಧಿ ಸೋಗು, ಮುದುಕಿ ಸೋಗು, ಸೆಟ್ಟಿಸೋಗು ಮುಂತಾದ ವಿಡಂಬಕ ಸೋಗುಗಳನ್ನು ಹಾಕುವುದಿಲ್ಲ. ಆದರೆ, ತೀರ ಇತ್ತೀಚೆಗೆ ಜಾತಿಗಾರರಲ್ಲಿಯ ಕೆಲವರು ಗಳಿಸುವ ಆಶೆಗಾಗಿ ಬಹುರೂಪಿಗಳಂತೆ ವಿವಿಧ ವೇಷ ಗಳನ್ನು ಹಾಕಲಾರಂಭಿಸಿದ ಒಂದೆರಡು ಉದಾಹರಣೆಗಳು ಸಿಕ್ಕುತ್ತವೆ. ಧರ್ಮದ ಬಂಧನ ಸಡಿಲಾದುದೇ ಈ ಪ್ರವೃತ್ತಿಗೆ ಕಾರಣವೆನ್ನಬಹುದು. ಈ ಹೊಸ ಪ್ರವೃತ್ತಿ ಯನ್ನು ಜಾತಿಗಾರರಲ್ಲಿಯ ವಯೋವೃದ್ಧರು ತೀವ್ರವಾಗಿ ಆಕ್ಷೇಪಿಸುತ್ತಾರೆ. ಇದು ತಮ್ಮ ಸಂಪ್ರದಾಯಕ್ಕೆ ವಿರುದ್ಧವಾದುದೆಂದೇ ಅವರ ಖಚಿತ ಅಭಿಪ್ರಾಯ.

ಜಾತಗಾರರು ಪ್ರತ್ಯೇಕ ಪಂಗಡವಾಗಿ ತಮ್ಮ ವಿಶಿಷ್ಟ ವೃತ್ತಿ ಶತಮಾನಗಳಿಂದ ಮುಂದುವರಿಸಿಕೊಂಡು ಬಂದಿದ್ದಾರೆ. ತಾವು ಮುಸಲ್ಮಾನರಾಗಿ ಮತಾಂತರಗೊಂಡರೂ ಎಂದೂ ಮತಾಂಧರಾಗಿ ವರ್ತಿಸಿಲ್ಲ. ಹಿಂದೂಗಳೊಂದಿಗೆ ಹೊಂದಿಕೊಂಡು. ಅವರನ್ನೇ ಅವಲಂಬಿಸಿ ಸಾಮರಸ್ಯದಿಂದ ಬದುಕಿದ್ದಾರೆ. ಅಂತೆಯೇ ಅವರ ಬಾಳಬಟ್ಟೆಯಲ್ಲಿ ಹಿಂದೂ ಸಂಸ್ಕೃತಿಯ ಎಳೆಗಳು ಸ್ಪಷ್ಟವಾಗಿ ಗೋಚರಿಸುತ್ತವೆ.

### ಹಬ್ಬ ಹರಿದಿನಗಳ ಆಚರಣೆ :

ಹಿಂದೂ ಮತ್ತು ಮುಸಲ್ಮಾನ ಸಂಸ್ಕೃತಿಯ ಸಂಮಿಶ್ರ ಅಂಶಗಳನ್ನು ಜಾತಿ ಗಾರರು ತಮ್ಮ ಸಾಂಪ್ರದಾಯಿಕ ಆಚರಣೆಯಲ್ಲಿ ಅಳವಡಿಸಿಕೊಂಡಿದ್ದಾರೆ. ಮತಾಂತರ ಗೊಂಡು ಅಪ್ಪಿಕೊಂಡಿರುವ ಮುಸಲ್ಮಾನ ಧರ್ಮದ ಬಗ್ಗೆ ಅವರಲ್ಲಿ ಅಭಿಮಾನ ಹೆಚ್ಚು. ಆದರೆ ಆ ಧರ್ಮದ ವಿವರವಾದ ಅಭ್ಯಾಸ ಅವರಿಗಿಲ್ಲ; ಇಸ್ಲಾಂ ಆಚರಣೆ ಸೂಕ್ಷ್ಮಗಳ ಅರಿವೂ ಇಲ್ಲ. ಅಲಿ ಮೌಲಾಲಿ ಇವರ ಭಕ್ತಿಗೆ ಅಭಿಮಾನಕ್ಕೆ ಪಾತ್ರನಾದ ದೇವರು. ಅಲಿ ಮೌಲಾಲಿ ಎಂದರೆ ಹಿಂದುಗಳ ಹನುಮಂತನಂತೆ ಶಕ್ತಿಗೆ–ಪರಾಕ್ರಮಕ್ಕೆ ಅಧಿದೈವತ ನೆಂದು ಅವರು ವಿವರಣೆ ಕೊಡುತ್ತಾರೆ. 'ಅಲಿ ಮೌಲಾಲಿ' ಎಂದು ಕೂಗಿ ಸಡ್ಡು ಹೊಡೆದು ಸೆಟೆದು ನಿಂತರೆ ಮೈಯಲ್ಲಿ ಮಿಂಚು ಸಂಚಾರವಾದಂತಾಗಿ ಶಕ್ತಿ ಹೆಚ್ಚುತ್ತ ದೆಂದು ಜಾತಿಗಾರರು ನಂಬುತ್ತಾರೆ.

ಜಾತಿಗಾರರ ಮಹತ್ತ್ವದ ಹಬ್ಬವೆಂದರೆ ಮೋಹರಂ. ಹಳ್ಳಿಗಳಲ್ಲಿಯ ಮೋಹರಂ ಆಚರಣೆಯಲ್ಲಿ ಹಿಂದೂ ಉತ್ಸವಗಳ ಪ್ರಭಾವ ಸಾಕಷ್ಟಾಗಿರುವುದನ್ನು ಬಿಡಿಸಿ ಹೇಳಬೇಕಾಗಿಲ್ಲ. ಅಂತೆಯೇ ಮೋಹರಂನ್ನು ಉತ್ಸಾಹದಿಂದ ಆಚರಿಸುತ್ತಾರೆ. ಗುದ್ದಲಿ ಬಿದ್ದು ದೇವರನ್ನು ಕೂಡ್ರಿಸಿದ ದಿನದಿಂದ ಮೊದಲುಗೊಂಡು ದೇವರನ್ನು ಹೊಳೆಗೆ ಕಳಿಸುವ ವರೆಗೂ ಇವರು ಇನ್ನೊಂದು ಊರಿಗೆ ಹೋಗುವುದಿಲ್ಲ. ಮೋಹರಂ ಹಾಡು (ಅಲಾವಿ ಪದ) ಗಳನ್ನು ರಾತ್ರಿಯಿಡೀ ಪೈಪೋಟಿಯಿಂದ ಹೇಳುತ್ತಾರೆ. ಮಾಲಿದ್ದಿ ಮತ್ತು ಬೇಟೆಯ (ಮಾಂಸದ) ಊಟಗಳನ್ನು ಉಂಡು ತಣಿಯುತ್ತಾರೆ.

ಇವರ ಇನ್ನುಳಿದ ಮಹತ್ತ್ವದ ಹಬ್ಬಗಳೆಂದರೆ ಬಕ್ರೀದ ಮತ್ತು ರಮಜಾನ (ಕುತುಬ-ಎ-ರಮಜಾನ) ಗಳು. ಇವೆರಡು ದಿನಗಳಂದು ಮಾತ್ರ ಇವರು ನಮಾಜಕ್ಕೆ ಹೋಗುತ್ತಾರೆ. ಆಗ ಬೇಟೆಯ ಊಟ ಮಾಡಿ ಹಬ್ಬದ ಖುಸಿ ಅನುಭವಿಸುತ್ತಾರೆ.

ಜಾತಿಗಾರರಿಗೆ ಹಿಂದೂ ಧರ್ಮದ ಬಗ್ಗೆ ತಿರಸ್ಕಾರವಿಲ್ಲ. ಹಿಂದೂ ಹಬ್ಬ ಹರಿದಿನಗಳಾಚರಣೆಯ ಸಾಂಸ್ಕೃತಿಕ ಪರಂಪರೆಯನ್ನು ಹರಿದುಕೊಳ್ಳುವುದು ಇವರಿಗೆ ಸಾಧ್ಯವಾದಿಲ್ಲ. ಹಿಂದುಗಳ ಮಧ್ಯದಲ್ಲಿದ್ದುಕೊಂಡು ಅವರನ್ನು ರಂಜಿಸಿ ಹೊಟ್ಟೆ ಹೊರೆದುಕೊಳ್ಳಬೇಕಾಗಿರುವ ಇವರಿಗೆ ಹೊಂದಿಕೊಂಡು ಒಂದಾಗಿ ಬಾಳುವ ಹದ ಗಾರಿಕೆಯೂ ರಕ್ತಗತವಾಗಿದೆ.

ಅಮಾವಾಸ್ಯೆ ಮತ್ತು ಹುಣ್ಣಿವೆ ದಿನ ತಮ್ಮ ಮನೆ (ವಸತಿ) ಸಾರಿಸಿ, ಕಾಯಿ ಒಡೆಯುತ್ತಾರೆ: ಊದು ಹಾಕುತ್ತಾರೆ. ಎತ್ತು ಆಕಳುಗಳಿದ್ದರೆ ಅವುಗಳನ್ನೂ ಪೂಜಿಸುತ್ತಾರೆ. ಅಂದು ಸಾಧ್ಯವಿದ್ದ ವಿಶೇಷ ಅಡಿಗೆ ಮಾಡಿ ಉಣ್ಣುತ್ತಾರೆ.

ಯುಗಾದಿ, ದಸರೆ ಮತ್ತು ದೀಪಾವಳಿ ಮುಂತಾದ ಹಿಂದುಗಳ ಪ್ರಮುಖ ಹಬ್ಬಗಳ ದಿನದಂದು ಮನೆ ಸಾರಿಸಿ, ಕರ್ಪೂರ ಹಚ್ಚಿ ಕಾಯಿ ಒಡೆಯುತ್ತಾರೆ. ಹೋಳಿಗೆ ಮುಂತಾದ ಸಿಹಿಯೂಟ ಮಾಡುತ್ತಾರೆ. ಖಂಡೇ ನವಮಿಯ ದಿನ ತಮ್ಮ ಕಸಬಿಗೆ ಸಂಬಂಧಿಸಿದ ಎಲ್ಲ ಉಪಕರಣಗಳನ್ನು ಶುಚಿಗೊಳಿಸಿ ಭಕ್ತಿಯಿಂದ ಪೂಜಿಸುತ್ತಾರೆ; ಕಾಯಿ-ಕರ್ಪೂರ ಅರ್ಪಿಸುತ್ತಾರೆ. ಮರುದಿನ ದಸರೆಯಂದು ಹಿಂದೂಗಳು ಬನ್ನಿ ಮುಡಿಯುವಲ್ಲಿಗೆ ಹೋಗಿ ಬನ್ನಿ-ಬಂಗಾರ ತರುತ್ತಾರೆ; ಪರಸ್ಪರ ಹಂಚಿ ಬಂಗಾರ ದಂತಿರೋಣವೆಂದು ಹಾರೈಸುತ್ತಾರೆ.

ಯಲ್ಲಮ್ಮಾ, ದ್ಯಾಮವ್ವಾ, ಲಗಮವ್ವಾ, ಮಾಯವ್ವಾ ಮುಂತಾದ ಶಕ್ತಿದೇವತೆಗಳಿಗೆ ಜಾತಗಾರರಲ್ಲಿಯ ಬಹುಪಾಲು ಜನರು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಸವದತ್ತಿಯ ಯಲ್ಲಮ್ಮಾದೇವಿಯ ಪ್ರಭಾವ ಮಾತ್ರ ಎಲ್ಲ ಜಾತಗಾರರ ಮೇಲೂ

[ಖಿಲ್ಟ

ಗಾಢವಾಗಿದೆ. ಆ ತಾಯಿಯನ್ನು ನಾವು ಮರೆಯುವುದು ಸಾಧ್ಯವಿಲ್ಲವೆಂದು ಅವರು ಹೇಳುತ್ತಾರೆ. ವರ್ಷದಲ್ಲಿ ಒಮ್ಮೆಯಾದರೂ ಯಲ್ಲಮ್ಮಾದೇವಿಯ ಗುಡ್ಡಕ್ಕೆ ಹೋಗಿ ದೇವಿಯ ದರ್ಶನ ಪಡೆಯುತ್ತಾರೆ; ಭಕ್ತಿಯಿಂದ ಕಾಯಿ-ಕರ್ಪೂರ ಅರ್ಪಿಸುತ್ತಾರೆ; ಮುಡಿಪು ಸಲ್ಲಿಸುತ್ತಾರೆ. ಕೆಲವರಂತೂ ಜಡಿ ಕಾಯ್ದು ದೇವಿಯ ಪರಮಾರಾಧಕರೇ ಆಗಿರುತ್ತಾರೆ. ತಮ್ಮ ಮೈಯಲ್ಲಿ ದೇವಿ ಆಡುತ್ತಾಳೆಂದೂ ಹೇಳುತ್ತಾರೆ. ದೇವಿ ಮೈಯಲ್ಲಾಡುವಾಗ ಭಕ್ತರ ಕಷ್ಟನಷ್ಟ, ರೋಗ-ರುಜಿನಗಳಿಗೆ ಪರಿಹಾರ ಸೂಚಿಸುವುದೂ ಉಂಟು. ಇಂಥವರು ಗೋಕಾಕ ತಾಲೂಕಿನಲ್ಲಿಯ ಮೂಡಲಗಿ ಮತ್ತು ಮೇಲಿನ ಹುಣಚ್ಯಾಳ ಗ್ರಾಮಗಳಲ್ಲಿ ಇದ್ದಾರೆ. ಮೇಲಿನ ಹುಣಚ್ಯಾಳ ಗ್ರಾಮದಲ್ಲಿಯ ಒಬ್ಬ ಜಾತಿಗಾರವನು ಯಲ್ಲಮ್ಮನ ಪೂಜಾರಿಯೆಂದೇ ಹೆಸರಾಗಿದ್ದಾನೆ. ಮೂರು ವರ್ಷಕ್ಕೊಮ್ಮೆ ದೇವಿಯ ಜಾತ್ರೆಮಾಡಿ ಅಗ್ನಿಕುಂಡದಲ್ಲಿ ಹಾಯುವ (ಅಗ್ನಿ ಶಮನ) ಕಾರ್ಯವನ್ನು ಮಾಡುತ್ತಾನೆ. ಆ ಜಾತ್ರೆಯಲ್ಲಿ ಅಲ್ಲಿಯ ಎಲ್ಲ ಜಾತಿಗಾರರು ಅಲ್ಲದೆ ಊರಿನ ಎಲ್ಲ ಸಮಾಜದ ಜನರೂ ಪಾಲ್ಗೊಳ್ಳುತ್ತಾರೆ.

**ಶುಭಾಶುಭ ಶಕುನ ಮತ್ತು ನಂಬುಗೆ :**

ಶುಭಾಶುಭ ಶಕುನ ಮತ್ತು ಭೂತ-ಪಿಶಾಚಿಗಳಲ್ಲಿಯ ನಂಬುಗೆಯ ಬಗೆಗೂ ಜಾತಿಗಾರರ ಮೇಲೆ ಹಿಂದೂ ಕಲ್ಪನೆಗಳ ಪ್ರಭಾವವಾಗಿರುವುದಾಗಿ ಕಂಡು ಬರುತ್ತದೆ. ಬರಿಗೊಡ ಎದುರಾದಾಗ, ಚಿಕ್ಕ-ಕಾಗೆ ಎಡ ಹಾಯ್ದಾಗ ಅಶುಭವೆಂದು ಭಾವಿಸುತ್ತಾರೆ; ತುಂಬಿದ ಕೊಡ ಎದುರಾದಾಗ. ಚಿಕ್ಕ-ಕಾಗೆ ಬಲಗೊಂಡಾಗ ಶುಭವೆಂದು ಗಣಿಸುತ್ತಾರೆ.

ಭೂತ ಪಿಶಾಚಿಗಳ ಅಂಜಿಕೆ ಇವರಲ್ಲಿದೆ. ದೆವ್ವ ಬಡಿದುಕೊಂಡವರನ್ನು ಮಂತ್ರ ಮಾಟ ಮಾಡುವವರಲ್ಲಿಗೆ ಒಯ್ದು ಮಂತ್ರ ತಂತ್ರಾದಿಗಳ ಪ್ರಭಾವದಿಂದ ಅದು ಬಿಟ್ಟು ಹೋಗುವಂತೆ ಮಾಡುತ್ತಾರೆ. ರೋಗ ರುಜಿನಗಳೂ ದೇವರ ಪ್ರಭಾವದಿಂದ ಬಿಟ್ಟು ಹೋಗುತ್ತವೆಂದು ನಂಬುತ್ತಾರೆ. ಆದ್ದರಿಂದ ಅಂಥ ಪ್ರಸಂಗಗಳಲ್ಲಿ ದೇವರ ಹೇಳುವವರಲ್ಲಿಗೆ ಹೋಗಿ ಪರಿಹಾರ ಪಡೆಯಲು ಪ್ರಯತ್ನಿಸುತ್ತಾರೆ.

**ಸಂಸ್ಕಾರಗಳು :**

ಹುಟ್ಟು ಮದುವೆ ಸಾವು ಮುಂತಾದ ಮಹತ್ವದ ಪ್ರಸಂಗಗಳಲ್ಲಿಯ ಸಂಸ್ಕಾರ ವಿಧಾನಗಳಲ್ಲೂ ಮುಸಲ್ಮಾನರಾಗಿರುವ ಜಾತಿಗಾರರ ಮೇಲೆ ಹಿಂದೂ ಪ್ರಭಾವ ಆಗಿದೆ ಯಾದರೂ ಅದರ ತೀವ್ರತೆ ಬಹಳ ಕಡಿಮೆ ಪ್ರಮಾಣದಲ್ಲಿದೆ.

ಹುಟ್ಟಿದ ಮಗುವಿಗೆ ಸ್ನಾನ ಮಾಡಿಸಿ ಕಲಮಾ ಓದಿಸುವ (ಬೋಧಿಸುವ) ಮೂಲಕ ಮುಸಲ್ಮಾನ ದೀಕ್ಷೆ ಕೊಡುತ್ತಾರೆ. ಆ ಮೇಲೆ ೫ ರಿಂದ ೧೦ ದಿನಗಳೊಳಗೆ

ನಾಮಕರಣ. ಕನಿಷ್ಟ ಐದು ಜನ ಸೇರಿ ಹೆಸರಿಟ್ಟು ಗುಗ್ಗರಿ ತಿನ್ನುತ್ತಾರೆ. ಅನುಕೂಲಸ್ಥರು ಊಟ ಹಾಕಿಸುತ್ತಾರೆ.

ಹೆಣ್ಣುಮಗು ಬೆಳೆದು ಮೈನೆರೆದಾಗ ಐದು ದಿನ ಕೂಡ್ರಿಸುವ ಸಂಪ್ರದಾಯವುಂಟು. ಮಾಲಿದ್ದಿ ಉಂಡಿ ಮಾಡಿ ಜಾತಿ–ಬಾಂಧವರ ಮನೆ ಮನೆಗೆ ಬೀರುತ್ತಾರೆ. ಐದನೆಯ ದಿನ ಉಡಿತುಂಬಿ ಎಬ್ಬಿಸುತ್ತಾರೆ. ಬಾಳೆಹಣ್ಣು, ಶೇಂಗಾಕಾಯಿ, ಚುರಮುರಿ ಮುಂತಾದವುಗಳಲ್ಲಿ ದೊರೆತವುಗಳನ್ನು ಉಡಿ ತುಂಬಲು ಉಪಯೋಗಿಸುವರು.

ಮದುವೆ ಸಂಸ್ಕಾರದಲ್ಲಿ ಮುಸಲ್ಮಾನ ಪದ್ಧತಿಯ ಪ್ರಭಾವ ಹೆಚ್ಚಿಗಿದೆ. ನಿಶ್ಚಿತಪಡಿಸಿದ ಮಹರ್ (ಒಂದು ಬಗೆಯ ತೆರವು) ಹೆಣ್ಣಿಗೆ ಕೊಡಬೇಕಾಗುತ್ತದೆ. ಸುಮಾರು ಅರವತ್ತು ವರ್ಷಗಳ ಹಿಂದೆ ಕೇವಲ ೭ ರೂಪಾಯಿಗಳಾಗಿದ್ದ ಮಹರ್ ಹಣವು ೨೨, ೨೫, ೫೦ ರೂಪಾಯಿಗಳಂತೆ ಏರುತ್ತ ಹೋಗಿ ಈಗ ೧೦೦ ರೂ. ಮುಟ್ಟಿದೆ.

ಒಂದು ವೈಶಿಷ್ಟ್ಯವೆಂದರೆ ದೊಡ್ಡಪ್ಪ ಚಿಕ್ಕಪ್ಪ ಮುಂತಾದ ಗಂಡು ರಕ್ತಸಂಬಂಧಿಗಳ ಕನ್ಯಾ ಮದುವೆಯಾಗುವ ಇನ್ನುಳಿದ ಮುಂದುವರಿದ ಮುಸಲ್ಮಾನರ ಪದ್ಧತಿಯನ್ನು ಜಾತಿಗಾರರು ಮನ್ನಿಸುವುದಿಲ್ಲ. ಪ್ರತಿಸಲವೂ ಸಾಮಾನ್ಯವಾಗಿ ಹೊಸ ಸಂಬಂಧ ಬೆಳೆಸುವುದನ್ನು ಇವರು ಪ್ರೋತ್ಸಾಹಿಸುತ್ತಾರೆ.

ಸಾಮಾನ್ಯವಾಗಿ ಮದುವೆಗೆ ಮೂರು ದಿನ ಬೇಕು. ಮೊದಲನೆಯದು ಹಲ್ದಿ ಅಂದರೆ ಅರಿಷಣ ದಿನ. ಅಂದು ವಧೂವರ ಇಬ್ಬರಿಗೂ ಪ್ರತ್ಯೇಕವಾಗಿ ಅರಿಷಣ ಹಚ್ಚುತ್ತಾರೆ; ಆದರೆ ನೂಲು ಸುತ್ತುವುದಿಲ್ಲ. ಎರಡನೆಯ ದಿನ ಜಮಾತಖಾನಾ ಅಂದರೆ ದೈವದೂಟ, ಇದಕ್ಕೆ ಒಂದು ಚೀಲ ಅಕ್ಕಿ; ಮೂರು ಬ್ಯಾಟಿ (ಕುರಿ) ಬೇಕು. ಮದುವೆ ಮಾಡುವವರ ಆರ್ಥಿಕ ಪರಿಸ್ಥಿತಿ ಗಮನಿಸಿ ದೈವದೂಟದಲ್ಲಿ ರಿಯಾಯತಿ ತೋರಿಸುವುದೂ ಉಂಟು. ಸಾಮಾನ್ಯ ಬೀಗರಿಗೆ ಮೂರು ಖಾರದ (ಮಾಂಸದ) ಊಟ ಮತ್ತು ಒಂದು ಸಿಹಿಯೂಟ ಕೊಡುವ ಸಂಪ್ರದಾಯವಿದೆ.

ಕಾಜಿಯನ್ನು ಕರೆಯಿಸಿ ವಕೀಲರ ಮೂಲಕ ಸಾಕ್ಷಿಗಳ ಸಮ್ಮುಖದಲ್ಲಿ ಮದುವೆಯನ್ನು ರಜಿಸ್ಟರ ಮಾಡಿಸಲಾಗುತ್ತದೆ, ಅನಂತರ ಗಂಡಸರು ಹೊರಗೆ ಇರುವ ವರನಿಗೆ; ಹೆಂಗಸರು ಒಳಗೆ ಇರುವ ವಧೂವಿಗೆ ಅಕ್ಷತೆ ಹಾಕುತ್ತಾರೆ, ವಧೂವರರು ಹೊಸ ಬಟ್ಟೆಗಳಿಂದ ಸಿಂಗಾರಗೊಂಡಿರುತ್ತಾರೆಂದು ಹೇಳಬೇಕಾಗಿಲ್ಲ. ವರನಿಗೆ ಹೂಗಳನ್ನು ಅಂದವಾಗಿ ಹೆಣೆದು ಮಾಡಿದ ಕೋಟ ತೊಡಿಸುವುದೂ ಉಂಟು.

ಮದುವೆಯ ಪ್ರತೀಕವಾಗಿ ಹೆಣ್ಣಿನ ಕೊರಳಲ್ಲಿ ಐದೆಳೆಯ ಕರಿಮಣಿ ಸರ ಕಟ್ಟುತ್ತಾರೆ. ಗಂಡಿನ ಬೆರಳಲ್ಲಿ ಪಾವಲಿ (ನಾಲ್ಕಾಣೆ ನಾಣ್ಯ) ಯೊಂದನ್ನು ಕೂಡ್ರಿಸಿ

ಬೆಳ್ಳಿಯ ಉಂಗುರ ತೊಡಿಸುತ್ತಾರೆ. ಇದಕ್ಕೆ ಶಿಕೇದ ಉಂಗರವೆಂಬ ಹೆಸರುಂಟು. ಮದುವೆ ದಿನ ವಧೂವರ ಇಬ್ಬರೂ ಹಲ್ಲಿಗೆ ಜಾಚೇಲಿ (ಹಲ್ಲುಗಳನ್ನು ಕರ್ರಗೆ ಮಾಡಿ ಶುಚಿಗೊಳಿಸುವ ಒಂದು ಬಗೆಯ ಹಲ್ಲಿಟ್ಟು) ಹಚ್ಚಿಕೊಳ್ಳಬೇಕು. ಅನಂತರ ಹೆಣ್ಣು ತನ್ನ ಆಯುಷ್ಯದುದ್ದಕ್ಕೂ ಜಾಚೇಲಿ ಹಚ್ಚಿಕೊಳ್ಳುವಳು. ಗಂಡಸು ಮಾತ್ರ ಮದುವೆ ದಿನ ಶಾಸ್ತ್ರಕ್ಕೆ ತುಸು ಹಚ್ಚಿಕೊಳ್ಳುತ್ತಾನೆ; ಅನಂತರದ ದಿನಗಳಲ್ಲಿ ಹಚ್ಚಿಕೊಳ್ಳುವುದಿಲ್ಲ.

ಸಾಂಗವಾಗಿ ನೆರವೇರಿದ ಮದುವೆಯ ನಂತರದ ಸಂಸ್ಕಾರವೆಂದರೆ ಬಸಿರೆಗೆ ಸಂಬಂಧಿಸಿದುದು. ಇದರಲ್ಲಿ ವಿಶೇಷವೇನೂ ಇಲ್ಲ. ಬಸಿರೆಗೆ ಹಸಿರು ಸೀರೆ ಉಡಿಸಿ, ಹಸಿರು ಬಳೆ ತೊಡಿಸಿ ಶುಭ ಹಾರೈಸುವುದನ್ನು ಮಾತ್ರ ತಪ್ಪದೆ ಮಾಡುತ್ತಾರೆ.

ಅನಂತರದ ಮಹತ್ತ್ವದ ಸಂಸ್ಕಾರವೆಂದರೆ ಅಂತ್ಯ ಸಂಸ್ಕಾರ. ಇದರಲ್ಲಿ ಇಸ್ಲಾಂ ವಿಧಾನವೇ ಪ್ರಾಮುಖ್ಯವಾಗಿದೆ. ಅಂತ್ಯ ಸಂಸ್ಕಾರ ಕಾಜಿ ಇಲ್ಲದೇ ನಡೆಯುವುದಿಲ್ಲ ವೆಂದು ಜಾತಿಗಾರರ ಹಿರಿಯರು ಹೇಳುತ್ತಾರೆ. ಹೆಣಕ್ಕೆ ಸ್ವಚ್ಛವಾಗಿ ಸ್ನಾನ ಮಾಡಿಸಿ, ಸುಗಂಧ ದ್ರವ್ಯ ಪೂಸಿ, ಸಾಮಾನ್ಯವಾಗಿ ಮುಸಲ್ಮಾನರ ಕಬರಸ್ತಾನ ಇದ್ದಲ್ಲಿ ಒಯ್ದು ನಮಾಜ ಮಾಡಿ, ದಫನ ಮಾಡುತ್ತಾರೆ. ಅಂತ್ಯಯಾತ್ರೆಯಲ್ಲಿ ಹೆಂಗಸರು ಪಾಲು ಗೊಳ್ಳುವುದಿಲ್ಲ.

ಹೀಗೆ ಜಾತಿಗಾರರು ಹಿಂದೂ ಮತ್ತು ಮುಸಲ್ಮಾನರ ನಡುವಿನ ಕೊಂಡಿಯಂತೆ ವಿಶಿಷ್ಟ ಸಂಸ್ಕೃತಿ ಪರಂಪರೆಯನ್ನು ಜೀವಂತವಾಗಿಟ್ಟುಕೊಂಡಿದ್ದಾರೆ. ಸದ್ದುಗದ್ದಲ ವಿಲ್ಲದೆ ಎಲೆಮರೆಯ ಹೂವಿನಂತೆ ಹಿಂದೂ ಮುಸಲ್ಮಾನ ಸಾಮರಸ್ಯಕ್ಕೆ ಅವರ ಕಾಣಿಕೆ ಸಂದಿದೆಯೆಂದು ಹೇಳಬಹುದು.

**ಕಸಬುಗಳು :**

ಲಾಗ-ಕಸರತ್ತುಗಳ ಪ್ರದರ್ಶನ ಮತ್ತು ವಿಡಂಬಕ ಸೋಗುಗಳ ಪ್ರಯೋಗ ಇವುಗಳನ್ನು ಜಾತಿಗಾರರು ಉಪಜೀವನದ ಮುಖ್ಯ ಕಸಬುಗಳನ್ನಾಗಿ ಮಾಡಿಕೊಂಡಿ ದ್ದಾರೆ. ಜಾತಿಗಾರರ ಹಣ್ಣುಮುದುಕರನ್ನು ಸಂದರ್ಶಿಸಿದಾಗ ಲಾಗ-ಕಸರತ್ತುಗಳ ಪ್ರದರ್ಶನ ತಮ್ಮ ಪ್ರಥಮ ಪ್ರಾಶಸ್ತ್ಯದ ಕಸಬು ಮತ್ತು ವಿಡಂಬಕ ಸೋಗುಗಳ ಪ್ರಯೋಗ ಎರಡನೆಯ ನಂಬರಿನ ಕಸಬು ಎಂಬುದಾಗಿ ಹೇಳುತ್ತಾರೆ. ಕಸರತ್ತು ಪ್ರಯೋಗಿಸಲು ಬೇಕಾಗುವ ಶಾರೀರಕ ಸಂಪತ್ತಿಗೆ ಪೋಷಕವಾಗುವ ಪೌಷ್ಟಿಕ ಹಾಲು, ಬೆಣ್ಣೆ-ತುಪ್ಪ ಇತ್ಯಾದಿಗಳ ಸಲುವಾಗಿ ಇವರು ಕಾಲಾನುಕಾಲದಿಂದ ಎಮ್ಮೆಗಳನ್ನು ಸಾಕುತ್ತಾರೆ. ಹೀಗಿದ್ದರೂ ಹಾಲು-ಬೆಣ್ಣೆಗಳ ಮಾರಾಟ ಮಾಡುವುದಿಲ್ಲ. ಎಮ್ಮೆ ಸಾಕುವ ಹವ್ಯಾಸ ಇತ್ತೀಚಿನ ದಿನಗಳಲ್ಲಿ ಹೊಸ ಸ್ವರೂಪ ಪಡೆದಿದೆ. ಎಮ್ಮೆಗಳ ...ನ-ಜೀವಾಳ ಪರಂಪರೆಯಿಂದ ಅರಿತ ಇವರು ಅವುಗಳ ಮಾರಾಟ ಮತ್ತು

ದಳ್ಳಾಳಿತನಗಳಲ್ಲಿ ಅಗ್ರಗಣ್ಯರಾಗಿದ್ದಾರೆ. ಇವರ ಒಂದೊಂದು ಕಸಬಿನ ವಿವರವೂ ರೋಚಕವಿದೆ.

**ಲಾಗ–ಕಸರತ್ತು :**

ವ್ಯಾಯಾಮ ಮಾಡುವುದು, ಅಂಗಸೌಷ್ಟವ ಸಾಧಿಸುವುದು, ದಿನನಿತ್ಯದ ಸಾಧನೆಯಿಂದ ವಿವಿಧ ಬಗೆಯ ಕಸರತ್ತುಗಳಲ್ಲಿ ಪಳಗುವುದು ಜಾತಿಗಾರರ ಹವ್ಯಾಸವೂ ಹೌದು; ಕಸಬೂ ಹೌದು. ವಿವಿಧ ಬಗೆಯ ಲಾಗ ಹೊಡೆಯುವುದರಲ್ಲಿ ತಾವು ನಿಸ್ಸೀಮರಾಗಿದ್ದುದಾಗಿ ಜಾತಿಗಾರರ ಮುದುಕರು ಹಿಗ್ಗಿನಿಂದ ಹೇಳುತ್ತಾರೆ. ಹಿಂಗಾಣಿ ಲಾಗ, ಮುಂಗಾಣಿ ಲಾಗ, ಅಂತರಲಾಗ, ಜಂತರಲಾಗ, ಸರಲಾಗ, ಕತ್ತರಿ ಲಾಗ ಮುಂತಾಗಿ ಅನೇಕ ಬಗೆಯ ಲಾಗಗಳ ವಿವರಣೆ ಕೊಡುತ್ತಾರೆ. ಎರಡೆರಡು ಒಂಟೆ ದಾಟಿ ಲಾಗ ಹೊಡೆಯುವುದು, ಬೆನ್ನಿಗೆ ಆಳು ಎರಡಾಳು ಉದ್ದದ ಕಬ್ಬಿಣ ಸಳಿ ಕಟ್ಟಿಕೊಂಡು ಲಾಗ ಹೊಡೆಯುವುದು ಇವರ ವೈಶಿಷ್ಟ್ಯಗಳು. ಗಾಳಿಯಲ್ಲಿ ನಡೆಯುವುದು, ಕತ್ತಿವರಸೆ ಆಡುವುದು, ಆಕ್ರಮಣಕಾರರ ಹೊಡೆತಗಳನ್ನು ಯುಕ್ತಿಯಿಂದ ತಪ್ಪಿಸಿಕೊಳ್ಳುವುದು, ಗುರಿ ಹೊಡೆಯುವುದು ಮುಂತಾದ ಅನೇಕ ಬಗೆಯ ಕಸರತ್ತುಗಳನ್ನು ಇವರು ಪ್ರದರ್ಶಿಸುತ್ತಾರೆ. ಅಲ್ಲದೆ ಭಾರವಾದ ಗುಂಡುಗಳನ್ನೆತ್ತುವುದು, ಉಸುಕಿನ ಚೀಲಗಳನ್ನು ಎತ್ತುವುದು, ಹತ್ತಿಪ್ಪತ್ತು ಜನರನ್ನು ಚಕ್ಕಡಿಯಲ್ಲಿ ಕೂಡ್ರಿಸಿ ಕೂದಲಿನಿಂದ ಎಳೆಯುವುದು, ಕಬ್ಬಿಣದ ಹಾರಿ ಮಣಿಸುವುದು, ಗಟ್ಟಿ ಕಲ್ಲುಗಳನ್ನು ಕೈಯಿಂದ ಹೊಡೆದು ಒಡೆಯುವುದು ಮುಂತಾದ ಶಕ್ತಿಪ್ರದರ್ಶನದ ಪ್ರಯೋಗಗಳನ್ನು ಮಾಡಿತೋರಿಸುತ್ತಾರೆ.

ಜಾತಿಗಾರರ ಲಾಗ–ಕಸರತ್ತುಗಳ ಪ್ರದರ್ಶನವನ್ನು ಶಕ್ತಿ ಮತ್ತು ಯುಕ್ತಿಗಳ ಸಮ್ಮಿಶ್ರ ಕಲೆಯೆಂದು ಕರೆಯಬಹುದಾಗಿದೆ.

ಚಡ್ಡಿ ಹಾಕಿ, ಮೈಗೆ ದುಂದುಗ್ಯಾಮಿ ಬಳಿದುಕೊಂಡು ಡೋಲಿನ ಉತ್ಸಾಹದ ವಾದನದ ಗತ್ತಿನೊಂದಿಗೆ ಆವೇಶಗೊಂಡು 'ಅಲಿ ಮೌಲಾಲಿ' ಎಂದು ಆರ್ಭಟಿಸಿ ಕಸರತ್ತು ಮತ್ತು ಶಕ್ತಿಪ್ರದರ್ಶನಕ್ಕೆ ಇಳಿಯುವ ಜಾತಿಗಾರರ ತಂಡ ಪ್ರೇಕ್ಷಕರನ್ನು ಮಂತ್ರಮುಗ್ಧಗೊಳಿಸುತ್ತದೆ. ಸಿನೇಮಾ, ನಾಟಕ, ಸರ್ಕಸ್ ಮುಂತಾದ ಮನರಂಜನೆಯ ಶಿಷ್ಟ ಸಾಧನಗಳಿಲ್ಲದ ಹಿಂದಿನ ಕಾಲದಲ್ಲಿ ಜಾತಿಗಾರರ ಆಟಗಳು ವಿಶೇಷ ಆಕರ್ಷಣೆಗಳಾಗಿದ್ದವು. ಊರೂರಿಗೆ ಸಂಚರಿಸಿ ಅಲ್ಲಿಯ ಗೌಡ, ಕುಲಕರ್ಣಿ, ಪಂಚರಿಗೆ ಭೆಟ್ಟಿಯಾಗಿ ಇವರು ತಮ್ಮ ಕಲೆಯ ಪ್ರದರ್ಶನ ಮಾಡುತ್ತಿದ್ದರು. ಕಲೆ ಮೆಚ್ಚಿದ ಜನತೆ ರೊಕ್ಕ, ಕಾಳು–ಕಡಿ, ಅರಿವೆ–ಅಂಚಡಿ ಧಾರಾಳವಾಗಿ ಕೊಡುತ್ತಿದ್ದರು. ಅಂದು ಜಾತಿಗಾರರು ಸಂತೃಪ್ತಿಯ ಜೀವನ ಸಾಗಿಸುತ್ತಿದ್ದರು. ಗೋದಿಯ ಅಡಿಗೆ, ಹಾಲು, ಬೆಣ್ಣೆ, ತುಪ್ಪ ಇಲ್ಲದೆ ಊಟವನ್ನೇ ಮಾಡುತ್ತಿದ್ದಿಲ್ಲವೆಂದು ಇವರಲ್ಲಿಯ ಮುದುಕರು ಹಿಂದಿನ

ದಿನಮಾನ ನೆನಿಸಿಕೊಳ್ಳುತ್ತಾರೆ. ರಸಿಕರಾಗಿದ್ದ ದೇಸಾಯಿ, ನಾಡಗೌಡ ಮತ್ತು ಸಂಸ್ಥಾನಿಕರು ಇವರ ಕಲೆ ಮೆಚ್ಚಿ ಜಮೀನುಗಳನ್ನು ಇನಾಮು ಕೊಡುತ್ತಿದ್ದರೆಂಬ ವಿಷಯ ಆಗಲೇ ಹೇಳಿಯಾಗಿದೆ. ಮುಧೋಳದ ಸಂಸ್ಥಾನಿಕರು ಕಸರತ್ತು ಪ್ರದರ್ಶನಕ್ಕಾಗಿ ನಿತ್ಯ ರೇಶನ್ ಕೊಟ್ಟು ಅರಮನೆಯ ಕಲೆಗಾರರೆಂದು ೨೦ ಜನ ಜಾತಿಗಾರರಿಗೆ ಆಶ್ರಯ ಕೊಟ್ಟಿದ್ದರಂತೆ.

ಪಕ್ಕ ಕಟ್ಟಿಕೊಂಡು ಹಕ್ಕಿಯಂತೆ ಸುಮಾರು ಒಂದು ಹರದಾರಿಗಿಂತ ಹೆಚ್ಚು ದೂರ ಹಾರಿದವನೊಬ್ಬನನ್ನು ಕುರಿತು ಎಲ್ಲ ಕಡೆಯ ಜಾತಿಗಾರರೂ ಒಳ್ಳೆಯ ಹೆಮ್ಮೆಯಿಂದ ಹೇಳುತ್ತಾರೆ. ಒಮ್ಮೆ ಜಮಖಂಡಿ ಸಂಸ್ಥಾನಿಕರು 'ಇಷ್ಟೆಲ್ಲ ಅದ್ಭುತ ಕಸರತ್ತು ಮಾಡುತ್ತೀರಿ. ಹಕ್ಕಿಯಂತೆ ಹಾರಬಲ್ಲಿರಾ ?' ಎಂದು ಕೇಳಿದರಂತೆ. 'ಆರುತಿಂಗಳು ಅವಧಿ ಕೊಟ್ಟರೆ ಹಾರಬಲ್ಲೆ' ಎಂದು ಜಾತಿಗಾರನು ಹೇಳಿ, 'ತಾವು ಏನು ಕೊಡುವಿರಿ' ಎಂದು ಕೇಳಿದನಂತೆ. ಆಗ ಸಂಸ್ಥಾನಿಕರು 'ನೀನು ಹಾರಿದಷ್ಟು ಭೂಮಿ ಕೊಡುವೆ' ಎಂದು ವಚನ ಕೊಟ್ಟರಂತೆ. ಆರುತಿಂಗಳು ಸಾಧನೆ ಮಾಡಿ, ಗೋತೆ ಗ್ರಾಮದ ಅಗಸಿ ಮೇಲಿಂದ ಜಿಗಿದು ಹಾರಲಾರಂಭಿಸಿ ಹೊನವಾಡ ಸಮೀಪಿಸಿದನಂತೆ. ಅದು ಬ್ರಿಟಿಶರ ಹದ್ದು. ಬ್ರಿಟಿಶ ಆಧಿಪತ್ಯದ ಭೂಮಿ ಕೊಡಲಾಗದೆ ವಚನಭ್ರಷ್ಟರಾಗಬೇಕಾಗುತ್ತದೆಂದು ಭಾವಿಸಿ, ಸಂಸ್ಥಾನಿಕನು ಅವನನ್ನು ಗುಂಡಿಕ್ಕಿ ಕೊಲ್ಲಿಸಿದನಂತೆ. ಅವನಿಗೆ ಕೊಟ್ಟಿ ಇನಾಮು ಭೂಮಿಗೆ ರಕ್ತಮಾನ್ಯದ ಹೊಲವೆಂದು ಹೆಸರಿದೆಯಂತೆ. ಈ ರೀತಿ ಹಾರಿದವನು ತಮ್ಮ ಮನೆತನಕ್ಕೆ ಸೇರಿದವನೇ ಎಂದು ಈಗ ಮೂಡಲಗಿಯಲ್ಲಿ ವಾಸವಾಗಿರುವ ಶ್ರೀ ಖಾಜಾಸಾಹೇಬ ಎಂಬ ಮುದುಕನು ಮುಖ ಅರಳಿಸಿ ಹೇಳುತ್ತಾನೆ. ಆದರೆ ಈ ಘಟನೆ ಎಂದು ನಡೆಯಿತೆಂಬುದರ ಬಗ್ಗೆ ವಿವರ ಅವನಿಗೆ ಗೊತ್ತಿಲ್ಲ; ಅಲ್ಲದೆ ಹಾರಿದ ವ್ಯಕ್ತಿಯ ಹೆಸರೂ ಗೊತ್ತಿಲ್ಲ. ಆದರೆ ಜಾತಿಗಾರರ ಎಲ್ಲ ತಂಡದವರೂ ಈ ಘಟನೆಯ ಬಗ್ಗೆ ಅಭಿಮಾನಪಡುತ್ತಾರೆ. ತಮ್ಮ ಜಾತಿಯ ಚಾಲಾಕಿತನ ಮತ್ತು ಶಕ್ತಿವಂತಿಕೆಯ ಪ್ರತೀಕವಾಗಿರುವ ಘಟನೆಯೆಂದು ಜಾತಿಗಾರರು ಭಾವಿಸಿದ್ದಾರೆ.

**ವಿಡಂಬಕ ಸೋಗುಗಳು :**

ಜಾತಿಗಾರರ ಪ್ರಮುಖ ಮತ್ತು ಜನಪ್ರಿಯವಾದ ಸೋಗೆಂದರೆ ಸಿದ್ಧಿಕಸಿದ್ಧಿಯದೆಂಬುವನ್ನು ಆರಂಭದಲ್ಲಿಯೇ ವಿವರಿಸಿಯಾಗಿದೆ. ಮುದುಕಿಯ ಸೋಗು, ಸೆಟ್ಟಿಯ ಸೋಗುಗಳೂ ಕೂಡ ಬಹಳ ಹಿಂದಿನ ಕಾಲದಿಂದಲೂ ಪ್ರಚಲಿತವಾಗಿವೆ. ಇವಿಷ್ಟೇ ತಲೆಮಾರುಗಳಿಂದ ತಮ್ಮವರು ಹಾಕುವ ಮೂಲ ಸೋಗುಗಳೆಂದು ಅನೇಕರು ಹೇಳುತ್ತಾರೆ. ತೀರ ಇತ್ತೀಚೆಗೆ ಬಹುರೂಪಗಾರರ ಅನುಕರಣೆಯಿಂದ ಕೆಲವರು ಬ್ಯಾಡರ ಸೋಗು, ಪೋಲೀಸ-ಫೌಜದಾರ ಸೋಗು, ಕುವರಿ ಸೋಗು, ಗೌಡ್ರ ಸೋಗು ಮುಂತಾದನೇಕ ಹೊಸ ಸೋಗುಗಳನ್ನು ಕಲಿತು ಮೂಲ ಪರಂಪರೆಯನ್ನು ಕೆಡಿಸಿದ್ದಾ

ರೆಂದು ಕೆಲವರು ಗೊಣಗುತ್ತಾರೆ. ಕಸರತ್ತು ಮತ್ತು ತಕ್ತಿ ಪ್ರದರ್ಶನ ಮಾಡಿ ಜನರನ್ನು ರಂಜಿಸಲಾಗದ ಮೈಗಳ್ಳರು ಇಂಥ ಹೊಸ ಬಗೆಯ ಸೋಗುಗಳ ಸೃಷ್ಟಿ ಗಿಳಿದಿದ್ದಾರೆಂದು ಇವರ ಆರೋಪ. ಮತ್ತೆ ಕೆಲವರು ಎಲ್ಲ ಬಗೆಯ ಸೋಗು ಹಾಕುವ ಪರಂಪರೆ ವಿಜಾಪೂರ ಬಾದಶಹಕ್ಕಿಂತಲೂ ಹಿಂದಿನಿಂದಲೂ ನಮ್ಮಲ್ಲಿದೆಯೆಂದು ವಾದಿಸುತ್ತಾರೆ. ಜಾತಿಗಾರರ ಪೂರ್ವೇತಿಹಾಸದ ಬಗ್ಗೆ ಈ ಮೊದಲು ಚರ್ಚಿಸಿದ ಅಂಶಗಳನ್ನು ಈಗ ಸ್ಮರಿಸಿಕೊಂಡು ಈ ಎಲ್ಲ ವಾದ ಪ್ರತಿವಾದಗಳಲ್ಲಿಯ ತಥ್ಯಾಂಶ ವೆಷ್ಟೆಂಬುದು ಹೊಳೆಯುತ್ತದೆ.

ವಿವಿಧ ಸೋಗುಗಳ ಮೂಲಕ ಜನತೆಯನ್ನು ನಗಿಸಿ ತುಸು ಹೊತ್ತು ಅವರಿಗೆ ಮನರಂಜನೆ ಒದಗಿಸುವುದೇ ಇವರ ಗುರಿ. ಬಹುರೂಪಗಾರರ ಸೋಗುಗಳಲ್ಲಿರುವಂಥ ದೀರ್ಘಸಂಭಾಷಣೆ ಇವರ ಸೋಗುಗಳಲ್ಲಿ ಇಲ್ಲದಿರುವುದು ಈ ದೃಷ್ಟಿಯಿಂದ ಗಮನಾರ್ಹ. ಚಿಕ್ಕ ಚಿಕ್ಕ ಸಂಭಾಷಣೆ; ಹಾಸ್ಯವನ್ನು ಹೊಮ್ಮಿಸುವ ಹಾಡುಗಳು; ಇವುಗಳಿಗೆ ತಕ್ಕ ಹಾವಭಾವ, ನಡುನಡುವೆ ಮಲಿಕು ಮಾತಿನ ಚುಟುಕುಗಳು ಇವರ ಸೋಗುಗಳ ವೈಶಿಷ್ಟ್ಯಗಳಾಗಿವೆ. ಮೇಲಾಗಿ ಈ ಸೋಗುಗಳನ್ನು ಧರಿಸಲು ಸಿದ್ಧತೆಯೂ ಹೆಚ್ಚಿಗೆ ಬೇಕಾಗಿಲ್ಲ.

### ೧) ಸಿದ್ಧಿಕಸಿದ್ಧಿಯ ಸೋಗು :

ನೋಡಿದೊಡನೆಯೇ ನಗೆ ಹೊರಚಿಮ್ಮಿಸುವಂಥ ವಿಡಂಬಕ ವೇಷಭೂಷಣದ 'ಸಿದ್ದಿಕಸಿದ್ದಿ' ಕನ್ನಡಿಗರಿಗೆ ಮನರಂಜನೆ ಒದಗಿಸುತ್ತ ಬಂದ ಪ್ರಮುಖ ಸೋಗು. ಎದ್ದು ಕಾಣುವಂತೆ ಕಟ್ಟಿಗೆಯಿಂದ ತಯಾರಿಸಿದ ದೊಡ್ಡದಾದ- ಮೂಗು, ತುಟಿ-ಹಲ್ಲು, ಗದ್ದಗಳನ್ನು ಮುಖವಾಡದಂತೆ ಧರಿಸಿ, ಅವುಗಳಲ್ಲಿ ಕೃತಕವಾದ ಉದ್ದನೆಯ ಗಡ್ಡ ಮೀಸೆಗಳನ್ನು ಅಳವಡಿಸಿಕೊಂಡುದು ಈ ಸೋಗಿನ ಆಕರ್ಷಣೆಗಳಲ್ಲಿ ಮೊದಲನೆಯ ಅಂಶ: ಅರಿವೆಯ ಗಂಟನ್ನು ತಿಗದ ಮೇಲೆ ಕಟ್ಟಿಕೊಂಡು ನಡೆಯುವಾಗ ಮತ್ತು ಕುಣಿಯುವಾಗ ಮೇಲೆ ಕೆಳಗೆ ಅಗಳಾಡುವಂತೆ ರೂಪಿಸಿಕೊಂಡ ಎದ್ದುಕಾಣುವ ನಿತಂಬ ಸಿದ್ದಿಕಸಿದ್ದಿ ಸೋಗಿನ ಎರಡನೆಯ ಆಕರ್ಷಣೆ. ಬಣ್ಣ ಬಣ್ಣದ ಬಟ್ಟೆಯ ಕೋಟು, ಲುಂಗಿ ಹಾಗು ಕಿವಿಯವರೆಗೆ ಇಳಿಬಿದ್ದು ಮೇಲೆ ಚೂಪಾಗಿರುವ ಟೊಪ್ಪಿಗೆ ಇಲ್ಲವೆ ಅಗಲವಾದ ಹ್ಯಾಟು ಮುಂತಾದ ಪೋಷಾಕು ಈ ಸೋಗಿನ ಮೂರನೆಯ ಆಕರ್ಷಣೆ. ಎಡಗೈಯಲ್ಲಿ ಬಡಿಗೆ, ಬಲಗೈಯಲ್ಲಿ ಕೈಬಂಟ (ಟೆಂಗಿನ ಪರಟೆಯಲ್ಲಿ ಗಟ್ಟಿ ಹರಳು ಹಾಕಿ ಅದರ ಬಾಯಿಗೆ ಅರಿವೆ ಕಟ್ಟಿ, ಕೆಳಗಡೆ ಜೋತುಬಿದ್ದ ಅರಿವೆಯನ್ನು ಹಿಡಿದುಕೊಂಡು, ತಾಳಕ್ಕನುಸರಿಸಿ ಗಿಲಕ್ ಗಿಲಕ್ ಎಂದು ಸಪ್ಪಳ ಮಾಡುವ ಒಂದು ಸರಳ ವಾದ್ಯ ವಿಶೇಷ: ಇದಕ್ಕೆ ಗುಳಗುಳಕಿ ಎಂದು ಕೆಲವರೆನ್ನುವುದುಂಟು) ಹಿಡಿದುಕೊಂಡು ಬಗಲಜೋಳಿಗೆಂದು ಜೋಳಿಗೆ ಹಾಕಿಕೊಂಡರೆ ತೀರಿತು: ಸಿದ್ದಿಕಸಿದ್ದಿ ಸೋಗಿನ ಪ್ರದರ್ಶನಕ್ಕೆ

ಆರಂಭ. ಸಿದ್ಧಿ ಓಣಿಯಲ್ಲಿ ಹೊರಟನೆಂದರೆ ಸಾಕು, ಹುಡುಗರ ಹಿಂಡು ಅವನನ್ನು ಹಿಂಬಾಲಿಸುತ್ತದೆ. ಕೂಡಿದ ಹಿಂಡಿನೊಂದಿಗೆ ಮನೆ ಮನೆಗೆ ಸಿದ್ಧಿ ಸಾಗಿ, ಹಾಸ್ಯ ಭರಿತ ಚುಟುಕುಗಳನ್ನು ಧ್ವನಿತೆಗೆದು ಕೈಬಂಟಿದ ವಾದನದೊಂದಿಗೆ ಹೇಳಲಾರಂಭಿಸು ತ್ತಾನೆ; ಅಂದರೆ ಹಾಡುತ್ತಾನೆ :

ಸಿದ್ಧಿಕಸಿದ್ಧಿ
ಹಗೆದಾಗ ಬಿದ್ದಿ
ಹಳೆಜ್ವಾಳ ತಿಂದಿ
ಡುರ್‍ರ್ರ್ ಸಿದ್ಧಿ

ಎಂದು ಚುಟುಕ ನಿಲ್ಲಿಸಿ, ಸಂಭಾವನೆ ಕೊಡಲು ವಿನಂತಿಸುತ್ತಾನೆ. ಮನ ಮೆಚ್ಚಿ ಕೊಟ್ಟುದನ್ನು ಸ್ವೀಕರಿಸಿ ಮುಂದಿನ ಮನೆಗೆ ಹೋಗುತ್ತಾನೆ; ಇನ್ನೊಂದು ಚುಟುಕನ್ನು ಹೇಳುತ್ತಾನೆ :

ಸಿದ್ಧಿಕಸಿದ್ಧಿ | ಯಾವೂರ ಸಿದ್ಧಿ
ಯಾವೂರ ಸಿದ್ಧಿ | ಕೊಲ್ಲಾಪೂರ ಸಿದ್ಧಿ
ಕೊಲ್ಲಾಪೂರ ಸಿದ್ಧಿ | ಇಲ್ಲ್ಯಾಕ ಬಂದಿ
ಇಲ್ಲ್ಯಾಕ ಬಂದಿ | ಆರಮಾನ ಹೋಳಿಗಿ
ಆರಮಾನ ಹೋಳಿಗಿ | ಮೂರಮಾನ ಶಾಂವಿಗಿ
ಮೂರಮಾನ ಶಾಂವಿಗಿ | ತಿನ್ನಾಕ ಬಂದಿ
ತಿನ್ನಾಕ ಬಂದಿ | ಡುರ್‍ರ್ರ್ ಸಿದ್ಧಿ

ಎಂದು ಚುಟುಕಿನ ಹಾಡ ನಿಲ್ಲಿಸಲು, ಇನ್ನಷ್ಟು ಹಾಡು ಅಂದೊಡನೆಯೇ ಮತ್ತೆ ಮುಂದುವರಿಸುತ್ತಾನೆ—

ಕೊಲ್ಲಾಪೂರ ಸಿದ್ಧಿ | ಇಲ್ಲ್ಯಾಕ ಬಂದಿ
ಇಲ್ಲ್ಯಾಕ ಬಂದಿ | ತಗಣಿ ಆಂಬ್ರ
ತಗಣಿ ಆಂಬ್ರ | ಚೋಳಿನ ಚಟ್ನಿ
ಚೋಳಿನ ಚಟ್ನಿ | ಉಣ್ಣಾಕ ಬಂದಿ
ಉಣ್ಣಾಕ ಬಂದಿ | ಡುರ್‍ರ್ರ್ ಸಿದ್ಧಿ

ಎಂದು ಚುಟುಕು ಮುಗಿಸುತ್ತಾನೆ. ಹಾಡುವಾಗ ಆಗಾಗ ತನ್ನ ಕೃತಕ ತಿಗ ಅಗಳಾಡಿ ಸುತ್ತ ಕುಣಿಯುತ್ತಾನೆ. ಸುತ್ತುವರಿದ ಕಿಡಿಗೇಡಿ ಹುಡುಗರು ಅವನ ಕೃತಕ ತಿಗದ ಮೇಲೆ ಕಲ್ಲು ಹರಳುಗಳನ್ನು ಇಡುತ್ತಾರೆ. ಅವರನ್ನು ಈತನು ಬೆದರಿಸುವುದಿಲ್ಲ.

ಕುಣಿಯುವಾಗ ಜಾಣ್ಮೆಯಿಂದ ತಿಗ ಅಗುಳಾಡಿಸಿ ಇಟ್ಟ ಹರಳಗಳನ್ನು ಎತ್ತಿ ಒಗೆಯುತ್ತಾನೆ. ಆಗ ಹುಡುಗರಿಗೆ ಎಲ್ಲಿಲ್ಲದ ಹಿಗ್ಗು. ಅವರು ಕೇಕೆ ಹೊಡಿದು ನಗುತ್ತಾರೆ. ನೋಡುವ ಇತರರೂ ಹೊಟ್ಟೆ ಹುಣ್ಣಾಗುವಂತೆ ನಗುತ್ತಾರೆ. ಆಗ ಸಿದ್ಧಿಯ ಪ್ರದರ್ಶನಕ್ಕೆ ರಂಗೇರುತ್ತದೆ. ಸಿದ್ಧೀ ಇನ್ನೊಂದಿಷ್ಟು ಹಾಡು ಕುಣಿ ಎಂದು ಕೂಡಿದವರು ಹೇಳುವುದೊಂದೇ ತಡ; ಸುರು ಮಾಡುತ್ತಾನೆ—

ಸಿದ್ಧಿಕಸಿದ್ಧಿ । ಯಾವೂರ ಸಿದ್ಧಿ
ಯಾವೂರ ಸಿದ್ಧಿ । ಸೊಲ್ಲಾಪೂರ ಸಿದ್ಧಿ
ಸೊಲ್ಲಾಪೂರ ಸಿದ್ಧಿ । ಇಲ್ಲ್ಯಾಕ ಬಂದಿ
ಇಲ್ಲ್ಯಾಕ ಬಂದಿ । ಮಾವನ ಲಗ್ನ
ಮಾವನ ಲಗ್ನ । ಮುದ್ಕಿ ಉಡಿಕಿ
ಮುದ್ಕಿ ಉಡಿಕಿ । ಹೋಳಿಗಿ ಮಾಡಿ
ಹೋಳಿಗಿ ಮಾಡಿ । ಹೊಳ್ಕೊಂಡ ಬಿದ್ದಿ
ಶಾಂವಿಗಿ ಮಾಡಿ । ಸೆಟ್ಕೊಂಡ ಬಿದ್ದಿ
ಹಗೆದಾಗ ಹಾಂವ । ಬಡಿಬ್ಯಾಡೊ ಮಾಂವ
ಬಡಿಬ್ಯಾಡೋ ಮಾಂವ । ಡುರ್ರ್ ಸಿದ್ಧಿ

ಎಂಬುದಾಗಿ ಹಾಸ್ಯ ಹೊಮ್ಮುವಂಥ ಮಾತುಗಳನ್ನು ಹೊಂದಿಸಿ ತಾಳಬದ್ಧವಾಗಿ ಕುಣಿಯುತ್ತ ಹಾಡುತ್ತಾನೆ. ಇಂಥ ಹಾಡಿನ ರೂಪದ ಮಾತುಗಳಿಗೆ ಕೊನೆ ಮೊದಲೆಲ್ಲಿ ? ಸುರಿತ ಸಿದ್ಧಿ ಇಂಥ ಅದೆಷ್ಟೋ ಚುಟುಕುಗಳನ್ನು ಆಗಿಂದಾಗ ಅಲ್ಲೇ ರಚಿಸಿ ತನ್ನ ಪ್ರಯೋಗ ಮುಂದುವರಿಸುತ್ತಾನೆ. ಗುಂಪುಗೂಡಿದವರು ಹೆಚ್ಚೆಚ್ಚು ನಗಲಾರಂಭಿಸಿದಂತೆ ಇವನಿಗೂ ಹುರುಪು ಬರುತ್ತದೆ; ತಿಗದ ಅಗುಳಾಟದೊಂದಿಗಿನ ಕುಣಿತವೂ ಹೆಚ್ಚುತ್ತದೆ.

ಸಿದ್ಧಿಕಸಿದ್ಧಿಯ ಈ ಸೋಗುಧಾರಿ ಒಬ್ಬನೇ ಇರುತ್ತಾನೆ. ಈ ಒಂಟಿ ಸಿದ್ಧಿಯು ರಸಿಕರು ಬಯಸಿದರೆ ಕೆಲವು ಹಾಸ್ಯಭರಿತ ಹಾಡುಗಳನ್ನೂ ಹೇಳುತ್ತಾನೆ. ಕುಣಿಯುತ್ತ ಹಾಡಿ, ಹಾಡುತ್ತ ಕುಣಿದು ನಗೆಬುಗ್ಗೆ ಹೊಮ್ಮಿಸಿ, ನಗೆಬುಗ್ಗೆ ಚಿಮ್ಮಿಸಿ ಅವರನ್ನು ತಣಿಸುತ್ತಾನೆ.

ಒಮ್ಮೊಮ್ಮೆ ಸುಂದರ ತರುಣನೊಬ್ಬ ಮುಖಕ್ಕೆ ಬಣ್ಣ ಬಳಿದುಕೊಂಡು ಹೆಣ್ಣು ವೇಷ ಧರಿಸಿ ಸಿದ್ಧಿಯೊಂದಿಗೆ ಇರುವುದುಂಟು. ಈಕೆಗೆ ಚಿಮಣಾ ಎಂದು ಹೆಸರು. ಸಿದ್ಧಿ ಈಗ ಕೈಬಂಟಕ್ಕೆ (ಗುಳಗುಳಿಕೆ) ಬದಲಾಗಿ ಡೋಲು ಬಾರಿಸುತ್ತ ಹಾಡುತ್ತಾನೆ.

ಚಿಮಣಾ ತಾಳ ಬಾರಿಸುತ್ತ ಅವನಿಗೆ ಮೇಳ ಒದಗಿಸುತ್ತಾಳೆ. ಮತ್ತು ಅವನ ಹಾಡಿಗೆ ದನಿಗೂಡಿಸುತ್ತ ನಯ, ನಾಜೂಕು ಪ್ರದರ್ಶಿಸುವ ಹಾವಭಾವಯುಕ್ತವಾಗಿ ವೈಯ್ಯಾರದಿಂದ ಕುಣಿಯುತ್ತಾಳೆ: ಅಂಗಾಂಗಗಳನ್ನು ಕುಣಿಸಿ ಕೂಡಿದ ತರುಣರಲ್ಲಿ ಶೃಂಗಾರ ರಸ ಪುಟಿದೇಳುವಂತೆ ಮಾಡುತ್ತಾಳೆ. ಅವಳ ಕುಣಿತದ ಗತ್ತಿಗನುಕರಿಸಿ ಸಿದ್ದಿ ಆಗಾಗ ತಿಗ ಕುಣಿಸಿ ಪ್ರೇಕ್ಷಕರಲ್ಲಿ ನಗೆಯ ಅಲೆಗಳನ್ನು ಎಬ್ಬಿಸುತ್ತಾನೆ.

ಸಿದ್ದಿ ಮತ್ತು ಚಿಮಣಾ ವಿವಿಧ ಹಾಡುಗಳನ್ನು ರಂಜಕವಾಗಿ ಹಾಡಿ. ಜನಮನ ಸೆರೆಹಿಡಿಯುತ್ತಾರೆ.

> ನೂಲಲ್ಯಾಕ ಚೆನ್ನಿ | ನೂಲಲ್ಯಾಕ ಚೆನ್ನಿ
> ರಾಟಿಯಿಲ್ಲೊ ಜಾಣಾ | ರಾಟಿಯಿಲ್ಲೊ ಜಾಣಾ

ಎಂದು ಆರಂಭವಾಗುವ ಕುಂಟು ನೆವದ ಜಾನಪದ ಹಾಡಿನ ಜಾಡನ್ನು ಹಿಡಿದು ಸಿದ್ಧ ಶಿಲ್ಪದಲ್ಲಿ ಬೇರೆಯಾದ ವಿಷಯಕ್ಕೆ ಹೊಂದಿಕೆಯಾಗುವ ಪದಗಳನ್ನು ಜೋಡಿಸಿ ಪಲವು ಹಾಡುಗಳನ್ನು ಸಿದ್ಧಿ ಮತ್ತು ಚಿಮಣಾ ಹಾಡುತ್ತಾರೆ.

> ಹೋಳಿಗಿ ಮಾಡ ಜಾಣಿ | ಹೋಳಿಗಿ ಮಾಡ ಜಾಣಿ
> ಬ್ಯಾಳಿಲ್ಲೊ ಜಾಣಾ | ಬ್ಯಾಳಿಲ್ಲೋ ಜಾಣಾ

ಎಂದು ಒಂದು ಕಡೆ ಹಾಡುತ್ತಾರೆ. ಇನ್ನೊಂದು ಕಡೆಗೆ ಹೋದ ಮೇಲೆ ಮತ್ತೆ ತುಸು ಬದಲಾವಣೆ ಮಾಡಿ,

> ಚಾ ಮಾಡsa ಜಾಣಿ | ಚಾ ಮಾಡsa ಜಾಣಿ
> ಸಕ್ಕರಿಲ್ಲೊ ಜಾಣಾ | ಸಕ್ಕರಿಲ್ಲೊ ಜಾಣಾ

ಮುಂತಾಗಿ ಹೊಂದಿಸಿ ಹೊಸ ಹಾಡೆಂಬಂತೆ ಮಾಡಿ ಹಾಡುತ್ತಾರೆ. ಒಂದೇ ಪಡಿಯಚ್ಚಿನಲ್ಲಿ ಹಾಕಿ ವಿವಿಧ ಧಾತುಗಳ ಮೂರ್ತಿಗಳನ್ನು ಸಿದ್ಧಗೊಳಿಸುವಂತೆ ಇವರು ಹಾಡುಗಳನ್ನು ತುಸು ಬದಲಿಸಿ ಹೊಸದೆಂಬಂತೆ ರಚಿಸಿ, ಅಂದವಾಗಿ ದನಿವೆಗೆದು ವಾದನ, ನೃತ್ಯಗಳೊಂದಿಗೆ ಹಾಡಿ ಜನರನ್ನು ಸಂತುಷ್ಟಗೊಳಿಸುತ್ತಾರೆ.

ಹಾಸ್ಯದ ಹಾಡುಗಳಲ್ಲದೆ ವಿವಿಧ ಪ್ರಸಂಗಗಳನ್ನು ವರ್ಣಿಸುವ ಹಾಡು, ಕರುಣಾ ರಸ. ವೀರರಸ, ಶೃಂಗಾರ ರಸಗಳಿಂದ ಕೂಡಿದ ಕಥನ ಕವನಗಳು, ಐತಿಹಾಸಿಕ ಹಾಡುಗಳು ಇವರ ಬಳಕೆಯಲ್ಲಿ ಸಾಕಷ್ಟಿವೆ.

ಇವರ ಹಾಡುಗಳು ಸರಳ ಶೈಲಿಯವು: ನಿತ್ಯ ಜೀವನದ ಸತ್ಯ ಘಟನೆಗಳನ್ನು ಆಧರಿಸಿದವು. ಅವು ಮಾತಿನ ಗದ್ಯದಂತೆ ಕಾಣುವ ಪದ್ಯವು ಲಯಬದ್ಧವಾಗಿ ಹರಿ

ಯುತ್ತದೆ. ಉದಾಹರಣೆಗಾಗಿ ಕೂಸಿನ ಹಾಡಿನ ಕೆಲವು ಸಾಲುಗಳನ್ನು ಅವಲೋಕಿಸ ಬಹುದು.

ಸುಂದರವಾದ ಮಗು. ಬಾಳೆಯ ದಿಂಡಿನಂತೆ ತುಂಬಿದ ಮೈ. ಮೈಮೇಲೆ ಹಲವು ಆಭರಣಗಳು. ಅವುಗಳ ವಿವರ ಕೇಳಿ—

ಸಣ್ಣೆಳಿ ಉಂಗೂರ । ಬಣ್ಣsದ ತೊಟ್ಟೀಲ
ಕೂಡಿದ ಉಡದಾರ । ಕೊರಳಲ್ಲಿ ಚಂದ್ರಹಾರ
ಅಂಗಿ ಟೊಪ್ಪಿಗಿ ಜೋಡಿ । ಬಂಗಾರುಂಗುರ ಜೋಡಿ
ಹಸರಂಗಿ ಹಾಲ್ಗಡಗ । ಕುಸಲದ ಟೊಪ್ಪಿಗಿ
ಇವನೆಲ್ಲ ಹಾಕ್ಕೊಂಡು । ಮೆರದಾಡಿ ಬರೂ ಮಗ
ಕೂಸ ಕಂಡೀರೇನವ್ವಾ । ಎನ್ನ ಗಿಣಿಯs ಕಂಡೀರೆ

ಎಂದು ತಾಯಿ ಮಗನ ಪರಿಚಯ ಮಾಡಿಕೊಟ್ಟು, ಹೌಹಾರಿ ಕೇಳುತ್ತಾಳೆ. ವಸ್ತ್ರ, ಒಡವೆಯ ದುರಾಶೆಗೊಳಗಾಗಿ ಸೋದರಮಾವನೇ ಕೂಸನ್ನು ಕೊಂದು ಸಣ್ಣ ಚೂರು ಮಾಡಿ, ಬಂಡಿಬುಡಕ್ಕೆ ಒಗೆದಿದ್ದಾನೆ. ಎಂಥ ದುಷ್ಟನವನು ! ಈ ದುರಂತ ಕೇಳಿ ತಾಯಿಯ ದುಃಖ ಮಿತಿಮೀರಿಹೋಗಿದೆ. ಅದನ್ನು ಶಬ್ದದಲ್ಲಿ ಹಿಡಿಯುವುದು ಕಷ್ಟ ಸಾಧ್ಯ. ಆದರೂ ಸರಳ ಮಾತುಗಳಲ್ಲಿ ಅವಳ ದುಃಖ, ಅವಳು ರೋದಿಸುವ ರೀತಿ ನೋಡಿ—

ಎದಿಯೆನ್ನ ಬಿಗಿದಾವ । ಮಲಿಹಾಲ ಸಿಡದಾವ
ಯಾರೀಗಿ ಕುಡಸ್ಸಲಿ । ಯಾರೀಗಿ ಬಿಡ್ಸಲಿ
ಇಟ್ಟ ಉಣ್ಣುವ ಕೂಸs । ಮೋಸಮಾಡಿ ಕೊಂದ್ರು

ಎಂಬುದಾಗಿ ತಾಯಿಯ ಮನಸ್ಥಿತಿ ಚಿತ್ರಿಸಲಾಗಿದೆ.

ಗೌಡನಿಗೆ ತಿಳಿಸಿ ಫೌಜದಾರನನ್ನು ಕರೆಯಿಸಿ, ಸೋದರಮಾವನನ್ನು ಬೆಳಗಾಂವಿ ಜೇಲಿಗೆ ಕಳಿಸುವ; ಅವನಿಗೆ ಗಲ್ಲಿನ ಶಿಕ್ಷೆಯಾಗುವ ವಿವರಗಳೆಲ್ಲ ಈ ಸರಳ ಸುಂದರ ಹಾಡಿನಲ್ಲಿ ಬರುತ್ತವೆ. ಇಂಥ ಹಾಡುಗಳಲ್ಲಿಯ ನಿರೂಪಣೆಯಲ್ಲಿಯ ಸರಳತೆಯ ಕೌಶಲವನ್ನು ಮೆಚ್ಚಲೇಬೇಕು.

ಜೀವನವನ್ನು ಬಂದಂತೆ ವಿವರಿಸುವ, ಇದ್ದಂತೆ ಚಿತ್ರಿಸುವ ರೀತಿಯೂ ಸಿದ್ಧಿಯ ಹಾಡುಗಳಲ್ಲಿಯ ವೈಶಿಷ್ಟ್ಯವೆಂದು ಹೇಳಬಹುದು. ಹಲವು ದುರಂತ ಸನ್ನಿವೇಶಗಳು ಸರಳ ಸುಂದರ ರೀತಿಯಲ್ಲಿ ರಚಿಸಲ್ಪಟ್ಟಿವೆ. ಸುಖಾಂತವಾಗಿಯೇ ಕೊನೆಗೊಳ್ಳಬೇಕೆಂಬ ಶಿಷ್ಟಕವಿಗಳ ಕಟ್ಟುಪಾಡುಗಳು ಈ ಜಾನಪದ ಕವಿಗಳಿಗೆ ಬಂಧನಕಾರಿಯಲ್ಲವೆಂಬುವನ್ನು

ಇಂಥ ಹಾಡುಗಳಲ್ಲಿ ಕಂಡುಕೊಳ್ಳುತ್ತೇವೆ. ಮೇಲೆ ವಿವರಿಸಿದ ಕೂಸಿನ ಹಾಡು ಈ ಮಾತುಗಳಿಗೆ ಉದಾಹರಣೆ.

ಸಿದ್ಧಿಯ ಸಂಗ್ರಹದಲ್ಲಿ ಹಾಡುಗಳಿಗೆ ಕೊರತೆಯಿಲ್ಲ; ಅವುಗಳ ವೈವಿಧ್ಯಕ್ಕೆ ಮಿತಿಯಿಲ್ಲ. ಸಿದ್ಧಿ ಮತ್ತು ಚಿಮಣಾ ಸೇರಿದರೆ ಯಾವುದೇ ಅಭಿರುಚಿಯ ಜನತೆಯನ್ನು ಮನರಂಜಿಸಬಲ್ಲರು; ತಣಿಸಬಲ್ಲರು; ಸೊಗಸಾದ ಅನುಭವ ಪದಗಳಿಂದ ಅವರ ಮನಸ್ಸನ್ನು ಸಂಸ್ಕರಿಸಬಲ್ಲರು. ಆದ್ದರಿಂದಲೇ ಈ ಸೋಗು ಕನ್ನಡಿಗರಿಗೆ ಅಚ್ಚುಮೆಚ್ಚಿನದಾಗಿದೆ; ಕರ್ನಾಟಕದ ತುಂಬೆಲ್ಲ ಅತ್ಯಂತ ಜನಪ್ರಿಯವಾಗಿದೆ.

**ಸಿದ್ಧಿಕಸಿದ್ಧಿ ಸೋಗಿನ ಹಿನ್ನೆಲೆ :**

ಸಿದ್ಧಿಕಸಿದ್ಧಿ ಸೋಗು ಬಹಳಷ್ಟು ಜನಪ್ರಿಯವಾದುದೇನೋ ನಿಜ. ಆದರೆ ಈ ಸೋಗಿನ ವಿಡಂಬಕ ವೇಷದ ಔಚಿತ್ಯವೇನು ? ಇದರ ಉಗಮದ ಹಿನ್ನೆಲೆಯೇನು ? ಪ್ರಶ್ನೆಯಷ್ಟು ಉತ್ತರ ಸುಲಭವಿಲ್ಲ. ಸೋಗು ಧಾರಿಗಳನ್ನು ಕೇಳಿದರೆ ಹಿರಿಯರು ಈ ಸೋಗು ಹಾಕುತ್ತಿದ್ದರು, ನಾವೂ ಹಾಕುತ್ತೇವೆ; ಎಂದು ಸರಳ ಉತ್ತರ ಕೊಡುತ್ತಾರೆ. ಹೆಚ್ಚಿನ ವಿವರ ಅರಿಯುವ ಗೋಜಿಗೆ ಅವರು ಹೋಗಿಲ್ಲ.

ಮುಸಲ್ಮಾನರಲ್ಲಿಯ ಶೇಖ ಪಂಗಡದಲ್ಲಿ ಸಿದಿಕ (ಸಿದ್ಧಿಕಿ) ಮತ್ತು ಫರೂಕಿ ಎಂಬ ಎರಡು ಒಳಭೇದಗಳಿವೆ. ಆದ್ದರಿಂದ ಪದದ ಸಾಮ್ಯ ಮೇಲಿಂದ ಸಿದಿಕ (ಸಿದ್ಧಿಕಿ) ರೊಂದಿಗೆ ಈ ಸೋಗಿನ ಸಂಬಂಧ ಕಲ್ಪಿಸಲು ಕೆಲವರ ಮನ ಹಾತೊರೆಯಬಹುದು. ಆದರೆ ಅದು ಸರಿಯಲ್ಲವೆಂದು ಹೇಳಬೇಕಾಗುತ್ತದೆ. ಏಕೆಂದರೆ ಸಿದ್ಧಿಕಸಿದ್ಧಿ ಸೋಗಿನಲ್ಲಿ ಸಿದ್ಧಿಯ ವಿಡಂಬನೆಯೇ ತುಂಬಿಕೊಂಡಿದೆ. ಆದ್ದರಿಂದ, ಮಹಮ್ಮದ ಪೈಗಂಬರನ ಮಾವನಾದ ಅಬೂಬಕರ ಸಿದಿಕನೆಂಬವನ ವಂಶದವರೆಂದು ಕರೆದುಕೊಳ್ಳುವ ತಮ್ಮ ಪಂಗಡವನ್ನು ನಗೆಗೀಡು ಮಾಡಲೋಸುಗ ಈ ಸೋಗನ್ನು ಆರಂಭಿಸಿರಬಹುದೆಂದು ಭಾವಿಸುವುದು ಸರಿಯಾಗದು.

ಸಿದ್ಧಿಕಸಿದ್ಧಿ ಸೋಗಿನ ಹಿನ್ನೆಲೆ ಇಂಥದೇ ಎಂದು ಖಚಿತವಾಗಿ ಹೇಳಲು ಬೇರೆ ಆಧಾರಗಳಿಲ್ಲ. ಆದರೂ ಆ ಬಗ್ಗೆ ಊಹೆ ಮಾಡಬಹುದು. ಮುಖವಾಡ ಅದರಲ್ಲೂ ವಿಕಾರ ರೂಪದ ಮುಖವಾಡ ಪ್ರೇಕ್ಷಕರನ್ನು ತನ್ನೆಡೆಗೆ ಸೆಳೆಯಲು ಸುಲಭವಾದ ಸಾಧನವೆಂಬುದನ್ನು ಅರಿತು ಅದನ್ನು ಅಳವಡಿಸಿಕೊಳ್ಳಲು ಆರಂಭಿಸಿರಬೇಕು. ಪ್ರತ್ಯಕ್ಷ ಜೀವನದಲ್ಲಿ ದೊಡ್ಡ ತಿಗದವರನ್ನು ಕಂಡು ನಗೆಯಾಡುವುದು ಎಂದಿನಿಂದಲೂ ಸಾಗಿ ಬಂದ ರೀತಿ. ಇದನ್ನು ಸೋಗಿನಲ್ಲಿ ಅಳವಡಿಸಿ ನಗಿಸುವುದನ್ನು ಆರಂಭಿಸಿರಬೇಕು.

ಇನ್ನು, ಈ ಸೋಗಿಗೆ ಸಿದ್ಧಿಕಸಿದ್ಧಿ ಅಥವಾ ಸಿದ್ಧಿ ಸೋಗೆಂದು ಹೆಸರಿಸಲು ಕಾರಣವೇನಿರಬಹುದು ? ೧೨ನೆಯ ಶತಮಾನದ ಹಿಂದು ಮುಂದಿನ ಕಾಲದಲ್ಲಿ

ಸಿದ್ಧಿಯನ್ನು ಸಾಧಿಸಿದ್ದೇವೆಂಬ ಡಾಂಭಿಕ ಸಿದ್ಧರ ಮೆರೆದಾಟ ಕರ್ನಾಟಕದಲ್ಲಿ ಬಹಳಿತ್ತು. ಅವರು ಸಿದ್ಧಿಸಾಧನೆಯ ಹೆಸರಿನಲ್ಲಿ ಅನೇಕ ಬಗೆಯ ವಾಮಾಚಾರಗಳಲ್ಲಿ ತೊಡಗಿ ಸಜ್ಜನರ ಮೂದಲಿಕೆಗೆ ಪಾತ್ರರಾಗಿದ್ದರು. ಇಂಥ ಡಾಂಭಿಕ ಸಿದ್ಧರ–ಸಿದ್ಧಿ ಸಾಧಕರ–ವಿಡಂಬನೆ ಮಾಡುವುದೇ ಈ ಸೋಗಿನ ಗುಟ್ಟಾಗಿರುವ ಸಾಧ್ಯತೆಗಳಿವೆ.

ಸಿದ್ಧಿಕಸಿದ್ಧಿ
ಹಗೆದಾಗ ಬಿದ್ದಿ
ಹಳಿಜ್ವಾಳ ತಿಂದಿ
ಡುರ್ರ್ ಸಿದ್ಧಿ

ಎಂಬುದಾಗಿ ಹೇಳುವ ಸಿದ್ಧಿಯ ಮಾತುಗಳಲ್ಲಿ ಡಾಂಭಿಕ ಸಿದ್ಧರ ಅಧಃಪತನದ ಸೂಚನೆ ಇರಬಹುದೇ ? ಸೋಗಿನ ಸಿದ್ಧಿ ಪ್ರತಿ ಚುಟುಕಿನ ಕೊನೆಗೆ ಹೇಳುವ 'ಡುರ್ರ್ ಸಿದ್ಧಿ' ಎಂಬ ಮಾತು ಡಾಂಭಿಕ ಸಿದ್ಧರು ಮಾದಕ ಪದಾರ್ಥಗಳನ್ನು ಸೇವಿಸಿ ಅಮಲಿನಲ್ಲಿ ಘೋಷಿಸುವ 'ಡುರ್ರ್ ಅಲಕ್‌ನಿರಂಜನ' ಎಂಬುದರ ಛಾಯೆಯಂತಿರುವುದು ವಿಚಾರಣೀಯ ಅಂಶ. ಈ ಬಗೆಯ ಜಾಡನ್ನು ಹಿಡಿದು ಸಿದ್ಧಿಕಸಿದ್ಧಿ ಸೋಗಿನ ಹಿನ್ನೆಲೆಯ ಮತ್ತು ಔಚಿತ್ಯ ಕುರಿತು ಸಂಶೋಧನೆ ಮುಂದುವರಿಯಬೇಕಾಗಿದೆ.

**ಮುದುಕಿಯ ಸೋಗು :**

ಹಣ್ಣು ಮುದುಕಿಯಂತೆ ಪೋಷಾಕು ಹಾಕಿಕೊಂಡು ನುಡಿ ನುಡಿಗೆ ನಗೆ ಹೊರ ಚಿಮ್ಮುವಂತೆ ಮಾತಾಡುತ್ತ ಬರುವುದು ಮುದುಕಿಯ ಸೋಗಿನ ರೀತಿ.

ಮನೆಯಲ್ಲಿ ಯಾರಾದರೂ ನಿಂತಿದ್ದರೆ ಅವರನ್ನು ಕುರಿತು—

ಯಾಕ ನಿಂತ್ರಿ, ಯಾಕ ನಿಂತ್ರಿ
ಛಟ್ಟನ ಕುಂಡ್ರಿ, ಪಟ್ಟನ ಏಳ್ರಿ

ಎಂದು ಸೋಗಿನ ಈ ಮುದುಕಿ ಮಾತು ಆರಂಭಿಸುತ್ತಾಳೆ. ಮುಂದುವರಿದು ಅವಳು ತನ್ನ ಕತೆ ಪಟಪಟಿಸತೊಡಗಿದಂತೆ ನಗೆಯ ಅಲೆಗಳು ಪುಟಿದೇಳುತ್ತವೆ.

ಕೇಳ್ರಿ ಯಪ್ಪಾ ಕೇಳ್ರಿ
ನಂದೂ ಮಸ್ತ ಲುಕ್ಸಾನ ಆಗೇತಿ
ನಾಕ ಎಮ್ಮಿ ಸತ್ತವು
ನಾಕ ಎತ್ತ ಸತ್ತವು ಮನ್ಯಾಗಿನ ಗಾಡಿ ಮುರದು ಹೋತು
ನಾನೂ ಸಾಯ್ಬೇಕಂತ

ಮಸ್ತ ಒದ್ದಾಡ್ದೀನಿ
ಆದರ ಜೀವ ಹೋಗಲಿಲ್ಲ
ಮುಚ್ಚುಳದಾಗ ನೀರ ಹಾಕಿ ಮುಣ್ಮುಣಗಿ ಎದ್ನಿ
ಶಿಂವಾ ಸಾವ ಕೊಡಲಿಲ್ಲ
ಉಳ್ಳಿಗಡ್ಡಿ ಪಾಚಿ ತುಗೊಂಡ ಉರ್ಲ ಹಾಕೊಂಡ್ನಿ
ಶಿಂವಾ ಸಾವ ಕೊಡಲಿಲ್ಲ

... ... ... ...
... ... ... ....

ಮುಂತಾದ ಕೊಳಕು ಮಾತುಗಳಿಂದ ಜನರನ್ನು ನಗಿಸುವುದು ಈ ಸೋಗಿನ ಗುರಿ. ಮಾತು ಮುಗಿಸಿ 'ಬರಲಿ ಯವ್ವಾ ಮೊರ ತುಂಬ ಜ್ವಾಳ' ಎಂದು ಭಿಕ್ಷೆ ಪಡೆಯಲಾಗುವುದು. ಮಾತಿನಲ್ಲಿಯ ಮೋಜು ಮಾತ್ರ ಈ ಸೋಗಿನ ಜೀವಾಳ. ಇದಕ್ಕೂ ಹೆಚ್ಚಿನ ಸಾಹಿತ್ಯವೇನೂ ಇಲ್ಲ.

ಹರೆಯದ ಕಾಲದಲ್ಲಿ ಮೆರದಾಡಿ ವಯಸ್ಸಾದ ಮೇಲೆ ಅಪಲಾಪಿಸುವ ಹೆಣ್ಣಿನ ಜೀವನ ವಿಡಂಬಿಸಿ, ಆ ಮೂಲಕ ತಪ್ಪುಗಳನ್ನು ತಿದ್ದುವಂತೆ ಮಾಡುವುದೇ ಈ ಸೋಗಿನ ಆಶಯ.

**ಸೆಟ್ಟಿಯ ಸೋಗು :**

ವ್ಯಾಪಾರಿ ಸೆಟ್ಟಿ ತನ್ನ ಸಾಲದ ವಸೂಲಿಗೆ ಹೊರಟು ಜನರನ್ನು ಪೀಡಿಸುವುದರ ಅಣಕವೇ ಈ ಸೋಗು. ಸೆಟ್ಟಿಯಂತೆ ಪೋಷಾಕು ಧರಿಸಿ ಕೈಯಲ್ಲೊಂದು ಕಾಗದ ಹಿಡಿದರೆ ಆಯಿತು— ಸೆಟ್ಟಿಯ ಸೋಗಿನ ಆರಂಭ. ಮನೆಯ ಮುಂದೆ ಬಂದು, ಕುಳಿತವರನ್ನು ಕುರಿತು ವೇಗ ವೇಗವಾಗಿ ಮಾತನಾಡಲಾರಂಭಿಸುತ್ತಾನೆ—

ಯಾಕ ಕುಂತ್ರಿ ಯಾಕ ಕುಂತ್ರಿ
ಹೊರಗಿನ ಕಸಾ ಒಳಗ ಒಗೀರಿ
ಒಳಗಿನ ಕಸಾ ಹೊರಗ ಒಗೀರಿ

ಆತ ಮನೆಯ ಮುಂದೆ ಬಂದಾಗ, ಅವನ ಎದುರಿನವರು ನಿಂತಿದ್ದರೆ,

ಯಾಕ ನಿಂತ್ರಿ ಯಾಕ ನಿಂತ್ರಿ

ಎಂಬುದಾಗಿ ಮಾತನ್ನು ಬದಲಿಸಿ, ಮಾತಿಗಾರಂಭಿಸುತ್ತಾನೆ. ಅನಂತರ ಅವನ ಮಾತುಗಳು ತೀವ್ರಗತಿಯಲ್ಲಿ ಮುಂದುವರಿಯುತ್ತವೆ :

ಅರೆ,

ಜಾಜಿ ಕೊಟ್ನೆ ಜಾಪತ್ರಿ ಕೊಟ್ನೆ
ಮೆಣಸ ಕೊಟ್ನೆ ಯಾಲಕ್ಕಿ ಕೊಟ್ನೆ

ನಿಮ್ಮ ಮನಿಗಿ ಸಾವಕ್ಕಾರ ಬಂದಾಗ
ಹಾಲತಿನ್ನಾ ಕಂತ ಓಡದ ಗಬ್ಬದ ಕ್ವಾಣಾ ಕೊಟ್ನೆ
ಆ ಗಂಟು ಕೊಡಬೇಕಂತಿರೋ. ಕೊಡಬಾರದಂತಿರೋ
ಬಡ್ಡಿಗಿ ಬಡ್ಡಿ ಬೆಳ್ದ ಮಾಬಡ್ಡಿ ಆಗೇತಿ
ರೂಪಾಯಿ ಬೇಕಾದರ ಓಡಿ ಬರತೀರಿ
ಕೊಡಬೇಕಂದ್ರ ಮಾರಿ ಗಂಟ ಹಾಕತೀರಿ
ಈಗಿನ ಮಂದಿ ಹಿಂತಾದ ಭಾಳ ಆಗೇತಿ
ಅರೆ, ಎಲ್ಲರೂ ಕೂಡ್ರಿ ಲೆಕ್ಕ ಮಾಡ್ರಿ
ಲೆಕ್ಕದಾಗ ಒಂದ ಪೈ ಬಿಡೂದುಲ್ಲ ನೋಡ್ರಿ
ಗಂಟೆಲ್ಲ ಹಾಂಗs ಇರಲಿ
ಬಡ್ಡ್ಯಾಗಟ್ಟs ಸಪ್ಪೀಸ ಸೇರ ಜ್ವಾಳ ಬರ್‍ತಾವ
ಲಗೂ ಬರ್‍ಲಿರ್‍ರಿ

ಎಂದು ಹೇಳಿ ಮಾತು ನಿಲ್ಲಿಸುತ್ತಾನೆ. ಭಿಕ್ಷೆ ನೀಡಲು ವಿನಂತಿಸುತ್ತಾನೆ. ಇವನ ಆರ್ಭಟ ಕೇಳಿ ಕುತೂಹಲದಿಂದ ಯಾರಾದರೂ 'ಯಾವೂರಂಪಾ ?' ಎಂದು ಕೇಳಿದರೆ ಮತ್ತೆ ಮಲಕಿನ ಮಾತು ಆರಂಭಿಸಿಯೇ ಬಿಡುತ್ತಾನೆ—

ನನ್ನ ಊರ ನಿಮಗ್ಯಾಕ
ನಿಮ್ಮ ಊರ ನನಗ್ಯಾಕ
ಮಲ್ಲಿ ಕೊಂದ ಮಲ್ಲ ನಾ
ಸುದ್ದಿ ಕೇಳಿ ತಪ್ಪಿಸ್ಕೊಂದ ಬನ್ನಿ
ಬರೂ ಲೆಕ್ಕ ಬರಲೆಂತ
ನಿಮ್ಮನಿಗಿ ಕಾಗದ ತನ್ನಿ
ಕೊಟ್ಟಬಿಡ್ರಿ ನಮ್ಮ ಬಡ್ಡಿಗಂಟಾ

ಎಂದು ಕೇಳಿದವರ ಬಾಯಿ ಮುಚ್ಚಿಸುತ್ತಾನೆ. ಇವನ ಮಾತಿನ ಮೋಡಿಗೆ ಮಾರು ಹೋಗಿ. ಸಂತಸಗೊಂಡು ಅವನಿಗೆ ತೃಪ್ತಿಯಾಗುವಂತೆ ಜನ ಭಿಕ್ಷೆ ನೀಡುತ್ತಾರೆ.

ಬಡವರ ಅಡಚಣೆಯ ದುರುಪಯೋಗ ಮಾಡಿಕೊಂಡು ಬಡ್ಡಿಯ ಲೆಕ್ಕ ಒಂದಕ್ಕೆ ಹತ್ತು ಹೆಚ್ಚಿಸಿ ಬರೆದು, ಮುಗ್ಧ ಜನತೆಯನ್ನು ಸುಲಿಯುವ ಸೆಟ್ಟಿಗಳ ಜೀವನ ವಿಧಾನವನ್ನು ವಿಡಂಬಿಸುವುದೇ ಈ ಸೋಗಿನ ಪ್ರೇರಕಶಕ್ತಿ.

ಇವಿಷ್ಟು ಜಾತಗಾರರ ಪ್ರಮುಖವಾದ ಪಾರಂಪರಿಕ ಸೋಗುಗಳು. ಇವುಗಳಿಂದಾಗಿ ಹಿಂದಿನ ಕಾಲದಲ್ಲಿ ಇವರಿಗೆ ಸಾಕಷ್ಟು ಗಳಿಕೆಯಾಗುತ್ತಿತ್ತು. ಆದ್ದರಿಂದ

ಕರ್ನಾಟಕದ ಉದ್ದಗಲಕ್ಕೂ ಸಂಚರಿಸಿ, ತಮ್ಮ ಕಲೆ ಪ್ರದರ್ಶಿಸಿ, ಜನಮನ ರಂಜಿಸು ತ್ತಿದ್ದರು: ಜನತೆಯಿಂದ ಧನ-ಧಾನ್ಯ ಪಡೆದು ಸಂತೃಪ್ತಿಯ ಜೀವನ ಸಾಗಿಸುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಈ ಸೋಗುಗಳಿಗೆ ಪ್ರೋತ್ಸಾಹ ಕಡಿಮೆಯಾಗುತ್ತ ನಡೆದಿದೆ.

ಜಾತಿಗಾರರು ತಮ್ಮ ಸೋಗುಗಳ ವೃತ್ತಿಗಾಗಿ ಜಾನಪದ ಸಾಹಿತ್ಯದ ರಕ್ಷಕ ರಾಗಿದ್ದಾರೆ, ಸಂಗೀತಗಾರರಾಗಿದ್ದಾರೆ ಮತ್ತು ವಾದಕರಾಗಿದ್ದಾರೆ. ಈ ಎಲ್ಲ ವಿದ್ಯೆ ಗಳನ್ನು ಪರಂಪರೆಯಿಂದ ಪೋಷಿಸಿಕೊಂಡು ಬಂದಿದ್ದಾರೆ: ಬೆಳೆಸಿಯೂ ಇದ್ದಾರೆ, ಈ ವಿದ್ಯೆಗಳಿಗೆ ಸಂಬಂಧಿಸಿ ಅವರಿಗೆ ತಂದೆಯೇ ಗುರು; ಮಕ್ಕಳೇ ಶಿಷ್ಯರು; ಜೀವನವೇ ಅವರ ವಿದ್ಯಾಲಯ.

**ಜೀವನ ನಿಧಾನ-ಸ್ವಭಾವ :**

ಜಾತಿಗಾರರು ಲಾಗ-ಕಸರತ್ತುಗಳ ಪ್ರದರ್ಶನ ಮತ್ತು ಸಿದ್ಧಿಕಸಿದ್ಧಿ ಮುಂತಾದ ಸೋಗುಗಳ ಮೂಲಕ ಜನತೆಯ ಮಧ್ಯದಲ್ಲಿದ್ದುಕೊಂಡು ಬದುಕಬೇಕಾಗುತ್ತದೆ. ಆದ್ದ ರಿಂದ ಅವರಲ್ಲಿ ನಯ-ವಿನಯದಿಂದ ಜನಮನ ಗೆದ್ದುಕೊಳ್ಳುವ ಜಾಣ್ಮೆ ರಕ್ತಗತ ವಾಗಿದೆ. ನಾಡಿನ ತುಂಬೆಲ್ಲ ತಿರುಗಿ ಎಲ್ಲ ಬಗೆಯ ಸ್ವಭಾವದ ಜನರ ಸಂಪರ್ಕ ಪಡೆ ದಿರುವುದರಿಂದ ಎಂಥವರೊಂದಿಗೂ ಹೊಂದಿಕೊಂಡು ಅವರಿಗೆ ತಮ್ಮ ಕಲೆ ತೋರಿಸಿ ಅವರಿಂದ ಸಂಭಾವನೆ ಪಡೆಯಬಲ್ಲ ಚತುರತೆ ಇವರಲ್ಲಿದೆ.

ತಮ್ಮ ತಮ್ಮಲ್ಲಿಯೂ ಕೂಡ ಜಗಳ, ತಂಟೆ ಬಹಳ ಕಡಿಮೆ. ಹೆಣ್ಣುಗಂಡಿನ ಅನೈತಿಕ ಸಂಬಂಧ, ವೈವಾಹಿಕ ಮನಸ್ತಾಪ, ಹಣದ ವ್ಯವಹಾರ ಮುಂತಾದ ಕಾರಣ ಗಳಿಂದ ಉದ್ಭವಿಸುವ ಜಗಳಗಳನ್ನು ಸಮಾಜದಲ್ಲಿಯ ಐದು ಜನ ಪಂಚರು ವಿಚಾರ ಮಾಡಿ ನಿರ್ಣಯ ಕೊಡುತ್ತಾರೆ. ಪಂಚರ ನಿರ್ಣಯ ಒಪ್ಪದವರನ್ನು ಬಹಿಷ್ಕರಿಸು ತ್ತಾರೆ. ಒಮ್ಮೆ ಬಹಿಷ್ಕರಿಸಲ್ಪಟ್ಟವನು ಮತ್ತೆ ಸಮಾಜದಲ್ಲಿ ಸೇರಬೇಕಾದರೆ ಪಂಚರು ನಿರ್ಣಯಿಸಿದಷ್ಟು ದಂಡ ತೆರಬೇಕಾಗುತ್ತದೆ. ಒಂದು ವೇಳೆ ತಂಟೆ ತೊಡಕಿನದಾಗಿದ್ದರೆ ಮನೆಗೊಬ್ಬರಂತೆ ಒಂದೆಡೆ ಸೇರಿ, ವಿಚಾರ ವಿನಿಮಯ ಮಾಡಿ ನ್ಯಾಯಾನ್ಯಾಯ ನಿರ್ಧರಿಸುತ್ತಾರೆ.

ಪಂಚರ ನಿರ್ಣಯಕ್ಕೆ ತಲೆಬಾಗುವ ಸ್ವಭಾವದಿಂದಾಗಿ ಇವರ ಜಗಳ, ತಂಟೆಗಳು ಕಚೇರಿ ಕಟ್ಟೆ ಹತ್ತುವುದು ಅಪರೂಪ ಮತ್ತು ಜಾತಿಗಾರರಲ್ಲಿ ಕೊಲೆ ಮುಂತಾದ ಅಮಾನುಷ ಕೃತಿಗಳು ಇಲ್ಲವೇ ಇಲ್ಲ.

**ಸಾಮಾಜಿಕ ಸ್ಥಾನಮಾನ :**

ನಿರುಪದ್ರವಿಗಳಾಗಿ ಜೀವನ ಸಾಗಿಸುತ್ತಿರುವ ಜಾತಿಗಾರರ ಕೊಡುಗೆ ಜಾನಪದ ಸಾಹಿತ್ಯ, ಜಾನಪದ ಸಂಗೀತ, ಜಾನಪದ ವಾದನ ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ವಾಗಿದೆ. ಅದನ್ನು ಗುರುತಿಸಿ ಅವರಿಗೆ ಸರಿಯಾದ ಸ್ಥಾನಮಾನ ಕೊಡುವ ಕಾರ್ಯ ಆಗಬೇಕಾಗಿದೆ.

ಇಂದು ಜಾತಿಗಾರರಿಗೆ ಸಮಾಜದಲ್ಲಿ ತೀರ ಕನಿಷ್ಠ ಸ್ಥಾನಮಾನವಿದೆ, ಮುಂದು ವರಿದ ಮುಸಲ್ಮಾನರೂ ಇವರಿಗೆ ತಮ್ಮ ಸಮಾನ ಸ್ಥಾನಮಾನ ಕೊಡುವುದಿಲ್ಲ; ರಕ್ತ ಸಂಬಂಧವನ್ನೂ ಬೆಳೆಸುವುದಿಲ್ಲ. ಹಿಂದೂಗಳಲ್ಲಿಯೂ ಅವರಿಗೆ ಮನ್ನಣೆಯಿಲ್ಲ. ಇದಕ್ಕೆ ಅವರ ಆರ್ಥಿಕಮಟ್ಟವೇ ಪ್ರಮುಖ ಕಾರಣ. ಅಲ್ಲದೆ, ಉಪಜೀವನಕ್ಕಾಗಿ ಎಲ್ಲರ ಮುಂದೆ ಕೈಯೊಡ್ಡುವ ವೃತ್ತಿಯೂ ಕಾರಣ. ಅವರು ತಮ್ಮ ಉತ್ಕೃಷ್ಟವಾದ ಜೀವನ ವನ್ನೇ ಮುಡಿಪಾಗಿಟ್ಟು ಸಾಧಿಸಿದ ಕಲೆಯನ್ನು ಪ್ರದರ್ಶಿಸಿ, ಬೇಡಿದರೂ ಕೊಡುವವರ ಅಸಂಸ್ಕೃತ ದೃಷ್ಟಿಯಲ್ಲಿ ಅದು ಭಿಕ್ಷೆ ಎಂಬ ಭಾವನೆ ಬೆಳೆದುಬಿಟ್ಟಿದೆ. ಹೀಗಾಗಿ ಶ್ರೇಷ್ಠ ಕಲಾರಾಧಕರಾದ ಇವರು ಜನತೆಯ ದೃಷ್ಟಿಯಲ್ಲಿ ಭಿಕ್ಷುಕರಾಗಿದ್ದಾರೆ.

ಉಪಜೀವನಕ್ಕಾಗಿ ಊರಿಂದೂರಿಗೆ ಸದಾ ಅಲೆದಾಡಬೇಕಾಗಿರುವ ಇವರ ಮಕ್ಕಳಿಗೆ ಸ್ವಾಭಾವಿಕವಾಗಿ ಶಿಕ್ಷಣದ ಸೌಲಭ್ಯ ದೊರಕದು. ಶಿಕ್ಷಣದ ಅಭಾವದಿಂದಾಗಿ ಹೊಸ ದೃಷ್ಟಿ ಇವರಲ್ಲಿ ಇಂದಿಗೂ ಮೂಡಿಲ್ಲ. ಆದ್ದರಿಂದ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ತೀರ ಹಿಂದುಳಿದ ಅವಸ್ಥೆಯಲ್ಲಿ ಈ ಜನರಿದ್ದಾರೆ.

ಜಾತಿಗಾರರು ಮುಸಲ್ಮಾನರೆಂದು ಹೇಳಿಕೊಳ್ಳುವುದೇ ಅವರಿಗೆ ಮುಳುವಾಗಿರು ವಂತೆ ಕಾಣುತ್ತದೆ. ಇವರು ಸಂಚಾರಿ ಜನಾಂಗದವರಾದರೂ ಮುಸಲ್ಮಾನರೆಂಬ ಕಾರಣದಿಂದಾಗಿ ಸಂಚಾರಿ ಜನಾಂಗಗಳವರಿಗೆ ಸರಕಾರದಿಂದ ಸಿಗುವ ಸವಲತ್ತುಗಳಿಂದ ವಂಚಿತರಾಗಬೇಕಾಗಿದೆ. ತಾಂತ್ರಿಕ ಕಾರಣಗಳಿಂದಾಗಿ ಇಂಥ ಸಂಚಾರಿ ಜನಾಂಗದವರು ಸರಕಾರದಿಂದ ಸಿಗುವ ಸವಲತ್ತುಗಳನ್ನು ತಪ್ಪಿಸಿಕೊಳ್ಳದಂತೆ ಸಂಬಂಧಿಸಿದ ಕಾಯ್ದೆಗಳಲ್ಲಿ ತಿದ್ದುಪಡಿಗಳಾಗುವದು ಅತ್ಯಗತ್ಯವೆಂದು ಒತ್ತಿ ಹೇಳಬೇಕಾಗುತ್ತದೆ.

**ವೈಜ್ಞಾನಿಕತೆಯ ಆಘಾತ :**

ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಮೇಲೆ ದೇಶದಲ್ಲಿ ಅನೇಕ ಸಮಸ್ಯೆಗಳು ಹುಟ್ಟಿವೆ. ವೈಜ್ಞಾನಿಕತೆಯ ತೀವ್ರ ಬೆಳವಣಿಗೆಯಿಂದ ಸಮಾಜ ವ್ಯವಸ್ಥೆಯಲ್ಲಿ, ಸಾಂಸ್ಕೃತಿಕ ವ್ಯವಸ್ಥೆಗಳಲ್ಲಿ ಶಿಥಿಲತೆ ಉಂಟಾಗಿದೆ. ಜನತೆಯ ಜೀವನ ಸಂಕೀರ್ಣಗೊಂಡಿದೆ.

ಸಿನೇಮಾ, ರೇಡಿಯೋ ಟಿ. ವ್ಹಿ. ಮುಂತಾದವುಗಳ ಹೆಚ್ಚಳದಿಂದ ಜನತೆಯ ಮನರಂಜನೆಯ ದೃಷ್ಟಿಕೋನ ಬದಲಾಗಿದೆ. ಹೀಗಾಗಿ, ಜನಸಾಮಾನ್ಯರಿಗೆ ಮನರಂಜನೆ ಒದಗಿಸುವುದನ್ನೇ ತಮ್ಮ ಉಪಜೀವನದ ಕಸಬನ್ನಾಗಿ ಸ್ವೀಕರಿಸಿದ್ದ ಜಾತಿಗಾರರಂಥವರಿಗೆ ಮರ್ಯಾದೆಯಿಂದ ಬದುಕುವಂತೆ ಪ್ರೋತ್ಸಾಹ ದೊರೆಯದಿರುವುದು ಸಹಜ. ತಮ್ಮ ವೃತ್ತಿಗಳಿಂದ ಹೊಟ್ಟೆಬಟ್ಟೆಗಳ ಸಮಸ್ಯೆಯೇ ಸರಿಯಾಗಿ ಬಗೆಹರಿಯದಾದಾಗ ಆ ವೃತ್ತಿಗಳನ್ನು ತೊರೆದು ಬೇರೆ ಲಾಭದಾಯಕ ವೃತ್ತಿಗಳಿಗೆ ಇಳಿಯಲು ಜಾತಿಗಾರರು ಹಾತೊರೆದರೆ ಅದು ತೀರ ಸ್ವಾಭಾವಿಕ.

## ಬದಲಾವಣೆಯ ತಿರುವಿನಲ್ಲಿ:

ಜಾನಪದ ವೃತ್ತಿಕಲಾವಿದರಾದ ಜಾತಿಗಾರರು ಈಗ ತೀವ್ರ ಬದಲಾವಣೆಯ ತಿರುವಿನಲ್ಲಿ ಸಿಕ್ಕಿದ್ದಾರೆ. ಕಸರತ್ತಿನ ಪ್ರದರ್ಶನವನ್ನಂತೂ ಹೆಚ್ಚುಕಡಿಮೆ ಸಂಪೂರ್ಣವಾಗಿ ತೊರೆದಿದ್ದಾರೆ. ಸುಮಾರು ಹತ್ತಿಪ್ಪತ್ತು ವರ್ಷಗಳ ಜಾತಿಗಾರ ಯುವಕರಿಗೆ ಆಗ-ಕಸರತ್ತುಗಳ ಪರಿಚಯ ಎಳ್ಳಷ್ಟೂ ಇಲ್ಲ.

ಸಿದ್ಧಿಕಸಿದ್ಧಿ ಸೋಗು, ಮುದಕಿಯ ಸೋಗು, ಸೆಟ್ಟಿಯ ಸೋಗು, ಮುಂತಾದವುಗಳನ್ನೂ ಜನತೆ ಈಗ ಅಷ್ಟಾಗಿ ಪ್ರೋತ್ಸಾಹಿಸುತ್ತಿಲ್ಲ. ಆದರೆ ಈ ಸೋಗುಗಳನ್ನು ಕಲಿಯಲು ಹೆಚ್ಚಿನ ತೊಂದರೆಯಿಲ್ಲ: ಪ್ರಯೋಗಿಸಲು ಖರ್ಚಿಲ್ಲ. ಅಷ್ಟು ಇಷ್ಟು ಬಿಕ್ಷೆ ಈಗಲೂ ಸಿಗುತ್ತದೆ. ಆದ್ದರಿಂದ ಅಲ್ಲೊಂದು ಇಲ್ಲೊಂದು ಇಂಥ ಸೋಗುಗಳ ಮೇಳಗಳು ನೋಡಲು ಸಿಗುತ್ತವೆ. ಆದರೆ ಮೊದಲಿನಂತೆ ಇವುಗಳ ಮಟ್ಟ ಉಳಿದಿಲ್ಲ. ಮತ್ತು ಜಾತಿಗಾರ ಕುಲದವರ ಸಂಖ್ಯೆಗೆ ಹೋಲಿಸಿದರೆ ಈ ಸೋಗುಗಳ ಸಂಖ್ಯೆ ತೀರ ಕಡಿಮೆಯೆಂದೇ ಹೇಳಬೇಕಾಗುತ್ತದೆ. ಅಂದರೆ ಈ ಸೋಗುಗಳೂ ಕೂಡ ಅಳಿಗಾಲದ ಹಾದಿಯಲ್ಲಿಯೇ ಇವೆಯೆಂದು ಹೇಳಬಹುದು.

ಜಾನಪದ ವೃತ್ತಿ ಕಲೆಗಾರಿಕೆಯನ್ನು ಬಿಟ್ಟು ದನಗಳ ಅದರಲ್ಲಿಯೂ ಎಮ್ಮೆಗಳ ವ್ಯಾಪಾರದ ಲಾಭದಾಯಕ ವೃತ್ತಿಯಲ್ಲಿ ಬಹುಪಾಲು ಜಾತಿಗಾರರು ಈಗ ತೊಡಗಿದ್ದಾರೆ. ಪೂರ್ವದಿಂದಲೂ ಎಮ್ಮೆ ಸಾಕುವ ಹವ್ಯಾಸ ಹೊಂದಿದ ಮತ್ತು ಅವಕಾಶ ದೊರೆತಾಗ ಎಮ್ಮೆ ಬೋಳಿಸುವ ಉಪವೃತ್ತಿ ಮಾಡುತ್ತಿದ್ದ ಇವರಿಗೆ ಎಮ್ಮೆಗಳ ಬಗ್ಗೆ ಸಂಪೂರ್ಣ ಜ್ಞಾನವಿದೆ. ಅವುಗಳ ಪಾಲನೆಪೋಷಣೆ ಮಾಡುವ ಕಷ್ಟಸಹಿಷ್ಣುತೆಯ ಸ್ವಭಾವವೂ ಇವರಲ್ಲಿದೆ. ಹೀಗಾಗಿ ಧೈರ್ಯದಿಂದ ಈ ವೃತ್ತಿಯಲ್ಲಿ ನುಗ್ಗಿದ್ದಾರೆ. ಇಂದು ಎಮ್ಮೆ ವ್ಯಾಪಾರದ ದಳ್ಳಾಳಿತನದ ಸರ್ವಸ್ವಾಮ್ಯ ಇತ್ತೀಚಿನ ದಿನಗಳಲ್ಲಿ ಜಾತಿಗಾರರ ಕೈಸೇರಿದೆಯೆಂದರೆ ಅತಿಶಯೋಕ್ತಿಯೇನಲ್ಲ. ಪುಣೆ, ಗೋವಾ, ಬಾರಾಮತಿ, ಕಲಬುರ್ಗಿ, ಹೈದ್ರಾಬಾದ, ಬೆಂಗಳೂರ, ಮೈಸೂರ, ಮುಂಬೈ ಮುಂತಾದ ಕಡೆಗೆ

ತಿರುಗಾಡಿ ಎಮ್ಮೆ ಮಾರುತ್ತಾರೆ; ಕೊಳ್ಳುತ್ತಾರೆ. ದೊಡ್ಡ ಪ್ರಮಾಣದಲ್ಲಿ ಕಮೀಶನ್ ಗಿಟ್ಟಿಸುತ್ತಾರೆ. ಹೆಚ್ಚು ಹಣವಿಲ್ಲದವರು ಸಣ್ಣ ಪ್ರಮಾಣದಲ್ಲಿ ಈ ಉದ್ಯೋಗ ಮಾಡುತ್ತಾರೆ. ನುರಿತವರು ಮತ್ತು ಹೆಚ್ಚು ಪರಿಚಯಸ್ಥರನ್ನು ಗಳಿಸಿದವರು ಪತ್ತಿನ ಮೇಲೆ ಉದ್ರಿಯಿಂದ ಕೊಳ್ಳುತ್ತಾರೆ ; ಮಾರುತ್ತಾರೆ. ಎಮ್ಮೆ ವ್ಯಾಪಾರದಲ್ಲಿ ತೊಡಗಿದ ಕೆಲವರು ಚೆನ್ನಾಗಿ ಸಂಪಾದನೆ ಮಾಡಿದ್ದಾರೆ ; ಹೊಲ ಮನೆ ಕೊಂಡಿದ್ದಾರೆ.

ವ್ಯಾಪಾರಿ ಕುಶಲತೆಯಿಲ್ಲದವರು ರೈತಕಾರ್ಮಿಕರಾಗುತ್ತಲಿದ್ದಾರೆ. ಮೈಮುರಿದು ದುಡಿದು, ಮಿತವ್ಯಯದಿಂದ ಜೀವನ ಸಾಗಿಸಿ ಸ್ಥಿತಿವಂತರಾಗುತ್ತಲಿದ್ದಾರೆ. ನೀರಾವರಿ ಯಿಂದ ಸಮೃದ್ಧವಾಗಿರುವ ಪ್ರದೇಶಗಳಲ್ಲಿ ಶಾಶ್ವತವಾಗಿ ನೆಲೆಸಲಾರಂಭಿಸಿದ್ದಾರೆ. ತಮಗೆ ಅನುಕೂಲವೆನ್ನಿಸಿದ ಊರುಗಳಲ್ಲಿ ಜಾಗಕೊಂಡು ಮನೆಗಳನ್ನು ಕಟ್ಟಿಸಿಕೊಳ್ಳ ಲಾರಂಭಿಸಿದ್ದಾರೆ. ಮುಧೋಳ, ಹಾರೂಗೇರಿ, ಮೂಡಲಗಿ, ಕುಡಚಿ, ಮ್ಯಾಲಿನ ಹುಣಚ್ಯಾಳ, ಮುಂತಾದ ಊರುಗಳಲ್ಲಿ ಜಾತಗಾರರ ತಂಡಗಳು ಈಗ ಶಾಶ್ವತವಾಗಿ ನೆಲೆಯೂರಿದ್ದಾರೆ. ಇವರು ಹೀಗೆ ನೆಲೆಗೊಂಡಂತೆ ಮೂಲ ಕಸಬುಗಳು ಮೂಲೆ ಗುಂಪಾಗುವ ವೇಗವೂ ಹೆಚ್ಚುತ್ತಲಿದೆ.

**ಮುಕ್ತಾಯಕ್ಕೆ ಮುನ್ನ :**

ಇಂದು ಮನರಂಜನೆಯ ಸಾಧನಗಳಲ್ಲಿ ತೀವ್ರ ಪೈಪೋಟಿಯಿದೆ. ಜನಸಾಮಾನ್ಯರು ಸಾಂಸ್ಕೃತಿಕ ಮೌಲ್ಯಗಳನ್ನು ಮರೆತು ಕೃತಕತೆಗೆ, ಥಳಕಿಗೆ ಮಾರುಹೋಗುತ್ತಲಿದ್ದಾರೆ. ಇಂಥ ಸಂಧಿಕಾಲದಲ್ಲಿ ಜಾತಿಗಾರರಂಥ ಬಡಪಾಯಿಗಳು ತೀವ್ರ ಪೈಪೋಟಿ ಎದುರಿಸಿ ತಮ್ಮ ಪರಂಪರೆಯ ಜಾನಪದ ಕಲೆಗಳನ್ನು ಬದುಕಿಸುವುದು ಮತ್ತು ಬೆಳೆಯಿಸುವುದು ಸಾಧ್ಯವಿಲ್ಲ. ಆದ್ದರಿಂದ ಈ ಬಗ್ಗೆ ವಿದ್ವಾಂಸರು, ವಿಶ್ವವಿದ್ಯಾಲಯಗಳು ಮತ್ತು ಸರ ಕಾರ ಯೋಚಿಸಬೇಕೆಂದು ಸೂಚಿಸಲೇಬೇಕಾಗಿದೆ. ಜಾತಿಗಾರರ ಜೀವನಕ್ರಮದಲ್ಲಿಯ ಬದಲಾವಣೆಗಳನ್ನು ತಡೆಯಲಿಕ್ಕಾಗದಿದ್ದರೂ ಅವರಲ್ಲಿಯ ಕಲೆ, ಸಾಹಿತ್ಯಗಳು ಪೂರ್ಣ ನಶಿಸಿಹೋಗುವ ಮುನ್ನ, ಯಾವುದಾದರೂ ಉಪಾಯದಿಂದ ಅವುಗಳನ್ನು ಬದುಕಿಸುವ ಬಗ್ಗೆ ಗಂಭೀರವಾಗಿ ವಿಚಾರಮಾಡುವ ಕಾಲವೀಗ ಬಂದಿದೆ. ವಿಶ್ವವಿದ್ಯಾಲಯದಂಥ ಶೈಕ್ಷಣಿಕ ಮಹಾಸಂಸ್ಥೆಗಳು ಮತ್ತು ಸರಕಾರ ಮನಸ್ಸು ಮಾಡಿದರೆ ಅಸಾಧ್ಯವೇನಿದೆ ?



# -ಕವಲೆತ್ತಿನವರು

**ಮಲ್ಲಿಕಾರ್ಜುನ ಶಿ. ಲಠ್ಠೆ**

## ೧. ಪೀಠಿಕೆ :

ಮನುಷ್ಯನು ಬದುಕುವದಕ್ಕಾಗಿ ಆಹಾರ ಸೇವಿಸುತ್ತಾನೆ. ಆಹಾರಕ್ಕೆಂದು ಅತ್ತಿತ್ತ ಅಲೆದಾಡಿ ಮೈಮುರಿದು ದುಡಿಯುತ್ತಾನೆ. ದುಡಿತ ಸಿಗದೆ ಇದ್ದಾಗ ಬೇಟೆಯಾಡಿಯೋ, ಯಾವುದೋ ವೇಷತೊಟ್ಟೋ, ಪಶು–ಪಕ್ಷಿಗಳನ್ನು ಸಾಕಿ ಆಟವಾಡಿಸುತ್ತಲೋ ಅಂತೂ ಜೀವನೋಪಾಯಕ್ಕೆ ಹಲವಾರು ವೃತ್ತಿಗಳನ್ನು ಹುಡುಕಿಕೊಳ್ಳುತ್ತಾನೆ. ಹೀಗೆ ಯಾವುದೋ ಒಂದು ನೆವದಿಂದ ಇದ್ದುಳ್ಳವರಕಡೆಹೋಗಿ ಅಷ್ಟಿಷ್ಟು ಕೆಲಸಮಾಡಿ ಬದುಕುವ ಅನಾಗರಿಕ ಜನಾಂಗಗಳಲ್ಲಿ 'ಗೊಲ್ಲ' ಜನಾಂಗವೂ ಒಂದಾಗಿರುತ್ತದೆ.

ಗೊಲ್ಲರು ತೀರ ಬಡವರು. ಇವರು ಆಕಳು, ಕುರಿಗಳನ್ನು ಸಾಕಿ, ಗುಡ್ಡ–ಗಂವ್ಹರ ತಿರುಗುತ್ತ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ತಿರುಗುತ್ತಿರುತ್ತಾರೆ. ಇನ್ನು ಕೆಲವರು ಹಾಲು, ಬೆಣ್ಣೆ ಮಾರಿಯೋ; ರೋಗ ಪರೀಕ್ಷೆ, ಸಂದು–ವಾತ–ವಾಯುವಿಗೆ ಔಷಧ ಎಂದಂದು ಬೀದಿ ಬೀದಿ ತಿರುಗಿ ವನಸ್ಪತಿ ಮಾರುತ್ತಲೋ; ಮತ್ತೆ ಹಲವರು ಮಂಗ, ಕರಡಿ, ಕಪಿಲೆಬಸವಣ್ಣನಿಗೆ ತರಬೇತಿ ನೀಡಿ ಆಟವಾಡಿಸುತ್ತಲೋ ಹೊಟ್ಟೆಹೊರೆದುಕೊಳ್ಳುತ್ತಿರುವರು.

## ೨. ಜನಾಂಗದ ಪೂರ್ವೇತಿಹಾಸ :

ಕರ್ನಾಟಕದಲ್ಲಿ ವಾಸಮಾಡಿರುವ ಗೊಲ್ಲರು ಮೂಲತಃ ಆಂಧ್ರದವರೆಂದು ತಿಳಿದುಬರುತ್ತದೆ. ಇದು ಅವರು ಮಾತನಾಡುವ ತೆಲುಗು ಭಾಷೆಯಿಂದ (ಪಾತ್ರ

ಭಾಷೆ) ಅರಿತುಕೊಳ್ಳಬಹುದು. ಉತ್ತರ ಹಿಂದುಸ್ತಾನದಿಂದಲೂ ಕೆಲ ಗೊಲ್ಲರು ಬಂದ ರೆಂದೂ ಹೇಳುತ್ತಾರೆ. ಇವರು ಹೆಚ್ಚಾಗಿ ಹಿಂದಿ ಮಾತನಾಡುತ್ತಾರೆ. ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ರಾಜ್ಯಗಳಲ್ಲಿ ಈ ಗೊಲ್ಲ ಜನಾಂಗದ ಅಲೆದಾಟ ಹೆಚ್ಚು. ಆಯಾ ಪ್ರಾಂತಗಳ ಭಾಷೆಯೂ ಇವರಿಗೆ ಗೊತ್ತು. ಇವರನ್ನು ಅರೆ-ಅಲೆಮಾರಿ ಜನಾಂಗದವ ರೆಂದು ಕರೆಯುವರು.

ಮೊದ ಮೊದಲು ಆಕಳುಗಳನ್ನು ಸಾಕಿ ಉಪಜೀವನ ಸಾಗಿಸುತ್ತಿದ್ದ ಈ ಗೊಲ್ಲರನ್ನು ಗೋ (ಆಕಳು) ಪಾಲ, ಗೋವಳ, ಗೊಲ್ಲಳ ಎಂದು ಕರೆದಿದ್ದಾರೆ. ಗೊಲ್ಲಳವೇ 'ಗೊಲ್ಲ' ಎಂದು ರೂಢಿಯಲ್ಲಿ ಬಂದಿರುತ್ತದೆ. 'ಗೊಲ್ಲ=ಗೊಲ್ಲಳ (ದ್ಭ) ಗೋವಳ'[೧] ಕುರಿಗಳನ್ನು ಕಾಯುವುದರಿಂದ 'ಕುರುಬರು' ಎಂದೂ ಕರೆದಿದ್ದಾರೆ. "The name Golla is derived from Samskrit Govala or Gopala, which signifies 'Cow- herd'....the traditional accupation of this caste is tending of cow's and living by the sale of milk and its products"[೨].

ಭೂಮಿ-ಸೀಮಿ ಹಿಡಿದು ಒಕ್ಕಲುತನ ಮಾಡಿಕೊಂಡು ಬದುಕುವ ಗೊಲ್ಲರನ್ನೂ ಕಾಣಬಹುದಾಗಿದೆ.

'At present, only a few of this caste follow their original calling, agriculture being the main occupation of the rest.'[೩]

## ೩. ಜನಾಂಗದಲ್ಲಿಯ ಪಂಗಡಗಳು :

ಗೊಲ್ಲರಲ್ಲಿ ಪ್ರಮುಖವಾಗಿ ಎರಡು ಪಂಗಡಗಳಿರುತ್ತವೆ. ಹೊಲಗದ್ದೆಗಳಲ್ಲಿ ಕೆಲಸ ಮಾಡಿಕೊಂಡಾಗಲಿ, ಅರಸನ ಬೊಕ್ಕಸದ ಇಲ್ಲವೆ ಬೀಗ ಮುದ್ರೆ ಕಾರ್ಯ ಕೈಕೊಂಡಾಗಲಿ ಬದುಕುವರು. "...Bokkasamu or Bigamudre (The lock and ecal section) were in former times the Gaurds of the treasury. Even now, the menial who open and lock the Govt. treasury and handle the money bags are known as Gollas."[೪] ಹೀಗೆ ಜೀವಿಸುವ ಗೊಲ್ಲರನ್ನು ಊರು ಗೊಲ್ಲರೆಂದೂ, ಕಾಡುಗಳಲ್ಲಿ ಕುರಿ, ಆಕಳು ಕಾಯುತ್ತ, ಬೇಟೆಯಾಡುತ್ತ ಉಪಜೀವಿಸುವ ಗೊಲ್ಲರನ್ನು ಕಾಡು ಗೊಲ್ಲರೆಂದೂ ಕರೆಯುತ್ತಾರೆ.

ಊರು-ಗೊಲ್ಲರಲ್ಲಿ ಮತ್ತೆ ನೂರಾರು ಉಪಪಂಗಡಗಳಿರುತ್ತವೆ. ಅವರವರು ಕೈಕೊಂಡ ಕಸಬುಗಳ ಮೇಲಿಂದ ಬೇರೆ ಬೇರೆ ಹೆಸರು ಬಂದಿರುತ್ತವೆ. ಇನ್ನು ಕೆಲವರಿಗೆ

ವಿಧಿ-ಕರ್ಮಗಳ ಮೇಲಿಂದ ಹೆಸರು ಬಂದಿವೆ. ಊರು ಗೊಲ್ಲರಲ್ಲಿ ಒಂಟಿ ಚಪ್ರ ಮಾವಲ್ಲು, ರೆಂಡು ಚಪ್ರಮಾವಲ್ಲು ಎಂದು ಎರಡು ಪ್ರಮುಖ ಬಣಗಳಿರುತ್ತವೆ. ಒಂದು ಲಗ್ನವಾಗುವವರನ್ನು ಒಂಟಿ ಚಪ್ರಮಾವಲ್ಲು ಎಂದೂ, ಎರಡು ಲಗ್ನವಾಗು ವವರನ್ನು ರೆಂಡು ಚಪ್ರಮಾವಲ್ಲು ಎಂದೂ ಕರೆದಿದ್ದಾರೆ. ಇವರೆಲ್ಲರೂ ವಿಷ್ಣುವಿನ ಭಕ್ತರು. ಕೆಲವರು ಸಾಧುಗಳಾಗಿಯೂ ಇರುವರು. ಇವರಲ್ಲಿಯ ಪ್ರಮುಖನನ್ನು ಗೌಡ, ಕಿಲಾರಿ, ನಾಯುಡು ಎಂದೂ ಕರೆಯುವರು.

ಕಾಡುಗೊಲ್ಲರು ದೆಹಲಿ ಮತ್ತು ಸುತ್ತ ಮುತ್ತಲಿನ ಪ್ರದೇಶದಿಂದ ಬಂದವ ರೆಂದು ತಿಳಿದು ಬರುತ್ತದೆ. "They state that they are immigrants from Delhi and its neighbourhood."[೫]

ಕಾಡುಗೊಲ್ಲರಲ್ಲಿ ಕರಡಿಗೊಲ್ಲರು (The bear tribe), ಚಾಂದಿನವರು (The moon tribe) ಮತ್ತು ರಾಮೇಗೌಡನ ಕುಲದವರು (The Ramegouda's tribe) ಎಂದು ಮೂರು ಪ್ರಮುಖ ಬಣಗಳಿರುತ್ತವೆ. ಇವುಗಳಲ್ಲಿ ಮತ್ತೆ ಹಲವಾರು ಉಪ ಪಂಗಡಗಳಿದ್ದುದು ತಿಳಿದುಬರುತ್ತದೆ.

"The caste is divided into three endogamous septs known as Karadi Gollaru (or the bear tribe), Chandinavaru (or the moon tribe), and Rame Goudan Kuladavaru (or those of Rame Goud's tribe) These again exogamous septs known after animals Plants and other inanimate objects,"[೬]

ಇಂದಿಗೂ ಕರ್ನಾಟಕ ಹಾಗೂ ಮಹಾರಾಷ್ಟ್ರ ರಾಜ್ಯಗಳಲ್ಲಿ ವಾಸಿಸುವ ಗೊಲ್ಲರಲ್ಲಿ ಹಲವಾರು ಪಂಗಡಗಳನ್ನು ಕಾಣಬಹುದಾಗಿದೆ, ಕೃಷ್ಣಗೊಲ್ಲರು, ಪಾಕನಾಕ ಗೊಲ್ಲರು, ಶಾಸ್ತ್ರಗೊಲ್ಲರು, ಹಣಮಗೊಲ್ಲರು, ಅಡವೀಗೊಲ್ಲರು, ಪುಂಗೀಗೊಲ್ಲರು, ಹಾವು ಗೊಲ್ಲರು, ಜಟ್ಟಿಗೊಲ್ಲರು, ಅಳ್ಳಿಗೊಲ್ಲರು, ದೂದಿಗೊಲ್ಲರು, ಚಾಪಿಗೊಲ್ಲರು ಮೊದ ಲಾದ ಹೆಸರು ಕೇಳಿಬರುತ್ತವೆ. ಶಾಸ್ತ್ರಗೊಲ್ಲರಿಗೆ 'ವೈದೂ' ವೈದ್ಯರೆಂದೂ ಕರೆಯು ವರು. ಈ ಉದ್ಯೋಗ ನಡೆಯುದ್ದಕ್ಕೆ ಅವರಿಂದು ಡಬ್ಬಿ, ಜರಡಿ ರಿಪೇರಿ ಕೆಲಸ ಮಾಡು ತ್ತಾರೆ. ಕಲಬುರ್ಗಿಯಲ್ಲಿ ಇಂಥವರ ಸಂಖ್ಯೆ ಹೆಚ್ಚಿರುತ್ತದೆ. ಹಣಮಗೊಲ್ಲರಂತೂ ಹಂದಿಯ ಲದ್ದಿ ಕೂಡು ಹಾಕಿ ದೊಡ್ಡ ಪ್ರಮಾಣದಲ್ಲಿ ಮಾರುತ್ತಾರೆ. ಮುದ್ದೇಬಿಹಾಳ ಭಾಗದಲ್ಲಿ ಇಂಥವರನ್ನು ಕಾಣಬಹುದಾಗಿದೆ.

ಕವಲೆತ್ತಿನವರು ರಾಮೇಗೌಡನ ಕುಲಕ್ಕೆ ಸಂಬಂಧಿಸಿದವರಾಗಿದ್ದಾರೆ. ಇವರನ್ನು ಗಂಗೆತ್ತಿನವರು, ಗೌಲೆತ್ತಿನವರು, ಕೋಲೆಬಸವನಾಟದವರು ಎಂದೂ ಕರೆಯುವರು.

ಮಕ್ಕಳಲೋಕ 'ಬುರ್ ಬುರ್ ಬಸವಣ್ಣ' ಎಂದೂ ಕರೆಯುತ್ತದೆ. ಗಂಗೆಮಕ್ಕಳು ಎಂದು ಹೇಳಿಕೊಳ್ಳುವುದುಂಟು.

### ೪. ಹೆಸರಿನ ಔಚಿತ್ಯ :

'ಕವಲಿ ಎತ್ತಿನವರು' → 'ಕವಲೆತ್ತಿನವರು' ಇಲ್ಲಿಯ ಸಂಸ್ಕೃತದ 'ಕಪಿಲೆ' ಶಬ್ದವು 'ಕವಿಲೆ' ಎಂದು ತದ್ಭವ ರೂಪವಾಗುತ್ತದೆ. ಕಪಿಲೆಗೆ ಬೂದಿಬಣ್ಣದ ಆಕಳು (A brown Cow) ಎಂಬ ಅರ್ಥವಿದೆ. ಕಪಿಲೆ ಎತ್ತು ಅಂದರೆ ಬೂದಿಬಣ್ಣದ ಆಕಳು ಮತ್ತು ಎತ್ತು ಎಂದು ಅರ್ಥ. ಗ್ರಾಮೀಣರು ದೇವರಿಗೆ ಬಿಟ್ಟ ಆಕಳನ್ನು ಕಪಲಿ (ಕಪಿಲೆ→ಕಪಲಿ) ಎಂದು ಕರೆಯುತ್ತಾರೆ. ಹೆಣ್ಣು ಕರು ಇದ್ದರೆ ಅದನ್ನು 'ಕಪಲಿ' ಎಂದೂ ಗಂಡುಹೋರಿ ಇದ್ದರೆ ಅದಕ್ಕೆ 'ಗೂಳಿ (ಬಸವ)' ಎಂದು ಕರೆಯುವ ವಾಡಿಕೆ. ಇಂಥ ಹೋರಿ, ಆಕಳುಗಳನ್ನು ತಂದು ಅವುಗಳಿಗೆ ತರಬೇತಿ ನೀಡಿ ಆಟ ಪಾಡಿಸುತ್ತ ಹೊಟ್ಟೆಹೊರೆದುಕೊಳ್ಳುವ ವೃತ್ತಿಕಾರರನ್ನು ಕವಲೆತ್ತಿನವರು ಎಂದು ಕರೆಯುತ್ತ ಬಂದಿದ್ದಾರೆ.

ಹೋರಿ, ಕರು (ಆಕಳು)ಗಳ ಬದಲಾಗಿ ಒಮ್ಮೊಮ್ಮೆ ಒಂದೇ ಎತ್ತು (ಹೋರಿ) ಇರುವುದುಂಟು. ಅದಕ್ಕೂ ಕವಲೆತ್ತು ಎಂದು ಕರೆಯುವರು. ಸಾಕಿದ ಯಜಮಾನನು (ಸೂತ್ರಧಾರ) ಮಾತು ಹೇಳುತ್ತ ಹೋದಂತೆ ಗೋಣುಹಾಕುವ, ಕಾಲೂರಿ ನಮಸ್ಕರಿಸುವ, ನಾಲಿಗೆ ಚಾಚುವ ಇಲ್ಲವೆ ಕುತ್ತಿಗೆ ಹಿಡಿಯುವ ಅಥವಾ ಕಾಲಮೇಲೆ ಕಾಲೂರಿ ನಿಲ್ಲುವ, ಎದೆಯ ಮೇಲೆ ನಿಂತು ಕುಣಿಯುವ ಎತ್ತಿಗೆ ಕಪಿಲೆ, ಬಸವ, ಕವಲೆತ್ತು, ಗೌಲೆತ್ತು, ಗಂಗೆತ್ತು ಎನ್ನುವರು. "An ox that has been taught to execute various clever performances."[೭] ಗಂಗೆತ್ತನ್ನು ದೈವ-ದೇವರೆಂದು ಭಾವಿಸಿರುವುದರಿಂದ ಜನರು ಬಡಿಯುವದಿಲ್ಲ. ಮುಟ್ಟಿ ನಮಸ್ಕರಿಸುವರು.

### ೫. ವಾಸಿಸುವ ಪ್ರದೇಶ :

ಕವಲೆತ್ತು ಆಡಿಸುವವರನ್ನು ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ರಾಜ್ಯಗಳಲ್ಲೆಲ್ಲ ಕಾಣುತ್ತೇವೆ. ಕರ್ನಾಟಕ ರಾಜ್ಯದ ಕಲಬುರ್ಗಿ, ಧಾರವಾಡ, ಬೆಳಗಾಂವಿ, ವಿಜಾಪುರ, ಬೀದರ, ರಾಯಚೂರ, ಚಿತ್ರದುರ್ಗ, ದಾವಣಗೆರೆ, ತುಮಕೂರು, ಕೋಲಾರ ಜಿಲ್ಲೆಗಳಲ್ಲಿ; ಆಂಧ್ರಪ್ರದೇಶದ ಲಕ್ಕಪಲ್ಲಿ (ಒಂಗೋರ ಜಿಲ್ಲೆ), ಶಾರಗೊಂಡ, ನಲಗೊಂಡ, ವನಪರ್ತಿ (ವರಂಗಲ್ಲ ಜಿಲ್ಲೆ), ಅಂಕರೆಡ್ಡಿಪಲ್ಲಿ, ಮಣ್ಣೆಗುಡಂ (ಹೈದ್ರಾಬಾದ ಜಿಲ್ಲೆ); ಮಹಾರಾಷ್ಟ್ರದ ಲಾತೂರ, ದೇವಣಿ ಬಾರಾಮತಿ-ಪಡಾಪೂರ, ಸೊಲ್ಲಾಪುರ, ಸಿದ್ಧನಾಥ ಭಾಗಗಳಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ.

ಅನುಕರಣೆ-ಮೋಜಿಗಾಗಿ ತಿರುಗಿ ಹೊಟ್ಟೆಹೊರೆದುಕೊಳ್ಳುವ ವೃತ್ತಿಗೆ ಅಂಟಿಕೊಂಡದ್ದಕ್ಕೆ ಈ ಕವಲೆತ್ತಿನ ಆಟ ಉದಾಹರಣೆಯಾಗಿದೆ. ಕರ್ನಾಟಕದ ಹಲವಾರು ಹಳ್ಳಿಗಳಲ್ಲಿ ಇವರನ್ನು ಈಗಲೂ ಕಾಣಬಹುದಾಗಿದೆ. " It is human tendency both to intimate and to be pleased to got imitated, the result of the latter in the entertaining performances of the Kole Basava the trained bull, the monkey charmer, the bear player and the like, which are still seen in the villages all over Karnataka, "೮

ಕವಲೆತ್ತಿನವರು– ತಾವು ಕುರುಬರೆಂದೂ ಅವರಲ್ಲಿ 'ಹತ್ತಿ ಕಂಕಣ'ದವರೆಂದೂ ಹೇಳಿಕೊಳ್ಳುತ್ತಾರೆ. ಹತ್ತಿಯ ಕಂಕಣವನ್ನು ಲಗ್ನ ಕಾಲದಲ್ಲಿ ಕೈಯಲ್ಲಿ ಕಟ್ಟಿಕೊಳ್ಳುವ ಸಂಪ್ರದಾಯ ಇವರಲ್ಲಿ ಇದ್ದುದರಿಂದ ಈ ಹೆಸರು ಬಂದಿರುತ್ತದೆ. ತಾವು ಪೂಜಾರಿಗಳೆಂದೂ ಹೇಳುತ್ತಾರೆ. ಮೊದಲು ದೇವರಿಗೆ ಬಿಟ್ಟ ಕಪಲಿ, ಗೂಳಿಗಳನ್ನು ಈ ಪೂಜಾರಿಗಳು ತೆಗೆದುಕೊಂಡು ಸಾಕುತ್ತಿರಬೇಕು, ಅವುಗಳಿಗೆ ತರಬೇತಿ ನೀಡಿ ಆಟ ಆಡಿಸುತ್ತ ಹೊರಟಿರಬೇಕು.

ಇವರಲ್ಲಿ ಆವದೊಡ್ಡಿ, ಎರದೇಸೆಲ್ಲು, ಬಾಯ್ಕೊಸೆಲ್ಲು, ತಲಕೊಂಡೊಲ್ಲು, ಪೆದ್ದ ಮೈಸೊಲ್ಲು, ಜಿಡ್ಯೊಲ್ಲು ಹೀಗೆ ಹಲವಾರು ಗೋತ್ರಗಳಿರುತ್ತವೆ. ಇವರಿಗೆ ತೆಲುಗು ಭಾಷೆಯಲ್ಲಿ 'ಗಂಗೆದ್ದೊಳು' ಎಂದೂ ಮರಾಠಿಯಲ್ಲಿ 'ಕವತಿಚಿ–ನಂದಿವಾಲೆ' ಎಂದೂ ಕರೆಯುತ್ತಾರೆ.

## ೬. ಆಹಾರ :

ಕವಲೆತ್ತಿನವರ ಆಹಾರ ಮುಖ್ಯವಾಗಿ ಮಾಂಸ. ಆಗಾಗ ಬೇಟೆಯಾಡಲೂ ಹೋಗುತ್ತಾರೆ. ನರಿ, ಮೀನ, ಮೊಲ, ಕುರಿ, ಕೋಳಿಯ ಮಾಂಸ ತಿನ್ನುತ್ತಾರೆ. ಭಿಕ್ಷೆ ಬೇಡಿ ತಂದ ಆಹಾರ ಎಂಥದಿದ್ದರೂ ನಡೆಯುತ್ತದೆ. ಯಾವಕುಲದ ಮನೆಗೂ ಇವರು ಭಿಕ್ಷೆಗೆ ಹೋಗಬಹುದು. ಹಬ್ಬದ ಸಮಾರಂಭಗಳಲ್ಲಿ ದೇವರ ನೈವೇದ್ಯಕ್ಕೆಂದು ತಮ್ಮ ಗುಡಿಸಲುಗಳಲ್ಲಿಯೇ ಅಡಿಗೆ ತಯಾರಿಸುತ್ತಾರೆ. ದೇವರಿಗೆ ನೈವೇದ್ಯ ಹಿಡಿದು ಭಿಕ್ಷೆ ತಂದದ್ದನ್ನು ಕೂಡಿಸಿ ಆಮೇಲೆ ಉಣ್ಣುತ್ತಾರೆ.

## ೭. ಗುರುಸ್ಥಾನ :

ವರಂಗಲ್ಲ ಜಿಲ್ಲೆಯ (ಆಂಧ್ರ) ನಲಗೊಂಡಾ ಇವರ ಗುರುಸ್ಥಾನವಾಗಿರುತ್ತದೆ. ಇಲ್ಲಿಯ ಗುರುಗಳು ಕನಿಷ್ಠ ಪಕ್ಷ ಮೂರು ವರುಷಕ್ಕೊಮ್ಮೆ ಇವರಿದ್ದಲ್ಲಿಗೆ ಬಂದು ಕಾಣಿಕೆ ಸ್ವೀಕರಿಸಿ ಆಶೀರ್ವದಿಸಿ ಹೋಗುತ್ತಾರೆ. ಮದುವೆ ಮೊದಲಾದ ಮಂಗಲ

ಕಾರ್ಯಗಳು ನೇರವೇರಿದಲ್ಲಿ ಗಂಡಿನವರು ಒಂದು ರೂಪಾಯಿ ಹಾಗೂ ಹೆಣ್ಣಿನವರು ಎಂಟಾಣೆ ಕೊಡುವ ಪದ್ಧತಿಯುಂಟು. ಅದರಂತೆ ಪರುಷಕ್ಕೆ ಒಬ್ಬನಿಗೆ ಎರಡಾಣೆ ಯಂತೆ ಗುರುಕಾಣಿಕೆ ಸಲ್ಲಿಸುತ್ತಾರೆ. ಗುರುವಿನ ಪ್ರತಿನಿಧಿಗಳಾಗಿ ಇವರಲ್ಲಿಯೇ ಒಬ್ಬನು ಮುಖ್ಯಸ್ಥನಾಗಿರುತ್ತಾನೆ. ಇವನೇ ಇವರ ನ್ಯಾಯ, ವಿಧಿ, ಕರ್ಮ ವಗೈರೆ ನೆರವೇರಿಸಿ ಕೊಡುತ್ತಾನೆ. ಇವನಿಗೆ 'ಕಟ್ಟಿಮನಿ', 'ನಾಯುಗಲ್ಲು', 'ನಾಯುಡು', 'ಗೌಡ' ಎಂದೆಲ್ಲ ಕರೆಯುತ್ತಾರೆ. ಇವನೇ ಸರಪಂಚ ಇದ್ದ ಹಾಗೆ.

**೮. ದೈವ–ದೇವರು :**

ಇವರು ಶ್ರೀಶೈಲದ ಮಲ್ಲಿಕಾರ್ಜುನ, ತುಳಜಾಪುರದ ಅಂಬಾಭವಾನಿ, ತಿರುಪತಿಯ ವೆಂಕಟರಮಣ ಮೊದಲಾದ ದೇವರ ಪ್ರತಿಮೆಗಳನ್ನು ಇಟ್ಟು ಪೂಜಿಸುವರು, ವಾರಕ್ಕೆ ಎರಡು ಸಲ ಇಲ್ಲವೆ ಒಮ್ಮೆಯಾದರೂ ಸ್ನಾನಮಾಡಿ ದೇವರ ಪೂಜೆ ಮಾಡುತ್ತಾರೆ. ಇವರು ತಾವು ನೆಲೆಸುವ ಜಾಗದಲ್ಲಿ ಹತ್ತು ಮೊಳ ಬಿಟ್ಟು ತಮ್ಮ ದೇವರ ಧ್ವಜವನ್ನು ಊರುತ್ತಾರೆ. ದೇವರ ಪೂಜೆ ಪ್ರತಿಷ್ಠಾಪನೆಗೆ ನೇತ (ನೀತಿ) ಸರಿ ಇರಬೇಕು ಎನ್ನುತ್ತಾರೆ.

ಇವರ ಧ್ವಜ ಎರಡು ಬಣ್ಣಗಳಿಂದ ಕೂಡಿರುತ್ತದೆ. ಮೇಲ್ಗಡೆ ಕೆಂಪುಬಣ್ಣ, ಕೆಳಗಡೆ ಬಿಳಿಬಣ್ಣದಿಂದ ಕೂಡಿದ ಬಟ್ಟೆಗಳನ್ನು ಕೂಡಿಸಿ ಹೊಲಿದು ನಾಲ್ಕು ಮೊಳ ಉದ್ದದ ಗಳಕ್ಕೆ ಸಿಕ್ಕಿಸಿ ನೆಲದಲ್ಲಿ ಊರಿರುತ್ತಾರೆ. ಕೆಂಪು ಬಣ್ಣ ಮಲ್ಲಿಕಾರ್ಜುನನ ಸಂಕೇತ, ಬಿಳಿಯ ಬಣ್ಣ ವೆಂಕಟರಮಣನ ಸಂಕೇತವಾಗಿರುತ್ತವೆ. ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೊರಡುವಾಗ ಸ್ನಾನಮಾಡಿ ಮಡಿಯಿಂದ ಧ್ವಜವನ್ನು ಕಿತ್ತು ಹೊತ್ತುಕೊಂಡು ಹೋಗುತ್ತಾರೆ. ಇವರು ಮಸ್ಕಿ-ಮುದಗಲ್ಲದ (ರಾಯಚೂರಜಿಲ್ಲಾ) 'ಹುಸೇನ ಬಾಶ್ಯಾ'ನಿಗೂ ನಡೆದುಕೊಳ್ಳುತ್ತಾರೆ. ಈ ದೇವರಿಗೆ ಜೋಡಬ್ಯಾಟಿ ಕೊಡುತ್ತಾರೆ. 'ಕಂದೂರಿ' ಮಾಡಿ ಕೂಡಿದ ಜನರಿಗೆ ಊಟಹಾಕಿ ಹರಕೆ ತೀರಿಸಿ ಬರುತ್ತಾರೆ. ಇದರಿಂದ ತಮ್ಮ ರೋಗ–ರುಜಿನಗಳು ಹೋಗುತ್ತವೆಂದು ಇವರ ನಂಬುಗೆ.

ಈ ನಾಲ್ಕು ದೇವರಲ್ಲದೆ 'ರಾಮತಾತಾ' ತಮಗೆ ಕುಲದೇವತೆ ಎನ್ನುತ್ತಾರೆ. ರಾಮತಾತಾನ ವಂಶದವರೇ ತಾವೆಂದು ಹೇಳುತ್ತಾರೆ. ಈಗಲೂ ನಾಗರಪಂಚಮಿಯ ಹಬ್ಬವಾದ ಐದು ದಿನಕ್ಕೆ 'ರಾಮತಾತಾ'ನ ಹಬ್ಬ ಮಾಡುತ್ತಾರೆ.

'ರಾಮತಾತಾ' ಈ ಜನಾಂಗದ ಕುಲದೇವತೆ. ಅವನೊಬ್ಬ ಐತಿಹಾಸಿಕ ಮಹಾನುಭಾವ. 'ರಾಮು' ಎಂಬ ಹೆಸರಿನ ಗೊಲ್ಲನು ಎತ್ತು ತೆಗೆದುಕೊಂಡು ಹೋದವನು ತಿರುಗಿ ಬರಲೇ ಇಲ್ಲ. ಕುರುಬರ ಕನ್ಯೆಯನ್ನು ಲಗ್ನವಾಗಿ–ವೈರಿಗಳಿಂದ–ಕೊಲ್ಲ

ಲ್ಪಟ್ಟವನಿವನು. ಒಮ್ಮೆ ತಾಯಿಯ ಕನಸಿನಲ್ಲಿ ಬಂದು ತನ್ನ ಸಾವಿನ ಕಥೆಯನ್ನು ಹೇಳಿದಾಗಲೇ ತಾಯಿ–ತಂದೆ ಹಾಗೂ ಬಳಗದವರಿಗೆ ಈತನು ಸತ್ತ ವಿಷಯ ಗೊತ್ತಾದದ್ದು. ಇಂಥಾ 'ಕಂಟಿ'ಯಲ್ಲಿ ನನ್ನನ್ನು ಕೂದಲುಗಳಿಂದ ಫಾಶಿ ಹಾಕಿದ್ದಾರೆ. ಅಲ್ಲಿ ನನ್ನ ಎಲುಬಿನ ಚೂರು ನಿಮಗೆ ಕಾಣಿಸಬಹುದು. ನೀವು ಆ ವೈರಿಗಳಿಗೆ ಏನೂ ಮಾಡಬೇಡಿರಿ. ನಾನೇ ನೋಡಿಕೊಳ್ಳುವೆ—ಅವರಿಗೆ ಯೋಗ್ಯ ಶಿಕ್ಷೆ ಆಗುತ್ತದೆ, ಎಂದು ಕನಸಿನಲ್ಲಿ ಹೇಳಿದಾಗ ಮನೆಯವರೆಲ್ಲ ಸೇರಿ ಆ ಸ್ಥಳಕ್ಕೆ ಹೋಗಿ ನೋಡುತ್ತಾರೆ, ಅಲ್ಲಿ ಎಲುಬಿನ ಚೂರು ಬಿದ್ದದ್ದು ನಿಜವಿರುತ್ತದೆ. ತಿರುಗಿ ಮನೆಗೆ ಬಂದು ಮುಟ್ಟುವಷ್ಟರಲ್ಲಿ ಆತನನ್ನು ಕೊಂದವರೂ ಸತ್ತುಬಿಟ್ಟಿರುತ್ತಾರೆ. ಅಂದಿನಿಂದ ಈತನನ್ನು ಕವಲೆತ್ತಿನವರು ತಮ್ಮ ಕುಲದೇವತೆಯೆಂದು ಪೂಜಿಸುತ್ತ ಬಂದಿದ್ದಾರೆ. ವೆಂಕಟರಮಣನ ಅವತಾರವೆಂದೂ ಹೇಳುತ್ತಾರೆ.

'ರಾಮುತಾತಾ' ಈಗಲೂ ಈ ಜನರ ಮೈಯಲ್ಲಿ ಬರುತ್ತಾನೆ. ಹೇಳಿದಂತೆ ನಡೆಯುತ್ತೇವೆ ಎಂಬ ವಚನದೊಂದಿಗೆ ಮಾಯವಾಗುತ್ತಾನೆ. ಯಾವದೇ ರೋಗ–ರುಜಿನಗಳು ತಗುಲಿದರೆ ಈತನಿಗೆ ಬೇಡಿಕೊಳ್ಳುತ್ತಾರೆ, ಹರಕೆ ಹೊರುತ್ತಾರೆ. ಕವಲೆತ್ತಿಗೆ 'ರಾಮುತಾತಾ' ಎಂಬ ಹೆಸರನ್ನಿಟ್ಟು ನೆನೆಯುತ್ತಾರೆ. ಈ 'ಕಸಬು' ಹುಟ್ಟಿಬಂದುದಕ್ಕೆ ಇನ್ನೂ ಒಂದು ಕಥೆ ಕೇಳಬರುತ್ತದೆ. ಇದಕ್ಕೆ–ಆಂಧ್ರ ಪ್ರದೇಶದ ಒಂಗೋರ ಜಿಲ್ಲೆಯ ಗಿದಲೂರು ತಾಲೂಕು 'ಲಕ್ಕಪಲ್ಲಿ' ಗ್ರಾಮದ ರಂಗಪ್ಪ ಹೇಳಿದ ಮಾತನ್ನು ಉಲ್ಲೇಖಿಸಬಹುದು. ( ಕನ್ನಡ ಪ್ರಭ–ದೈನಿಕ. ೧೯ನೆಯ ನವ್ಹಂಬರ ೧೯೭೮. ಪುಟ III & IV. D.)

ಒಂದಾನೊಂದು ಕಾಲದಲ್ಲಿ ವ್ಯಾಘ್ರಾಸುರ ಎಂಬೊಬ್ಬ ದೈತ್ಯ ಇದ್ದ. ತುಂಬ ಬಲಶಾಲಿ. ಭಾರಿ ತಪಸ್ಸು ಮಾಡಿ ಶಂಕರ ದೇವನನ್ನು ಮೆಚ್ಚಿಸಿದ, ಯಾರಿಂದಲೂ ಸಾವುಬರಬಾರದೆಂದು ವರ ಪಡೆದ, ಅಂದಿನಿಂದ ಅವನ ಪೀಡೆ ಜಾಸ್ತಿಯಾಯಿತು. ಋಷಿಗಳು, ದೇವತೆಗಳು ಇವನ ಉಪಟಳವನ್ನು ಸಹಿಸದಾದರು. ದೇವತೆಗಳೆಲ್ಲ ವಿಷ್ಣುವಿನ ಮರೆಹೊಕ್ಕರು. ವಿಷ್ಣು ಬ್ರಹ್ಮನನ್ನು ತೋರಿಸಿದ. ಬ್ರಹ್ಮನಲ್ಲಿಗೆ ಹೋದಾಗ ಆತ ಶಿವನನ್ನು ತೋರಿಸಿದ. ಶಿವ ದೇವತೆಗಳ ಅಹವಾಲು ಕೇಳಿ ರಾಕ್ಷಸ ಸಂಹಾರಕ್ಕೆ ನಂದಿಯನ್ನು ತಯಾರು ಮಾಡಿದ. ವಿಷ್ಣುವೂ ನೆರವಿಗೆ ಬಂದ, ನಂದಿ ಎತ್ತಿನ ರೂಪ ಹೊಂದಿದ. ಶಿವ ವಾಲಿಗ ಬಾರಿಸುವವನಾದ. ವಿಷ್ಣು ಬಸವನಾಡಿಸುವವನಾದ. ಸುದರ್ಶನ ಚಕ್ರ ಘಂಟೆಯಾಯಿತು. ಎಲ್ಲರೂ ರಾಕ್ಷಸ ಲೋಕಕ್ಕೆ ಅವತರಿಸಿದರು. ಅಲ್ಲಲ್ಲಿ ಬಸವನ ಆಟ ಆಡಿಸುತ್ತ ವ್ಯಾಘ್ರಾಸುರನ ಆಸ್ಥಾನ ಪ್ರವೇಶಿಸಿದರು. ಅಸುರನಿಗೂ ಕುತೂಹಲ ಹುಟ್ಟಿತು. ಆಟ ತೋರಿಸಲು ಹೇಳಿದನು. ಬಗೆ ಬಗೆಯ ಆಟ ತೋರಿಸಿದರು. ದೈತ್ಯನಿಗೆ ಬಹಳ ಖುಷಿಯಾಯಿತು. "ಬೇಕಾದುದನ್ನು ಬೇಡಿಕೊಳ್ಳಿ" ಅಂದ. 'ನೀನು ಸೂಡಿರುವ ಕೊಡೆ ಕೊಡು' ಅಂದ ವಾಲಗದ ಮನುಷ್ಯ.

ದೈತ್ಯನಿಗೆ ಸಿಟ್ಟು ಬಂತು. ಒಂದೇ ತುತ್ತಿಗೆ ವಾಲಗದವನನ್ನು ನುಂಗಿಬಿಟ್ಟ. ಆಮೇಲೆ 'ನಿನಗೆ ಬೇಕಾದುದನ್ನು ಕೇಳು' ಎಂದು ಆಟ ಆಡಿಸುವವನಿಗೆ ಹೇಳಿದ. 'ನೀನು ಕುಳಿತಿರುವ ಗದ್ದುಗೆ ಬೇಕು' ಅಂದ. ಅವನ ಮೇಲೂ ಸಿಟ್ಟು ಬಂತು. ನುಂಗಿಯೇ ಬಿಟ್ಟ. ಅಷ್ಟರಲ್ಲಿ ಬಸವ ಹೂಂಕರಿಸಿತು. 'ನಮ್ಮವರಿಬ್ಬರನ್ನು ನುಂಗಿದೆ; ನಿನ್ನನ್ನು ಸುಮ್ಮನೆ ಬಿಡುವುದಿಲ್ಲ' ಎಂದು ಹಾಯಲು ಮುಂದಾಯಿತು. ನಿನ್ನನ್ನು ಬಿಡುವುದೇನು? ಎಂದು ರಾಕ್ಷಸ ಅದನ್ನು ನುಂಗಿ ನೀರುಕುಡಿದ. ಹೊಟ್ಟೆ ಸೇರಿದರೂ ಮೂವರೂ ಸಾಯಲಿಲ್ಲ. ಅಲ್ಲೇ ಕೋಲಾಹಲ ಎಬ್ಬಿಸಿದರು. ವಿಷ್ಣು ತನ್ನ ಘಂಟೆಯಿಂದ ಅಸುರನ ಹೊಟ್ಟೆಯನ್ನು ಬಗೆದ. ಶಿವ ತನ್ನ ಡಮರಿನ ಕೋಲಿನಿಂದ ಹೊಟ್ಟೆಯನ್ನು ಭೇದಿಸಿದ. ಬಸವ ಅಸುರನ ಕರುಳು ಮಾಲೆಯನ್ನು ಕೋಡಿಗೆ ಸುತ್ತಿಕೊಂಡು ಹೊರಬಂದಿತು, ಜತೆಗೆ ಉಳಿದಿಬ್ಬರೂ ಹೊರಬಂದರು. ರಾಕ್ಷಸ ಸತ್ತುಬಿದ್ದ, ಶಿವ, ವಿಷ್ಣು, ನಂದಿ ಇವರ ಕೆಲಸವಾಯಿತು. ದೇವತೆಗಳಿಗೆ ನೆಮ್ಮದಿಯುಂಟಾಯಿತು." ಅಂದಿನಿಂದಲೂ ದುಷ್ಟರ ಸಂಹಾರಕ್ಕಾಗಿ, ಪೀಡೆ ಕಳೆಯುವುದಕ್ಕಾಗಿ ಈ ಆಟ ಆಡಿಸುತ್ತ ಬಂದಿದ್ದಾರೆ ಎಂದು ಈ ವಂಶದವರು ಇಂಥ ದಂತಕಥೆ ಹೇಳುವ ವಾಡಿಕೆಯಿದೆ.

ರಾಮು ತಾತಾನ ಹಬ್ಬವಲ್ಲದೆ ಕವಲೆತ್ತಿನವರು ದೀಪಾವಳಿ, ದಸರೆ, ಯುಗಾದಿ ಹಾಗೂ ಅಲಾಯಿ ಹಬ್ಬಗಳನ್ನೂ ಆಚರಿಸುತ್ತಾರೆ. ಈ ಸಂದರ್ಭಗಳಲ್ಲಿ ಜಾನಪದ ಹಾಡು ಹಾಡಿ ಕುಣಿದಾಡುತ್ತಾರೆ.

ಕಾಡುಗೊಲ್ಲರ ಕುಲದ ನಾಲ್ಕನೆಯ ತಲೆಯವನೆಂದು ಹೇಳಲಾದ ಜುಂಜಪ್ಪನ ಕಥೆಯನ್ನು ಇಲ್ಲಿ ನೆನೆಯಬಹುದು. ಅವನ ಹೆಸರಿನ ಜಾನಪದ ಕಥೆಯೊಂದು ಉತ್ಕೃಷ್ಟ ಕಾವ್ಯವಾಗಿದೆ. ಈ ಕಾವ್ಯದಿಂದ ಇವನ ಕುಲದಲ್ಲಿ ಮೂರುಸೂರು ಗೊಲ್ಲರ ಕುಲಗಳು ಇದ್ದವೆಂದೂ ಆ ರಾಜ್ಯಕ್ಕೆ ಈತನು ಒಡೆಯನಾಗಿದ್ದನೆಂದೂ ತಿಳಿದು ಬರುತ್ತದೆ.

"ಓದು ತಗದು ಮಗನೆ ಕುಲವ ಕೂಡಿಸಯ್ಯ – – – – – – – – –
ಚೆದರಿನ ಮುನ್ನೂರು ಗೊಲ್ಲಕುಲವನ್ನು ಮತ್ತೆ ಕೂಡಿಸುವಂತೆ ತನಗೆ ಅಪ್ಪಣೆಯಾಗಿದೆ."[೯]
ರಾಮು ತಾತಾನ ಕಥೆಯೂ ಹೀಗೆಯೆ ಇದೆ. ಈತನ ಕುರಿತಾದ ಹಾಡು, ಕಥೆಗಳ ಶೋಧ ನಡೆಯಬೇಕಾಗಿದೆ. ಇವರು ಸಾತ್ವಿಕ ಹಾಗೂ ದೈವೀಭಕ್ತರು. ನಡೆನುಡಿಗಳಲ್ಲಿ ವಿನಯ ಶೀಲರೂ ಆಗಿರುತ್ತಾರೆ.

**೯. ವಿಧಿ-ಕರ್ಮಗಳು :**

ಕವಲೆತ್ತಿನವರಲ್ಲಿ ಒಬ್ಬನು ಬೇಕಾದಷ್ಟು ಲಗ್ನವಾಗಬಹುದು. ಉಡಕಿ ಪದ್ಧತಿಯೂ ಜಾರಿಯಲ್ಲಿದೆ. ಸೋಡಪತ್ರ ಕೊಡುವ ಪದ್ಧತಿ ಇಲ್ಲ.

ವಿಧವೆಯಾದವಳು ಬಳೆ, ಕುಂಕುಮ, ಗುಳದಾಳಿ, ಮೂಗುಬಟ್ಟುಗಳನ್ನು ಧರಿಸುವದಿಲ್ಲ. ತೀರ ಚಿಕ್ಕ ವಯಸ್ಸಿನಲ್ಲಿಯೇ ಲಗ್ನ ಮಾಡುವ ಪದ್ಧತಿ ಇದೆ. ವರದಕ್ಷಿಣೆ ಇಲ್ಲ. ವರಪಕ್ಷದವರು ವಧುಪಕ್ಷದವರಿಗೇನೆ ಒಂದು ಕನ್ನೆಗೆ ೩೨ರೂಪಾಯಿ 'ತೆರವು' ಕೊಡಬೇಕಾಗುತ್ತದೆ. ಉಡಕಿ ಹೆಣ್ಣಿಗೆ ಇದರ ಅರ್ಧ–೧೬ರೂಪಾಯಿ ಕೊಡುವದುಂಟು.

ಮದುವೆಯ ಕಾಲಕ್ಕೆ ಗಂಡಿನವರು ಮೂರು ಮತ್ತು ಹೆಣ್ಣಿನವರು ಎರಡು ಊಟಕೊಡುವ ಪದ್ಧತಿ ಇದೆ. ಉಟಕ್ಕೆ ಮಾಂಸ, ಶಾಖಾಹಾರ, ಕೊನೆಗೆ ಮದ್ಯವೂ ಬೇಕು.

ಇವರಲ್ಲಿ ಹುಟ್ಟಿದ ಕೂಸಿಗೆ ಹೆಸರಿಡುವ ಕಾರ್ಯವನ್ನು ಸೊದರತ್ತೆ ನಡೆಸಿ ಕೊಡುತ್ತಾಳೆ. ಅವಳಿಲ್ಲದಿದ್ದಲ್ಲಿ ಬಾಣಂತಿತನ ಮಾಡಿದ ಹಿರಿಯ ಹೆಣ್ಣುಮಗಳು ಹೆಸರಿಡುತ್ತಾಳೆ. ಕನ್ಯೆ ಮೈನೆರೆದಾಗ ಹನ್ನೆರಡು ದಿನ ಸೂತಕ ಆಚರಿಸುತ್ತಾರೆ. ಸೋಬಾನ ಕಾರ್ಯಮಾಡುತ್ತಾರೆ. ತೆಲಗು ಭಾಷೆಯ ಹಾಡು ಆಗ ಹೇಳುತ್ತಾರೆ. ಇಲ್ಲವೆ ಆಯಾ ಪ್ರಾಂತದ (ಕನ್ನಡ, ಮರಾಠಿ, ಮುಂ.) ಭಾಷೆಯಲ್ಲಿ ಬಳಕೆಯಲ್ಲಿದ್ದ ಹಾಡುಗಳನ್ನು ಹೇಳುತ್ತಾರೆ. ಹೆಣ್ಣುಮಕ್ಕಳು ಹೊರಗೆ ಕುಳಿತಾಗ ಐದನೆಯ ದಿನಕ್ಕೆ ತಲೆಯ ಮೇಲೆ ನೀರು ಹಾಕಿಕೊಂಡು ಒಳ–ಬರುತ್ತಾರೆ. ಸತ್ತಾಗ ಮೂರು ದಿನಕ್ಕೆ 'ಮೂರ್ರೊಳ್' ಮಾಡುತ್ತಾರೆ. ಹನ್ನೊಂದನೆಯ ದಿನಕ್ಕೆ 'ದೊಡ್ಡ ದಿನ' ಮಾಡುತ್ತಾರೆ. ಮೂರ್ರೊಳಿಗೆ ಕೋಳಿತತ್ತಿ ಪಲ್ಯಾ ಇಡುವ ವಾಡಿಕೆ. ದೊಡ್ಡ ದಿನದಂದು ಕುರಿ ಕಡಿದು ಬಳಗದವರನ್ನು ಕರೆತಂದು ಉಣಿಸುತ್ತಾರೆ. ಈ ಎಲ್ಲ ವಿಧಿ ಕರ್ಮಗಳನ್ನು ನಡೆಸಿಕೊಡಲು ಗುರುವಿನ ಪರವಾಗಿ ಈ ಬಳಗದ ಹಿರಿಯನಿರುತ್ತಾನೆ. ಕೆಲವೊಂದು ಕಡೆಗೆ ಬ್ರಾಹ್ಮಣರನ್ನು, ಜಂಗಮರನ್ನೂ ಕರೆಯುವ ಪರಿಪಾಠವಿರುತ್ತದೆ. ಬಹುಶಃ ಅಲ್ಲಿ ಈ ಜನಾಂಗದವರು ಕಡಿಮೆಜನ ಇರಬೇಕು. 'ಬೆಳಗಾವಿ ಜಿಲ್ಲೆಯ ಗೊಲ್ಲರು – – – – –ಲಗ್ನಕಾರ್ಯಕ್ಕೆ ಬ್ರಾಹ್ಮಣರನ್ನು ಕರೆಯುವರು. ಮರಣ ಸಂಸ್ಕಾರಕ್ಕೆ ಜಂಗಮನನ್ನು ಕರೆಯುವರು.'[೧೦]

ಇವರಲ್ಲಿ ಹೆಣಗಳನ್ನು ಸುಡುವದಿಲ್ಲ, ಹುಗಿಯುತ್ತಾರೆ. ಮುಸಲ್ಮಾನರ ಹಾಗೆ ಉದ್ದವಾಗಿ ತಗ್ಗು ತೋಡಿ ಮಲಗಿಸಿ ಮಣ್ಣು ಮುಚ್ಚುತ್ತಾರೆ. ಆದರೆ ಶಾಸ್ತ್ರ ಗೊಲ್ಲರು ವೀರಶೈವರ ಹಾಗೆ ಆಳತಗ್ಗು ತೋಡಿ ಅಲ್ಲಿ ಒಳಗೆ 'ಮಾಡ' ಮಾಡಿ ಅದರೊಳಗೆ ಹೆಣವನ್ನು ಕೂಡ್ರಿಸಿ ಮಣ್ಣು ಮುಚ್ಚುತ್ತಾರೆ.

ಪುರುಷರು ತಲೆಕೂದಲು ಬೋಳಿಸಿಕೊಳ್ಳುವದಿಲ್ಲ. ಮೀಸೆ ತೆಗೆಯುವದಿಲ್ಲ. ಒಂದು ವೇಳೆ ಮೀಸೆ, ತಲೆಗೂದಲು ಬೋಳಿಸಿಕೊಂಡರೆ ಕುಲದಿಂದ ಹೊರ ಹಾಕು

ತ್ತಾರೆ. ಹೆಂಡತಿ ಸತ್ತಾಗ ಮಾತ್ರ ಮೀಸೆ ಬೋಳಿಸಿ ಮನೆಗೆ ಕರೆತರುತ್ತಾರೆ. ಇವರು ಕಪಿಲೆ-ಬಸವನನ್ನು ಕಟುಕರಿಗೆ ಮಾರುವದಿಲ್ಲ. ಮಾರಿದರೆ ದಂಡ ಹಾಕುತ್ತಾರೆ. ಅಷ್ಟೇ ಅಲ್ಲ ಹನ್ನೊಂದು ವರುಷ ಅವರನ್ನು ಕುಲದಿಂದ ಹೊರಹಾಕುತ್ತಾರೆ. ಇವರಲ್ಲಿ ತುಡುಗುತನ ಬಡಿದಾಟ ಹೊಡೆದಾಟ ಇಲ್ಲ. ಇಂಥವರ ಪತ್ತೆಯಾದರೆ ಕುಲದಿಂದ ಹೊರಗೇ ಹಾಕುತ್ತಾರೆ. ಹೆಣ್ಣುಮಕ್ಕಳು ಹಾದರಕ್ಕಿಳಿಯುವದಿಲ್ಲ. ಒಂದು ವೇಳೆ ಅಂಥವರು ಕಂಡು ಬಂದರೆ ಯಾರೇ ಇರಲಿ ಅವರಿಗೆ ಹಿರಿಯನು ಥೂ-ಛೀ-ಹಾಕಿ ಬುದ್ಧಿಹೇಳಿ ಮತ್ತೆ ಕುಲದಲ್ಲಿ ಬರಮಾಡಿಕೊಳ್ಳಲು ಹೇಳುತ್ತಾನೆ.

ಕಾಡುಗೊಲ್ಲರು ಆಚರಿಸುವ ಕೆಳಗಿನ ಸೂತಕಗಳನ್ನು ಕವಲೆತ್ತಿನವರೂ ಆಚರಿಸುವರು.

"ನಾರಿ ಮುತ್ತೈದೇರಿಗ ಮೂರು ತಿಂಗಳ ಸೂತಕ
ಕಾಲು ವಳ್ಳ ಸೂತಕ ನಾಲಕು ದಿವಸಂತೆ
ಜರಣಾದ ಸೂತಕ ಮೂರು ತಿಂಗಳಂತೆ
ನಡೆತಪ್ಪಿನ ಸೂತಕ ಕೈ ಬಿಟ್ಟೆ ಕಳಿಸ್ಯವರೆ
ನೆರೆದ ಸೂತಕ ಹನ್ನೆರಡೆ ದಿವಸ್ಸವೂ"೧೧

ಕವಲೆತ್ತು ಆಡಿಸಲು ಹೊರಟಾಗ ಬೆಕ್ಕು, ಕಾಗೆ. ಅಡ್ಡ ಬಂದರೆ ಅಪಶಕುನ ಎಂದು ಕೆಲಹೊತ್ತು ನಿಂತು ಮುಂದೆ ಸಾಗುತ್ತಾರೆ. ಹಿಂದೂ ಧರ್ಮದವರಲ್ಲಿದ್ದ ಉಳಿದೆಲ್ಲ ಕುರುಡು ನಂಬಿಗೆಗಳೂ ಇವರಲ್ಲಿ ಕಾಣಬರುತ್ತವೆ.

ಗಂಗೆತ್ತು ದಾನಿಗಳ ಮನೆಯನ್ನು ಪ್ರವೇಶಿಸುವಾಗ ಬಲಗಾಲನ್ನಿಟ್ಟು ಪ್ರವೇಶಿಸಿದರೆ ಶುಭಲಕ್ಷಣವೆಂದು ಜನ ಭಾವಿಸುವರು. ಅದಕ್ಕೆಂದು ಕವಲೆತ್ತಿನವರನ್ನು ಸ್ವಾಗತಿಸುವರು.

## ೧೦. ವೇಷ ಭೂಷಣ :

ಹೆಣ್ಣು ಮಕ್ಕಳು ಬಲಕ್ಕೆ ಸೆರಗು ಹಾಕುತ್ತಾರೆ. ಕುಬಸ ತೊಡುತ್ತಾರೆ. ಗಂಡು ಮಕ್ಕಳ ವೇಷ ದಕ್ಷಿಣ ದೇಶದವರಂತೆ ಒಂದು ಧೋತರ, ಅಂಗಿ, ಕೋಟು, ರುಮಾಲು ಸುತ್ತಿರುತ್ತಾರೆ. ಮೇಲೆ ಒಂದು ಸೆಲ್ಲೆ ಹೊತ್ತಿರುತ್ತಾರೆ. ಕೈಯಲ್ಲಿ ಹಿತ್ತಾಳಿ, ತಾಮ್ರ, ಇಲ್ಲವೆ ಬೆಳ್ಳಿಯ ಉಂಗುರಗಳನ್ನು ಧರಿಸಿರುತ್ತಾರೆ. ತಮ್ಮ ಬಟ್ಟೆ--ಬರೆಗಳಿಗಾಗಿ ಇವರು ಪೇಟೆಗೆ ಹೋಗುವದಿಲ್ಲ. ಊರ ಜನರಿಂದ ಬೇಡಿ ತಂದವುಗಳನ್ನೇ ಮೈಗೆ ಹಾಳತ ಆಗುವಂತೆ ಸರಿಪಡಿಸಿಕೊಂಡು ತೊಟ್ಟುಕೊಳ್ಳುತ್ತಾರೆ.

ತಮ್ಮ ಎತ್ತು ಆಕಳುಗಳಿಗೂ, ಜನರಿಂದ ಬೇಡಿ ಪಡೆದ ಬಟ್ಟೆಗಳನ್ನೇ ತೊಡಿಸುತ್ತಾರೆ. ರುಮಾಲು ಹಾಕುತ್ತಾರೆ. ಕೊಂಬುಗಳಿಗೆ ಅಣಸುಹಾಕಿ ಕೋಡು ಗಿಪ್ಪ

ಇದ್ದರೂ ಅರಿವೆಸುತ್ತಿ, ಕಿಲಾರಿ ಹೋರಿಗಳಂತೆ ಉದ್ದ ಮಾಡುತ್ತಾರೆ. ಹಣೆಗೆ ಹಣೆ ಪಟ್ಟಿ, ಕೊರಳಲ್ಲಿ ಮರಿಗೆಜ್ಜೆ ಸರ, ಗಂಟೆ ಅಲ್ಲದೆ ಕಾಲಲ್ಲಿ ಕಡಗ, ಗಗ್ಗರಿ ಮತ್ತು ಗೆಜ್ಜೆ ಕಟ್ಟಿರುತ್ತಾರೆ. ಆಕಳ ಬೆನ್ನ ಮೇಲೆ 'ಕಂಟ್ಲಿ' ಒಂದನ್ನು ಇಳಿಬಿಟ್ಟಿರುತ್ತಾರೆ. ದಾನಿಗಳು ಕೊಟ್ಟ ಕಾಳು-ಕಡಿಗಳನ್ನು ಬೆನ್ನ ಮೇಲಿಂದ ಎರಡೂ ಬದಿಯಲ್ಲಿ ಜೋತುಬಿದ್ದಿರುವ 'ಕಂಟ್ಲಿ'ಯಲ್ಲಿ ತುಂಬುತ್ತಾರೆ.

## ೧೧. ಆಟದ ವಿಧಾನ :

ಬಸವಣ್ಣನನ್ನು ಆಡಿಸುವವರು ಹೆಚ್ಚಾಗಿ ಗಂಡಸರೇ ಇರುತ್ತಾರೆ. ಸಿಂಗರಿಸಿದ ಕವಲೆತ್ತುಗಳೊಂದಿಗೆ ಬುರ್ ಬುರ್ ಎಂದು ಡೋಲು ಬಾರಿಸುತ್ತ ಮನೆ ಮನೆ ತಿರುಗುತ್ತಾರೆ. ಆಟ ಆಡಿಸುವವನಿಗೆ ಗಂಡಸರು ಮತ್ತೆ ಇಲ್ಲದಿದ್ದಾಗ ಹೆಣ್ಣುಮಕ್ಕಳನ್ನೂ ಜೊತೆಗೆ ಕರೆದೊಯ್ಯುತ್ತಿರುತ್ತಾರೆ.

ಈ ಕವಲೆತ್ತಿನ ಆಟದಲ್ಲಿ ಎರಡು ಬಗೆಗಳಿವೆ. ಒಂಟಿ ಎತ್ತು ತೆಗೆದುಕೊಂಡು ಆಟವಾಡಿಸುವುದು ಒಂದು ಬಗೆಯಾಗಿದೆ. ಎರಡೆತ್ತು ಒಂದು ಆಕಳು ಮತ್ತು ಕರು ತೆಗೆದುಕೊಂಡು ಆಡಿಸುವ ಆಟ ಎರಡನೆಯ ಪ್ರಕಾರದ್ದೆಂದು ಹೇಳಬಹುದು. ಒಂಟೆತ್ತಿನ ಆಟ ಮನೆಮನೆಗೂ ಸಾಗುತ್ತದೆ. ಎರಡನೆಯದು ಬಯಲು ಜಾಗದಲ್ಲಿ ನಡೆಯುತ್ತದೆ. ಕವಲೆತ್ತುಗಳಿಗೆ ಒಂದಕ್ಕೆ ರಾಮತಾತಾ ಎಂದು ಇನ್ನೊಂದಕ್ಕೆ ಲಕ್ಷ್ಮಣ ಎಂದೂ ಕರೆದರೆ ಆಕಳಿಗೆ ಸೀತೆ ಎಂದೂ ಕರುವಿಗೆ ವಿದೂಷಕ ಎನ್ನುತ್ತಾರೆ. ರಾಮಾಯಣದ ಕಥೆ ಹೇಳುತ್ತ ಆಟ ಪ್ರಾರಂಭಿಸುತ್ತಾನೆ. ಆಟದ ಮಾತುಗಳನ್ನು ಚುರುಕಾಗಿ ಹೇಳುತ್ತ, ಹಾಡಿನ ಧಾಟಿಯಂತೆಯೇ ನುಡಿಯುತ್ತಾನೆ. ಡೋಲು, ಸನಾಯಿ, ಸುತಿಗಳ ನಾದ, ತಾಳಗಳಲ್ಲಿ ಎರಕಹೊಯ್ಯುತ್ತಾನೆ. ಆಗ ಈ ಆಟ ಮೋಜಿನದೆನಿಸಿ ಜನರನ್ನು ಆಕರ್ಷಿಸುತ್ತದೆ. ಇದನ್ನು ಆಡಿಸುವ ಕಲೆ ಇವರಿಗೆ ವಂಶಪಾರಂಪರ್ಯವಾಗಿ ಬಂದಿರುತ್ತದೆ.

ಒಂಟೆತ್ತು ಆಡಿಸುವಾಗ ಒಬ್ಬನೆ ಗೊಲ್ಲನಿರುತ್ತಾನೆ. ಆತನೇ ಡೋಲು ಬಾರಿಸುತ್ತ, ಸನಾಯಿ ಮತ್ತು ಸುತಿ ಊದುತ್ತಾನೆ. ಎರಡನೆಯ ಪ್ರಕಾರದ ಆಟದಲ್ಲಿ ಮೂರರಿಂದ ನಾಲ್ಕು ಜನರಾದರೂ ಇರುತ್ತಾರೆ. ಒಬ್ಬನು ಡೋಲು ಬಾರಿಸುತ್ತಾನೆ. ಮತ್ತೊಬ್ಬ ಕಥೆ ಹೇಳುತ್ತ ಕವಲೆತ್ತನ್ನು ಆಟವಾಡಿಸುತ್ತಾನೆ. ಇನ್ನಿಬ್ಬರು ಸನಾಯಿ, ಸುತಿ ಊದುತ್ತಾರೆ. ಆಟದ ಜೊತೆಗೆ ತಮ್ಮ ಮಕ್ಕಳನ್ನೂ ಕರೆದೊಯ್ಯುತ್ತಾರೆ.

ಕವಲೆತ್ತು ಆಡಿಸುವವನು 'ಆಟಾ ಮಾಡತಿ ಏನಂತಿ ?' ಎಂದು ಕೇಳಿದಾಗ ಎತ್ತು ಗೋಣುಹಾಕುತ್ತದೆ.

'ಗೌಡ್ರು ದಾನಾ ಕೊಡೊ ಕೈ ತೋರಿಸು' ಎಂದಾಗ ಅದು ಬಲಗಾಲನ್ನೆತ್ತುತ್ತದೆ.

'ಪಾಪದ ಕೈ ತೋರಿಸು' ಅಂದಾಗ ಎಡಗಾಲು ಎತ್ತುತ್ತದೆ. 'ಮಕ್ಕಳ ಸಂತಾನ ಹೆಚ್ಚಾಗಲಿ, ಜೋಗುಳ ಹಾಡು' ಎಂದಾಗ ಕವಲೆತ್ತು ನಾಲ್ಗೆ ತೆಗೆಯುತ್ತದೆ. ಹೀಗೆ ಆಟ ಆಡಿಸುತ್ತಿದ್ದಾಗ ಮನೆಯವರು ಕಾಳು ಇಲ್ಲವೆ ಬಟ್ಟೆ ಕೊಟ್ಟರೆ—

'ಗೌಡ್ರ ಹರಕ್ಯಾಗ್ಲಿ, ಕೊಡಾವ್ರು ತಾಯ್ತಂದಿ, ಕೊಡಲಾದವ್ರು ತಾಯ್ತಂದಿ, ಒಂದ ಮನಿಗಿ ಹತ್ತ ಮನಿ ಆಗ್ಲಿ, ಹತ್ತ ಮನಿಗಿ ಇಪ್ಪತ್ತ ಮನಿ ಆಗ್ಲಿ—ನಮಗ ಯಾವಾಗ ಬಂದ್ರೂ—ಹಿಂಗೇ ಕೊಡೋಹಾಂಗ ಆಗ್ಲಿ, ಗೌಡ್ರಗೆ,- ಗೌಡ್ತಿಗೆ ಹರಕಿ ಮಾಡು' ಎಂದಾಗ ಕವಲೆತ್ತು ಒಂದು ಕಾಲೂರಿ ತಲಿ ತೆಳಗಹಾಕಿ ನಮಸ್ಕಾರ ಮಾಡುತ್ತದೆ.

"ಹೋಗಿ ಬರ್ತೀವಿ ಗೌಡ್ರಾ ಹರಕಿ ಆಗ್ಲಿ ಮತ್ತ ಮುಂದಿನ ವರಸ ಬರ್ತೇವ್ರ— ಒಂದ ಆಕಳಕರಾ ಆರೆ. ಹೋರಿ ಆರೆ ಕೊಡು ಗೌಡಾ, ಹೀಂಗs ಮತ್ತ ನಿಮ್ಮ ಮುಂದ ತಂದ ಆಟ ಆಡಸ್ತೇನಿ—ನಿಮ್ಮ ಸಂಪತ್ತ ಹೆಚ್ಚಾಗ್ಲಿ— ಮತ್ತ ಹಂಗs ರಾಮಗ ಒಂದು ಶಾಲರೆ. ಸೀತವ್ಗ ಒಂದ ಸೀರಿಯರೆ ಕೊಡು" ಎಂದು ಬೇಡಿಕೊಳ್ಳುತ್ತಾನೆ. ಆಗ ಗೌಡ "ಯಾಕಾಗವೊಲ್ದು ಕೊಡತೇನಿ ಮುಂದಿನ ವರಸ ಬಾ ಹೋಗು" ಎನ್ನುತ್ತಾನೆ. ಆಟ ಆಡಿಸುತ್ತ ಹೀಗೆಯೇ ತಿರುಗುತ್ತಾನೆ. ನೀಡಿದವರು ನೀಡುತ್ತಾರೆ, ನೀಡದವರು ಹಾಗೆ ಹೀಗೆ ಎಂದು ಬಾಗಿಲು ಮುಚ್ಚಿಕೊಳ್ಳುತ್ತಾರೆ. ತೆಲಗಿನಲ್ಲಿ ಅಂಥವರಿಗೆ ಏನೇನೋ ಅನ್ನುತ್ತ ಮುಂದಿನ ಮನೆಗೆ ಹೋಗುತ್ತಾನೆ.

ಎರಡನೆಯ ಬಗೆಯ ಆಟ ಬಯಲು ಜಾಗದಲ್ಲಿ ನಡೆಯುತ್ತದೆ. ರಾಮ–ಸೀತೆಯರ ಲಗ್ನವೂ ನಡೆದುಹೋಗುತ್ತದೆ. ಸೂತ್ರಧಾರನು ರಾಮಾಯಣದ ಚಿತ್ರ ಕೂಟ ಕಥೆಯನ್ನು ಹೇಳುತ್ತಾನೆ. ರಾಮ–ಸೀತೆ ಅರಣ್ಯದಲ್ಲಿರುವುದು, ರಾವಣ ಬರು ವುದು, ರಾಮನು ಮಾಯಾಮೃಗವನ್ನು ಅಟ್ಟಿ ದೂರ ಹೋಗುವುದು, ರಾವಣ ಸೀತೆ ಯನ್ನು ಕದ್ದೊಯ್ಯುವುದು, ಕಡೆಗೆ ಕಾಳಗವಾಗಿ ರಾವಣನ ವಧೆ, ರಾಮನಿಗೆ ವಿಜಯ ದೊರೆಯುತ್ತದೆ.

ಕಥೆಯನ್ನು ಸಂಭಾಷಣೆಯ ಮಾಲೆಯಲ್ಲಿ ಹೆಣೆಯುತ್ತ ಹೋದಂತೆ ಮಾತಿಗೆ, ಹಾಡಿಗೆ ಕುಣಿತಕ್ಕೆ, ಈ ಪ್ರಾಣಿಗಳು ತಲೆ ಹಾಕುತ್ತವೆ. ಮೈ ಕುಲಕಿಸುತ್ತವೆ. ಎದೆಯ ಮೇಲೆ ಕಾಲೂರಿ ಕುಣಿಯುತ್ತದೆ. ಆಗ ಎತ್ತು ಮೊಲಕಿರಿಸಿಂದ ಆವನ ಎದೆಯ ಮೇಲೆ ನಿಲ್ಲುತ್ತದಂತೆ. ಇದರಿಂದಾಗಿ ಆತನಿಗೆ ಭಾರವೆನಿಸುವದಿಲ್ಲ. ಇವರು ಆಡಿಸುವ ಸಮಯ ಇಂಥದೇ ಎಂದು ಹೇಳಲು ಬಾರದು. ಹಗಲು ಹೊತ್ತಿನಲ್ಲಿ ಬೇಕಾದಾಗ ಆಡಿಸುತ್ತಾರೆ. ಹೀಗೆ ಬೀದಿಯ ನಾಟಕ ನಡೆಯುತ್ತದೆ. ಇದು ಮಕ್ಕಳಿಗೆ, ಮುಗ್ಧರಿಗೆ ಅತ್ಯಂತ ಆಕರ್ಷಕವಾಗಿರುತ್ತದೆ. ಮಕ್ಕಳಂತೂ ಆಟಗಾರರ ಬೆನ್ನು ಹತ್ತುತ್ತಾರೆ. ಭಾವುಕರು ಸಂತೋಷಭರಿತರಾಗಿ ಮರದತುಂಬ ಕಾಳುತುಂಬಿ ನೀಡಿ ಕಳಿಸುತ್ತಾರೆ.

ಸೂತ್ರಧಾರ ಹೇಳಿದಂತೆ ಅವು ಅಭಿನಯಿಸಬೇಕು. ಗೋಣು ಹಾಕಬೇಕು, ನಮಸ್ಕರಿಸಬೇಕು. ಅಂತೂ ಇದೊಂದು ಜಾನಪದ ರಂಗಭೂಮಿಗೆ ಪೂರ್ವಭಾವಿಯಾಗಿ ನಡೆದುಕೊಂಡು ಬಂದ ಕಲೆಯಾಗಿದೆ.

## ೧೨. ತರಬೇತಿ :

ಕವಲೆತ್ತು ಆಡಿಸುವವರು ತಮ್ಮ ಮಕ್ಕಳಿಗೆ ಇನ್ನೂ ಚಿಕ್ಕವರಿದ್ದಾಗಿನಿಂದಲೇ ಈ ಕಲೆಯ ಪರಿಚಯ ಮಾಡಿಕೊಡುತ್ತಾರೆ. ಅನುಕರಣೆ, ಅನುಭವ ಎದ್ದು ಕಾಣುತ್ತದೆ. ಆದರೆ ಮೂಕಪ್ರಾಣಿಗಳಿಗೆ ತರಬೇತಿ ಕೊಡುವ ಕಾರ್ಯ ಎಲ್ಲರಿಂದಲೂ ಸಾಧ್ಯವಿಲ್ಲ. ಇವರಿಗೆ ಗುರುಸ್ಥಾನವಾದ ನಲಗೊಂಡಾ (ಆಂಧ್ರ)ದಲ್ಲಿಯೇ ಗುರುಗಳಿಂದ ನಡೆಯುತ್ತದೆ. ಒಂದು ಪ್ರಾಣಿ ಈ ಶಿಕ್ಷಣ ಹೊಂದುವುದಕ್ಕೆ ಕನಿಷ್ಠ ಮೂರು ತಿಂಗಳಾದರೂ ಬೇಕಂತೆ. ವಾರಕ್ಕೊಂದು ಸಂಜ್ಞೆಯಂತೆ ಬಡಿದು ಹೊಡೆದು ಕಲಿಸುವ ವಾಡಿಕೆಯಿರುತ್ತದೆ.

ಕೆಲವೊಂದು ಕಡೆ ನುರಿತ ಅನುಭವಿಕ ಗೊಲ್ಲರೇ ಕವಲೆತ್ತುಗಳಿಗೆ ತರಬೇತಿ ಕೊಡುತ್ತಾರೆಂದೂ ಕೇಳಿ ಬರುತ್ತದೆ.

ಕವಲೆತ್ತು ಪಾಪ! ಮೂಕಪ್ರಾಣಿ, ಸೂತ್ರಧಾರ ಆಡಿಸಿದಂತೆ ಕುಣಿಸಿದಂತೆ ಆಡುತ್ತದೆ, ಕುಣಿಯುತ್ತದೆ, ಗೋಣು ಹಾಕುತ್ತದೆ. ಹೀಗೆಯೇ ಮನುಷ್ಯನು ಕೂಡ ಇನ್ನೊಬ್ಬರ ಅಧೀನದಲ್ಲಿದ್ದು ಅವರು ಹೇಳಿದಂತೆ ಗೋಣುಹಾಕುತ್ತ ಹೋಗುವ ವರಿಗೆ 'ಗೌಲೆತ್ತಿನ್ಹಾಂಗ ಗೋಣ ಹಾಕ್ತಾನು', 'ಕೋಲೆ ಬಸವ ಆಡಿಸಿದಂತೆ ತಲೆ ಆಡಸ್ತೀಯಾ?' ಎನ್ನುವ ಗಾದೆಗಳು ಕೂಡ ಕವಲೆತ್ತಿನ ಚಿತ್ರವನ್ನು ಕಣ್ಮುಂದೆ ತಂದು ನಿಲ್ಲಿಸುತ್ತವೆ.

> "ಈ ಮನುಷಾ. ಎಂದಿಂದೊ ಕವಲೆತ್ತು ಕೋಡಗ
> ತನಗಾಗಿ ಕುಣಿಸುತ್ತ ನಡದಾನ
> ಕರಡೀ ಕುಣಿತಕ್ಕಿಂತ ನರರ ಬುದ್ಧಿಯ ಕುಣಿತ
> ಮಿಗಿಲಹುದು ಕವಿಕಂಡು ನುಡಿದಾನ"೧೨.

ಎಂದು ಬೇಂದ್ರೆಯವರು ಕವಲೆತ್ತು, ಮಂಗ, ಕರಡಿಯಂಥ ಪ್ರಾಣಿಗಳನ್ನು ಮಾನವ ತನ್ನ ಹೊಟ್ಟೆಯ ಪಾಡಿಗಾಗಿ. ಪ್ರಾಚೀನ ಕಾಲದಿಂದಲೂ ಕುಣಿಸುತ್ತ ಬಂದಿದ್ದಾನೆಂದು ಹೇಳಿ–ಮನುಷ್ಯನ ಬುದ್ಧಿಯ ಕುಣಿತವು ಈ ಮೂಕ ಪ್ರಾಣಿಗಳ ಕುಣಿತಕ್ಕೂ ಮಿಗಿಲಾದದ್ದು ಎಂದು ವರ್ಣಿಸಿದ್ದಾರೆ.

> 'ಮನ ಬಲ್ಲಿ ಮಾನವ ಕುಣಿದಾನ ಕುಣಿಸ್ಯಾನ
> ಪ್ರಾಣದ ಈ ಪ್ರಾಣಿ ಹಿಂದಾನ'೧೩

ಎಂದಂತೆ ಕರಡಿ, ಕೋತಿ, ಕವಲೆತ್ತು ಆಡಿಸುತ್ತ ಹೊಟ್ಟೆ ಹೊರೆದುಕೊಳ್ಳುವ ಗೊಲ್ಲರು ತಾವೂ ಕುಣಿದು, ಮೂಕ ಪ್ರಾಣಿಗಳನ್ನೂ ಸೊಗಸಾಗಿ ಕುಣಿಸುವ ಶ್ರೀಸಾಮಾನ್ಯ ಕಲಾವಂತರೆನಿಸಿದ್ದಾರೆ.

ಸರ್ಕಸ್ ಕಂಪನಿಗಳಿಗೆ ಇಂಥ ಕಲೆ ನಾಂದಿಯೆಂದೂ ಹೇಳಬಹುದು.

## ೧೩. ಗುಣಸ್ವಭಾವ :

ಗಂಗೆತ್ತಿನವರಿಗೆ ಎತ್ತು, ಆಕಳುಗಳ ಹೆಚ್ಚಿನ ಸಹವಾಸದಿಂದ ಅವುಗಳ ಗುಣ–ಸ್ವಭಾವ–ಲಕ್ಷಣ ಬಲ್ಲವರು ದನಕರುಗಳ ವ್ಯಾಪಾರ ಕೂಡ ಮಾಡುತ್ತಾರೆ.

ಗಂಗೆತ್ತಿನವರ ಹೆಣ್ಣು ಮಕ್ಕಳು ಆಟದ ಜೊತೆಗೆ ಹೋಗದೆ ಅವರು ಪ್ರತ್ಯೇಕವಾಗಿ ಆಯಾ ಊರುಗಳಲ್ಲಿ ಸೂಜಿ, ದಾರ, ಕರಿಮಣಿ, ಕುಂಕುಮ, ಗಂಧದಬಾಟ್ಲಿ, ಹೇರಪಿನ್, ಹಲ್ಲಪುಡಿ, ಹಣಿಗಿ, ಕನಡಿ, ವ್ಯಾಣ ಮುಂತಾದ ಬಳಕೆಯ ಚಿಲ್ಲರೆ ವಸ್ತುಗಳನ್ನು ಮಾರುತ್ತಿರುತ್ತಾರೆ. ಹೋದ ಹೋದಲ್ಲಿ ವ್ಯಾಪಾರ ಮಾಡುವಾಗ ಆ ಊರ ಹೆಣ್ಣು ಮಕ್ಕಳ ಜೊತೆ ಮನಕರಗುವಂತೆ ಮಾತನಾಡಿ ಮಾರಾಟವಾದ ವಸ್ತುಗಳ ಬೆಲೆ ಪಡೆದು ಮೇಲೆ ರೊಟ್ಟಿ ಪಲ್ಲೆ ಬೇಡಿಕೊಳ್ಳುವ ಮನೋವೃತ್ತಿಯವರಾಗಿರುತ್ತಾರೆ. ಇವರು ತಮ್ಮ ಗಂಡಂದಿರೊಂದಿಗೆ ಹೊಂದಿಕೊಂಡು ರೀತಿ–ನೀತಿಗಳಿಗೆ ತಕ್ಕಂತೆ ಬಾಳುವೆ ಮಾಡುತ್ತಾರೆ.

ಗಂಗೆತ್ತಿನ ಕುಲದವರು ನಾಳೆಗೆ ಬೇಕು ಎನ್ನುವವರಲ್ಲ. ಅಂದಂದಿಗೆ ಬೇಡಿ ತಂದದ್ದು ಅಂದೇ ಖರ್ಚಾಗ ಬೇಕೆನ್ನುವವರು, ಕುಡಿಯುವ ಚಟ ಹೆಚ್ಚು. ತಿಂದು–ಕುಡಿದು ಮತ್ತೆ ಬಡವರಾಗಿಯೇ ಬದುಕುವ ವೃತ್ತಿಯವರು, 'ಗೊಲ್ಲರ ಅರಸಾಗಿ ಮಜ್ಜಿಗೆಗೆ ದರಿದ್ರ'[೧೪] ಎನ್ನುವ ಗಾದೆಯ ಮಾತಿನಲ್ಲಿ ಈ ಸತ್ಯತೆಯನ್ನು ಕಾಣಬಹುದಾಗಿದೆ.

ಈ ಯಾವತ್ತೂ ಜಾತಿಗಳ ಗೊಲ್ಲರು ಕಸುವಿನ ಮೈ ಕಟ್ಟಿನವರಾಗಿದ್ದಾಗ್ಯೂ, ಕೀರ ಬಡವರು, ಇವರ ಹೋರೆಗಳಿಂದ ಇವರ ಹೊಟ್ಟೆ ತುಂಬುವದಿಲ್ಲ. ಇವರ ಮಕ್ಕಳೂ ಶಾಲೆಗೆ ಹೋಗುವದಿಲ್ಲ.'[೧೫] ಒಂದು ಊರಿಂದ ಇನ್ನೊಂದು ಊರಿಗೆ ಹೋಗುವಾಗ ನಡೆದೇ ಹೋಗುತ್ತಾರೆ, ಎತ್ತು ಆಕಳುಗಳ ಮೇಲೆ ತಮ್ಮ ಗಂಟು–ಗದಡಿ ಹೇರಿಕೊಂಡು ಅಲೆದಾಡುತ್ತಿರುತ್ತಾರೆ.

ಕಲಬುರ್ಗಿ ಜಿಲ್ಲೆಯ ಅಫಜಲಪೂರ ತಾಲೂಕಿನ ' ಹಟ್ಟಿ 'ಯಲ್ಲಿ ಕವಲೆತ್ತು ಆಟಗಾರರ ೪೦ ಮನೆಗಳಿವೆ. ಕೆಲವರಿಗೆ ಭೂಮಿ ದಾನವಾಗಿ ಸಿಕ್ಕಿದ್ದರೂ ಅದನ್ನು ಉತ್ತಿ–ಬಿತ್ತಿ–ಬೆಳೆ ತೆಗೆಯಬೇಕೆನ್ನುವವರಲ್ಲ. ಮುದುಕರ ಹೊರತಾಗಿ ಉಳಿದವರು ಸಂಚಾರ ಮಾಡುತ್ತಿರುತ್ತಾರೆ. ಬೇಡಿ ತಿನ್ನುವುದೇ ತಮ್ಮ ಕುಲಕ್ಕೆ ಮರ್ಯಾದೆ ಎಂದು ಬಗೆ

ದಂತಿದೆ. ಇವರ ಮುಖಂಡ ೬೫ ವರ್ಷದ ಶ್ರೀ ವೆಂಕಪ್ಪ ಈಗಲೂ ತನ್ನ ಬಳಗದೊಂದಿಗೆ ತಿರುಗಾಡುತ್ತಲೇ ಇರುತ್ತಾನೆ. 'ಒಂದ ದಿನಾ ಬೇಡಿ ತಿಂದ್ರ ನಾಕ ದಿನಾ ಕುಂತ ತಿಂತೇವ್ರಿ, ನಮಗ್ಯಾಕ್ರಿ ನೌಕ್ರಿ' ಎಂದು ಹೇಳುವ ಈತನ ಮಾತಿನಿಂದ ಈ ಜನಾಂಗದ ಸ್ವಭಾವ ಗುರುತಿಸಬಹುದಾಗಿದೆ. 'ಕಾಡಿ ತಿನ್ನೋದಕ್ಕಿಂತ ಬೇಡಿ ಉಣ್ಣೋದು ಲೇಸು' 'ಬೇಡಿ ಉಂಡ್ರ ಬೇಕಾದಷ್ಟು' ಎನ್ನುವ ನಾಣ್ಣುಡಿಗಳಂತೆ ಕವಲೆತ್ತಿನವರು ಮೋಸ ಮಾಡದೆ, ಕಳವು ಮಾಡದೆ ಬೇಡಿ ತಿನ್ನುವ ಮನೋವೃತ್ತಿಯವರಾಗಿದ್ದಾರೆ.

ಒಟ್ಟಿನ ಮೇಲೆ ಈ ಕುಲದವರು ಹೆಚ್ಚು ಸಂಭಾವಿತರಿದ್ದು ದೈವೀಭಕ್ತಿಯುಳ್ಳವರಾಗಿದ್ದಾರೆ. ನಡೆ ನುಡಿಗಳಲ್ಲಿ ವಿನಯಶೀಲರೆನಿಸಿದ್ದಾರೆ.

**೧೪. ಪ್ರಯೋಜನ :**

ಕವಲೆತ್ತಿನ ಆಟ ಆಡಿಸುವವರಿಗೆ ಹೊಟ್ಟೆಗೆ ರೊಟ್ಟಿ, ಮೈಗೆ ಬಟ್ಟೆ, ವೆಚ್ಚಕ್ಕೆ ಹೊನ್ನು, ದನಕರುಗಳಿಗೆ ಮೇವೂ ದೊರಕುತ್ತದೆ. ಆಟವನ್ನು ನೋಡುವವರಿಗೆ ಮನರಂಜನೆ ದೊರೆಯುತ್ತದೆ. ಭಾವುಕರ ರೋಗ–ರುಜಿನಗಳು ದೂರಾಗುತ್ತವೆ. ನಂಬಿದವರಿಗೆ ಮಳೆ ಬರುತ್ತದೆ. ಮಕ್ಕಳು–ಮರಿ ಆಗುತ್ತವೆ. ಬೆಳೆಗಳು ಸರಿಯಾಗಿ ಬೆಳೆಯುತ್ತವೆ. ಫಲ ದೊರಕುತ್ತದೆ. ಜಾನಪದ ಕಲೆ ಉಳಿದುಕೊಂಡು ಬರುತ್ತದೆ.

ಕರ್ನಾಟಕದಲ್ಲಿ ಅದೂ ಬೆಳಗಾಂವಿ, ವಿಜಾಪುರ ಜಿಲ್ಲೆಗಳಲ್ಲಿ ಕವಲೆತ್ತಿನವರಿಗೆ ವಿಶೇಷ ಗೌರವ ಇದೆ. ಈ ಜಿಲ್ಲೆಗಳಲ್ಲಿ ಸಂಚರಿಸುವಾಗ ಇವರಿಗೆ ಕೊರತೆಯೆ ಇಲ್ಲವಂತೆ. ನೀಡುವವರ ಕೈ ದೊಡ್ಡದೆಂದು ಗೋವಿಂದಪ್ಪ ಈ ಭಾಗದ ಜನರನ್ನು ಸ್ಮರಿಸಿದ್ದುಂಟು, ಪಟ್ಟಣದಂಥ ಪ್ರದೇಶಗಳಲ್ಲಿ ಹಾಗೂ ವಿಜ್ಞಾನದ ಗಾಳಿ ಸೋಂಕಿದಲ್ಲಿ ಇವರಿಗೆ ಪ್ರೋತ್ಸಾಹ ಇಲ್ಲದಂತಾಗಿದೆ. ಒಂದೊಂದು ಸಲ ಉಪವಾಸ ಬೀಳುತ್ತಿರುತ್ತಾರೆ. 'ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೇ' ಎಂದು ಹಣೆಗೆ ಕೈ ಹಚ್ಚಿಕೊಂಡು ವೆಂಕಟರಮಣನನ್ನು ಧ್ಯಾನಿಸುತ್ತ ಮತ್ತೆ ಮುಂದೆ ಮುಂದೆ ಹೋಗುತ್ತಾರೆ.

**೧೫. ಉಪಸಂಹಾರ :**

ಇವರು ಒಂದು ಕಡೆ ನೆಲೆಯೂರಿ ನಿಲ್ಲರು. ನಿಲ್ಲುವಹಾಗೆ ಅವರಿಗೆ ಹೊಲ–ಗದ್ದೆಗಳಿಲ್ಲ, ಕೂಲಿ ಇಲ್ಲ. ಇದ್ದರೂ ಇಡೀ ವರುಷ ತಿನ್ನುವಷ್ಟು ಕಾಳು–ಕಡಿ ಬರುವುದಿಲ್ಲ. ಹೀಗಾಗಿ ಇವರು ತಿರುಗಾಡಿ, ಭಿಕ್ಷೆ ಬೇಡಿ ತಿನ್ನುವಂತಾಗಿದೆ. ಹಾಗೆಯೆ ಭಿಕ್ಷೆಗಿಳಿಯಬಾರದೆಂದು ಈ ಕವಲೆತ್ತು ಆಡಿಸುವ ನೆವ ಮುಂದೊಡ್ಡಿ ಹೊಟ್ಟೆ–ಪತ್ತಿ ನೋಡಿಕೊಳ್ಳುತ್ತಾರೆ.

ಒಂದೇ ಕಡೆ ನೆಲೆಯೂರಿ ನಿಲ್ಲದ್ದರಿಂದ ಇವರ ಮಕ್ಕಳು ಶಾಲೆಗೆ ಹೋಗುವುದಿಲ್ಲ. ನಿರಕ್ಷರಿಗಳಿದ್ದುದರಿಂದ ಯಾವ ಉದ್ಯೋಗಾವಕಾಶಗಳ ಲಾಭವೂ ತಟ್ಟಿಲ್ಲ.

ಭಿಕ್ಷಾಟನೆಯು ಅಪರೇಷಗಳ ಮಾದರಿಯಾಗಿ ಮಕ್ಕಳು–ಮರಿ–ಕುಟುಂಬ ಸಹಿತ ಅಲೆದಾಡುತ್ತಿದ್ದಾರೆ. ಸರಕಾರ ಇಂಥವರನ್ನು ಒಂದು ಕಡೆ ನೆಲೆಸುವಂತೆ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಟ್ಟು, ಸಾಕ್ಷರರನ್ನಾಗಿ ಮಾಡಿದರೆ ಮಾತ್ರ ಈ ಜನಾಂಗದ ಉದ್ಧಾರವಾಗುತ್ತದೆ. ಇವರಲ್ಲಿದ್ದ ಜಾನಪದ ಕಲೆಗೆ ಹೊಸ ತಿರುವು ಕೊಟ್ಟು ಅದನ್ನು ಬೆಳೆಸಿಕೊಂಡು ಬಂದರೆ ಜಾನಪದ ಕಲೆಗೆ ಜಯವಾಗುತ್ತದೆ.



---

**ಅಡಿ ಟಿಪ್ಪಣಿ :**

## I BOOK LORE

೧ ಕಿಟೆಲ್ಲ ಕೋಶ. ೧೮೯೪, ಪುಟ ೫೬೮.
೨ Mysore Government Gazetteer 1927, p. 226.
೩ Mysore Government Gazetteer 1927, p. 226.
೪ Mysore Government Gazetteer 1927, p· 226–227.
೫ Mysore Government Gazetteer 1927, p. 226.
೬ Mysore Government Gazetteer 1927, p. 226.
೭ ಕಿಟೆಲ್ಲ ಕೋಶ ೧೮೯೪, ಪು. ೩೮೯.
೮ The Karnatak Theatre–Dr. H. K. Ranganath K· U. DWR, 1960 p. 42·
೯ ಜೀ. ಶಂ. ಪ.– ಜನಪದ ಕಾವ್ಯಕಥೆಗಳು– ಪು. ೩೪೪, ಸುರುಚಿ ಪ್ರಕಾಶನ, ೧೯೭೧.
೧೦ ಮುಂಬಯಿ ಕರ್ನಾಟಕ ಗ್ಯಾಜೆಟಿಯರ್– ೧೮೨೩, ಪು. ೧೭೪.
೧೧ ಜೀ. ಶಂ. ಪ.– ಜನಪದ ಕಾವ್ಯಕಥೆಗಳು– ೧೯೭೧, ಸುರುಚಿ ಪ್ರಕಾಶನ, ಪು. ೩೧೨.
೧೨ 'ಕರಡಿಯ ಕುಣಿತ' ಹಾಡು– ಸೂರ್ಯಪಾನ (ಸಂಗ್ರಹ) (ದ. ರಾ. ಬೇಂದ್ರೆ).
೧೩ 'ಕರಡಿಯ ಕುಣಿತ' ಹಾಡು– ಸೂರ್ಯಪಾನ (ಸಂಗ್ರಹ) (ದ. ರಾ. ಬೇಂದ್ರೆ).
೧೪ ಕಿಟೆಲ್ಲ ಕೋಶ ೧೮೯೪, ಪು. ೫೬೮.
೧೫ ಮುಂಬಯಿ ಕರ್ನಾಟಕ ಗ್ಯಾಜೆಟಿರ್– ಪು, ೧೭೫.

## II FOLK LORE

೧ ಶ್ರೀ ವೆಂಕಪ್ಪ ಗೋವಿಂದಪ್ಪ–ಬಸವಣ್ಣ ಆಡಸಾವ್ರು–ವ. ೬೫ ಕ್ಯಾಂಪ : ಸೈದಾಪೂರ ಉ. ಕವಲೆತ್ತಿನ ಆಟ—ಬೀದರ ಜಿಲ್ಲಾ;
೨ ಶ್ರೀಮತಿ, ಯಲ್ಲಪ್ಪ ಶಾಸ್ತ್ರಗೊಲ್ಲರ– ವ. ೬೦ ಕಲಬುರ್ಗಿ ಜಿಲ್ಲಾ; ಉ. ಕರಮಣೆ —ಮಾರುತ್ತಾಳೆ.
೩ ಶ್ರೀ ಕಾಟಪ್ಪ ಗೋವಿಂದಪ್ಪ ಶಾಸ್ತ್ರಗೊಲ್ಲರ ಉ. ಡಬ್ಬಿ ಮಾಡುವವ ವ. ೩೫– ಮು. ಕಲಬುರ್ಗಿ.
೪ ಶ್ರೀ ವೆಂಕಟರಮಣ, ಕ್ಲಾರ್ಕ–ಕಲಬುರಗಿ DTO ಕಲಬುರಗಿ.
೫ ಶ್ರೀ ಗೋವಿಂದಪ್ಪ ಶಾಸ್ತ್ರಗೊಲ್ಲರ– ವ. ೭೦ ಮು. ಕಲಬುರಗಿ. ಉ: ವೈದ್ಯ.
೬ ಶ್ರೀ ಗುರಪ್ಪ ಗೊಲ್ಲರ, ಮು. ಮುದ್ದೇಬಿಹಾಳ ವ. ೬೦.

# ವೇಷಗಾರರು

ಎಂ. ಎಂ. ಕಲಬುರ್ಗಿ

ಜನಪದ ಅಧ್ಯಯನ ಇಂದು ಕೇವಲ ಕಲಾವಿಷಯವಾಗಿ ಉಳಿಯದೆ ಸಮಾಜ ವಿಜ್ಞಾನ ವಿಷಯವಾಗಿ ಬೆಳೆಯುತ್ತಲಿದೆ. ಇದು ಕಲೆ ಮತ್ತು ಸಮಾಜಗಳ ಅನ್ಯೋನ್ಯತೆಯನ್ನೂ ಕಲೆಯು ಸಮಾಜ ಅಧ್ಯಯನದ ಸಾಧನವೆಂಬುದನ್ನೂ ಸೂಚಿಸುತ್ತದೆ.

ಮೂಲದಲ್ಲಿ ಕಲೆಗಳು ಪ್ರಧಾನವಾಗಿ ಧರ್ಮಪ್ರಸಾರ, ಗೌಣವಾಗಿ ದ್ರವ್ಯ ಸಂಪಾದನೆ, ಮನರಂಜನೆ, ಈ ಉದ್ದೇಶಗಳನ್ನೊಳಗೊಂಡಿದ್ದರೂ ಆಮೇಲೆ ಇವೆಲ್ಲ ದ್ರವ್ಯಸಂಪಾದನೆಯ ಕಡೆಗೆ ಹೊರಳುತ್ತ ಬಂದಿವೆ, ಬರುತ್ತಲಿವೆ ಎಂದೇ ಹೇಳಬೇಕು. ಇದು ಯಾವುದೇ ಕಲೆ ಮೂಲತಃ ಏನೇ ಮಹೋದ್ದೇಶವಿಟ್ಟುಕೊಂಡು ಹುಟ್ಟಿದ್ದರೂ ಕಾಲಕ್ರಮದಲ್ಲಿ ಅನ್ನದೇವರಿಗೆ ಅಡಿಯಾಳಾಗಿ ಬೆಳೆಯುವುದೆಂಬುದನ್ನು ಸೂಚಿಸುತ್ತದೆ. ಇದೇ ರೀತಿ ಪ್ರಾರಂಭದಲ್ಲಿ ಧರ್ಮ-ತತ್ವಪ್ರಸಾರದ ಸಾಧನವಾಗಿರಬಹುದಾಗಿದ್ದ ವೇಷಗಾರಕಲೆಯೂ ಇಂದು ಜೀವನ ನಿರ್ವಹಣೆಯ ಸಾಧನವಾಗಿ ಬೆಳೆಯುತ್ತಲಿದೆ. ಹೀಗಾಗಿ ಆನುಷಂಗಿಕವಾಗಿ ಕೃಷಿ, ಕೂಲಿ, ವಾದ್ಯ ರಿಪೇರಿಮಾಡುತ್ತಲಿದ್ದರೂ ಮುಖ್ಯವಾಗಿ ವೇಷಗಾರಿಕೆಯನ್ನೇ ಜೀವನವೃತ್ತಿ ಮಾಡಿಕೊಂಡಿರುವುದರಿಂದ ವೇಷಗಾರರು ವೃತ್ತಿಕಲಾವಿದರು ವರ್ಗಕ್ಕೆ ಸೇರುತ್ತಾರೆ.

ಇವರಿಗೆ ಬಹುರೂಪಿ, ವೇಷಧಾರಿ, ಜಾತಿಗಾರ ಎಂಬವು ಪರ್ಯಾಯ ನಾಮಗಳು. ಭೈರವೇಶ್ವರನ ಕಾವ್ಯದ ಕಥಾಮಣಿಸೂತ್ರ ರತ್ನಾಕರವು ಬಹುರೂಪಿ ಚೌಡಯ್ಯನಿಗೆ 'ಜಾತಿಕಾರ' ಎಂದು ಕರೆದು, ಅವನು ಹದಿನೆಂಟು ಜಾತಿಯ, ನೂರೆಂಟು ಕುಲದ ವೇಷವಂ ತೊಟ್ಟು ನಡೆಸುತ್ತಿದ್ದನೆಂದು ಹೇಳುತ್ತವೆ. ಹೀಗೆ ಅನೇಕ ಜಾತಿಯವರನ್ನು

ಅಭಿನಯಿಸಿ ತೋರುತ್ತಲಿದ್ದ ಕಾರಣ ಇವರಿಗೆ ಜಾತಿಗಾರ ಎಂಬ ಹೆಸರು ರೂಢವಾಗಿರಬೇಕು. 'ಜಾತಿಗಾರ' ಎಂಬುದರ ಪ್ರಾಚೀನ ಸಂವಾದಿಪದ 'ಜಾತಿಡಂಬ' ದಂಭ-ಡಂಬ ಅಂದರೆ ನಟನೆ. ಇದನ್ನು ಗಮನಿಸಿದರೆ "ಮಾತಿನಂತೆ ಮನವಿಲ್ಲದ ಜಾತಿಡೊಂಬರ ಮೆಚ್ಚ ನಮ್ಮ ಕೂಡಲಸಂಗಮದೇವ" ಎಂಬಲ್ಲಿಯ "ಜಾತಿಡೊಂಬರ" ಪಾಠವನ್ನು 'ಜಾತಿ ಡಂಬರ" ಎಂದು ತಿದ್ದಿಕೊಳ್ಳಬೇಕೆಂದೂ, ೧೨ನೆಯ ಶತಮಾನದಲ್ಲಿ ಇವರಿಗೆ 'ಜಾತಿಡಂಬರು' ಎಂದು ಕರೆಯುತ್ತಿದ್ದರೆಂದೂ ಹೇಳಬೇಕಾಗುತ್ತದೆ. ಕೆಲವರು ಪದ ಸಾಮ್ಯದಿಂದಾಗಿ ಈ ಡಂಬರು ಮತ್ತು ಡೊಂಬರು ಪದಗಳಲ್ಲಿ ಗೊಂದಲ ಹುಟ್ಟಿಸಿಕೊಂಡು ಅಂಗಸಾಧನೆಯ ಡೊಂಬರೂ ವೇಷ ಹಾಕುತ್ತಾರೆ ಎಂದು ತಪ್ಪು ಭಾವಿಸಿದ್ದಾರೆ. ಆದರೆ ವೇಷಗಾರಿಕೆಯ ಡಂಬರೇ ಬೇರೆ, ಅಂಗಸಾಧನೆಯ ಡೊಂಬರೇ ಬೇರೆ.

ಇಂದು ಜಾತಿಡಂಬರಿಗೆ ಪರ್ಯಾಯವಾಗಿ 'ಜಾತಿಗಾರರು' ಎಂಬ ಪದವನ್ನು ಬಳಸಲಾಗುತ್ತದೆ. ಇದಲ್ಲದೆ ಬಾಣತಿ, ಕಳ್ಳ, ಮೊದಲಾದ ವೇಷ ಹಾಕುವ ಮುಸಲ್ಮಾನ ವೃತ್ತಿಕಲಾವಿದರಿಗೂ ಜಾತಿಗಾರರು ಎಂಬ ಪದ ಬಳಕೆಯಲ್ಲಿದೆ. ಆದರೆ ಇತ್ತೀಚೆ ಅಸ್ತಿತ್ವಕ್ಕೆ ಬಂದ ಮುಸಲ್ಮಾನ ಜಾತಿಗಾರರದು ಅಣಕು ಮನರಂಜನೆ ರೂಪದ ಅಭಿನಯ, ಪರಂಪರೆಯಿಂದ ಬಂದ ಈ ಜಾತಿಗಾರರದು ನೈಜ–ಗಂಭೀರ ವಿಷಯವುಳ್ಳ ಅಭಿನಯ. ಆದುದರಿಂದ ಮುಸಲ್ಮಾನ ಜಾತಿಗಾರರಿಂದ ನಮಗೆ ಪ್ರಸ್ತುತರಾದ ಜಾತಿಗಾರರು ಬೇರೆಯೆಂದೇ ಹೇಳಬೇಕು.

ಕರ್ನಾಟಕದ ಕೆಲವು ಜಾನಪದ ಕಲೆಗಾರರಂತೆ ವೇಷಗಾರರ ಮೂಲಸ್ಥಾನವೂ ಆಂಧ್ರಪ್ರದೇಶ. ಇವರು ನಮ್ಮ ರಾಜ್ಯದ ಯಾವುದೇ ಭಾಗದಲ್ಲಿ ನೆಲೆಸಿದ್ದರೂ ಮನೆಯಲ್ಲಿ ತೆಲುಗು ಮಾತನಾಡುವುದು ಕರ್ನಾಟಕಾಂಧ್ರಗಳ ಸೀಮಾರೇಖೆಯಲ್ಲಿ ದಟ್ಟವಾಗಿ ನೆಲೆಸಿರುವುದು ಅಂಗರಚನೆ ಮತ್ತು ಬಣ್ಣ ತೆಲುಗಳನ್ನು ಹೋಲುವುದು ಈ ಅಂಶವನ್ನು ಬೆಂಬಲಿಸುತ್ತವೆ. ನಮ್ಮ ಜಾನಪದ ಕಲೆಗಾರರಲ್ಲಿ ಆಂಧ್ರಮೂಲದಿಂದ ಬಂದವರ ಸಂಖ್ಯೆ ಗಣನೀಯವಾಗಿದೆಯೆಂಬುದನ್ನು ಇಲ್ಲಿ ತಪ್ಪದೇ ಸ್ಮರಿಸಬಹುದು.

ಈ ಜನಾಂಗ ವೇಷಗಾರಿಕೆಯನ್ನು ಯಾವ ಉದ್ದೇಶಕ್ಕೋಸುಗ? ಯಾವ ಕಾಲದಲ್ಲಿ ತೊಟ್ಟಿತು? ಎಂಬ ಪ್ರಶ್ನೆಗಳಿಗೆ ನಮ್ಮಲ್ಲಿ ಸ್ಪಷ್ಟ ಉತ್ತರಗಳಿಲ್ಲ. ಇಂದು ವೇಷಗಾರರನ್ನೇ ಕೇಳಿದರೆ ತಾವು ಆಂಧ್ರಮೂಲದವರೆಂಬುದನ್ನೇ ಮರೆತು ಶಿವಾಜಿ ಮಹಾರಾಜನ ಕಾಲದಲ್ಲಿ ನಮ್ಮ ವೇಷಗಾರಿಕೆ ಪ್ರಾರಂಭವಾಯಿತೆಂದು ಹೇಳುತ್ತಾರೆ. ಆಂಧ್ರಮೂಲದ ಕಿಳ್ಳಿಕೇತರಂತೆ, ಕರ್ನಾಟಕ ಮೂಲದ ಗೊಂದಲಿಗರಂತೆ, ಬಹುಶಃ ಶಿವಾಜಿಯು ಗುಪ್ತವೇಷ ಮೊದಲಾದ ರೋಚಕ ಘಟನೆಗಳಿಗೆ ಹೆಸರಾಗಿರುವುದನ್ನು

ಗಮನಿಸಿಯೋ ಈ ವೇಷಗಾರ ಕಲಾವಿದರನ್ನು ಶಿವಾಜಿಯು ರಾಜಕೀಯ ಗುಪ್ತ ಚಲನವಲನಗಳಿಗೆ ಬಳಸುತ್ತಿದ್ದುದರಿಂದಲೋ ಈ ಕಲಾವಿದರು ತಮ್ಮ ಪ್ರಾಚೀನತೆಯನ್ನು ಇಲ್ಲಿಂದಲೇ ತಪ್ಪಾಗಿ ಹೇಳುತ್ತಿರಬೇಕು.

ಶಿವಾಜಿ ರಾಜಕೀಯ ಪ್ರಚಾರಕ್ಕೆ ಈ ಕಲಾವಿದರನ್ನು ಬಳಸಿಕೊಂಡರೆ ಸರ್ವ ಜನಪದವರ್ಗಗಳನ್ನು ಮೇಲೆತ್ತುವುದರ ಮೂಲಕ ಬಸವಣ್ಣನವರು ಅವರವರ ಸಾಹಿತ್ಯ ಕಲೆ, ಸಂಗೀತಗಳಿಗೆ ಕಾಯಕದ ತಿರುವು ಕೊಟ್ಟು ಅಪ್ರತ್ಯಕ್ಷವಾಗಿ ಜಾನಪದವನ್ನೇ, ಜಾನಪದ ಕಲೆಗಳನ್ನೇ ಪುನರುಜ್ಜೀವನಗೊಳಿಸಿದರು. ಹೀಗಾಗಿ ಕರ್ನಾಟಕದ ಜಾನಪದ ಪುನರುಜ್ಜೀವನಕ್ಕೆ ಸಂಬಂಧಪಟ್ಟಂತೆ ಇಂದಿನ ನಮ್ಮದು ಪ್ರತ್ಯಕ್ಷ ಪ್ರಯತ್ನ ಅಂದಿನ ಬಸವಣ್ಣನದು ಅಪ್ರತ್ಯಕ್ಷ ಪ್ರಯತ್ನ; ಇದು ದ್ವಿತೀಯ ಪ್ರಯತ್ನ, ಅದು ಪ್ರಥಮ ಪ್ರಯತ್ನ. ಹೀಗೆ ಅಂದು ಉದ್ದೀಪನಗೊಂಡ ಕಲೆಗಳಲ್ಲಿ ವೇಷಗಾರಿಕೆಯೂ ಒಂದು. ಆ ಕಾಲದ ಶರಣರಾದ ಕಲಕೇತ ಬ್ರಹ್ಮಯ್ಯ, ನಗೆಯ ಮಾರಿತಂದೆ ಮೊದಲಾದ ಜಾನಪದ ಕಲಾವಿದರಲ್ಲಿ ಬಹುರೂಪಿ ಚೌಡಯ್ಯನೂ ಒಬ್ಬ. ಆದರೆ ಶರಣ ಬಹುರೂಪಿ ಚೌಡಯ್ಯನೊಂದಿಗೆ ಇಂದಿನ ಬಹುರೂಪಿಗಳ ಜಾನಾಂಗಿಕ ಸಂಬಂಧ ಕಲ್ಪಿಸುವುದು ಕಷ್ಟ. ಆ ಕಾಲದಲ್ಲಿ ಶಿವನ ಪಂಚವಿಂಶತಿ ಲೀಲೆಗಳ ಪ್ರಚಾರಕ್ಕೋಸುಗ ಶೈವರು, ವಿಷ್ಣುವಿನ ದಶಾವತಾರ ಪ್ರಚಾರಕ್ಕೋಸುಗ ವೈಷ್ಣವರು ಆ ಆ ವೇಷ ಹಾಕುತ್ತಿರಬಹುದು. ಜನಮನರಂಜನೆ, ದ್ರವ್ಯಸಂಪಾದನೆಗಳಿಗಾಗಿಯೂ ಕೆಲವರು ವೇಷ ಹಾಕುತ್ತಿದ್ದ ಸಂಭವವಿದೆ. ಹೀಗಾಗಿ ಇಂದಿನ ವೇಷಗಾರ ಜನಾಂಗವನ್ನು ಮೇಲಿನವುಗಳಲ್ಲಿ ಯಾವುದೇ ಒಂದು ಮೂಲಕ್ಕೆ ಮುಟ್ಟಿಸುವುದು ಅಸಾಧ್ಯವಾಗಿದ್ದರೂ ಶೈವ ಮೂಲಕ್ಕೆ ಮುಟ್ಟಿಸುವ ಸಾಧ್ಯತೆಯಿದೆ.

ಇನ್ನೊಬ್ಬರಂತೆ, ಇನ್ನೊಂದರಂತೆ ವೇಷ ಹಾಕುವವರೆಲ್ಲ ವೇಷಗಾರರೇ. ಇವರನ್ನು ಬೀದಿವೇಷಗಾರರು, ವೇದಿಕೆವೇಷಗಾರರು ಅಥವಾ ಬೀದಿಆಟಗಾರರು, ಅಟ್ಟದ ಆಟಗಾರರು ಎಂದು ವರ್ಗೀಕರಿಸಬಹುದು. ಈ ಬೀದಿವೇಷಗಾರರ ಅಥವಾ ಬೀದಿಆಟಗಾರರ ಕಲೆಗಳನ್ನೆ ನಮ್ಮ ಪ್ರಾಚೀನರು ಸಾಮೂಹಿಕವಾಗಿ "ಪಗರಣ" ಎಂದು ಕರೆದುದು. ದೃಶ್ಯ ಪ್ರಕಾರಗಳಾದುದರಿಂದ ಸಂಸ್ಕೃತದ ಪ್ರಕರಣ ಮತ್ತು ನಮ್ಮ ಪಗರಣಗಳಲ್ಲಿ ಕೆಲಮಟ್ಟಿಗೆ ಹೋಲಿಕೆಯಿದ್ದರೂ ಎರಡೂ ಬೇರೆ. ಒಂದು ಬೀದಿಯ ಆಟವಾದರೆ ಇನ್ನೊಂದು ಅಟ್ಟದ ಆಟ. ಒಂದು ಜಾನಪದವಾದರೆ ಇನ್ನೊಂದು ಶಿಷ್ಟಪದ. ಹೀಗಾಗಿ ಬೀದಿಯ ಆಟವು ಜಾನಪದೀಯವು ಆಗಿರುವ ಇಂದಿನ ಬಹುರೂಪಿಗಳ ವೇಷಗಾರಿಕೆ ಪ್ರಾಚೀನ ಕಾವ್ಯಗಳು ಉಲ್ಲೇಖಿಸುವ "ಪಗರಣ ವರ್ಗಕ್ಕೆ" ಸೇರುತ್ತದೆ. ಈಗ ತಿಳಿದಮಟ್ಟಿಗೆ ಕನ್ನಡದಲ್ಲಿ ಈ ವೇಷಗಾರಿಕೆಯ "ಪಗರಣ"ದ ಉಲ್ಲೇಖ ಕವಿರಾಜಮಾರ್ಗ, ವಡ್ಡಾರಾಧನೆಗಳಷ್ಟು ಪ್ರಾಚೀನ.

"ಹಾದರ ಮಾಡೂದಕ ಮೊದಲು ಹಗಣಾ ಮಾಡೂದು ಕಲೀಬೇಕು" ಎಂಬುದೊಂದು ಜನಬಳಕೆಯ ಗಾದೆ. ಇಂದು ಅಶ್ಲೀಲ ಅರ್ಥವನ್ನೊಳಗೊಂಡಿದ್ದರೂ ಮೂಲತಃ ಪಾತ್ರ (ಪಾದರ ಹಾದರ) ಮಾಡುವುದಕ್ಕೆ ಮೊದಲು ಪಗರಣ (ಹಗರಣ ಹಗಣ) ಮಾಡೂದು ಕಲೀಬೇಕು, ಎಂಬುದೇ ಇದರರ್ಥ. ಇದರಿಂದ "ಪಾತ್ರ"ಕ್ಕೆ ಪ್ರಾಥಮಿಕವಾದುದು "ಪಗರಣ"ವೆಂದು ವೇದ್ಯವಾಗಿ ಬಹುರೂಪಿಗಳ ಪಗರಣದ ಮಟ್ಟ ನಮ್ಮ ಗಮನಕ್ಕೆ ಬರುತ್ತದೆ. ನಮ್ಮಲ್ಲಿ ದೃಶ್ಯ, ಹಗಲು ಅಭಿನಯಿಸುವುವು ಮತ್ತು ರಾತ್ರಿ ಅಭಿನಯಿಸುವುವು ಎಂದು ಎರಡು ತೆರ. ಪಗರಣಗಳು ಸಾಮಾನ್ಯವಾಗಿ ಹಗಲ ಅಭಿನಯಗಳಾಗಿದ್ದರೂ ಕೆಲವು ರಾತ್ರಿ ಅಭಿನಯಗಳೂ ಆಗಿವೆ. ವೇಷಗಾರರದು ಮಾತ್ರ ಹಗಲು ಅಭಿನಯ. ಈ ಕಾರಣಕ್ಕಾಗಿಯೇ ತಮಿಳಿನಲ್ಲಿ ಇವರನ್ನು 'ಪಗಲವೇಷಕ್ಕಾರನ್' ಎಂದು ಕರೆಯುತ್ತಾರೆ.

ಈ ಥರ್ಸ್ಟನ್ ಅವರ "Castes and tribes of south Indla" ಸಂಪುಟಗಳಲ್ಲಾಗಲಿ ಎಚ್. ವಿ. ನಂಜುಂಡಯ್ಯ ಮತ್ತು ಎಲ್. ಕೆ. ಅನಂತಕೃಷ್ಣ ಅಯ್ಯರ ಅವರ "The Mysore tribes and castes" ಎಂಬ ಸಂಪುಟಗಳಲ್ಲಾಗಲಿ ಈ ವೇಷಗಾರರ ಬಗೆಗೆ ಏನೂ ಉಲ್ಲೇಖವಿಲ್ಲ. ಶ್ರೀ ಎಲ್. ಜಿ. ಹಾವನೂರ ಅವರ ವರದಿಯ ಮೇರೆಗೆ "Backward caste"ದ ೧೨೮ ಜಾತಿಗಳಲ್ಲಿ ಬಹುರೂಪಿಯೂ ಒಂದು. ೧೯೭೨ ರ ಜನಗಣತಿಯ ಪ್ರಕಾರ ನಮ್ಮ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ನೂರಕ್ಕೆ ೧ ರಷ್ಟು ಜನರಿಲ್ಲದ ಜಾತಿಯದು.

ಸಾಮಾನ್ಯವಾಗಿ ಬಹಳಷ್ಟು ಜಾನಪದ ಕಲಾವಿದರಂತೆ ವೇಷಗಾರರೂ ತಮ್ಮದು ಕ್ಷತ್ರಿಯ ವಂಶವೆಂದು ಹೇಳುತ್ತಾರೆ. ನಮ್ಮ ದೇಶದಲ್ಲಿ ವರ್ಣವಾಗಿ ಹುಟ್ಟಿ ಕುಲವಾಗಿ ಬೆಳೆದಿದ್ದ ಕ್ಷತ್ರಿಯ ಜನಾಂಗ ಒಂದು ಕಾಲಕ್ಕೆ ಯಾವುದೋ ಕಾರಣದಿಂದ ಮಾಯವಾಗಿ, ಇಂದು ಹಾವುಗಾರ. ವೇಷಗಾರ ಮೊದಲಾದ ಜಾನಪದ ಕಲಾವಿದರಾಗಿ ಅವಶೇಷರೂಪದಲ್ಲಿ ಉಳಿದುಕೊಂಡಿರಬೇಕು. ಇವರಲ್ಲಿ ವೇಷಗಾರರು. ರಾಮಕೊಂಡರು, ಸುಡುಗಾಡ ಸಿದ್ದರು ಒಂದೇ ಮೂಲದವರಾಗಿದ್ದು ವೃತ್ತಿ ಕಾರಣವಾಗಿ ಭಿನ್ನವೆನಿಸಿದ್ದಾರೆ. ಇವರಲ್ಲಿ ಪರಸ್ಪರ ರಕ್ತಸಂಬಂಧವೇರ್ಪಡುವುದು ಈ ಅಂಶವನ್ನು ಬೆಂಬಲಿಸುತ್ತದೆ.

ವೇಷಗಾರರಲ್ಲಿ ವಿಭೂತಿ, ರುದ್ರಾಕ್ಷಿ. ಗಂಟೆ. ಶಂಖ, ಪುಸ್ತಕಗಳನ್ನವಲಂಬಿಸಿ ಈಬತೋಳು, ರುದ್ರಾತೋಳು, ಗಂಟ್ಯೋಳು, ಸಂಕಲೋಳು. ಪುಸ್ತದೋಳು ಎಂದು ಐದು ಬೆಡಗುಗಳಿವೆ. ವಿಭೂತಿ + ವಾಳ್ಳ (ಅವರು) – ಈಬತೋಳು. ಈ ಬೆಡಗುಗಳು ಅಡ್ಡ ಹೆಸರುಗಳಾಗಿಯೂ ಬಳಕೆಯಾಗುತ್ತಿದ್ದು ಕೋಂಡುರೋಳು, ಇಷ್ಟೋಳು ಮೊದಲಾದ ಬೇರೆ ಅಡ್ಡ ಹೆಸರುಗಳೂ ಆಗಾಗ ಕಂಡುಬರುತ್ತವೆ. ಇವುಗಳಲ್ಲಿ ಒಂದೇ

ಬೆಡಗಕ್ಕೆ ಸಂಬಂಧಪಟ್ಟವರು ಸೋದರರೆನಿಸುವುದರಿಂದ ಅವರಲ್ಲಿ ಬೀಗತನ ಏರ್ಪಡುವುದಿಲ್ಲ.

ಇಲ್ಲಿಯೂ ಗುರುವರ್ಗ-ಶಿಷ್ಯವರ್ಗ ತೋರಿಬರುತ್ತಿವೆ. ಇವರು ತಮ್ಮ ಧರ್ಮಕ್ಷೇತ್ರ ಶ್ರೀಶೈಲವೆಂದೂ ಅಲ್ಲಿಯ ವೀರಭಿಕ್ಷಾವೃತ್ತಿ ಮಹಾರಾಜ ತಮ್ಮ ಗುರುವೆಂದೂ ಹೇಳುತ್ತಾರೆ. ಪ್ರತಿವರ್ಷ ಈ ಗುರುಗಳ ಪ್ರತಿನಿಧಿಯು ಆಗಮಿಸಿ ಇವರಿಂದ ಕಪ್ಪುಕಾಣಿಕೆಯನ್ನು ಒಯ್ಯುತ್ತಾನೆ. ಶಿಷ್ಯವರ್ಗದವರು ಮಾತ್ರ ಮಾಂಸಾಹಾರ, ಮದ್ಯಸೇವನೆ ಮಾಡುತ್ತಿದ್ದು ಇವು ಗುರುವರ್ಗದಲ್ಲಿ ನಿಷಿದ್ಧ. ಧಾರ್ಮಿಕ ಆಚರಣೆಯಲ್ಲಿ ವಿಭೂತಿ, ರುದ್ರಾಕ್ಷಿ ಮತ್ತು ಶಿವದಾರಗಳಿಗೆ ವಿಶೇಷ ಮಹತ್ವ. ಕುಲದೈವ ಶ್ರೀಶೈಲದ ಮಲ್ಲಿಕಾರ್ಜುನವಾಗಿದ್ದುದೂ, ವೀರಶೈವ ಪ್ರಧಾನವಾದ ಪ್ರದೇಶದಲ್ಲಿ ಬಾಳುತ್ತಿದ್ದುದೂ ಕಾರಣವಾಗಿ ಇವರ ಆಚರಣೆಯಲ್ಲಿ ವೀರಶೈವದ ದಟ್ಟ ಪ್ರಭಾವ ಕಂಡುಬರುತ್ತದೆ. ಹೀಗಾಗಿ ನಾಮಕರಣ, ಮದುವೆ, ಅಂತ್ಯಯಾತ್ರೆ ಮೊದಲಾದುವು ವೀರಶೈವರಂತೆ ರೂಢಿಯಲ್ಲಿವೆ. ಸತ್ತಕೂಡಲೇ ಬಾಯಲ್ಲಿ ರುದ್ರಾಕ್ಷಿ ಇಡುತ್ತಿದ್ದು ವೀರಶೈವ ಮಸಣಗಟ್ಟೆಯಲ್ಲಿ ಶವಸಮಾಧಿಗೆ ಅವಕಾಶವಿದೆ. ಹೀಗೆ ವೀರಶೈವದ ಕಡೆಗೆ ತುಂಬ ಒಲವು ತೋರಿಸುತ್ತಿದ್ದರು. ಇವರಿಗೆ ತಮ್ಮದೇ ಆದ ತತ್ತ್ವವ್ಯವಸ್ಥೆ ಇಲ್ಲದುದರಿಂದ ಮಿಕ್ಕ ವಿಷ್ಣು ಮೊದಲಾದ ಪೌರಾಣಿಕ ದೇವತೆಗಳ, ಎಲ್ಲಮ್ಮ ಮೊದಲಾದ ಸ್ಥಾನಿಕ ದೇವತೆಗಳ ಸುತ್ತು ಹೆಣೆದುಕೊಂಡಿದ್ದಾರೆ. ಸಾಲದುದಕ್ಕೆ ಮುಸಲ್ಮಾನ ದೇವತೆಗಳಿಗೂ ನಡೆದುಕೊಳ್ಳುತ್ತಾರೆ. ಶ್ರೀಶೈಲಕ್ಷೇತ್ರದೇವತೆಗಳನ್ನು ಪ್ರತಿನಿಧಿಸುವ ಮಲ್ಲೇಶಪ್ಪ, ಮಹಾನಂದಪ್ಪ ಮೊದಲಾದ ಹೆಸರುಗಳನ್ನು ಪ್ರಧಾನವಾಗಿಟ್ಟುಕೊಳ್ಳುತ್ತಿದ್ದರೂ ಬಸಪ್ಪ, ಎಲ್ಲಪ್ಪ, ರಾಮಣ್ಣ, ಹಣಮಂತ, ಕಿಷ್ಟಪ್ಪ ಮೊದಲಾದ ಹೆಸರುಗಳಿಗೆ ಕೊರತೆಯಿಲ್ಲ.

ಇವರಲ್ಲಿ ಅಧಿಕಾರಿವರ್ಗ-ಅನುಯಾಯಿ ವರ್ಗಗಳೂ ಏರ್ಪಟ್ಟಿವೆ. ಹಲವು ಮನೆತನಗಳುಳ್ಳ ಪ್ರತಿಯೊಂದು ನೆಲೆಗೆ ಒಬ್ಬ ಅಧಿಕಾರಿಯಿದ್ದು ಇವನಿಗೆ 'ಕಟ್ಟಾಯಿಂಟೋಳು' ಅಂದರೆ "ಕಟ್ಟೆಮನೆಯುವರು" ಎಂದು ಹೆಸರು. ಇವನ ಕೈಕೆಳಗೆ ಒಬ್ಬ ವಾಲೀಕಾರನೂ ಇರುತ್ತಾನೆ. ಜನನದಿಂದ ಮರಣದವರೆಗಿನ ಧಾರ್ಮಿಕ ಕಾರ್ಯಕಲಾಪಗಳನ್ನು ಆಗಾಗಬರುವ ಶ್ರೀಶೈಲ ಗುರುವಿನ ಪ್ರತಿನಿಧಿ ಪೂರೈಸುತ್ತಿದ್ದರೂ ದೈನಂದಿಕವಾಗಿ ಈ ಕಾರ್ಯಗಳನ್ನು ಗುರುವಿನ ಪರವಾಗಿ ನಿಂತು ಕಟ್ಟೆಮನೆಯುವರೇ ಪೂರೈಸುತ್ತಾರೆ. ಸಾಮಾಜಿಕ ವ್ಯವಸ್ಥೆಗಳಾದ ನ್ಯಾಯತೀರ್ಪು, ದಂಡನೆ ಮೊದಲಾದವು ಈ ಕಟ್ಟೆಮನಿಯುವರ ನೇತೃತ್ವದಲ್ಲಿ ನಡೆಯುತ್ತವೆ. ಕಡ್ಡಾಯವಾಗಿ ಬಿಡಬೇಕಾದ ಕೂದಲನ್ನು ಕತ್ತರಿಸಿಕೊಂಡರೆ ಇತರ ಯಾವುದೇ ತಪ್ಪುಗಳನ್ನು ಮಾಡಿದರೆ ಇವರು ದಂಡವಿಧಿಸುತ್ತಾರೆ. ಈ ಜನಾಂಗ ನ್ಯಾಯದಾನಕ್ಕೋಸುಗ ಒಮ್ಮೆಯೂ ಕೋರ್ಟ್ ಕಟ್ಟೆ ಹತ್ತಿಲ್ಲ. ಹತ್ತಬಾರದೆಂದೂ ನಿಯಮ.

ಕನ್ಯೆಗೆ ಒಂಬತ್ತು ರೂಪಾಯಿ ತೆರವು, ಅತ್ತೆಗೆ ಒಂದು ಸೀರೆ, ಮಾವನಿಗೆ ಒಂದು ಧೋತರ, ದೈವಕ್ಕೆ ಇಪ್ಪತ್ತು ರೂಪಾಯಿ ಇದು ಇವರ ಲಗ್ನವ್ಯವಹಾರ. ಅಕ್ಷತಾ ಕಾರ್ಯ ಹೆಣ್ಣಿನ ಡೇರೆಯ ಮುಂದೆ. ಮೂರೂ ದಿನದ ಲಗ್ನವೆಚ್ಚ ಮಾತ್ರ ಗಂಡಿನ ಕಡೆಯವರದು. ಶೋಭನಕಾರ್ಯ ಗಂಡನ ಮನೆಯಲ್ಲಿ ಮುಗಿದ ಬಳಿಕ ಅಳಿಯ ಮೂರು ವರ್ಷ ಹೆಂಡತಿಯ ಜೊತೆ ಮಾವನ ಪರಿವಾರದಲ್ಲಿಯೇ ಇರಬೇಕು. ಬಹುಶಃ ಅಳಿಯ ಮಗಳನ್ನು ಸರಿಯಾಗಿ ನೋಡಿಕೊಳ್ಳುವುದನ್ನು ಮಾವ ಖಾತ್ರಿ ಮಾಡಿಕೊಳ್ಳಲು ಈ ವ್ಯವಸ್ಥೆ ರೂಢವಾದಂತಿದೆ. ಮೂರು ವರ್ಷಗಳ ತರುವಾಯ ಅಳಿಯ ಹೆಂಡತಿಯೊಂದಿಗೆ ತನ್ನ ಮನೆಗೆ ತಿರುಗಿ ಹೋಗುತ್ತಾನೆ.

ವೇಷಗಾರರ ಎರಡು–ಮೂರು ಕುಟುಂಬಗಳು ಸಂಯುಕ್ತವಾಗಿ ಬೀದಿಯಾಟ ಪ್ರದರ್ಶನಕ್ಕೋಸುಗ ಊರೂರು ಅಲೆಯುತ್ತವೆ. ಎತ್ತು–ಕುದುರೆಗಳನ್ನು ವಾಹನಗಳಂತೆ ಉಪಯೋಗಿಸಿಕೊಂಡು ಹೋಗಿ ಊರ ಚಾವಡಿ, ಹಾಳುಗುಡಿ ಇಲ್ಲವೆ ತಮ್ಮದೇ ಆದ ಡೇರೆಗಳಲ್ಲಿ ಇವರು ವಾಸಮಾಡುತ್ತಾರೆ. ಒಮ್ಮೆ ಡೇರೆ ಹೂಡಿದರೆ "ಮೂರು ತಿಂಗಳ ವಾಸ, ಮೂವತ್ಮೂರು ವೇಷ"– ಇವರ ಪದ್ಧತಿಯಾಗಿದ್ದಿತು. ಈಗ ಆಯಾ ಗ್ರಾಮಗಳ ಜನತೆ ತೋರುವ ಆಸಕ್ತಿಗನುಗುಣವಾಗಿ ವೇಷ–ವಾಸಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿದೆ.

ಸೋಗು ಧರಿಸಿಕೊಂಡು ಹೋಗುವ ಮೇಳದವರೆಲ್ಲ ಗಂಡಸರೇ. ಹೆಂಗಸರು ಪಾತ್ರ ಧರಿಸುವುದಿಲ್ಲ. ಅವಶ್ಯವಿದ್ದರೆ ಅವರು ವಾದ್ಯಮೇಳದಲ್ಲಿ ಭಾಗವಹಿಸಬಹುದು. ಶಿವಲೀಲೆ, ರಾಮಾಯಣ, ಮಹಾಭಾರತಗಳಿಗೆ ಸಂಬಂಧಿಸಿದ ಅನೇಕ ಪೌರಾಣಿಕ ಸಂದರ್ಭಗಳನ್ನೂ, ಬಸವಣ್ಣ, ಕಬೀರದಾಸ, ಪುರಂದರದಾಸ ಮೊದಲಾದವರಿಗೆ ಸಂಬಂಧಿಸಿದ ಐತಿಹಾಸಿಕ ಸಂದರ್ಭಗಳನ್ನೂ ಇವರು ಪ್ರದರ್ಶಿಸುತ್ತಾರೆ. ಮನೆ ಮನೆಯ ಮುಂದೆ ಅವಸರವಸರವಾಗಿ ಹಾಡು ಹೇಳಿ ಕೂಟಗಳಲ್ಲಿ ಮಾತ್ರ ವೇಷಗಾರಿಕೆಯನ್ನು ಅಭಿನಯಿಸುತ್ತಾರೆ. ಹೀಗೆ ಕೆಲವು ದಿನ ಪ್ರದರ್ಶನ ನಡೆಸಿ ಕೊನೆಯ ದಿನ ಪ್ರತಿಯೊಂದು ಮನೆಯಿಂದ ಕಾಣಿಕೆಯಾಗಿ ಹಣ, ಧಾನ್ಯ, ಕುರಿ,ಆಕಳು ಪಡೆಯುವುದುಂಟು. ಕೆಲವರು ಅಭಿನಯಕ್ಕೆ ಮೆಚ್ಚಿ ಬಂಗಾರ, ಹೊಲ–ಮನೆ ನೀಡಿದ ಉದಾಹರಣೆಗಳೂ ಉಂಟು.

ದೃಶ್ಯವು ಅಂಗೋಪಾಂಗ ಚಲನೆ ರೂಪದ "ಆಂಗಿಕ" ಮಾತು–ಗೀತ, ರೂಪದ "ವಾಚಿಕ" ವೇಷಭೂಷಣ ರೂಪದ "ಆಹಾರ್ಯ" ಭಾವಗಳ ಪ್ರಕಟನೆ ರೂಪದ "ಸಾತ್ವಿಕ" ಎಂಬ ಅಭಿನಯ ಚತುರ್ಥವನ್ನೊಳಗೊಂಡಿರುತ್ತದೆ. ಈ ನಾಲ್ಕು ಲಕ್ಷಣಗಳ ಒರೆಗಲ್ಲಿಗೆ ಹಚ್ಚಿ ನೋಡಿದರೆ 'ವೇಷಗಾರರು' ಎಂಬ ಹೆಸರೇ ಸೂಚಿಸುವಂತೆ "ಆಹಾರ್ಯ" ವೆನಿಸುವ

ವೇಷ-ಭೂಷಣ ಇವರಲ್ಲಿ ಪ್ರಧಾನವಾದುದು. ವೇಷ ಇಲ್ಲವೆ ಸೋಗು ಹಾಕುವಲ್ಲಿ ಇವರು ಬಳಸುವ ಬಣ್ಣ-ಬಟ್ಟೆ, ಭೂಷಣ-ಮುಖವಾಡ ಪಾತ್ರೋಚಿತವಾಗಿರಬೇಕಾದುದು ಸಹಜ. ಬಡತನದಲ್ಲಿಯೇ ಇವುಗಳನ್ನು ಹೇಗೋ ಜೋಡಿಸಿಕೊಂಡಿರುತ್ತಾರೆ. ಬಟ್ಟೆ-ಭೂಷಣಗಳಲ್ಲಿ ಖರೀದಿಸಿದವುಗಳಿಗಿಂತ ಯಾಚಿಸಿಪಡೆದುವೇ ಅಧಿಕ. ಮುಖವಾಡಗಳನ್ನು ಕೆಲವು ವೇಳೆ ಖರೀದಿಸುತ್ತಿದ್ದರೂ ರಟ್ಟು-ಬಟ್ಟಲ ಮೊದಲಾದವುಗಳಿಂದ ತಾವೂ ಸಿದ್ಧಪಡಿಸಿಕೊಳ್ಳುತ್ತಾರೆ. ಬಣ್ಣವನ್ನು ಖರೀದಿಸುತ್ತಿದ್ದು ಸವೇತ, ಇಂಗಳೀಕ, ನೀಲಿ ಮೊದಲಾದವುಗಳನ್ನು ಈ ಹಿಂದೆ ಬೆಣ್ಣೆಯಲ್ಲಿ ಇಂದು ಕೊಬ್ಬರಿಯೆಣ್ಣೆ, ವ್ಯಾಸಲಿನ್‌ಗಳಲ್ಲಿ ಮಿಶ್ರಮಾಡಿ ಲೇಪಿಸಿಕೊಳ್ಳುತ್ತಾರೆ. ಸಾಮಾನ್ಯವಾಗಿ ನೇರ ಬಣ್ಣಗಳನ್ನು (Direct Colour) ಉಪಯೋಗಿಸುತ್ತಿದ್ದು ವರ್ಣಮಿಶ್ರಣದ ಗೋಜಿಗೆ ಹೋಗುವುದಿಲ್ಲ. ಮಿಕ್ಕ ಕಿರೀಟ, ಬಿಲ್ಲು-ಬಾಣ, ಗದೆ ಮೊದಲಾದ ವ್ಯವಸ್ಥೆಯನ್ನು ಮಾಡಿಕೊಳ್ಳುತ್ತಿದ್ದು ನಿಲುಕದ ವಸ್ತುಗಳಾದ ರಥ, ಆನೆ, ಉದ್ಯಾನ ಅರಮನೆ ಮೊದಲಾದವುಗಳನ್ನು ಬಾಯಲ್ಲಿ ಹೇಳಿ ಮುಗಿಸಿಬಿಡುತ್ತಾರೆ.

"ಸಾತ್ವಿಕ" ವೆನಿಸುವ ದುಃಖ, ಹರ್ಷ, ವಿಷಾದ ಮೊದಲಾದ ಭಾವಪ್ರಕಟನೆ ದೃಶ್ಯದ ಅಮೂಲ್ಯ ಲಕ್ಷಣ. ದೃಶ್ಯಕ್ಕೆ ಆಳವನ್ನು ಕಲ್ಪಿಸುವ ಈ ಲಕ್ಷಣವನ್ನು ನಿರ್ವಹಿಸುವಲ್ಲಿ ವೇಷಗಾರರು ಅಸಮರ್ಥರಾಗಿ ಸಾಮಾನ್ಯ ಅನುಕರಣೆ ಇಲ್ಲವೆ ನಟನೆಯ ಮಟ್ಟದಲ್ಲಿ ನಿಂತುಬಿಡುತ್ತಾರೆ.

"ಆಂಗಿಕ" ವೆನಿಸುವ ದೇಹದ ಚಲನ-ವಲನ ಅಂದರೆ ಕುಣಿತ-ಮಣಿತಗಳಿಗೆ ಸಂಬಂಧಪಟ್ಟಂತೆ ಹೇಳುವುದಾದರೆ ಪುರುಷಪಾತ್ರ ಕುಣಿಯುವುದೇ ಇಲ್ಲ. ಸ್ತ್ರೀ ಪಾತ್ರ ಕ್ವಚಿತ್ತಾಗಿ ಒಂದೆರಡು ನರ್ತನಗಳನ್ನು ನಿರ್ವಹಿಸುತ್ತದೆ. ಮಾತಿಗೆ ತಕ್ಕಂತೆ ಅಂಗಾಂಗದ ಚಲನೆ-ವಲನೆ ತೋರಿಬರುತ್ತಿದ್ದು ಹನುಮಂತ ಮೊದಲಾದ ಪಾತ್ರಧಾರಿಗಳು ಮಾಳಿಗೆಯಿಂದ ಮಾಳಿಗೆಗೆ, ಕಟ್ಟೆಯಿಂದ ಕಟ್ಟೆಗೆ ಜಿಗಿಯುವ ಅಪಾಯಕಾರಿ ಸನ್ನಿವೇಶಗಳನ್ನೂ ನಿರ್ವಹಿಸುತ್ತಾರೆ.

ದೃಶ್ಯವನ್ನು, ಮಾತು-ಗೀತ ರೂಪದ "ವಾಚಿಕ" ಆಮೇಲೆ ಬಂದು ಸೇರಿಕೊಂಡರೂ ಅಲ್ಲಿ ತುಂಬ ಪ್ರಧಾನವಾಗಿ ಕಾಲೂರಿ ನಿಂತಂತೆ ವೇಷಗಾರರಲ್ಲಿಯೂ ಪ್ರಾಧಾನ್ಯ ಪಡೆಯುತ್ತ ಬಂದಿದೆ. ಒಟ್ಟು 'ರಚನೆ' ಮಾತಿಗೆ ಪ್ರತಿಮಾತು ರೂಪದ ಸಂಭಾಷಣೆಯಾಗಿದ್ದು ತಾತ್ತ್ವಿಕ ಪ್ರಶ್ನೋತ್ತರದಲ್ಲಿ ಹಾಸ್ಯ ಪಟಾಕ್ಷಿಗಳಲ್ಲಿ ಗಂಭೀರ-ಸರಸ ಗುಣಗಳನ್ನು ಕಾಣಬಹುದಾಗಿದೆ. ಕವಿರಾಜಮಾರ್ಗಕಾರ, "ಶ್ರುತಿದುಷ್ಟ, ಅರ್ಥದುಷ್ಟ, ಶ್ರುತಿಕಷ್ಟ ಕಲ್ಪನೋಕ್ತಿಕಷ್ಟ ಭಾಷೆ ಕಾವ್ಯಕ್ಕೆ ದೋಷವೆನಿಸಿದರೂ ಶ್ರುತಿದುಷ್ಟ, ಅರ್ಥದುಷ್ಟ, ಕಲ್ಪನೋಕ್ತಿ ಕಷ್ಟ ಭಾಷೆ ನಗಿಸುವುದರಿಂದ ಪಗರಣದಲ್ಲಿ ಗುಣವೆನಿಸುತ್ತದೆ ಎಂದು ಹೇಳುವುದು ಪಗರಣದ ಒಂದು ಅಂಗವಾದ ವೇಷಗಾರರ ಮಾತು-ಗೀತಗಳಿಗೂ

ಅನ್ವಯಿಸುತ್ತದೆ. ಕನ್ನಡ ಮಾತುಗಳು ತೆಲುಗುಧ್ವನಿಯಲ್ಲಿ ತೂರಿಬರುತ್ತಿದ್ದು ವ್ಯಾಕರಣ ಬದ್ಧವಾಗಿ, ಮಹಾಪ್ರಾಣಯುಕ್ತವಾಗಿ ಸಂಭಾಷಣೆ ನಡೆಸುತ್ತಾರೆ. ಪ್ರೇಕ್ಷರ ಸಂತೋಷಕ್ಕಾಗಿ ಪಾತ್ರೋಚಿತವಲ್ಲದ ಹಾಸ್ಯವನ್ನೂ ಬಳಸುತ್ತಾರೆ. ಗೀತಗಳು ಸ್ವಯಂರಚಿತವಾಗಿರದೆ ಅಲ್ಲಲ್ಲಿ ಕೇಳಿದವುಗಳಾಗಿದ್ದು, ಅವುಗಳನ್ನು ಸಂದರ್ಭೋಚಿತ ವಾಗಿ ಬಳಸಿಕೊಳ್ಳುತ್ತಾರೆ. ಇದಕ್ಕೆ ಪೂರಕವಾಗಿ ಅವರು ಬಳಸುವ ವಾದ್ಯಗಳು ತಬಲಾ, ಪೇಟಿ, ದಮ್ಮಡಿ, ತಾಳ. ವೇಷಗಾರರ ಕಲಾಭಿಜ್ಞತೆಗೆ ಉತ್ಕೃಷ್ಟ ಉದಾ ಹರಣೆಯೆಂದರೆ ಅರ್ಧನಾರೀನಟೇಶ್ವರವೇಷ. ಒಬ್ಬನೇ ವ್ಯಕ್ತಿಯು ಎಡಭಾಗಕ್ಕೆ ಪಾರ್ವತಿಯ ವರ್ಣಭೂಷಣ, ಬಲಭಾಗಕ್ಕೆ ಪರಶಿವನ ವರ್ಣಭೂಷಣ. ತಲೆಯಿಂದ ಮೂಗಿನ ನೇರಕ್ಕಿಳಿಬಿಟ್ಟ ಪರದೆ ಒಮ್ಮೆ ಪಾರ್ವತಿ ಭಾಗವನ್ನು ಮುಚ್ಚಿ ಪರಶಿವ ಭಾಗವನ್ನು ಪ್ರಕಟಿಸಿದರೆ, ಇನ್ನೊಮ್ಮೆ ಪರಶಿವ ಭಾಗವನ್ನು ಮುಚ್ಚಿ ಪಾರ್ವತಿಭಾಗ ವನ್ನು ಪ್ರಕಟಿಸುತ್ತದೆ. ಈ ಪರದೆಯ ತಂತ್ರ ಏಕಪಾತ್ರಾಭಿನಯದ ಸೋಜಿಗವಾದ ಸಂಶೋಧನೆಯೇ ಸರಿ. ಇದಕ್ಕೆ ಕಳಸವಿಟ್ಟಂತೆ ಪ್ರಶ್ನೋತ್ತರಗಳಲ್ಲಿ ಒಮ್ಮೆ ಸ್ತ್ರೀಧ್ವನಿ. ಸ್ತ್ರೀ ಹಾವಭಾವ ವಿಲಾಸ ವಿಭ್ರಮೆಗಳನ್ನೂ ಇನ್ನೊಮ್ಮೆ ಪುರುಷಧ್ವನಿ, ಪುರುಷ ಹಾವಭಾವ, ವಿಲಾಸ ವಿಭ್ರಮೆಗಳನ್ನೂ ಪ್ರಕಟಿಸುತ್ತ ಹೋಗುವ 'ಅಭಿನಯ ಚಾತುರ್ಯ' ತುಂಬ ಮೆಚ್ಚುವಂತಹುದು. ಒಂದು ಘಟನೆ. ಮೈಸೂರು ಅರಸು ಮುಮ್ಮಡಿ ಕೃಷ್ಣರಾಜರು ಆಳುತ್ತಿದ್ದ ಕಾಲ. ಒಮ್ಮೆ ಮಹಾರಾಜರ ಅರಮನೆಗೆ ಅನಿರೀಕ್ಷಿತವಾಗಿ ಒಬ್ಬ ಸನ್ಯಾಸಿ ಆಗಮಿಸಿದ. ಮಹಾರಾಜರು ಭಕ್ತಿಯಿಂದ ಬರಮಾಡಿ ಕೊಂಡು ಉಚಿತ ಗೌರವಸಲ್ಲಿಸಿ ಬೊಗಸೆ ತುಂಬ ದಕ್ಷಿಣೆಯನ್ನು ಕಾಣಿಕೆಯಾಗಿ ಅರ್ಪಿಸಿದರು. ಸನ್ಯಾಸಿ ಸ್ವೀಕರಿಸದೆ ನಿರ್ಲಿಪ್ತಭಾವದಿಂದ ಹಾಗೆಯೇ ಎದ್ದು ಹೋದ. ಮರುದಿನ ಒಬ್ಬ ಭಿಕ್ಷುಕ ಆಗಮಿಸಿದ. ಮಹಾರಾಜರು ಒಂದು ಚೂರು ನಾಣ್ಯ ಹಾಕಲು ಹೇಳಿದರು. ಭಿಕ್ಷುಕ ತಡೆದು "ಮಹಾರಾಜ, ನಿನ್ನೆ ನನಗೆ ಬೊಗಸೆತುಂಬ ದಕ್ಷಿಣೆ ಕಾಣಿಕೆ ಕೊಡಲು ಮುಂದಾದವರು ಇಂದು ಒಂದು ಚೂರು ನಾಣ್ಯ ನೀಡಿಸು ವುದು ನ್ಯಾಯವೇ ?" ಎಂದು ಪ್ರಶ್ನಿಸಿದ. ಅರಸರು ಅವಕ್ಕಾದರು. "ನಿನ್ನೆ ಸನ್ಯಾಸಿ ರೂಪದಲ್ಲಿ ಬಂದವನು ನೀನೆ ?" ಎಂದರು. "ಹೌದು ಸ್ವಾಮಿ, ನಾನೊಬ್ಬ ವೇಷಗಾರ, ದಿನಕ್ಕೊಂದು ವೇಷ ಹಾಕಿ ಹೊಟ್ಟೆ ತುಂಬಿಕೊಳ್ಳುತ್ತೇನೆ." "ನಿನ್ನೆ ಬೊಗಸೆ ತುಂಬ ದಕ್ಷಿಣೆಯನ್ನು ನಿರಾಕರಿಸಿದವ, ಇಂದು ಏಕೆ ಹೆಚ್ಚು ಆಸೆ ಮಾಡುವೆ ?" "ನಿನ್ನೆ ಸ್ವೀಕರಿ ಸಿದ್ದರೆ ಸನ್ಯಾಸಿ ವೇಷಕ್ಕೆ ಅನ್ಯಾಯ ಮಾಡಿಕೊಂಡಂತಾಗುತ್ತಿದ್ದಿತು. ಇಂದು ಭಿಕ್ಷುಕನಾಗಿ ಬೇಡಬೇಕಾದುದು, ಕಾಡಬೇಕಾದುದು ನನ್ನ ಧರ್ಮ" ಎಂದು ಉತ್ತರಿಸಿದ. ಸಂತುಷ್ಟನಾದ ಅರಸರು "ನಿನ್ನೆ ನೀನು ನಟಿಸಿದ ನಿರ್ಲಿಪ್ತಭಾವದ ಯೋಗಿಗಳು ನಿಜ ಜೀವನದಲ್ಲಿ ಇರುವುದನ್ನು ಊರೂರು ಅಲೆಯುವ ನೀನು ಎಲ್ಲಿಯಾದರೂ ಕಂಡಿರುವೆಯಾ?" "ಕಂಡಿದ್ದೇನೆ. ಮುಳಗುಂದದಲ್ಲಿ ಬಾಲಲೀಲಾ ಮಹಾಂತಶಿವಯೋಗಿ

ಎಂಬವರಿದ್ದಾರೆ'' ಎಂದು ಹೇಳಿದ. ಮಹಾರಾಜರು ಆತನ ವೇಷಗಾರಿಕೆಗೆ ಮೆಚ್ಚಿ ದೊಡ್ಡ ಭಿಕ್ಷೆ ನೀಡಿ ಅತ್ತ ಕಳಿಸಿದರು; ಇತ್ತ ತಮ್ಮ ರಾಯಭಾರಿಯನ್ನು ಮುಳಗುಂದಕ್ಕೆ ಕಳಿಸಿ ಮಹಾಂತ ಶಿವಯೋಗಿಗಳನ್ನು ಮೈಸೂರಿಗೆ ಭಕ್ತಿಯಿಂದ ಬರಮಾಡಿಕೊಂಡರು. ಈ ಘಟನೆ ವೇಷಗಾರರ ನಟನಾಚಾತುರ್ಯಕ್ಕೆ ಉತ್ಕೃಷ್ಟ ಉದಾಹರಣೆ.

ಬಹುರೂಪಿಗಳ ಪ್ರಧಾನವೃತ್ತಿ ವೇಷಗಾರಿಕೆಯಾದರೆ ಉಪವೃತ್ತಿ ಹಾಡುಗಾರಿಕೆ. ಇವರು ಸಾಮೂಹಿಕವಾಗಿ ಗ್ರಾಮ ಕೂಟಗಳಲ್ಲಿ ವೇಷಗಾರಿಕೆಯನ್ನು ನಿರ್ವಹಿಸಿದರೆ ವೈಯಕ್ತಿಕವಾಗಿ ಮನೆಮನೆಗಳ ಮುಂದೆ ಹಾಡು ಹೇಳಿ ಭಿಕ್ಷೆಪಡೆಯುತ್ತಾರೆ. ಹೀಗೆ ಹಾಡು ಹೇಳುವವ ಪುರುಷ, ಸ್ತ್ರೀ, ಇಲ್ಲವೆ ಬಾಲಕ-ಬಾಲಿಕೆಯಾಗಿರಬಹುದು. ಪುರುಷ ಪೇಟಿ ಇಲ್ಲವೆ ದಮಡಿ ಬಳಸಿದರೆ ಸ್ತ್ರೀ, ಬಾಲಕ, ಕೇವಲ ದಮಡಿ ಬಳಸುತ್ತಾರೆ. ಈ ಪ್ರಸಂಗದಲ್ಲಿ ಪುರುಷ ಅನುಭಾವ ಗೀತೆ, ಸರ್ವಜ್ಞನ ವಚನ ಇತ್ಯಾದಿಗಳನ್ನು, ಸ್ತ್ರೀ ಬಾಲಕ–ಬಾಲಿಕೆ ಕೇವಲ ಸರ್ವಜ್ಞ ವಚನಗಳನ್ನು ಹೇಳುವುದು ರೂಢಿ. ಒಂದರ್ಥದಲ್ಲಿ ಇವರು ಸರ್ವಜ್ಞನ ಭಾಂಡಾರದ ವಾರಸುದಾರರು. ಇವರಿಗೆ ಅವನ ಬಗ್ಗೆ ಅದಮ್ಯ ಅಭಿಮಾನ. ತಾವು ಸರ್ವಜ್ಞನ ಮಕ್ಕಳೆಂದು ಹೆಮ್ಮೆಯಿಂದ ಹೇಳುವುದೂ ಉಂಟು. ಕಿನ್ನರಿ ಜೋಗಿಗಳು ಹಾಡುವುದರ ಮೂಲಕ ಮಹಾಭಾರತವನ್ನು ಜನರ ಮಧ್ಯೆ ಜೀವಂತವಾಗಿಟ್ಟರೆ ವೇಷಗಾರರು ಹಾಡುವುದರ ಮೂಲಕ ಸರ್ವಜ್ಞನನ್ನು ಜನರ ಮಧ್ಯ ಜೀವಂತವಾಗಿಟ್ಟಿರುವರು. ಇಷ್ಟೇ ಏಕೆ ಈವರೆಗೆ ಹಸ್ತಪ್ರತಿಗಳಲ್ಲಿ ಸಿಗದ ಸಾವಿರಾರು ಸರ್ವಜ್ಞ ವಚನಗಳು ಇವರ ಬಾಯಲ್ಲಿ ಕೇಳಿ ಬರುತ್ತವೆ. ಇವು ಮೂಲ ವಚನಗಳೋ ಇವರೇ ಮೂಲ ಮಾದರಿಯಲ್ಲಿ ಕಟ್ಟಿದುವೋ ಎಂಬ ವಿಷಯವಾಗಿ ಸಂಶೋಧನೆ ನಡೆಯಬೇಕಾಗಿದೆ.

ಹೀಗೆ ವೇಷಗಾರರದು ಅನೇಕ ಶತಮಾನಗಳಿಂದ ವೇಷಗಾರಿಕೆ ಮತ್ತು ಹಾಡುಗಾರಿಕೆಗಳ ಮೂಲಕ ಜಾನಪದರನ್ನು ರಂಜಿಸುತ್ತ ಅವರಿಗೆ ತತ್ತ್ವಬೋಧೆಯನ್ನು ಸಾರುತ್ತ ಬಂದ ಜನಾಂಗವಾಗಿದೆ. ಇವರ ಕಲೆ ಇಂದು ಎಲ್ಲ ಜನಪದ ಕಲೆಗಳಂತೆ ತನ್ನ ಆಕರ್ಷಣೆಯನ್ನು ಕಳೆದುಕೊಳ್ಳುತ್ತಲಿದೆ. ಇವುಗಳನ್ನು ಪೋಷಿಸುವ ಹೊಣೆ ತಮ್ಮದೆಂದು ಸಾರ್ವಜನಿಕರೂ ಮರೆಯತೊಡಗಿದ್ದಾರೆ. ಸರಕಾರದ ಸಹಾಯ ಧನದಿಂದ ಸಂಸ್ಥೆಗಳ ಪುರಸ್ಕಾರದಿಂದ ಬದುಕಿಸಲು ಹೋಗುವುದೆಂದರೆ ನೀರು ಹೊತ್ತು ಮರವನ್ನು ಬೆಳೆಸಿದಂತೆ. ಕಾರಣ ಸಾರ್ವಜನಿಕ ಪೋಷಣೆಯೆಂಬ ವರ್ಷಾಧಾರೆ ಮಾತ್ರ ಈ ಕಲೆಯನ್ನು ಉಳಿಸಬಲ್ಲುದು ; ಬೆಳೆಸಬಲ್ಲುದು.

● ●

# ಡೊಂಬರು

ದೇವೇಂದ್ರಕುಮಾರ ಹಕಾರಿ

**ಪ್ರವೇಶ :**

**ಅಲೆಮಾರಿ ವೃಂದ**

'ಡೊಂಬಗ ನೆಲಿ ಇಲ್ಲ, ಡಂಬಿಗೆ ಬೆಲೆ ಇಲ್ಲ' ಎನ್ನುವ ಗಾದೆ ಎರಡು ಅಂಶಗಳನ್ನು ಸ್ಪಷ್ಟಪಡಿಸುತ್ತದೆ. ಒಂದು : ಡೊಂಬರಿಗೆ ಯಾವುದೇ ಸ್ಥಿರವಾದ ನೆಲೆ ಇಲ್ಲ. ಎರಡು : ಡಂಬನ್ನು ಬೆಲೆ ಕೊಟ್ಟು ಕೊಳ್ಳಬೇಕಾದ ಅಗತ್ಯ ಇಲ್ಲ. ಡೊಂಬನಿಗೂ ಡಂಬಿಗೂ ತಳುಕುಹಾಕುವ ಈ ಗಾದೆ, ಡಂಬು ಎಲ್ಲೆಂದರಲ್ಲಿ ಯಾವ ಬೆಲೆಯೂ ಇಲ್ಲದೆ ಹೇರಳವಾಗಿ ಸಿಗುತ್ತಿದ್ದ ಅಂಥ ಒಂದು– ವಿರಳ ಜನವಸತಿ, ಹೇರಳ ದಟ್ಟಕಾಡಿನ– ಭೂಪ್ರದೇಶದ ಕಾಲದಿಂದಲೇ, ಡೊಂಬರು ನಮ್ಮ ದೇಶದಲ್ಲಿ ವಾಸವಾಗಿದ್ದು ಅವರು ಯಾವುದೇ ಪ್ರದೇಶದಲ್ಲಿ ಸ್ಥಿರವಾಗಿ ಕಾಲೂರದೇ ಅಲೆಮಾರಿ ಗುಂಪಾಗಿದ್ದರು ಎನ್ನುವುದನ್ನು ಸೂಚಿಸುತ್ತದೆ. (ಡಂಭಾಚಾರಕ್ಕೆ ಬೆಲೆ ಇಲ್ಲ ಎನ್ನುವ ಧ್ವನಿಯೂ ಈ ಗಾದೆಯಲ್ಲಿದ್ದೀತು).

ಇಪ್ಪತ್ತನೆಯ ಶತಮಾನದ ಆರಂಭ ಕಾಲದಲ್ಲಿ ಭಾರತೀಯ ವಿಭಿನ್ನ ಆದಿಮಾನವ ಗುಂಪುಗಳು, ಜನಪದ ಸಮುದಾಯಗಳನ್ನು ಕುರಿತು ಜನಾಂಗಿಕ ಸಮೀಕ್ಷೆ ನಡೆಯಿಸಿದ ಜಿ. ಗ್ರಿಯರ್ಸನ್, ಎಫ್. ಫಾಸೆಟ್, ಡಬ್ಲ್ಯೂ. ಕ್ರುಕ್, ಥರ್ಸ್ಟನ್, ಹಯವದನರಾವ, ಎಚ್. ವಿ. ನಂಜುಂಡಯ್ಯ, ಅನಂತಕೃಷ್ಣ ಅಯ್ಯರ ಮುಂತಾದವರ ಅನ್ವೇಷಣೆ, ಅಂಕಿಸಂಖ್ಯೆ, ವಸ್ತುಸಂಗತಿಗಳೇ ಇಂದು ನಮ್ಮ ಅಧ್ಯಯನಕ್ಕೆ ಆಧಾರಗಳು. ಈ ವಿದ್ವಾಂಸರು ಕೈಗೆತ್ತಿಕೊಂಡ ಕ್ಷೇತ್ರಕಾರ್ಯ ಅತ್ಯಂತ ಮಹತ್ವದ್ದಾಗಿದೆ.

ಕ್ಷೇತ್ರಕಾರ್ಯ, ಜನಾಂಗಿಕ ಅಧ್ಯಯನಕ್ಕೆ ಪ್ರಾಣ. ಈಗ ಅದಕ್ಕೆ ಅನುಕೂಲ ಮಾಡಿಕೊಂಡರೂ, ಅಗಣಿತವಾಗಿ ಚೆದುರಿಹೋದ ಬುಡಕಟ್ಟು ಅಲೆಮಾರಿ ವೃಂದಗಳು ಕ್ಷೇತ್ರಕಾರ್ಯದ ಸಮೀಕ್ಷೆಗೆ ಸಮಗ್ರವಾಗಿ ಒದಗುವಂತಿಲ್ಲ. ವೈಜ್ಞಾನಿಕ ಮತ್ತು ಯಂತ್ರೋದ್ಯಮಗಳ ಪ್ರಗತಿ ಪರಿಣಾಮಗಳಿಂದಾಗಿ ಅತ್ಯಂತ ರಭಸದ ಗತಿಯಲ್ಲಿ ಪರಿವರ್ತನೆಗೆ ಒಳಗಾಗಿರುವ ಇಂದಿನ ಭಾರತೀಯ ಗ್ರಾಮೀಣ ಪರಿಸರದಲ್ಲಿ ಕೂಡ ಡೊಂಬರು ಸಿಗುವುದು ಅಪರೂಪ; ಅಲ್ಲಿ ಇಲ್ಲಿ ವಿರಳವಾಗಿ ದೊರೆತ ಒಬ್ಬಿಬ್ಬ ಡೊಂಬರನ್ನು ಕಂಡು ಕೇಳಿದೆ. ಅವರಿಗೆ ತಮ್ಮ ಮೂಲ ಪರಂಪರೆಯ ತಿಳುವಳಿಕೆಯಾಗಲಿ, ತಮ್ಮ ಜನಾಂಗದ ಪ್ರಾಚೀನತೆಯ ಬಗೆಗಾಗಲಿ ವಿಶೇಷ ಏನೊಂದೂ ತಿಳಿಯದು. ಇಂಥ ಒಂದು ಪ್ರಸಂಗದಲ್ಲಿ ಮೇಲೆ ಉಲ್ಲೇಖಿಸಿದ ವಿದ್ವಾಂಸರ ಮಾನವಶಾಸ್ತ್ರ, ಸಮಾಜಶಾಸ್ತ್ರ, ಕುಲಶಾಸ್ತ್ರಗಳ ಹಿನ್ನೆಲೆಯ ವಿಶ್ಲೇಷಣೆ, ಆಲೋಚನೆಗಳು ನಮ್ಮ ಅಧ್ಯಯನಕ್ಕೆ ಮೂಲ ಆಕರಗಳಾಗಿ ಲಭ್ಯವಿರುವುದು ಒಂದು ಸುದೈವವೇ.

ಆರ್ಯರು ಭಾರತಕ್ಕೆ ಬರುವ ಪೂರ್ವಕಾಲದಿಂದಲೇ ಭಾರತದ ನಿವಾಸಿಗಳಾಗಿರ ಬಹುದಾದ ಅನೇಕ ದ್ರಾವಿಡ ಜನಪದ ಸಮುದಾಯಗಳಲ್ಲಿ ಡೊಂಬರೂ ಒಂದು ಮುಖ್ಯ ಗುಂಪು. ವಿವಿಧ ಆದಿಮಾನವ ಸಮೂಹಗಳು ಬುಡಕಟ್ಟುಗಳಾಗಿ ಬಾಳುತ್ತಿದ್ದು, ಕಾಲಾಂತರದಲ್ಲಿ ಅಲ್ಲಲ್ಲಿ ಜನವಸತಿ ನೆಲೆಗೊಂಡ ಬಳಿಕ, ಈ ಗುಂಪು, ಸ್ಥಳೀಯ ಸಮಾಜ ವ್ಯವಸ್ಥೆಯಲ್ಲಿ ಹೊಂದಿಕೊಳ್ಳುವ ಅಥವಾ ಸೇರಿಕೊಳ್ಳುವ ಪ್ರಯತ್ನ ಮಾಡಿದಂತೆ ಕಾಣುತ್ತದೆ. ವಿಭಿನ್ನ ಪ್ರದೇಶದಲ್ಲಿ ವಸತಿಹೂಡಿದ ಜನಸಮೂಹ, ತಮ್ಮ ತಮ್ಮ ಸೌಲಭ್ಯಕ್ಕಾಗಿ, ಸೇವಾ ಸೌಕರ್ಯಕ್ಕಾಗಿ ಈ ಬುಡಕಟ್ಟುಗಳಲ್ಲಿ ಕೆಲವನ್ನು ಒಪ್ಪಿಕೊಂಡಿದೆ— ಮತ್ತೆ ಕೆಲವನ್ನು ತಿರಸ್ಕರಿಸಿದೆ. "ಸ್ಥಳೀಕೃತ ಗುಂಪುಗಳಲ್ಲಿ ಬಹುಸಂಖ್ಯಾತ ಸಮೂಹಗಳು ಸ್ವೀಕೃತ ಬುಡಕಟ್ಟುಗಳೇ ಆಗಿವೆ"[1] ಭಿಲ್ಲ, ಗೊಂಡ, ಕೋಲಿ, ಸಂತಾಲ ಮುಂತಾದ ಸಮುದಾಯಗಳು ಹಿಂದೂ ಸಾಮಾಜಿಕ ವ್ಯವಸ್ಥೆಯಿಂದ ಹೊರಗೇ ಉಳಿದ ಬುಡಕಟ್ಟುಗಳು; ಆದರೆ ಡೊಂಬ, ಗುಜ್ಜರ. ಜಾಟ, ಪೊಂಡ, ಸಾಮಶೂದ್ರ, ನಾಯಕ, ಪರೈಯಾಣ ಮುಂತಾದವು, ಹಿಂದೂ ಸಮಾಜ ವ್ಯವಸ್ಥೆ, ಔದಾರ್ಯದ ಉರುಳು ಹಾಕಿ ಸ್ವೀಕರಿಸಿದ ಕೆಲವು ಬುಡಕಟ್ಟುಗಳು. ಇವು ಕಾಲಾನಂತರದಲ್ಲಿ ಜಾತಿಗಳಾಗಿ ಪರಿವರ್ತನಗೊಂಡರೂ ತಮ್ಮ ಬುಡಕಟ್ಟಿನ ಕೆಲವು ಲಕ್ಷಣಗಳನ್ನು ಒಳಗೊಂಡ ಪಂಗಡಗಳಾಗಿಯೇ ಉಳಿದಿವೆ. ಹೀಗೆ ಅರ್ಧಂಬರ್ಧ ಸ್ವೀಕೃತ ಬುಡಕಟ್ಟುಗಳ ಗತಿ ನಿಜವಾಗಿ ಶೋಚನೀಯವಾಯಿತು. ಇತ್ತ ಅವರು ಸಮಾಜವ್ಯವಸ್ಥೆಯ ಸ್ಥಾನಮಾನ ಗೌರವಗಳಿಗೂ ಪಾತ್ರರಾಗಲಿಲ್ಲ; ಅತ್ತ ತಮ್ಮ ಮೂಲ ವೃತ್ತಿ ಕಸಬುಗಳನ್ನೂ ಪಾಲಿಸಿ ಪೋಷಿಸಿಕೊಳ್ಳಲು ಶಕ್ತರಾಗಲಿಲ್ಲ. ಪಾಲಿಗೆ ಬಂದುದನ್ನೇ ತಮ್ಮ ಬುತ್ತಿ ಎಂದು

1. "...of the localised groups a large number are admittedly tribes"– 'People of India' p. 126 by W. Crooke, 1915.

ಸ್ವೀಕರಿಸುವ ಒಂದು ಒತ್ತಡದ ಪರಿಸ್ಥಿತಿ ನಿರ್ಮಾಣವಾಗಿ ಡೊಂಬರು ಕೂಡ ಅದಕ್ಕೆ ಅನಿವಾರ್ಯವಾಗಿ ಹೊಂದಿಕೊಳ್ಳಬೇಕಾಯಿತು. ಡಬ್ಲ್ಯು. ಕ್ರುಕೆ ಹೇಳುವ "ಈ ಡೊಂಬರು ಆರ್ಯರಿಂದ ತುಳಿಯಲ್ಪಟ್ಟು (crushed) ಸಾಮಾಜಿಕ ತಿರಸ್ಕಾರಕ್ಕೆ ಒಳಗಾದವರು; ಕೀಳೆಂದು ಪರಿಗಣಿಸಲಾದ ಕೆಲಸಗಳನ್ನೇ ತಮ್ಮ ವೃತ್ತಿಗಳನ್ನಾಗಿ ಆಯ್ದು ಕೊಂಡವರು."[1]

ಭಾರತೀಯ ಸಮಾಜವ್ಯವಸ್ಥೆಯಲ್ಲಿ ಡೊಂಬರು ಹೊರಗೇ ಉಳಿದಿದ್ದರೂ ಸಮಾಜದ ಬದುಕಿನಲ್ಲಿ ಅವರದೇ ಆದ ಸ್ಥಾನವಿದೆ. ಜೀವನದ ಎರಡು ಮಹತ್ತ್ವದ ಸನ್ನಿವೇಶಗಳಾದ ಮದುವೆಗೂ ಮಸಣಕ್ಕೂ ಡೊಂಬ ಬೇಕೇಬೇಕು. ಮದುವೆಯ ಹಂದರದಲ್ಲಿ, ಮೆರವಣಿಗೆಯಲ್ಲಿ ವಾಲಗ ಊದುತ್ತಾನೆ. ಮಸಣಗಟ್ಟೆಯಲ್ಲಿ ಹೆಣ ಸುಡಲು ಕಟ್ಟಿಗೆ ಒದಗಿಸುತ್ತಾನೆ; ಹುಗಿಯಲು ಕುಣಿ ತೋಡುತ್ತಾನೆ. ಅರಸೊತ್ತಿಗೆಯ ಕಾಲದಲ್ಲಿ ಅಪರಾಧಿಗಳಿಗಿತ್ತ ಕ್ರೂರ ಶಿಕ್ಷೆಯನ್ನು ಕಾರ್ಯಗತಗೊಳಿಸಿ, 'ಚಂಡಾಲ' ಎನಿಸಿ ಕೊಂಡು, ಜೀವನದ ವಿವಿಧ ಸನ್ನಿವೇಶಗಳಿಗೆ ಸಿಕ್ಕು ಹತ್ತಿಕ್ಕಲ್ಪಟ್ಟ ಡೊಂಬರಲ್ಲಿ ಕೆಲವರು ಮಲ ಹೊರುವುದನ್ನೂ ತಮ್ಮ ವೃತ್ತಿಯನ್ನಾಗಿ ಸ್ವೀಕರಿಸಿದ್ದುದು ನಮ್ಮ ಸಮಾಜ ವ್ಯವಸ್ಥೆಯ ದುರಂತದಲ್ಲಿ ಒಂದಾಗಿದೆ.

ಬಹುಶಃ ಕಾಡಿನ ಒಡೆಯರಾಗಿ, ಜೀವಿಸುತ್ತ ಬಂದ ಅಲೆಮಾರಿ ಡೊಂಬರ ಚರಿತ್ರೆ ತುಂಬ ರೋಚಕವಾಗಿದೆ; ರೋಮಾಂಚಕವಾಗಿದೆ.

ಕತ್ತೆಗೂ ಡೊಂಬರಿಗೂ ಒಂದು ಸಹಚರೀ ಸಂಬಂಧವಿದೆ. ದಟ್ಟ ಕಾಡಿನ ನಡುವೆ ಅಲೆಮಾರಿಯಾಗಿ ಬಾಳುತ್ತಿದ್ದ ಡೊಂಬರಿಗೆ ಒಳ್ಳೆ ಗಟ್ಟಿಮುಟ್ಟಾದ, ಎಷ್ಟು ಭಾರ ಹೇರಿದರೂ, ಹೊತ್ತು ಮುನ್ನಡೆವ ಕತ್ತೆ, ಡೊಂಬರ ಅಚ್ಚುಮೆಚ್ಚಿನ ಪಶು; ಅವರ ಪರಂಪರೆಗಳೇ ಡೊಂಬರಿಗೂ ಕತ್ತೆಗೂ ಸಂಬಂಧ ಕಲ್ಪಿಸುತ್ತದೆ ಎನ್ನುವುದು ವಿದ್ವಾಂಸರ ಅಭಿಪ್ರಾಯ.[2] 'ಕತ್ತೆ ಬೆಲ್ಲಾ ಹೇತರೆ ಡೊಂಬಗ ಯಾಕೆ ಭಿಕ್ಷೆ' ಎನ್ನುವ ಕಿಟ್ಟೆಲ್ ಕೋಶದ ಗಾದೆ ಡೊಂಬರು ಪರಿಸ್ಥಿತಿಯ ಒತ್ತಡದಿಂದಾಗಿ ಭಿಕ್ಷಾವೃತ್ತಿಗೂ ಇಳಿದ ದುರದೃಷ್ಟಕರ ಸಂಗತಿಯನ್ನೂ ಸೂಚಿಸುತ್ತದೆ.

### ಅಲೆಮಾರಿಗಳು : ನೈಸರ್ಗಿಕ ಹಿನ್ನೆಲೆ

ವಿಶೇಷವಾದ ಡಂಬು, ಬಿದಿರು, ಸೀಬುಗಳಹಿಂಡಿಲು, ಮರಗಳ ಗುಂಪು, ಅಲ್ಲಲ್ಲಿ ಹರಿಯುವ ಹಳ್ಳ, ದಂಡೆಗುಂಟ ಪೊದೆ ಪೊದೆ ಬೆಳೆದ ಕೇದಗೆ, ರಕ್ಕಸಬುಳ್ಳಿ ಇಂಥ

1. 'People of India' p. 138, W. Crooke.
2. 'His traditions associate him with donkeys'– 'People of India' p. 138, W. Crooke.

ನಗರತೀರಪ್ರದೇಶದ ದಟ್ಟ ಕಾಡುಗಳ- ವಿರಳ ಜನವಸತಿಯ-ಭೂಪ್ರದೇಶದಲ್ಲಿ ವಾಸವಾಗಿರುತ್ತಿದ್ದ ಅನೇಕ ಅಲೆಮಾರಿ ಜನಾಂಗಗಳಲ್ಲಿ ಒಂದಾದ ಡೊಂಬರು ಪರಿಸರವನ್ನು ಎದುರಿಸುತ್ತಲೇ ಶೌರ್ಯ ಧೈರ್ಯ ಸಾಹಸಗಳನ್ನು ರಕ್ತಗತ ಮಾಡಿಕೊಂಡಿರಬೇಕು. ಕ್ರೂರ ಪಶು ಪ್ರಾಣಿಗಳನ್ನು ಬೇಟೆಯಾಡಿ ಸಾಹಸ ಮನೋವೃತ್ತಿ, ವಿವಿಧ ಕಸರತ್ತು, ಕೈಚಳಕಗಳನ್ನು ವಂಶಪಾರಂಪರ್ಯವಾಗಿ ಸಾಗಿಸಿಕೊಂಡುಬಂದಿರಬೇಕು. ರಕ್ಕಸಬಳ್ಳಿಯಿಂದ, ಡಂಬು ಪೊದೆಗಳಿಂದ ಕೂಡಿದ ಅರಣ್ಯಪ್ರದೇಶದಲ್ಲಿ ಸಂಚರಿಸಿದ ಡೊಂಬರಿಗೆ ರಕ್ಕಸ ಬಳ್ಳಿಯಿಂದ ಪುಡಿನಾರು, ನಾರಿನಿಂದ ಹಗ್ಗ ಹೊಸೆಯುವುದು, ಡಂಬು ಸೀಬು ಕೊಚ್ಚಿ, ಕೆತ್ತಿ, ಸೀಳಿ ಗುಡಿಸಲು ಕಟ್ಟಿಕೊಳ್ಳುವುದು ನಿರಾಯಾಸವಾಗಿ ಸಾಧಿಸಿತು. ಡೊಂಬರು ತಮ್ಮ ನೆಚ್ಚಿನ ಪ್ರಾಣಿ ಕತ್ತೆಗಳ ಮೇಲೆ ಸಾಗಿಸುವ ಮುಖ್ಯ ಸರಕು ಡೊಂಬು ಹಗ್ಗಗಳ ಪೆಂಡೆಯಂತೆ ಕಂಡರೂ ಅದು ಒಂದು ರೀತಿಯಲ್ಲಿ ಡೊಂಬರ ಸಂಚಾರೀ ಗುಡಿಸಲು. ದಪ್ಪ ಡಂಬು, ಸೀಬು ಮತ್ತು ಸಪೂರ ಸೀಳಿದ ಬಿದಿರು ಬರಲುಗಳನ್ನು ತಡಿಕೆ ರೂಪದಲ್ಲಿ ಹೆಣೆದು ಜೋಡಿಸಿ ಕಟ್ಟಿ ಬೇಕಾದ ಹಾಗೆ ಮಡಿಚಿ ಕಟ್ಟಲು ಅನುಕೂಲವಾಗುವ ರೀತಿಯಲ್ಲಿ ರಚಿಸಿ ಬೇಕಾದಲ್ಲಿ ಬೀಡುಬಿಡಲು ಅನುಕೂಲವಾಗುವಂಥ ಒಂದು 'ಸಂಚಾರೀ ಮನೆಯೇ' ಅವರ ಬೆಂಬಲಿಯಾಗಿ ಚಲಿಸುತ್ತದೆ.

## ಸಂಕೀರ್ಣ ಜನಾಂಗ : ವೃತ್ತಿಗಳು

ಇತಿಹಾಸಪೂರ್ವ ಕಾಲದಿಂದಲೂ ಸಿಗುವ ಅನೇಕ ಜನಪದ ಅಲೆಮಾರಿ ಗುಂಪುಗಳಲ್ಲಿ ಡೊಂಬರದು ಒಂದು ಸಂಕೀರ್ಣ ಸಮುದಾಯವಾಗಿದ್ದು ಇವರು ವಿವಿಧ ರೀತಿಯ ವೃತ್ತಿ ಕಸಬುಗಳಲ್ಲಿ ಪರಿಣತರಾಗಿದ್ದರು. ಎಫ್. ಫಾಸೆಟ ಅವರ ಪ್ರಕಾರ ಡೊಂಬರು ನಗರಗಳಿಂದ ಹೊರದೂಡಲ್ಪಟ್ಟ, ಅಸ್ಪೃಶ್ಯರಂತೆ ಬದುಕುವ ಒಂದು ಕಾಡು ಜನಾಂಗ. ಸ್ವಭಾವತಃ ಅಲೆಮಾರಿಗಳಾಗಿದ್ದ ಇವರು ಹಂದಿ, ಕತ್ತೆ, ಕುರಿ ಸಾಕುವುದರಿಂದ ಮೊದಲುಗೊಂಡು ಬೇಟೆಯಾಡುವುದು, ಮರ ಸವರಿ ಕಂಬ ನೆಟ್ಟು ಕಂಬದ ಮೇಲೇರಿ ಗುಂಪುಗುಂಪಾಗಿ ಕಸರತ್ತು ತೋರಿಸುವುದು, ಗಣೆನೆಟ್ಟು ಹಗ್ಗಕಟ್ಟಿ ಹಗ್ಗದ ಮೇಲೆ ನಡೆದಾಡುವುದು, ಸರ್ರನೆ ಮೇಲೇರುವುದು, ಅಷ್ಟೇ ವೇಗದಿಂದ ಚಿಮ್ಮುಗತಿಯಲ್ಲಿ ಏರುವುದು, ವಿವಿಧ ಕೈಚಳಕ ತೋರುವುದು, ಗಣೆಗೆ ಕಟ್ಟಿದ ಹಗ್ಗದ ಮೇಲೆ ಚಿತ್ತಾಕರ್ಷಕ ಭಂಗಿಯಲ್ಲಿ ಮಣಿಮಣಿದು ಕುಣಿಯುವುದು, ಹಾಡುವುದು, ನರ್ತಿಸುವುದು; ಕೊಂಬಿನಿಂದ ಕಹಳೆ, ಬಿದಿರಿನಿಂದ ಕೊಳಲು ಎಳೆಯ ಕೋಣದ ಚರ್ಮ ಆಡಿನ ಚರ್ಮದಿಂದ ತಮಟೆ, ಹಲಗೆ, ಡಪ್ಪು ತಯಾರಿಸಿ, ಊದುವುದು ಬಾರಿಸುವುದು; ಬಿದಿರು ಸೀಳಿ ಬುಟ್ಟಿ ಗರಿಗಳಿಂದ ಚಾಪೆ ಹೆಣೆಯುವುದು, ಮರದಿಂದ ಹಣಿಗೆ, ಹುಲ್ಲಿನಿಂದ ಪೊರಕೆ- ಹೀಗೆ ಹಲವು ಹತ್ತಾರು ವೃತ್ತಿಗಳಲ್ಲಿ ತೊಡಗಿದ ಈ ಜನಾಂಗ, ಒಂದು ಕಾಲಕ್ಕೆ ಸ್ವಾವಲಂಬಿ ಸಮುದಾಯವಾಗಿದ್ದರೆ ಅಚ್ಚರಿಯಿಲ್ಲ. ಮುಂದೆ ಈ ಜನಾಂಗ

ಗಳು ಚದುರಿ ಬೇರೆ ಬೇರೆ ರೂಪ ತಾಳಿ ತಮತಮಗೆ ಒಗ್ಗಿದ ವೃತ್ತಿಗಳನ್ನು ಮುಂದು ವರೆಯಿಸಿಕೊಂಡು ಹೋದವು.

**ಡೊಂಬರ ಸಾಮ್ಯ ಜನಾಂಗಗಳು :**

ಜನಪದ ಐತಿಹ್ಯಗಳ ಪ್ರಕಾರ ಡೊಂಬರಿಗೆ ಸಮೀಪವಾದ ಇತರ ಅಲೆಮಾರಿ ಜನಾಂಗಗಳೆಂದರೆ ಕೊರಚರು ಅಥವಾ ಕೊರವರು, ಲಂಬಾಣಿಗಳು, ಡೋಹಾರರು, ಡಮ್ಮಾರರು. ಈ ಜನಾಂಗದ ವಿಶೇಷ ಸಾಮೀಪ್ಯ ಹೊಂದುವ ಜನಾಂಗಗಳು ಕೊರವರು ಮತ್ತು ಲಂಬಾಣಿ.

ಒಂದು ಐತಿಹ್ಯದ ಪ್ರಕಾರ ಒಂದು ಕಾಲಕ್ಕೆ ಡೊಂಬರು ಮತ್ತು ಕೊರವರು ಸೋದರರಾಗಿದ್ದರಂತೆ. ಇಬ್ಬರು ಸೋದರರಿಗೂ ಕನ್ಯೆ ಹುಡುಕಿದರು. ಕನ್ಯೆಯರ ಅಭಾವವಿದ್ದು 'ತೆರ' ಕೊಟ್ಟು ಮದುವೆಯಾಗಬೇಕಾಗಿದ್ದ ಕಾಲ. ಇಬ್ಬರೂ ಒಂದೇ ಕನ್ಯೆಗಾಗಿ ಹಂಬಲಿಸಿದರು. ಡೊಂಬರು ೨೦ 'ವರಹ' ತೆರಕೊಡುವುದಾಗಿ ಹೇಳಿದರು, ಕೊರವರು ತೆರವಿನ ಹಣ ೨೫ ವರಹಕ್ಕೆ ಏರಿಸಿದರು. ಹೀಗಾಗಿ ಕನ್ಯೆ ಕೊರವನ ಹೆಂಡತಿಯಾದಳು. ಅಂದಿನಿಂದ ಈ ಎರಡೂ ಸಮುದಾಯಗಳಲ್ಲಿ ದ್ವೇಷ ಬೆಳೆಯಿತು–ಭಿನ್ನರಾದರು.

ಲಂಬಾಣಿಗಳೂ ಡೊಂಬರ ಗುಂಪಿಗೆ ಸೇರಿದ ಆಲೆಮಾರಿ ಸಮುದಾಯ. ಲಂಬಾಣಿಗಳ ಮೂಲಪುರುಷನ ಹೆಸರು 'ಮೋಳ' ಅಥವಾ 'ಮೂಳ', ಡೊಂಬರಲ್ಲಿ ಗಣೆ ನೆಟ್ಟು, ಹಗ್ಗಕಟ್ಟಿ, ಮಗುವನ್ನು ಹಗ್ಗಕ್ಕೆ ತುಳುಕಿಸಿ, ಬೀಳದಂತೆ, ಅತ್ತಿಂದಿತ್ತ ತೂಗಿಸುವ ಸಂಪ್ರದಾಯದವರಿದ್ದು ಅವರು ಈ 'ಮೋಳ' ಅಥವಾ 'ಮೂಳ' ಪರಂಪರೆಗೆ ಸೇರಿದವರೆಂದು ನಂಬಿಕೆ.

**ಡೊಂಬರ ಮೂಲ ದಕ್ಷಿಣ–ಉತ್ತರ :**

ಡೋಬ ಪದಕ್ಕೆ ಪರ್ಯಾಯವಾಗಿ ದೊಂಬ, ದೋವರ ಶಬ್ದಗಳೂ ಬಳಕೆಯಲ್ಲಿವೆ. ಡೊಂಬ ಶಬ್ದ 'ಭೂತ' ಅಥವಾ ಒಂದು ಭಯಾನಕ ಶಕ್ತಿ ಮುಂತಾದ ಅರ್ಥವುಳ್ಳ 'ದೋಮ' ಶಬ್ದದಿಂದ ಬಂದಿರಬೇಕು ಎಂದು ವಿದ್ವಾಂಸರ ಊಹೆ. ಡೊಂಬರು ಮೂಲತಃ ದಕ್ಷಿಣ ಭಾರತದವರಾಗಿದ್ದು ಅಲೆಮಾರಿ ಜನಾಂಗದ ಸ್ವಭಾವಕ್ಕೆ ಅನುಗುಣವಾಗಿ ಭಾರತದ ವಿವಿಧ ಪ್ರದೇಶಗಳಲ್ಲಿ ಇವರು ಸಂಚರಿಸಿ, ಕೆಲವೊಮ್ಮೆ ಆಯಾ ಭಾಗದ ವಿವಿಧ ಪ್ರದೇಶಗಳಲ್ಲಿಯೇ ನೆಲೆನಿಂತಿರುವ ಸಾಧ್ಯತೆಯೂ ಇದೆ.

ವಿಶಾಖಾಪಟ್ಟಣದ ೫೦ ರಿಂದ ೮೦ ಮೈಲು ದೂರದ ಗುಡ್ಡಗಾಡು ಪ್ರದೇಶಗಳಲ್ಲಿ ವಾಸವಾಗಿರುವ ಡೊಂಬರು ದ್ರಾವಿಡ ಜನಾಂಗಕ್ಕೆ ಸಂಬಂಧಿಸಿದ ಒಂದು ಅಲೆಮಾರಿ ಸಮುದಾಯ.

ಬಂಗಾಲ, ಬಿಹಾರ, ಒರಿಸ್ಸಾ ಪ್ರದೇಶಗಳಲ್ಲಿಯೂ ಡೊಂಬರ ಸಮುದಾಯ ಕಾಣಸಿಗುತ್ತದೆ. ಬಂಗಾಲ ಮತ್ತು ಒರಿಸ್ಸಾಗಳಲ್ಲಿ ಡೊಂಬರನ್ನು 'ಚಂಡಾಲ', 'ಪರಿಯಾ' ಸಮುದಾಯಗಳಿಗೆ ಹೋಲಿಸಲಾಗುತ್ತದೆ. ವಿಶಾಖಾಪಟ್ಟಣದ ಡೊಂಬರಿಗೆ 'ಇಟಿವಾಳ್ಳು' ಎಂದು ಕರೆಯಲಾಗುತ್ತದೆ. 'ಪಾಣ', 'ಪೈದಿ' ಮುಂತಾದ ಗುಂಪುಗಳು ಡೊಂಬರಿಗೆ ಸಮಾನ ಅಲೆಮಾರಿ ಗುಂಪುಗಳಾಗಿರಬೇಕೆಂದು ಗುರುತಿಸಲಾಗಿದೆ. ಥರ್ಸ್ಟನ್ ಅವರ ಪ್ರಕಾರ ಡೊಂಬರು : 'ವಂಶಪಾರಂಪರ್ಯವಾಗಿ ಜಯಪುರ ಮಹಾರಾಜರ ಸಂಗೀತಗಾರರಾಗಿದ್ದರು.[1] ಜಿ. ಗ್ರಿಯರ್ಸನ್ ಅವರ 'ಯುರೋಪದ ಜಿಪ್ಸಿ ಜನಾಂಗಕ್ಕೂ ಡೊಂಬರು ಮೂಲವಾಗಿರಬಹುದು[2] ಎನ್ನುವ ಊಹೆ ಜಾನಪದ ಅಧ್ಯಯನದ ವಿಲಕ್ಷಣವಾದರೂ ಸತ್ಯವಾಗಿರಬಹುದಾದ ಸಾಧ್ಯತೆಗಳನ್ನು ಸೂಚಿಸುತ್ತದೆ. ದಕ್ಷಿಣ ಭಾರತದಿಂದ ಉತ್ತರ ಭಾರತದ ವಿವಿಧ ಪ್ರದೇಶಗಳಲ್ಲಿ ಹರಿದು ಹಂಚಿ ಹೋಗಿರುವ ಡೊಂಬರನ್ನು ಕುರಿತು ಒಂದು ಸಮಗ್ರ ಅಧ್ಯಯನ ಇದುವರೆಗೂ ನಡೆದಂತಿಲ್ಲ. ಉತ್ತರ ಭಾರತದ ಡೊಂಬರು ಮತ್ತು ದಕ್ಷಿಣ ಭಾರತದ ಡೊಂಬರು ಒಂದೇ ಮೂಲದವರೆಂದು ಭಾವಿಸಲು ಬಾರದು : ಹೆಸರು ಒಂದೇ ಆಗಿರುವುದು ಕೇವಲ ಒಂದು ಆಕಸ್ಮಿಕ[3] ಎಂದು ಕೆಲವು ಸಂಶೋಧಕರ ಅಭಿಪ್ರಾಯ.

ಸುಮಾರು 1148 ರಲ್ಲಿದ್ದ ಕಾಶ್ಮೀರದ ಕವಿ ಕಲ್ಹಣ ತನ್ನ ಕೃತಿ 'ರಾಜತರಂಗಿಣಿ' ಯಲ್ಲಿ ಡೊಂಬರ ಒಂದು ಕಲಾತ್ಮಕ ತಂಡದ ವರ್ಣನೆ ಮಾಡುತ್ತಾನೆ. ಸುಮಾರು 923-938 ರ[4] ಅವಧಿಯಲ್ಲಿ ರಾಜ್ಯವಾಳಿದ ಕಾಶ್ಮೀರದ ಅರಸು ಚಕ್ರವರ್ಮನ ಆಸ್ಥಾನಕ್ಕೆ ಪ್ರಸಿದ್ಧ ಡೊಂಬಗಾಯಕ ರಂಗ ತನ್ನ ನೃತ್ಯ ಸಂಗೀತಗಾರರ ಗುಂಪಿನೊಡನೆ ಬಂದನು. ರಾಜತರಂಗಿಣಿ ಕಾವ್ಯದ 5 ನೆಯ ತರಂಗದಲ್ಲಿ ಸುಮಾರು 28 ಶ್ಲೋಕಗಳು ಈ ಘಟನೆಯ ವರ್ಣನೆಗಾಗಿಯೇ ಮೀಸಲಾಗಿವೆ.[5]

---

1. Castes and tribes of southern India Vol. II p. 176 E. Thursten, 1975.
2. People of India p. 138, W. Crooke.
3. The Mysore tribes and casts Vol. III p. 140 H. V. Nanjundayya and Anantha Krishna Iyer, 1930.
4. 'Rajatarangini' invitation p. xxxiii Ed. by Ranjit Seetharam Pandit, Sahitya Academy, 1968.
5. 'ರಾಜತರಂಗಿಣಿ' 5 ನೆಯ ತರಂಗ : ಶ್ಲೋಕ 359-387.

ಡೊಂಬ ರಂಗ ಅನ್ಯ ದೇಶದಿಂದ ಬಂದನಂತೆ. ರಂಗನ ಜೊತೆಗಿದ್ದವರು ಅವನ ಇಬ್ಬರು ಸ್ಫುರದ್ರೂಪಿ ಹರೆಯದ ಮಕ್ಕಳು–ಅಕ್ಕತಂಗಿಯರು–ಹಂಸಿ ಮತ್ತು ನಾಗಲತಾ. ಚಕ್ರವರ್ತಿಯ ಸಭಾಗೃಹದ ರಂಗಮಂಟಪದಲ್ಲಿ ಸಂಗೀತ ನೃತ್ಯಕಲೆ ಪ್ರದರ್ಶನದ ಅನುಮತಿ ಪಡೆದು ಪ್ರವೇಶಿಸಿದ ಈ ತಂಡ 'ಅನ್ಯಪ್ರದೇಶ'ದಿಂದ ಬಂದುದಾಗಿತ್ತು ಎಂದು ಕವಿ ವರ್ಣಿಸುತ್ತಾನೆ.

ಹಂಸಿ ಮತ್ತು ನಾಗಲತಾ ಎನ್ನುವ ಇಬ್ಬರು ಡೊಂಬಿತಿಯರು ಚಿತ್ತಾಕರ್ಷಕ ರೂಪವುಳ್ಳವರು. ಹರೆಯದ ಮದವೇರಿದ ಈ ತರುಣಿಯರು ಪಂಚಮ ಶ್ರುತಿಯಲ್ಲಿ ಮೃದು ಸ್ವರಾಲಾಪದ ಅಲೆಗಳನ್ನು ಚಿಮ್ಮಿಸಿ ವಿಶೇಷರಾಗ ಎತ್ತಿ ಹಾಡಿದರು. ಅವರ ಮಧುರತರ ಸ್ವರಮೇಳ, ಬೆಡಗಿನ ಭಾವಾಭಿನಯ, ಚೆಲ್ಲಿಗಂಗಳ ಹೊಳಪುಗಳಿಂದ ಪ್ರಭಾವಿತನಾದ ಚಕ್ರವರ್ತಿಗೆ 'ಇವರ ಹಾಡು ರತ್ನಖಚಿತವಾದ ಹೂಜಿಯಲ್ಲಿ ಹಾಕಿದ ಮದಿರೆಯಷ್ಟೇ ಮಾದಕವಾಗಿದೆ' ಅನಿಸಿತು. ಡೊಂಬಿತಿಯರ ಮೇಲಿನ ಚಕ್ರವರ್ತಿಯ ಮೋಹ ಮೇರೆಮೀರಿತು;[1] 'ಹಂಸಿ'ಯನ್ನು ಅರಸು ಪಟ್ಟಮಹಿಷಿಯನ್ನಾಗಿ ಸ್ವೀಕರಿಸಿದ, ಡೊಂಬರ ಯುವತಿ ಹಂಸಿ ಪಟ್ಟಮಹಿಷಿಯಾಗಿ ಡೊಂಬರಿಗೇ ಆ ರಾಜ್ಯದಲ್ಲಿ ಒಂದು ವಿಶೇಷ ಸ್ಥಾನಮಾನ ಪ್ರಾಪ್ತವಾಯಿತು. ಡೊಂಬ ಗಾಯಕ ರಂಗನ ಗುಂಪು ಬೇರೆ ದೇಶದಿಂದ ಬಂದಿತ್ತು ಎನ್ನುವುದು ಈ ಗುಂಪಿನ ಅಲೆಮಾರಿ ಸ್ವಭಾವದ ಸೂಚನೆಯಾಗಿದೆ. 'ರಂಭಾ ನೃತ್ಯಕೇಂ ಡೊಂಬರೇ' ಎನ್ನುವ ಸೋಮೇಶ್ವರ ಶತಕದ ಮಾತು ಈ ದಿಸೆಯಲ್ಲಿ ಗಮನಾರ್ಹವಾಗಿದ್ದು, ಈ ಡೊಂಬರು, ನೃತ್ಯ ಸಂಗೀತ ಕಲೆಗಳಲ್ಲಿ ಪಡೆದಿದ್ದ ಪರಿಣತಿಯನ್ನೂ ಎತ್ತಿತೋರಿಸುತ್ತದೆ.

ಒಟ್ಟಾರೆ ಅಲೆಮಾರಿ ಜನಾಂಗಗಳು ದೇಶದ ಯಾವುದೇ ಒಂದು ಮೂಲದಿಂದ ಇತರ ಯಾವುದೇ ದೂರದ ಪ್ರದೇಶದ ವರೆಗೆ ಹರಿದು ನೆಲೆಸಿರಬಹುದಾದ ಸಂಭವವನ್ನು ಮತ್ತು ವಿಭಿನ್ನ ಪ್ರದೇಶಗಳ ಡೊಂಬ ಸಮುದಾಯಗಳಲ್ಲಿ ಕಾಣಬರುವ ವೃತ್ತಿ ಕಸಬುಗಳ ಸಮಾನಾಂಶಗಳನ್ನೂ ಗಂಭೀರವಾಗಿ ಪರಿಗಣಿಸಿದರೆ ದಕ್ಷಿಣ ಮತ್ತು ಉತ್ತರದ ಡೊಂಬರು ಒಂದೇ ಮೂಲದವರಾಗಿರುವ ಸಾಧ್ಯತೆಯೇ ಅಧಿಕ; ಆದರೆ ಇದಕ್ಕೆ ಆ ನಿಟ್ಟಿನ ಖಚಿತ ಮತ್ತು ವ್ಯಾಪಕ ಸಂಶೋಧನೆ ಅಗತ್ಯ.

### ಡೊಂಬ ಸಮುದಾಯದ ಹುಟ್ಟು ಮತ್ತು ಪರಂಪರೆ :

ಡೊಂಬರನ್ನು ಕುರಿತು ಅನೇಕ ಜನಪದ ದಂತಕಥೆ ಪೌರಾಣಿಕ ಸನ್ನಿವೇಶಗಳಿಂದ ಮೊದಲುಗೊಂಡು ಚಾರಿತ್ರಿಕ ಮತ್ತು ಸಾಹಿತ್ಯ ಕೃತಿಗಳ ವರೆಗೆ ವಿವಿಧ ಉಲ್ಲೇಖಗಳು

1. 'ರಾಜತರಂಗಿಣಿ' 5 ನೆಯ ತರಂಗ : ಶ್ಲೋಕ 369.

ದೊರೆಯುತ್ತವೆ: ವಿಲಕ್ಷಣ ಗುಣಗಳ ಈ ಸಮುದಾಯ ಶಿಷ್ಟಪದದಲ್ಲಿ ಎಷ್ಟರಮಟ್ಟಿಗೆ ಬೆರೆತಿದ್ದರು ಎನ್ನುವುದಕ್ಕೂ ಇವು ನಿದರ್ಶನವಾಗಿವೆ.

ಒಂದು ಜನಪದ ಐತಿಹ್ಯದ ಪ್ರಕಾರ: ಒಬ್ಬ ರಡ್ಡಿಗೆ ಇಬ್ಬರು ಹೆಂಡಿರು. ಕಿರಿಯ ಹೆಂಡತಿಗೆ ಹುಟ್ಟಿದ ಮಗ ಹುಟ್ಟಿನಿಂದಲೇ ಅಂಗಹೀನ. 'ಇದು ಅನಿಷ್ಟಕಾರ' ಎಂದು ಜೋಯಿಸರು ಹೇಳಿದ್ದಕ್ಕೆ ರಡ್ಡಿ, ಈ ಮಗುವನ್ನು ತೊರೆದುಬಿಡುವಂತೆ ತನ್ನ ಕಿರಿ ಹೆಂಡತಿಗೆ ಆಜ್ಞಾಪಿಸಿದ. ಮಗುವಿಗಾಗಿ ಕರುಳುಮಿಡಿದ ಆ ತಾಯಿ ಮಗುವನ್ನು ದನದ ಕೊಟ್ಟಿಗೆಯಲ್ಲಿ ಬಚ್ಚಿಟ್ಟಳು. ಅದರಿಂದಾಗಿ ಅಗಣಿತ ದನಕರುಗಳು ಸಾವಿಗೀಡಾದುವು. ಬೇಸತ್ತ ತಾಯಿ ಆ ಮಗುವನ್ನು ಗುಪ್ತವಾಗಿ ಒಬ್ಬ ಭಿಕ್ಷುಕನಿಗೆ ಒಪ್ಪಿಸಿದಳು. ಆ ಭಿಕ್ಷುಕ ಮಗುವನ್ನು ಒಂದು ಭಾವಿಗೆ ಚೆಲ್ಲಿದ. ಮಗು ಸಾಯಲಿಲ್ಲ: ಬದಲು ಜೋರಾಗಿ ಅಳತೊಡಗಿತು. ಆ ರೋದನ ಕೇಳಿ ಪಾರ್ವತಿ ಪರಮೇಶ್ವರರು ಬಂದು ಮಗುವಿಗೆ ಅಂಗಾಂಗ ಬರುವಂತೆ ಕರುಣಿಸಿದರು. ಬಾವಿಯ ತಳದಿಂದಲೇ ಮಿಂಚಿನಂತೆ ನೆಗೆದು ಅವರ ಪಾದಕ್ಕೆರಗಿದ. ಪಾರ್ವತಿ ಪರಮೇಶ್ವರರು ಮಾಯವಾದರು. ಆ ಬಳಿಕ ಹುಡುಗ ಬೀದಿಯಲ್ಲಿ ಹೋಗುತ್ತಿದ್ದ ಕಸರತ್ತುಗಾರರ ಗುಂಪು ಸೇರಿಕೊಂಡು. ಅಲೆದಾಟದ ಕಾಲದಲ್ಲಿ ಒಬ್ಬಳನ್ನು ಕೂಡಿಕೊಂಡ: ಅವನ ಸಂತಾನವೇ ಡೊಂಬರು.

ಇನ್ನೊಂದು ದಂತಕಥೆ: ಒಬ್ಬ ರಡ್ಡಿಗೆ ಇಬ್ಬರು ಹೆಂಡಿರು. ಕಿರಿಯ ಹೆಂಡತಿ ಗಂಡನಿಗಾಗಿ ಬುತ್ತಿ ತೆಗೆದುಕೊಂಡು ಹೊಲಕ್ಕೆ ಹೋದಾಗ ಅಲ್ಲಿಯೇ ಹೆಣ್ಣು ಹೆತ್ತಳು. ಆ ಹೊಲದಲ್ಲಿಯೇ ಗುಡಿಸಲು ಹಾಕಿ ತಾಯಿ ಮಗುವಿನ ಆರೈಕೆ ಮಾಡಿಸಲಾಯಿತು. ರಡ್ಡಿಯ ಹಿರಿಯ ಹೆಂಡತಿ ಸವತಿಯನ್ನು ಮನೆ ಸೇರಿಸಲು ಒಪ್ಪಲಿಲ್ಲ. ಅವಳ ಹಟಕ್ಕೆ ಮಣಿದ ಗಂಡ ತನ್ನ ಕಿರಿಯ ಹೆಂಡತಿ ಮಗುವನ್ನು ಹೊರಗೇ ಇಟ್ಟು ಒಂದಷ್ಟು ಭೂಮಿ, ಕೊಳಗ, ಹಗ್ಗ, ಡಂಬುಕೊಟ್ಟು ಅಟ್ಟಿದ. ಇಷ್ಟರಿಂದಲೇ ಉಪಜೀವಿಸಬೇಕಾಗಿ ಬಂದ ಈ ತಾಯಿ ಮಕ್ಕಳು ಬೀದಿಪಾಲಾಗಿ ಕಸರತ್ತು, ಹಾಡು ಕುಣಿತ ಕಲಿತರು. ಹುಡುಗಿಗೆ ಹರೆಯ, ಬೀದಿಯಲ್ಲಿ ಕುಣಿಯುವ ತರುಣಿಯನ್ನು ಯಾರು ಮದುವೆ ಆಗುತ್ತಾರೆ. ಇದರಿಂದಾಗಿ ಅವಳು-ಡೊಂಬರ ಚಿನ್ನಾಸಾನಿ ಎಂದು ಕರೆಯಿಸಿಕೊಂಡಳು- ವೇಶ್ಯೆ ಆದಳು. ಹೀಗಾಗಿ ಈ ಸಮುದಾಯದಲ್ಲಿ ವೇಶ್ಯಾವೃತ್ತಿ ಸಾಮಾನ್ಯ ಎಂದು ಭಾವಿಸಲಾಗುತ್ತದೆ. ಕಂಪ್ಲಿ ಅರುಸುಮನೆತನಕ್ಕೂ ಡೊಂಬರಿಗೂ ತಳುಕುಹಾಕುವ ಒಂದು ಜನಪದ ಐತಿಹ್ಯವೂ ಉಂಟು. ಅರಸು ಕಂಪಿಲನ ಕಿರಿಯ ಹೆಂಡತಿ ರತ್ನಮ್ಮಾಜಿ ತನ್ನ ಹಿರಿ ಸವತಿಯ ಮಗ ಕುಮಾರ ರಾಮನನ್ನು ಮೋಹಿಸಿದಳಂತೆ. ಅರಸನಿಗೆ ಇದು ತಿಳಿದು ಕಾಮಾಂಧಳಾದ ರತ್ನಮ್ಮಾಜಿಯನ್ನು ಹೊರಗೆ ಅಟ್ಟಿದ. ಜೀವನೋಪಾಯಕ್ಕೆ ಇವಳು ವೇಶ್ಯೆಯಾದಳು. ಇವಳ ಮಕ್ಕಳು ಕೂಡ ಬೀದಿ ಕಸರತ್ತು ಮಾಡುತ್ತ ವೇಶ್ಯೆಯರಾದರು. ಇವರೇ ಮುಂದೆ ಡೊಂಬರು. ಕೋಣೆಯ ಕೂಸಾಗಿ ಕೊಳೆಯದೇ ಓಣಿಯ ಕೂಸಾಗಿ ಬೆಳೆದ ಇಂಥ ನಿರ್ಗತಿಕ ಮಕ್ಕಳು

ತಮ್ಮ ಚಿತ್ತಾಕರ್ಷಕ ಕುಣಿತ ಕಸರತ್ತುಗಳಿಂದಾಗಿ ಅಲ್ಲಲ್ಲಿ ಉಚ್ಚಕುಲದ ಜನರ ಜೊತೆಗೆ ಸಂಪರ್ಕ ಬೆಳೆಸಿರುವ ಸಾಧ್ಯತೆಯನ್ನು ಮಾತ್ರ ಇಂಥ ಐತಿಹ್ಯಗಳಿಂದ ಊಹಿಸಬಹುದಾಗಲಿ ಇಂಥವುಗಳಿಗೆ ಯಾವುದೇ ಚಾರಿತ್ರಿಕ ಆಧಾರಗಳಿಲ್ಲ.

## ಡೊಂಬರ ಸಾಹಿತ್ಯಕ ಉಲ್ಲೇಖಗಳು :

೮ನೆಯ ಶತಮಾನದ ಒಂದು ಶಾಸನದಲ್ಲಿ ಡೊಂಬರ 'ಕಾಡಪ'[1] ಎನ್ನುವವ ತುರುಗಾಳಗದಲ್ಲಿ ಮಡಿದ ಉಲ್ಲೇಖ ಬರುತ್ತದೆ. ಪಂಪನ 'ವಿಕ್ರಮಾರ್ಜುನ ವಿಜಯ' ದಲ್ಲಿ ಶಿಶುಪಾಲ ಕೃಷ್ಣನನ್ನು ವಿಡಂಬಿಸುವಾಗ :

'ಮೀನಾವೆ ಪಂದಿಯೆಂದೆನಿತಾನುಂ ತೆರನಾಗಿ ಡೊಂಬವಿದ್ಯೆಯ
ನಾಡಲ್ ಅರಿವೆಯ್'

ಎನ್ನುತ್ತಾನೆ. ಬಸವಣ್ಣನವರ ಒಂದು ವಚನದಲ್ಲಿ 'ಮಜ್ಜನಕ್ಕೆರೆದು ಫಲವೇನು ? ಮಾತಿನಂತೆ ಮನವಿಲ್ಲದ ಜಾತಿ ಡೊಂಬರ ನೋಡಿ ನಗುವ ನಮ್ಮ ಕೂಡಲ ಸಂಗಮದೇವ' ಎಂದು ಡಾಂಭಿಕ ಭಕ್ತಿಯನ್ನು ಖಂಡಿಸಲಾಗಿದೆ.

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಸುಮಾರು ೮ನೆಯ ಶತಮಾನದ ಕಾಲದಿಂದಲೂ ಡೊಂಬರು ಈ ಪ್ರದೇಶದಲ್ಲಿ ಅಲೆಮಾರಿಗಳಾಗಿ ಸಂಚರಿಸುತ್ತಿದ್ದರು. ಇಲ್ಲಿಯ ಅಳರಸರ ಸೈನ್ಯದಲ್ಲಿಯೂ ಇವರಿಗೆ ಪ್ರವೇಶ ದೊರೆತಂತೆ ಕಾಣುತ್ತದೆ. ತರತರದ ವೇಷಗಳನ್ನು ಹಾಕಿ ಆಡುವುದರಲ್ಲಿ ಪರಿಣತರಾದ ಇವರ ಕಲೆ 'ಡೊಂಬವಿದ್ಯೆ' ಎಂದು ಮನ್ನಣೆ ಪಡೆದಿತ್ತು. ಅದೇ ಕಾಲಕ್ಕೆ ಈ ಜನ ಕ್ಷಣ ಕ್ಷಣಕ್ಕೆ ತಮ್ಮ ವೃತ್ತಿಯ ಹಾಗೇ ಬಣ್ಣ ಬದಲಿಸುವ ಮನೋಭಾವದವರೂ ಆಗಿದ್ದರು.

## ಗಾದೆಗಳು :

'ಬೆನ್ನ ಹಿಂದೆ ಡೊಂಬನೂ ರಾಜನ', 'ಡೊಂಬ, ಬ್ರಾಹ್ಮಣ, ಆಡು, ಕೈಕೊಡಾಕ ಹೊತ್ತಿಲ್ಲ, ಗೊತ್ತಿಲ್ಲ', 'ಡೊಂಬನ ಮದಿವಿಗಿ ಡೊಂಬಂದ ಸನಾದಿ', 'ಮೀನುಗಾರ ಡೊಂಬಗ ಯೋಳು ಹೆಂಡರು–ಒಬ್ಬಾಕಿಗೂ ಹಾಸಿಗಿಲ್ಲ', 'ಭಲೇ ಡೊಂಬತಿ ಅಂದರ ಬಳಗಾನ ತಂದು ಬಾಗಲದಾಗ ಹಾಡಿದ್ದಳಂತ'–ಇವೆಲ್ಲವು ಡೊಂಬವೃಂದದ ಸ್ವಭಾವ, ವೃತ್ತಿಗಳನ್ನು ಸೂತ್ರೀಕರಿಸಿದ ಗಾದೆಗಳು. ಕಾಲಾನಂತರದಲ್ಲಿ ಅಲ್ಲಲ್ಲಿ ಚದುರಿದ ಡೊಂಬರು ತಮ್ಮ ಕಸಬು, ಕಲೆಗಳಿಂದ ದೂರ ಸರಿದರು ಎನ್ನುವುದನ್ನು ಸೂಚಿಸುವ ಗಾದೆ ಗಮನಾರ್ಹವಾಗಿದೆ : 'ಒಬ್ಬನ ಆಗಿ ಡೊಂಬ ಕೆಟ್ಟ, ಇಬ್ರಾಳಾಗಿ ಜಂಗಮ ಕೆಟ್ಟ'.

---

1. ಎಪಿಗ್ರಾಫಿಯಾ ಇಂಡಿಕಾ. ಸಂಪುಟ 6, ಪು.ಸಂ. 163

**ನೆಲೆವಸತಿ ಮತ್ತು ವೃತ್ತಿಪ್ರದರ್ಶನ :**

ಹೊಂಬರಿಗೆ ಕಾಲೂರಿದ್ದೆ ನೆಲೆ. ತಮ್ಮ ವೃತ್ತಿ ಪ್ರದರ್ಶನಕ್ಕೆ ತಕ್ಕ ಊರು ಆಯ್ದುಕೊಂಡು ಅಲ್ಲಿಗೆ ತಮ್ಮ ತಂಡದೊಡನೆ ಚಲಿಸುತ್ತಾರೆ. ಕತ್ತೆ ಎತ್ತುಗಳ ಬೆನ್ನ ಮೇಲಿದ್ದ 'ಸಂಚಾರೀ ಗುಡಿಸಲ'ನ್ನು ಬಿಚ್ಚಿ ಕ್ಷಣಾರ್ಧದಲ್ಲಿ ಮನೆ ಸಿದ್ಧಗೊಳಿಸುತ್ತಾರೆ. ಗುಡಿಸಲ ಪಕ್ಕದಲ್ಲಿ ಅವರ ಸಹಚರಿ ಪ್ರಾಣಿ ಕತ್ತೆ, ಹಂದಿ, ಎಮ್ಮೆ, ಎತ್ತುಗಳ ಹಟ್ಟಿಯೂ ರೂಪುಗೊಳ್ಳುತ್ತದೆ. ಪಾತ್ರಪಡಗ, ಆಟಿಕೆಯ ಕಸರತ್ತಿನ ಸಾಮಾನು, ಚಾಪೆ, ಬಟ್ಟೆಬರೆ ಎಲ್ಲ 'ಮನೆ'ಯನ್ನು ತುಂಬುತ್ತವೆ. ಬಯಲಲ್ಲಿಯೇ ಕಲ್ಲುಗುಂಡು ಹೂಡಿ ಇವರ ಒಲೆ–ಅಡುಗೆ–ಊಟ.

ತಮ್ಮ ಆಟ ಪ್ರದರ್ಶನಕ್ಕೆ ಊರಲ್ಲಿ ಪ್ರಶಸ್ತವಾದ ಜಾಗೆ ಆಯ್ದುಕೊಂಡ ಇವರು ಪ್ರದರ್ಶನದ ಕಾಲವನ್ನು ಊರಪ್ರಮುಖರಿಗೆಲ್ಲ ಡೋಲು ಬಾರಿಸುತ್ತ ಊರಲ್ಲಿ ಸಾರಿ ಬರುತ್ತಾರೆ. ಗಂಡಸರು ಹೆಂಗಸರು ಮಕ್ಕಳು ಕೂಡ ಪ್ರದರ್ಶನದ ವಿವಿಧ ಆಟಗಳಲ್ಲಿ ಭಾಗವಹಿಸುತ್ತಾರೆ. ಗಂಡಸರು ಹನುಮಾನ ಚಡ್ಡಿ ಮಾತ್ರ ಧರಿಸಿದ್ದು ಕೊರಳಲ್ಲಿ ತಾಯಿತ, ಮುಂಗೈಗೆ ಅಥವಾ ರಟ್ಟೆಗೆ ಕಬ್ಬಿಣದ ಬಳೆ ಹಾಕಿಕೊಂಡಿರುತ್ತಾರೆ. ಹೆಂಗಸರು ಅದರಲ್ಲೂ ಯುವತಿಯರು ಬಗೆಬಗೆ ರಂಗಿನ ಲಂಗ, ಮುಂಗೈ ತೋಳಿನ ರವಿಕೆ, ಕೊರಳ ತುಂಬ ಮಣಿಸರ, ತಾಯಿತ, ಮುಂಗೈತುಂಬ ಬಳೆ, ಮೂಗಿನಲ್ಲಿ ದೊಡ್ಡ ನತ್ತು, ಮುಂಗುರುಳಲ್ಲಿ ನೇತಾಡುವ ಝುಮಕಿ, ಕಿವಿಯಲ್ಲಿ ಬುಗುಡಿ, ಬೆಂಡವೋಲೆ ಹೀಗೆ- ಈ ಆಭರಣಗಳೆಲ್ಲ ಅತಿ ಸಾಮಾನ್ಯ ಸರಕು. ತಂಡದ ಮುಖ್ಯಸ್ಥ ಚಲ್ಲಣ, ನಿಲುವಂಗಿ, ಕಪ್ಪುಕೋಟು ಧರಿಸಿ ಎದೆಯ ಮೇಲೆ ಕೆಲವು ಮೆಡಲ್ ತೂಗುಹಾಕಿರುತ್ತಾನೆ. ಗಂಡಸರು ಊರಪ್ರಮುಖರನ್ನು ಕುರಿತು ಸ್ತುತಿಪಾಠಕರ ಕಾರ್ಯಮಾಡುತ್ತಿರುವಾಗ ಹೆಂಗಸರು ರಂಗದ ಸುತ್ತೂ ಡೋಲು ಬಾರಿಸುತ್ತ ಕುಣಿತದ ಗತ್ತಿನಲ್ಲಿ ಅಲೆಯುತ್ತಾರೆ. ಮಕ್ಕಳು ನಡುನಡುವೆ ಲಾಗಹಾಕುತ್ತಾರೆ.

ಪ್ರದರ್ಶನಕ್ಕೆ ಮೊದಲು ರಂಗದ ಒಂದು ಮೂಲೆಯಲ್ಲಿ ಒಂದು ಚಾಪೆ ಹಾಕಿ ಅದರ ಮೇಲೆ ಕಂಬಳಿ ಅಥವಾ ಯಾವುದೋ ಒಂದು ಬಟ್ಟೆ ಹಾಸಿ, ಅಲ್ಲಿ ತಮಗೆ ವಂಶ ಪಾರಂಪರ್ಯವಾಗಿ ಬಂದವೆಂದು ಹೇಳಲಾದ ಖಡ್ಗ, ಕಠಾರಿ, ಕಿರುಗತ್ತಿ, ಕಬ್ಬಿಣಗುಂಡು, ಮಂತ್ರಮಾಟದ ಕಾಜಿನಗೋಲಕ, ಎಲುಬಿನ ಕೋಲುಗಳನ್ನು ಇಟ್ಟಿರುತ್ತಾರೆ. ಅದರ ಪಕ್ಕದಲ್ಲಿಯೇ ಸೆಗಣಿಯಿಂದ ಸಿದ್ಧಗೊಳಿಸಿದ ಬೆನಕನನ್ನು ಹುಲ್ಲಿನ ಆವರಣದಲ್ಲಿಟ್ಟು ಸಣ್ಣ ರಂಗವಲ್ಲಿಹಾಕಿ ಅಲ್ಲಲ್ಲಿ ಕುಂಕುಮದ ಕುಪ್ಪೆ ಇಟ್ಟು ಪೂಜಿಸಿ, 'ಕಾಪುರಡ್ಡಿ ತಂದೆ' 'ದೇಸ' 'ಮಾವ', 'ಸಾಳ'. 'ಮೂಳ'ರ ಯೋಗ್ಯ ಮಗ ನಾನು' ಎಂದು ಪ್ರಾರ್ಥನೆ ಸಲ್ಲಿಸಿ ಆಟ ಪ್ರಾರಂಭಿಸುತ್ತಾರೆ. ನೆಟ್ಟ ಗಣೆಗೆ ಹಗ್ಗಕಟ್ಟಿ ಎಲ್ಲರೂ ರಂಗದಲ್ಲಿ ಉದ್ದ ಜಿಗಿತ, ಕಿರಿಜಿಗಿತ, ಲಾಗಗಳನ್ನುಹಾಕಿ, ವಾತಾವರಣಕ್ಕೆ ಕುಮ್ಮಕ್ಕು ಕೊಡುತ್ತಾರೆ. ನೆಟ್ಟ ಗಣೆ

ಸರ್ರನೇ ಮೇಲೇರಿ ಇಳಿಯುದು–ಮತ್ತೆ ಫಕ್ಕನೆ ಮೇಲಕ್ಕೆ ಚಿಮ್ಮುವುದು. ಲಾಗ, ಅಂತರಲಾಗ, ನಿಂತನಿಂತಲ್ಲಿಯೇ ಎರಡೆರಡು ಮೂರು ಸಲ ಕುಪ್ಪಳಿಲಾಗ, ಕತ್ತಿ ತಿರುಗಿಸುವುದು, ಕಬ್ಬಿಣ ಗುಂಡೆಸೆದು ಹಿಡಿಯುವುದು, ಗಾತ್ರದಿಮ್ಮಿಗೆ ಮಧ್ಯೆ ಹಗ್ಗಕಟ್ಟಿ ಅದನ್ನು ಹಲ್ಲಿನಿಂದಲೇ ಕಟ್ಟಿ ಮೇಲೆತ್ತುವುದು, ತಮ್ಮ ಉದ್ದ ಕೂದಲಿನಿಂದ ತುಂಬಿದ ಕೊಡ ಕಟ್ಟಿ ಅನಾಮತ್ತಾಗಿ ಮೇಲೇಳುವುದು ಮುಂತಾದ ಶಕ್ತಿಪ್ರದರ್ಶನಗಳು. ಆ ಬಳಿಕ ಯುವತಿಯರು ಗಣೆಯೇರಿ ಹಗ್ಗದ ಮೇಲೆ ಸರಸರ ನಡೆದಾಡುವುದು, ತಂತಿಯಮೇಲೆ– ಓನ್ನೆಲೆಯ ಡೋಲು, ತಮಟೆಯ ತಾಳದ ಲಯದಲ್ಲಿ–ಜೋಲಿ ಸಂಭಾಳಿಸುತ್ತ ಬಾಗಿ, ಮಣಿದು ಆಕರ್ಷಕವಾದ ಭಂಗಿಗಳನ್ನೂ ಚೆಲ್ಲುತ್ತ ನಯವಾಗಿ ಚಲಿಸುವುದು : ಕಬ್ಬಿಣದ ವರ್ತುಲಾಕಾರದ ಬಳೆಗಳಲ್ಲಿ ಅವುಗಳಿಗೆ ತಾಕದಂತೆ ಏಕಕಾಲಕ್ಕೆ ಎದುರುಬದುರು ಲಾಗಹಾಕುವುದು : ಒಂದು ಬಿದು ಕಟ್ಟಿಗೆ ಹಲಗೆ ನಿಲ್ಲಿಸಿ ಅದನ್ನು ಹೊಂದಿ ಒಬ್ಬಳು ನಿಲ್ಲುವುದು. ಹಲಗೆಯ ಸ್ವಲ್ಪದೂರದಲ್ಲಿ ನಿಂತ ಮತ್ತೊಬ್ಬ ಯುವತಿ ಹಲಗೆಗೆ ಹೊಂದಿನಿಂತ ವ್ಯಕ್ತಿಯ ಕೂದಲು ಕೊಂಕದಂತೆ ಅಂಗಾಂಗದ ಭಂಗಿಗನುಗುಣವಾಗಿ ರಭಸಗತಿಯಲ್ಲಿ ಚಾಕು ಅಥವಾ ಹಿಡಿಗತ್ತಿಗಳನ್ನು 'ಸೊಂಯ್ ಸೊಂಯ್' ಎಸೆಯುವುದು– ಈ ಮುಂತಾದ ರೋಮಾಂಚಕ ಚಮತ್ಕಾರಗಳು. ಆ ಬಳಿಕ ಜಾದೂಮಂತ್ರ ಮಾಟ ಚೇಷ್ಟೆ ಕುಣಿತ ಮತ್ತೆ ಲಾಗ, ಅಂತರಲಾಗ. ಈ ಎಲ್ಲ ಸಮಯದಲ್ಲೂ ಮುಖ್ಯಸ್ಥರು ಓನ್ನೆಲೆಯ ವ್ಯಾಖ್ಯೆ, ವಿವರಣೆ ನೀಡುತ್ತಾರೆ. ಪ್ರತಿ ಆಟದ ವೈಶಿಷ್ಟ್ಯ ಹೇಳುತ್ತಿರುತ್ತಾರೆ, ಆಟ ಮುಗಿಯುವ ಮುನ್ನ ಮತ್ತೊಮ್ಮೆ ಜನಕ್ಕೆಗೆ ನಮಸ್ಕಾರ. ಕೊನೆಯಲ್ಲಿ ಗುಂಪಿನ ಆಕರ್ಷಕ ಯುವತಿ ಕೈಯಲ್ಲಿ ಒಂದು ಮರ, ತಟ್ಟೆ ಹಿಡಿದು ಪ್ರೇಕ್ಷಕರ ಮುಂದೆ ಒಡ್ಡುತ್ತಾಳೆ. ಕೊಡಿದ ಹಣ ಮತ್ತೆ ಇತರರು ನೀಡಿದ ದವಸಧಾನ್ಯ ಇವರ 'ಆದು' : ಅದನ್ನು ಸ್ವೀಕರಿಸಿ ಮತ್ತೆ ಮುಂದಿನ ಊರಿಗೆ ಡೊಂಬರ ಪಯಣ.

ಆಧುನಿಕ ಕಾಲದ ಸರ್ಕಸ್ ಕಂಪನಿಗೆ ಡೊಂಬರ ಆಟವೇ ಮೂಲ ಎಂದು ಹೇಳುವುದು ಅಸಗತ್ಯ. ಬೀದಿ ಕಸರತ್ತಿನ ಈ ಜನಪದ ಆಟ ಸರ್ಕಸ್ಸಿನ ರೂಪ ತಾಳಿ ಶಿಷ್ಟಪದ ಆಟವಾಯಿತು. ಹೀಗಾಗಿ ಡೊಂಬರ ಆಟ ಇಂದು ಕೇವಲ ಮೋಜಾಗಿ ಉಳಿದಿದ್ದು ಇನ್ನು ಕಾಲು ಶತಮಾನದಲ್ಲಿ ಅದು ಸಂಪೂರ್ಣ ಅಳಿಸಿ ಹೋದರೆ ಅಚ್ಚರಿ ಪಡಬೇಕಾಗಿಲ್ಲ.

**ಡೊಂಬ ಜನಾಂಗದ ಕೆಲ ವಾಸ್ತವಾಂಶಗಳು :**

ವಿಶಾಖಾ ಪಟ್ಟಣದ ಸುಮಾರು ೫೦ ರಿಂದ ೮೦ ಮೈಲು ದೂರದ ಗುಡ್ಡಗಾಡು ಪ್ರದೇಶಗಳಲ್ಲಿ ಕಾಣಸಿಗುವ ಡೊಂಬರು ದ್ರಾವಿಡ ಜನಾಂಗಕ್ಕೆ ಸಂಬಂಧಿಸಿದ ಒಂದು ಅಲೆಮಾರಿ ಸಮುದಾಯ. ೧೮೪೯ ರ ವಿಶಾಖಾಪಟ್ಟಣದ ಜಿಲ್ಲಾ ಕೈಪಿಡಿಯ ಪ್ರಕಾರ ಅಂದು ಇದ್ದ ಒಟ್ಟು ಡೊಂಬರ ಸಂಖ್ಯೆ ೨,೯೧೧ : ಅದರಲ್ಲಿ ೧,೪೯೦ ಗಂಡಸರು,

ಮತ್ತು ೧,೫೨೧ ಹೆಂಗಸರು. ಆದರೆ ಇತ್ತೀಚೆಗೆ ಈ ಜನಾಂಗದ ಸಮೀಕ್ಷೆ ನಡೆದಂತೆ ಕಾಣುವುದಿಲ್ಲ. ಡೊಂಬರು ಹೆಚ್ಚಾಗಿ ಅನಕ್ಷರಸ್ಥರಾಗಿದ್ದು ತಮ್ಮ ಮಕ್ಕಳನ್ನು ಶಾಲೆಗೆ ಕಳಿಸುವುದೇ ವಿರಳ. ಗಂಡು, ಹೆಣ್ಣು, ಮಕ್ಕಳು ಕೂಡಿಯೇ ಅಲೆಯುವ ಡೊಂಬ ಸಮುದಾಯದ ಮುಖ್ಯಸ್ಥನಿಗೆ ರಡ್ಡಿ, ನಾಯ್ಡು, ನಾಯಕ ಎನ್ನುತ್ತಾರೆ.

ಕರ್ನಾಟಕದಲ್ಲಿ ದೊರೆಯುವ ಡೊಂಬರು, ತೆಲುಗು ಮೂಲದವರು. ನೆಲ್ಲೂರು, ಕಡಪಾ ಜಿಲ್ಲೆಯ ಚಿತ್ತವೇಲು; ವಿಶಾಖಾಪಟ್ಟಣ ಮುಂತಾದ ಭಾಗಗಳಿಂದ ಇಲ್ಲಿಗೆ ವಲಸೆ ಬಂದ ಅಲೆಮಾರಿಗಳು. ತೆಲುಗು ದೇಶದ ಬೊಂಬಾರ ಮದ್ದಲಾಪುರಮ್ ಅವರ ಮೂಲ ನೆಲೆಯಂತೆ. ಮೊದಮೊದಲು ಆಗೀಗ ಕರ್ನಾಟಕ ಪ್ರದೇಶಗಳಲ್ಲಿ ಅಲೆದಾಡಿ ಹೋಗುತ್ತಿದ್ದ ಡೊಂಬರಲ್ಲಿ ಕೆಲವರು ವಿಜಯನಗರದ ಅರಸರ[1] ಕಾಲದಲ್ಲಿ ತಮಗೆ ದೊರೆತ ಪ್ರೋತ್ಸಾಹ ಪುರಸ್ಕಾರಗಳಿಂದಾಗಿ ಇಲ್ಲಿಯೇ ನೆಲೆನಿಂತಂತೆ ಕಾಣುತ್ತದೆ. ಡೊಂಬರಿಗೆ ಒಂದು ಕಾಲಕ್ಕೆ ತೆಲುಗು ಪ್ರದೇಶದ ಜಮ್ಮಲ ಮಡುಗು, ತಾಡಪತ್ರಿ, ಪೊದ್ದುಟೂರು, ಗುಡಂಚೆರ್ಲಾಗಳಲ್ಲಿ 'ಇನಾಮು'ಗಳಿದ್ದವೆಂದು ತಿಳಿದುಬರುತ್ತದೆ.

**ಡೊಂಬರ ಭಾಷೆ ಮತ್ತು ಜನಾಂಗದ ಆಂತರಿಕ ರಚನೆ :**

ಕರ್ನಾಟಕದಲ್ಲಿ ದೊರೆಯುವ ಡೊಂಬರ ಮುಖ್ಯ ಭಾಷೆ ತೆಲುಗು : ಕೆಲವರು ಕನ್ನಡವನ್ನೂ ಬಳಸುತ್ತಾರೆ- ಕೇವಲ ವ್ಯವಹಾರಕ್ಕಾಗಿ : ಆದರೆ ತಮ್ಮ ತಮ್ಮಲ್ಲಿ ಮಾತಾಡಿಕೊಳ್ಳುವುದು ತೆಲುಗು ಭಾಷೆಯಲ್ಲಿಯೇ. ಒಂದು ರೀತಿಯ ಮರಾಠಿ ಉಪ ಭಾಷೆಯಂತೆ ಕಾಣುವ 'ಆರೇ' ಭಾಷೆ ಆಡುವ ಡೊಂಬರೂ ಇದ್ದಾರೆ; ಅವರು ಅತ್ಯಲ್ಪ ಮತ್ತು ವಿರಳ. ಈ ಗುಂಪಿನ ಕುಸ್ತಿಪಟು ಮತ್ತು ಕಸರತ್ತುಗಾರರಲ್ಲಿ ಕೆಲವು ಮುಸಲ್ಮಾನರೂ ಇರುತ್ತಾರೆ. ಆದರೆ ಅವರು ಕೇವಲ ಕುಸ್ತಿಯಾಡುವುದನ್ನೇ ತಮ್ಮ ಮುಖ್ಯ ವೃತ್ತಿಯಾಗಿ ಸ್ವೀಕರಿಸಿರುವುದರಿಂದ ಅಂಥವರಿಗೆ 'ಪೈಲವಾನ' ಎನ್ನುತ್ತಾರೆ. ಇವರಿಗೂ ಡೊಂಬರಿಗೂ ಯಾವುದೇ ಸಂಬಂಧ ಇದ್ದಂತಿಲ್ಲ.

ವಿಭಿನ್ನ ಪ್ರದೇಶಗಳಲ್ಲಿ ಅಲೆಯುವುದು, ಸಂಚರಿಸುವುದು ಮತ್ತು ಕೆಲವುಸಲ ಆಯಾ ಪ್ರದೇಶಕ್ಕೆ ಅಂಟಿಕೊಳ್ಳುವುದು ಅಲೆಮಾರಿ ವೃಂದದ ವಿಲಕ್ಷಣ ಸ್ವಭಾವ. ಇದು ಬಹುಶಃ ಡೊಂಬ ಜನಾಂಗದ ಪ್ರಾದೇಶಿಕ ವೈಶಿಷ್ಟ್ಯಗಳಿಗೂ ಕಾರಣವಾಗಿರಬಹುದು. 'ನಾಡ ಡೊಂಬರೇ' ಇರಲಿ 'ಕಾಡ ಡೊಂಬರೇ' ಇರಲಿ : ಒಟ್ಟು ಡೊಂಬರ ಸಮು ದಾಯದಲ್ಲಿ ೨೨ ಉಪಭಾಗಗಳನ್ನು ಗುರುತಿಸಲಾಗಿದೆ.[2]

---

1. ಇವರಿಗೆ ತಮ್ಮ ಪ್ರದರ್ಶನಕ್ಕಾಗಿ ತೆರಿಗೆ ಕೊಡಬೇಕಾಗುತ್ತಿತ್ತು. 'ಡೊಂಬದೆರೆ' ಎಂದು ನಿಗದಿಮಾಡಿದ ಮೊತ್ತ. 'ವಿಜಯನಗರ ಕಾಲಕ್ಕೆ ಮುಂಚಿನ ಆಡಳಿತ ಭಾಷೆ' ಬಾ. ರಾ. ಗೋಪಾಲ : ಚಿನ್ನದಬೆಳಸು : ಭಾಗ ೩ ಪು. ೧೫.

2. Mysore Tribes and Caste Vol. III. P. 143.

1 ಐಸರಪೋಳ್ಳು
2 ಭೂಪತಿವಾಳ್ಳು
3 ಗಂಧಪುರಜುವಾಳ್ಳು
4 ಗೋಪುಡಸು ವಾಳ್ಳು
5 ಜಟ್ಟಿವಾಳ್ಳು
6 ಕಗ್ಗಡಿವಾಳ್ಳು
7 ಕಲಬಂಡಿವಾಳ್ಳು
8 ಕನಕರಡ್ಡಿವಾಳ್ಳು
9 ಕಸೇರೂಪ್ರುವಾಳ್ಳು
10 ಕಸ್ತೂರಿವಾಳ್ಳು
11 ಕೂಟರವಾಳ್ಳು
12 ಮಲ್ಲೇಪೂವ್ವಾಳುವಾಳ್ಳು
13 ಮಣ್ಣೇಪುಲವಾಳ್ಳು
14 ಮತ್ತಿವಾಳ್ಳು
15 ಮುರಾರಿ ವಾಳ್ಳು
16 ನಾಡು ಮೂಲೇನಿವಾಳ್ಳು
17 ನಾಟಕರಾಯುನಿವಾಳ್ಳು
18 ಪಲ್ಲೆಕೊಂಡಾಲವಾಳ್ಳು
19 ಸೋಮಲರಾಜುವಾಳ್ಳು
20 ಸೊಂಡೂರುವಾಳ್ಳು
21 ತೋಲಂಗಿವಾಳ್ಳು
22 ಉಪ್ಪುವಾಳ್ಳು

'ಮಲ್ಲೆಪೂ,' 'ಉಪ್ಪು,' 'ಕಸ್ತೂರಿ,' 'ಗಂಧ,' 'ಜಟ್ಟಿ,' 'ನಾದುಮೂಲ', 'ನಾಟಕರಾಯು,' 'ಜಟ್ಟಿ,' 'ಕೂಟ' ಮುಂತಾದುವು ಅಂದು ಈ ಜನಸಮುದಾಯಗಳು ಕೈಕೊಂಡಿರಬಹುದಾದ ಭಿನ್ನ ವೃತ್ತಿಗಳ ಸೂಚಿಯಾಗಿವೆಯೇ ? ವಿಚಾರಾರ್ಹ. ಅದ ರಂತೆ ಪಲ್ಲೆಕೊಂಡಾಲ, ಮತ್ತಿ, ಸೊಂಡೂರು, ಕಲಬಂಡಿ ಮುಂತಾದುವು ಪ್ರಾದೇಶಿಕ ಗುಂಪಿನ ದ್ಯೋತಕವಾಗಿರಬಹುದು.

## ಮದುವೆ : ಸಂಬಂಧಿಸಿದ ಇತರ ಪದ್ಧತಿಗಳು

ಮನೆಗೆಲಸ ಮತ್ತು ಇತರ ಎಲ್ಲ ವಿಧದ ಕಾರ್ಯಚಟುವಟಿಕೆಗಳಲ್ಲಿ ಡೊಂಬ ಸ್ತ್ರೀಯರು ನೇರವಾಗಿ ಭಾಗವಹಿಸುತ್ತಾರೆ. ಹೀಗಾಗಿ ಡೊಂಬಿತಿಯರು ತಮ್ಮ ವೃಂದದ ಪುರುಷರಿಗೆ ಬಹು ಉಪಯೋಗಿ ಎನಿಸಿದ್ದಾರೆ. ಈ ವೃಂದದಲ್ಲಿ ಡೊಂಬಿತಿಯ ರಂತೂ ಸರಿಯೇ– ಜೊತೆಗೆ ಇತರ ಕೆಳಜಾತಿಯ ನಿರ್ಗತಿಕ ಮತ್ತು 'ಬಿಡಾಡಿ' ಹೆಂಗಸರೂ ಬಂದು ಸೇರುತ್ತಾರೆ. ಈ ಸಮುದಾಯದ ಹುಡುಗೆಯರಿಗೆ ಬಾಲ್ಯದಿಂದಲೇ ಬೀದಿ ಕಸರತ್ತು, ಕುಣಿತ, ಕೈಚಳಕದ ವಿವಿಧ ಗತ್ತುಗಮ್ಮತ್ತುಗಳಲ್ಲಿ ತರಬೇತು ದೊರೆತು, ಇವರು ಯಾರ ಆಕರ್ಷಣೆಗೂ ವಸ್ತುವಾಗುತ್ತಾರೆ. ವಯಸ್ಸಿಗೆ ಬಂದಮೇಲೆ ಈ ಹುಡುಗೆಯರ ಮದುವೆ ಕನಸಿನ ಗಂಟು. ಇಂಥವರು ಸಹಸಾ ಸೂಳೆಯರಾಗುತ್ತಾರೆ. ಬೀದಿ ಕಸರತ್ತು, ಕುಣಿತಗಳಿಗೆ ಒಗ್ಗದ ಕೆಲ ಡೊಂಬಿತಿಯರ ಮದುವೆಯೂ ಆಗುತ್ತದೆ. ಆದರೆ ಅವರಿಗೇನೂ ವಿಶೇಷ ಸ್ಥಾನಮಾನ ಇದ್ದಂತೆ ತೋರುವುದಿಲ್ಲ.

ಡೊಂಬರಲ್ಲಿ ಬಹುಪತ್ನಿತ್ವ ಸಾಮಾನ್ಯ. ಡೊಂಬ ಗಂಡಸು, ಒಬ್ಬಳನ್ನು ಮದುವೆಯಾದರೂ ಅನೇಕ ಸ್ತ್ರೀಯರ ಜೊತೆ ಸಂಪರ್ಕ ಹೊಂದಿರುತ್ತಾನೆ. ಬಹುಶಃ

ಈ ವೃಂದದ ಅಲೆಮಾರಿತನ ಮತ್ತು ವೃತ್ತಿಗಳೂ ಇದಕ್ಕೆ ಕಾರಣವಾಗಿರಬೇಕು. ಡೊಂಬರು ಸಾಮಾನ್ಯವಾಗಿ ಅಕ್ಕನ ಮಗಳನ್ನು ಮದುವೆಯಾಗುವುದಿಲ್ಲ. ಅಕ್ಕ ತಂಗಿಯರಿಬ್ಬರೂ ಒಬ್ಬನನ್ನೇ ಮದುವೆ ಆಗಬಹುದು. ಅಥವಾ ಅಣ್ಣತಮ್ಮಂದಿರನ್ನು, ಎದುರು ಹೆಣ್ಣು ಕೊಡತೊಗೊಳ್ಳುವ ಪದ್ಧತಿಯೂ ಉಂಟು.

ಮದುವೆಯಲ್ಲಿ 'ನಾಡಡೊಂಬರು' ಶಿಷ್ಟಸಂಪ್ರದಾಯಗಳ ಅನುಕರಣೆ ಮಾಡುತ್ತಾರೆ. ಆದರೆ 'ಕಾಡಡೊಂಬರು' ಮಂಟಪ, ಬಾಸಿಂಗಗಳ ಗೊಡವೆಗೆ ಹೋಗುವುದಿಲ್ಲ. ದಾಂಪತ್ಯದ ಬಗೆಗೆ ಕಣಿ ಕೇಳುವುದು ರೂಢಿ.

ಯಾವುದೇ ಮನೆಯ ಕನ್ಯೆಯನ್ನು ತಮ್ಮ ಮನೆಯ ವರನಿಗೆ ತೆಗೆದುಕೊಳ್ಳಬೇಕಾದಾಗ ವರನ ಕಡೆಯವರು ಒಬ್ಬ 'ಯಜಮಾನ'ನ ಹಿರಿತನದಲ್ಲಿ ಕನ್ಯೆಯ ಮನೆಗೆ ಹೋಗುತ್ತಾರೆ. ಕನ್ಯಾ ಒಪ್ಪಿಗೆಯಾಗುವಂತೆ 'ಯಜಮಾನ' ಮಾತುಕತೆ ನಿರ್ವಹಿಸುತ್ತಾನೆ. ಮತ್ತೆ ಕೆಲವು ದಿನಗಳಾದಬಳಿಕ 'ವರ', ಯಜಮಾನನನ್ನು ಕರೆದುಕೊಂಡು ಕನ್ಯೆಯ ಮನೆಗೆ ಹೋಗಿ ನಾಲ್ಕು ಜನರ ಸಮಕ್ಷಮ ತನ್ನ ಒಪ್ಪಿಗೆ ತಿಳಿಸುತ್ತಾನೆ. ಕನ್ಯೆಯ ತಂದೆ ಅದಕ್ಕೆ ಅನುಮತಿಸುತ್ತಾನೆ. ಯಜಮಾನನಾದವನು 'ಇಂಥವನಿಗೆ ಇಂಥ ಕನ್ಯೆಯನ್ನು ತೆಗೆದುಕೊಳ್ಳಲಾಯಿತು' ಎಂದು ಸಾರುತ್ತಾನೆ : ಆಗ ಒಂದು ತಮಟೆ ಬಾರಿಸಲಾಗುತ್ತದೆ. ಪರಸ್ಪರ ತಾಂಬೂಲದ ಹಂಚಿಕೆ : ವರನ ಕಡೆಯಿಂದ ಎಲ್ಲರಿಗೂ ಹೆಂಡದ ಸರಬರಾಜು. ಇದು ನಿಶ್ಚಿತ ತಾಂಬೂಲ : ಇದೇ ಸಮಯದಲ್ಲಿ ಕನ್ಯೆಗಾಗಿ ಗೊತ್ತುಪಡಿಸಿದ 'ತೆರವು' ಹಣದ ಅರ್ಧ ಮೊತ್ತವನ್ನಾದರೂ ವರನ ಕಡೆಯವರು ಕನ್ಯಾಪಿತನಿಗೆ ಕೊಡಬೇಕು. ವರನ ಕಡೆಯವರು ಬಡವರಿದ್ದರೆ ಪರಸ್ಪರ ಅನುಕೂಲದ ಮೇರೆಗೆ 'ತೆರದ' ಅಲ್ಪಭಾಗವನ್ನಾದರೂ ಔಪಚಾರಿಕ ರೀತಿಯಲ್ಲಿ ಕೊಡಲಾಗುವದು. ಈಗ ನೆಂಟಸ್ತಿಕೆ ಗಟ್ಟಿಯಾದಂತೆ. ಯಾವುದೇ ಕಾರಣದಿಂದ ಹೆಣ್ಣಿನ ಕಡೆಯವರು ಈ ಸಂಬಂಧವನ್ನು ಮುರಿದರೆ. 'ತೆರವು' ನೀಡಿದ ಹಣವನ್ನು ವರನ ತಂದೆಗೆ ತಿರುಗಿಸಬೇಕಲ್ಲದೆ. ಸಮುದಾಯ ವಿಧಿಸಿದ 'ದಂಡ'ವನ್ನೂ ಕೊಡಬೇಕು. ಕಾಡಡೊಂಬರಂತೂ ಈ ವಿಷಯದಲ್ಲಿ ಕ್ರೂರವಾಗೇ ವರ್ತಿಸುತ್ತಾರೆ. ಮಾತು ಮುರಿದು ಕೊಂಡ ಕನ್ಯಾಪಿತನನ್ನು ಕೂಡಿದ ನಾಲ್ಕು ಜನರ ಎದುರು ಎಳೆತಂದು ಅವನ ಬೆನ್ನಮೇಲೆ ಬೀಸುಕಲ್ಲು ಹೇರಿ ಹತ್ತಾರು ಸುತ್ತು ಹಾಕುವ ಶಿಕ್ಷೆ ವಿಧಿಸುತ್ತಾರೆ. ಸಂಬಂಧ ಮುರಿದ ಕನ್ಯೆಯ ಮದುವೆಗೆ ಮತ್ತೆ ಹೊಸ ಏರ್ಪಾಡು.

ಸಾಮಾನ್ಯವಾಗಿ. ಕರ್ನಾಟಕದ ಡೊಂಬರಿಗೆ ತುಮಕೂರ 'ಕಟ್ಟೆಮನೆ'ಯಲ್ಲಿಯೇ ಮದುವೆ. ಕುಲದೇವತೆ ಯಲ್ಲಮ್ಮನ ಗುಡಿಯಲ್ಲಿ 'ಯಜಮಾನ'ನ ಹಿರಿತನದಲ್ಲಿ ವಿವಾಹಗಳು– ಸಾಮೂಹಿಕ ವಿವಾಹ– ಜರುಗುತ್ತವೆ. ಈಗಲೂ ಸಾಮೂಹಿಕ ವಿವಾಹ ಪದ್ಧತಿಯಿದೆಯೋ ತಿಳಿಯದು. ವರನ ಗುಂಪಿನವರು ಸ್ಥಿತಿವಂತರಿದ್ದರೆ

ವರನ ಮನೆಯ ಮುಂದೆಯೇ ಮೂರು ದಿನಗಳ ಮದುವೆ: ಇಂಥ ಸಮಾರಂಭದಲ್ಲಿ ಶಿಷ್ಟಪದ ಜನರ ರೂಢಿಗಳ ಅನುಕರಣೆಯೇ ಹೆಚ್ಚು.

ಮೊದಲದಿನ ಹಂದರದಲ್ಲಿ ಐದು ಕಂಬ ನಡಲಾಗುತ್ತದೆ. ಮಧ್ಯದಲ್ಲಿ ನೇರಳ ಮರದ 'ಹಾಲುಗಂಬ'; ಇದನ್ನು ವರನ ಸೋದರಮಾವ ತರುವುದು ಸಂಪ್ರದಾಯ. ತಮ್ಮ ಕುಲದೇವತೆಯರಾದ ಸಂಕಾಲಮ್ಮ, ಯಲ್ಲಮ್ಮ, ಗುರುಮೂರ್ತಿಗಳನ್ನು ಹಂದರ ದಲ್ಲಿ ಸ್ಥಾಪಿಸಿ, ಮಂತ್ರಫಲಪುಷ್ಪಗಳಿಂದ ಪೂಜಿಸಿ, ಕುಲದೇವತೆಯ ಸುತ್ತೂ ಸುರೆಯ ಮಡಿಕೆ. ಆಹಾರಪದಾರ್ಥಗಳನ್ನು ಇಟ್ಟು 'ಎಡೆ' ಮಾಡುತ್ತಾರೆ. ಮದುಮಕ್ಕಳನ್ನು ಹಾಲುಗಂಬದ ಹತ್ತಿರ ಕುಳ್ಳಿರಿಸಿ ಅರಿಸಿಣ ಹಚ್ಚಿ ನೀರೆರೆಯುತ್ತಾರೆ. ಕುಲದೇವತೆಯರ ಎದುರು ಇಟ್ಟ ಕಳಸ ಪೂಜೆ, ಮದುಮಕ್ಕಳಿಗೆ ಹೊಸ ಉಡುಗೊರೆ. ಮದುಮಕ್ಕಳು ಎಲ್ಲರಿಗೂ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾರೆ

ಎರಡನೆ ದಿವಸ ಹೊಸ ಬಟ್ಟೆ ತೊಟ್ಟ ಮದುಮಗ ಕರವಸ್ತ್ರದಲ್ಲಿ ಸುತ್ತಿದ ಕಿರುಗತ್ತಿಯನ್ನು ಕೈಯಲ್ಲಿ ಹಿಡಿದು ಫಲ ತಾಂಬೂಲದೊಂದಿಗೆ ಹಂದರದಲ್ಲಿ ಬರುತ್ತಾನೆ, ಮದುಮಗಳನ್ನು ಕರೆತಂದು ಒಂದುಕಡೆ ಜೊತೆಯಾಗಿ ಕುಳ್ಳಿರಿಸಿ ಕಂಕಣ ಕಟ್ಟುವ ತಾಳಿ ಧರಿಸುವ ಕಾರ್ಯ ನೆರವೇರುತ್ತದೆ. ಮುಂಗೈಗೆ ಕಟ್ಟಿದ ಕಂಕಣ ಉಣ್ಣೆ ಅಥವಾ ನೂಲಿನಿಂದ ಮಾಡಲಾಗಿದ್ದು ಅದರಲ್ಲಿ ಅಡಕೆ ತಾಂಬೂಲ ಸುತ್ತಿ ಕಟ್ಟಲಾಗುತ್ತದೆ. 'ತಾಳಿ' ಧಾರಣೆಗೆ ಮೊದಲು ಹಿರಿಯರೆಲ್ಲ ಅದನ್ನು ಮುಟ್ಟಿ ಶುಭ ಕೋರುತ್ತಾರೆ. ಬಳಿಕ ಮದುಮಗ ತಾಳಿಯನ್ನು ಮದುಮಗಳ ಕೊರಳಿಗೆ ಕಟ್ಟುತ್ತಾನೆ. ಆಗ ಹೆಣ್ಣು ಮಕ್ಕಳು 'ಹಸೆಹಾಡು' ಹೇಳುತ್ತಿರುತ್ತಾರೆ. ವಾದ್ಯಗಳು ಮೊಳಗುತ್ತಿರುತ್ತವೆ. ಆಗ ಒಬ್ಬ ಬಂದು 'ಮದುವೆಯ ಮಂಗಲ ಕಾರ್ಯ ಬೆಳೆಯಿತು' ಎಂದು ಸಾರುತ್ತಾನೆ. ಮದುಮಕ್ಕಳ ಮುಂಗೈಮೇಲೆ ಹಾಲಿನ ಧಾರೆಯಾದ ಬಳಿಕ ಒಬ್ಬರಿಗೊಬ್ಬರು ಬಲಗೈ ಹಿಡಿದುಕೊಂಡು ಹಾಲುಗಂಬಕ್ಕೆ ಮೂರು ಸುತ್ತುಹಾಕಿ ತೆಂಗು ಅರ್ಪಿಸುತ್ತಾರೆ. ಮತ್ತು ಧಾರೆಯೆರೆದ ಹಾಲನ್ನು ಕುಡಿಯುತ್ತಾರೆ. ಇದಕ್ಕೆ 'ಹಾಲುಕೂಟ' ಎಂದು ಕರೆಯು ವರು. ಆ ಬಳಿಕ 'ಭೂಮ'ದ ಊಟ.

ಮೂರನೆಯ ದಿನ 'ನಾಗಾವಳಿ'. ಹತ್ತಿರದ ಹುತ್ತಕ್ಕೆ ಅಲಂಕೃತ ಮದುಮಕ್ಕಳು ಹೋಗಿ ಹಾಲೆರೆದು ಹುತ್ತದ ಮಣ್ಣು ತಂದು ಹಂದರದ ಕಂಬಗಳಿಗೆ ಪೂಜೆ ಸಲ್ಲಿಸು ತ್ತಾರೆ. ಸಂಜೆ ನಡೆಯುವ 'ಕಾಲುತೊಳೆಯುವ' ಕಾರ್ಯದಲ್ಲಿ ಈ ವೃಂದದ ಮತ್ತಿ ಗುಂಪಿನ 'ಯಜಮಾನ' ಮತ್ತು 'ಸೋಮಲರಾಜ' ಗುಂಪಿನ ಮುಖ್ಯಸ್ಥರು ಪಾಲು ಗೊಳ್ಳುತ್ತಾರೆ.

ಇದೆಲ್ಲ ಮುಗಿದ ಬಳಿಕ ಸುರಾಪಾನ, ಊಟ, ಉಡಿಗೆ. ಮೊದ ಮೊದಲು ಕಾಡುಡೊಂಬರಲ್ಲಿ 'ಅಳಿಯ ಸಂತಾನ'ದ ಪದ್ಧತಿ ಜಾರಿಯಲ್ಲಿತ್ತು. ಅಳಿಯನೇ ಹೆಂಡತಿ

ಯಿದ್ದಲ್ಲಿ ಬಂದು ಬೇರೆ ಒಂದು ಗುಡಿಸಲಲ್ಲಿ ಒಂದು ಮಗು ಆಗುವವರೆಗೂ ಇರ ಬೇಕಾಗುತ್ತಿತ್ತು.

**ಹುಡುಗಿ ಮೈನೆರೆಯುವ ಸಂದರ್ಭದ ರೂಢಿಗಳು :**

ಹುಡುಗಿ ಮೈನೆರೆದಾಗ ಅದಕ್ಕಾಗಿ ಒಂದು ಬೇರೆ ಗುಡಿಸಲು ಹಾಕಿ ಏಳುದಿನ ಅವಳನ್ನು ಅಲ್ಲಿಯೇ ಇಡಲಾಗುತ್ತಿತ್ತು. ಒಂದಷ್ಟು ಚಾಪೆಯೇ ಅವಳ ಜೊತೆ. ಹೊರಗೆ ಅವಳಸಂಬಂಧಿಕರ ಒಬ್ಬ ಮುದುಕಿ ಮಲಗಿರಬೇಕು. ಈ ಏಳು ದಿನವೂ ಒಣ ಕೊಬ್ಬರಿ, ಬೆಲ್ಲ, ತುಪ್ಪ, ಕರಿದ ಬೇಳೆ ಇಂಥ ಪೌಷ್ಟಿಕ ಆಹಾರ ಆ ಹುಡುಗಿಗೆ ಆಹಾರ. ೮ನೆಯ ದಿನ ಗುಡಿಸಲು ಕಿತ್ತಿಹಾಕಲಾಗುತ್ತದೆ. ಆ ಕಟ್ಟಿಗೆ ಡಂಬಗಳಿಗೆ ಹುಡುಗಿ ಬೆಂಕಿಯಿಕ್ಕಿ ಅದರಲ್ಲಿ ತನ್ನ ಬಟ್ಟೆಗಳನ್ನೂ ಚೆಲ್ಲಿ ಒಂದು ಹಳೇ ಬಟ್ಟೆ ಉಟ್ಟು ಬಂದು ಸ್ನಾನ ಮಾಡುತ್ತಾಳೆ, ಹೊಸ ಬಟ್ಟೆ ಉಟ್ಟುಬಂದರೂ ಮನೆಯ ಅಂಗಳದಲ್ಲಿಯೇ ಉಳಿಯಬೇಕು. ಗುಡಿಸಲು ಹಾಕಿದ ಸ್ಥಳದಲ್ಲಿ ಒಂದು ಕೋಳಿ ಬಲಿ ಕೊಡುತ್ತಾರೆ. ಮಾರನೆಯ ದಿನ ಬೆಳಿಗ್ಗೆ ಸ್ನಾನಮಾಡಿ ಮತ್ತೆ ಹೊಸ ಬಟ್ಟೆ ಉಡುತ್ತಾಳೆ. ಮುತ್ತೈದೆ ಯರು ಅವಳ ಜೊತೆಗೂಡಿ ಅಂಜನೇಯ ದೇವಸ್ಥಾನಕ್ಕೆ ಹೋಗಿ ಅರ್ಚಿಸಿದ ಬಳಿಕ ಅವಳಿಗೆ ತೀರ್ಥ ಕೊಡಲಾಗುತ್ತದೆ. ಮನೆಗೆ ಬಂದ ಬಳಿಕ ಗೋಮೂತ್ರವನ್ನು ಮನೆ ತುಂಬ ಸಿಂಪಡಿಸಲಾಗುತ್ತದೆ. ಬಾಳೆಯೆಲೆಯಲ್ಲಿ ಇಟ್ಟ ಎಡೆಯನ್ನು- ಅನ್ನಾದಿ ಆಹಾರ- ಆ ಕನ್ಯೆ ತನ್ನ ಬಲಗೈಯಿಂದ ಮುಟ್ಟುತ್ತಾಳೆ. ಅಲ್ಲಿ ನೆರೆದ ಆಮಂತ್ರಿತರಿಗೆಲ್ಲ ಅದನ್ನು ಹಂಚಲಾಗುತ್ತದೆ. ಆ ಬಳಿಕ ಸುರೆಯ ಸರಬರಾಜು- ಊಟ. ಆಗ ಅವಳು 'ಶುದ್ಧ' ಎಂದು ಸ್ವೀಕರಿಸಲಾಗುತ್ತದೆ.

**ವಿಧವಾ ವಿವಾಹ :**

ನಾಡ ಡೊಂಬರಲ್ಲಿ ವಿಧವೆಗೆ ಮರುವಿವಾಹವಿಲ್ಲ. ತನ್ನ ಗಂಡನ ಮನೆತನದಲ್ಲಿ ಉಳಿಯುವವರೆಗೂ ಅವಳು ಬೇರೊಬ್ಬನನ್ನು ಮದುವೆಯಾಗುವಂತಿಲ್ಲ. ಅಕಸ್ಮಾತ್ ಅವಳು ಬೇರೆಯವರ ಜೊತೆ ಅಕ್ರಮ ಸಂಬಂಧ ಬೆಳೆಸಿದ್ದು ಕಂಡುಬಂದರೆ ಅವಳ ಗಂಡನ ಮನೆಯವರು ದಂಡ ತೆರಬೇಕಾಗುತ್ತದೆ. ಹೀಗಾಗಿ ವಿಧವೆಯಾದ ಕೂಡಲೇ ಅವಳನ್ನು ತವರುಮನೆಗೆ ಅಟ್ಟಲಾಗುತ್ತದೆ. ಆ ಬಳಿಕ ಅವಳು ಯಾರನ್ನಾದರೂ ಕೂಡಿಕೆ ಮಾಡಿಕೊಳ್ಳಬಹುದು— ಅಥವಾ ಕೂಡಬಹುದು. ಕಾಡುಡೊಂಬರಲ್ಲಿ ಮಾತ್ರ ಇಂಥ ಯಾವ ಕಟ್ಟುಪಾಡುಗಳೂ ಇಲ್ಲ. ವಿಧವೆ ಬೇಕಾದಷ್ಟುಸಲ ತನಗೆ ಇಷ್ಟ ಬಂದವನನ್ನು ಮದುವೆಯಾಗಬಹುದು- ಬೇಡಾದವರ ಸಂಬಂಧ ಮುರಿದು ಕೊಳ್ಳಬಹುದು. ಆದರೆ ಅವಳು ಗಂಡನ ಸೋದರನನ್ನು ಮಾತ್ರ ಮದುವೆಯಾಗ ಕೂಡದು. ಒಬ್ಬ ಅವಿವಾಹಿತನೂ ವಿಧವೆಯನ್ನು ಮದುವೆ ಆಗಬಹುದು. ಮರು ಮದುವೆಯಲ್ಲಿ ವರ ಒಂದು ಹೊಸ ಸೀರೆ ತರುತ್ತಾನೆ. ನಾಲ್ಕು ಜನರ ಸಮ್ಮುಖ

'ವಧು'ವನ್ನು ಕರೆತಂದು ಅರಿಷಿಣ ಬೇರಿನ ತಾಳಿಯನ್ನು ಅವಳ ಕೊರಳಿಗೆ ಕಟ್ಟಿಸ ಲಾಗುತ್ತದೆ. ಇದಕ್ಕೆ ಅವಳ ಮೊದಲ ಗಂಡನ ಸಂಬಂಧಿಕರ ಒಪ್ಪಿಗೆಯನ್ನೂ ಪಡೆಯು ಲಾಗುತ್ತದೆ. ಆದರೆ ಇದು ಕೇವಲ ಔಪಚಾರಿಕ. ಮರುಮದುವೆಯಾದವಳು ತನ್ನ ಮೊದಲ ಗಂಡನ ಆಸ್ತಿಯ ಹಕ್ಕನ್ನು ಕಳೆದುಕೊಳ್ಳುತ್ತಾಳೆ. ಅವನಿಂದ ಮಕ್ಕಳಾಗಿದ್ದರೆ ಅವು ಅವಳ ಮೊದಲ ಗಂಡನ ಮನೆತನಕ್ಕೆ ಸೇರಿಕೊಳ್ಳುತ್ತವೆ. ಮರುಮದುವೆಯಲ್ಲೂ 'ತೆರ' ಕೊಡುವ ಪದ್ಧತಿಯಿದ್ದರೂ ಅದರ ಕಟ್ಟುನಿಟ್ಟಾದ ಪಾಲನೆಯಿಲ್ಲ. ಪರಸ್ಪರ ಅನುಕೂಲವೇ ಮುಖ್ಯ ಗಣನೆ 'ತೆರವು' ಅಲ್ಲದೆ ಅವಳನ್ನು ಮದುವೆಯಾಗುವ ವ್ಯಕ್ತಿ ತನ್ನ ಸಮುದಾಯಕ್ಕೆ ಯಜಮಾನ ವಿಧಿಸಿದ 'ಅಧಿಕ ತೆರ' ಅಥವಾ 'ದಂಡ' ಕೊಡಬೇಕಾಗುತ್ತದೆ. ಹೆಂಡ, ಊಟೋಪಚಾರವಂತೂ ಇದ್ದದ್ದೇ.

**ವ್ಯಭಿಚಾರ :**

ತನ್ನ ಸಮುದಾಯದ ಅಥವಾ ಇತರ ಉಚ್ಚಕುಲದ ವ್ಯಕ್ತಿಯ ಜೊತೆಗೆ ಡೊಂಬರ ಸ್ತ್ರೀ ಸಂಬಂಧ ಇಟ್ಟುಕೊಂಡರೆ ಅವಳಿಗೆ ದಂಡವಿಧಿಸಲಾಗುತ್ತದೆ. ದಂಡ ಕೊಟ್ಟಮೇಲೆ ತನ್ನ ಗಂಡನ ಸಮ್ಮತಿ ಇದ್ದರೆ ಅವಳು ಅವನ ಜೊತೆಗೆ ಬಾಳಬಹುದು. ಗಂಡನ ಸಮ್ಮತಿಯಿಲ್ಲದಾಗ ಓಡಿಹೋದವನ ಅಥವಾ ಅಕ್ರಮ ಸಂಬಂಧ ಇಟ್ಟು ಕೊಂಡವನ ಜೊತೆಗೆ 'ಕೂಡಿಕೆ'ಯಾಗುತ್ತದೆ. ಉಚ್ಚ ಕುಲದವ ಅಥವಾ ತನ್ನ ಸಮುದಾಯದ ವ್ಯಕ್ತಿಯ ಜೊತೆ ಸಂಬಂಧ ಬೆಳೆಸಿದ ವಿವಾಹಿತ ಸ್ತ್ರೀಯನ್ನು ಅವರು 'ಕೂಡಿಕೆ' ಮಾಡಿಕೊಳ್ಳಲು ಒಪ್ಪದಿದ್ದರೆ ಅವಳಿಗೆ ದಂಡ ಹಾಕಿ 'ತೀರ್ಥ' ಕೊಟ್ಟು 'ಕುಲವರ್‌ಬಿಡ್ಡ' 'ಕುಲದಮಗಳು' ಎಂದು ಸ್ವೀಕರಿಸಲಾಗುತ್ತದೆ. ಅವಳು ಅನಿವಾರ್ಯ ವಾಗಿ ವೇಶ್ಯಾವೃತ್ತಿಗಿಳಿಯುತ್ತಾಳೆ. 'ಕುಲದಮಗಳು' ಸಂಪ್ರದಾಯ ಸೂಳೆಗಾರಿಕೆಗೆ ಒಂದು ಲೈಸೆನ್ಸ ದೊರೆತಹಾಗೆ. ಆದರೆ ಅವಳ ಜೊತೆಗೆ ಸಂಬಂಧ ಇಟ್ಟುಕೊಂಡವನನ್ನು ಬಹಿಷ್ಕರಿಸಲಾಗುತ್ತದೆ.

ಅವಿವಾಹಿತ ಸ್ತ್ರೀ ಅಕ್ರಮ ಸಂಬಂಧದಿಂದ ಮಕ್ಕಳನ್ನು ಪಡೆದರೆ ಅವಳಿಗೆ ದಂಡಹಾಕಿ ಕುಲದಲ್ಲಿ ಸ್ವೀಕರಿಸಲಾಗುತ್ತದೆ. ಆಗ ಒಂದು 'ಶುದ್ಧೀಕರಣ' ಸಮಾರಂಭ ವಾಗುತ್ತದೆ. 'ಯಜಮಾನ'ನು ಅವಳ ಮುಂಗುರುಳನ್ನು ಕತ್ತರಿಸಿ ಬಂಗಾರದ ಚೂರಿ ಯಿಂದ ಅವಳ ತುದಿನಾಲಿಗೆಗೆ ಬರೆ ಎಳೆಯುತ್ತಾನೆ. ಕುಲದ 'ಗುರು' ಕೊಟ್ಟ ವಿಭೂತಿ ಯನ್ನು ನುಂಗಿದ ಅವಳಿಗೆ ಕ್ಷಮೆಯೂ ಆಯಿತು– ಶುದ್ಧಿಯೂ.

**ವಿವಾಹ ವಿಚ್ಛೇದನ :**

ಡೊಂಬರಲ್ಲಿ ಅನೇಕ ಕಾರಣಗಳಿಗಾಗಿ ದಾಂಪತ್ಯ ಮುರಿದುಹೋಗುತ್ತದೆ. ಒಂದು ಸಣ್ಣ ಕಾರಣಕ್ಕಾಗಿ ಜಗಳದಿಂದ ಮೊದಲುಗೊಂಡು ಅಕ್ರಮ ಸಂಬಂಧ, ಗಂಡ

ತನ್ನನ್ನು ಸರಿಯಾಗಿ ಪೋಷಿಸಲಿಲ್ಲ, 'ಒಟ್ಟು ಕೂಡಿ ಬಾಳುವುದು ಸಾಧ್ಯವಿಲ್ಲ' ಮುಂತಾ
ಸಂದರ್ಭಗಳಿಂದಾಗಿ ವಿವಾಹವಿಚ್ಛೇದನ ಪಡೆಯಲಾಗುತ್ತದೆ. ಆಗ ಹೆಂಡತಿ ಗಂಡನಿ
ತಾಳಿ ಮರಳಿ ಕೊಡುತ್ತಾಳೆ. ವಿಚ್ಛೇದನ ಹೊಂದುವ ದಂಪತಿಗಳಲ್ಲಿ ತಪ್ಪಿತಸ್ಥರಿ
ದಂಡ ಹಾಕಲಾಗುತ್ತದೆ. 'ಕಾಡುಡೊಂಬರಲ್ಲಿ' ವಿಚ್ಛೇದನಗಳು ಎಷ್ಟುಸಲ ಬೇಕಾದರ
ನಡೆಯುತ್ತವೆ.

## ವೇಶ್ಯಾವೃತ್ತಿ ಮತ್ತು ದೇವದಾಸಿ ಪದ್ಧತಿ :

ಡೊಂಬರ ಅಲೆಮಾರಿ ಗುಣ ಮತ್ತು ವೃತ್ತಿ ಸಹಜಸ್ವಭಾವಗಳು
ಸಮುದಾಯದಲ್ಲಿಯ ವೇಶ್ಯಾವೃತ್ತಿಗೆ ಪ್ರಬಲವಾದ ಕಾರಣಗಳು. ನೋಡುವುದ
ಆಕರ್ಷಕ ಮುಖ, ಮೈಕಟ್ಟು ಇರುವ ಹುಡುಗಿಯರು ಡೊಂಬರಾಟದ ವಿವಿಧ ಕಸರತ
ಗಳಲ್ಲಿ ಭಾಗವಹಿಸುವುದರಿಂದ ಇಂಥವರ ವಿವಾಹ ವಿರಳ. ಹೀಗಾಗಿ ಸಹಸಾ ಇವ
ವೇಶ್ಯೆಯರಾಗುತ್ತಾರೆ– ಆ ವೃತ್ತಿಗೆ ಇಳಿಯುತ್ತಾರೆ. ಕುಲದೇವತೆ ಯಲ್ಲಮ್ಮ
ಸಮ್ಮುಖದಲ್ಲಿ ಅಲಂಕೃತ ಕನ್ಯೆಯನ್ನು ತಂದು ವಿಧಿವತ್ತಾಗಿ 'ದಾಸಿ' ಎಂದು ಸಾರುತ್ತಾ
ಪೂಜಾರಿ ತೀರ್ಥ ಕೊಟ್ಟು ಅರಿಷಣ ಕುಂಕುಮ ಲೇಪಿಸುತ್ತಾನೆ. ಸೋದರಮಾ
ತಾಳಿ ಕಟ್ಟುತ್ತಾನೆ. ಅಂದಿನಿಂದ ಆವಳು ದೇವದಾಸಿ– ಸಾಮಾಜಿಕ ಭೋಗದ ವಸ

'ಬಸವಿ' ಮಕ್ಕಳಿಲ್ಲದೆ ಸತ್ತರೆ ಅವಳ ಆಸ್ತಿ ಅವಳ ಸೋದರರಿಗೆ ಸೇರುತ್ತ
ದೇವದಾಸಿಯಾದವಳು ವೇಶ್ಯಾವೃತ್ತಿಯನ್ನು ತ್ಯಜಿಸಬಯಸಿದರೆ ಆದಕ್ಕೆ ಅವಕಾಶವಿ
ಅವಳು ಒಬ್ಬನ ಜೊತೆ 'ಕೂಡಿಕೆ' ಮಾಡಿಕೊಳ್ಳಬೇಕು ಮತ್ತು ಬೀದಿ ಕಸರತ್ತುಗಳ
ಭಾಗವಹಿಸಿ ಅಂಗಾಂಗ ಪ್ರದರ್ಶನ ಮಾಡುವುದನ್ನು ನಿಲ್ಲಿಸಬೇಕು.

## ಹೆರಿಗೆ–ಮಕ್ಕಳು ಹೆಸರು :

ಹೆರಿಗೆಯ ಸಮಯದಲ್ಲಿ, ಹೆರಿಗೆಯಾದ ನಂತರ ಡೊಂಬಿತಿಯನ್ನು ಚೆನ್ನಾ
ನೋಡಿಕೊಳ್ಳಲಾಗುತ್ತದೆ. ಹೆರಿಗೆಯಾದ ಬಳಿಕ ಅವಳಿಗೆ ಪೌಷ್ಟಿಕ ಆಹಾರದ ಜೊತ
'ಸರೆ'ಯನ್ನೂ ಕುಡಿಸಲಾಗುತ್ತದೆ. ೯ನೆಯ ದಿನ ಮಗುವಿನ ತೊಟ್ಟಿಲು ಕಾರ
ಊಟ ಉಡುಗೊರೆ, ಮಗುವಿನ ನಾಮಕರಣ, ಶಕುನ ಕೇಳುವುದು ಇತ್ಯಾದಿ. ಗಂ
ಮಗುವಿನ ಮೊದಲ ಅಥವಾ ಮೂರನೆಯ ವರ್ಷ 'ಜವಳ' ಕಾರ್ಯ.

ಮಾರ, ಮಾರಿ, ಯಲ್ಲ, ಎಲ್ಲಿ, ಸುಂಕ, ಸುಂಕಿ, ಇವು ಸಾಮಾನ್ಯ ಹೆಸರುಗಳ
ಹನುಮಂತ ತುಂಬ ಜನಪ್ರಿಯ ಹೆಸರು. ಅವಿವಾಹಿತ ಸ್ತ್ರೀಯರ ಹೆಸರು ಚಿ
ಲಚಿಮಿ, ವೆಂಕಟಿ ಹೀಗೆ. ಇವರು ತಮ್ಮ ಮಕ್ಕಳನ್ನು 'ಗಾಳಿಗ' ಎಂದು ಕರೆಯು
ದುಂಟು; 'ಗಾಳಿ'ದೇವತೆಯನ್ನು ಸಂತೃಪ್ತಿಗೊಳಿಸುವುದೇ ಇದರ ಗುರಿ.

**ಹಚ್ಚೆ :**

ಹಚ್ಚೆ ಹಾಕಿಸಿಕೊಳ್ಳುವುದು ಅಥವಾ ಚುಚ್ಚಿಸಿಕೊಳ್ಳುವುದು ಒಂದು ಅಲಂಕಾರ ವಿಶೇಷ ಎಂದು ಡೊಂಬಿತಿಯರ ಭಾವನೆ. ಹಚ್ಚೆಯ ಅನೇಕ ಮಾದರಿಗಳನ್ನು ಅಭ್ಯಸಿಸಿದ ಮಿಸ್ಟರ್ ಫಾಸ್‌ಟಿ ಇವು ಸಂಪೂರ್ಣ ಅಲಂಕಾರಿಕವಾಗಿದ್ದು ಕುಲಮುದ್ರೆ ಅಥವಾ ಕುಲಸಂಕೇತಗಳಾಗಿ ತೋರುವುದಿಲ್ಲ ಎಂದು ಹೇಳುತ್ತಾರೆ.[1]

ಡೊಂಬರ ಒಂದು ಜನಪದ ಐತಿಹ್ಯದಲ್ಲಿ ಕಾಶೀವಿಶ್ವನಾಥನ ಪರಮಭಕ್ತನಾದ ಅರಸು ಹರಿಶ್ಚಂದ್ರ ಬೇಡಿದವರಿಗೆ ಎಲ್ಲವನ್ನೂ ದಾನ ಮಾಡಿ, ಕೊನೆಗೆ ಒಬ್ಬ ಡೊಂಬನ ಆಳಾಗಿ ಸುಡುಗಾಡು ಕಾಯಬೇಕಾಯಿತು. ಸುಡಲು ತನ್ನ ಮಗುವಿನ ಶವ ಹೊತ್ತು ಬಂದ ಅವನ ಹೆಂಡತಿಯನ್ನು ಕತ್ತಲಲ್ಲಿ ಗುರುತಿಸದೆ ಸುಂಕ ತರಲು ಅಲ್ಲಿಂದ ಅಟ್ಟಿದ; ಅಷ್ಟರಲ್ಲಿ ಸೂರ್ಯೋದಯ. ಪರಸ್ಪರ ಗುರುತಿಸಿದರು. ಮತ್ತೆ ಅವರ ಮದುವೆ. ಈ ಸನ್ನಿವೇಶದ ಎರಡು ಚಿತ್ರಗಳನ್ನು ಥರ್ಸ್ಟನ್ ಅವರು ತಮ್ಮ ಕೃತಿಯಲ್ಲಿ ಅಚ್ಚಿಸಿ ಇದರ ವಿವರಣೆ ನೀಡಿದ್ದಾರೆ :

೧ನೆಯ ಹಚ್ಚೆ ಚಿತ್ರದಲ್ಲಿ ಬೆಳದಿಂಗಳ ರಾತ್ರಿಯಲ್ಲಿ ಗಂಗಾನದಿಯ ದಂಡೆ. ಎಡಬಲ ಗಿಡಮರ. ಮಧ್ಯೆ ಮಸಣ ಕಾಯುವ ಹರಿಶ್ಚಂದ್ರ. ಬದಿಯಲ್ಲಿ ಕಟ್ಟಿಗೆ ರಾಶಿ. ೨ನೆಯ ಚಿತ್ರದಲ್ಲಿ ಉದಯಿಸುವ ಸೂರ್ಯನ. ಅರಸು ಅರಸಿಯರ ಮಿಲನ.[2]

**ಧರ್ಮದೇವತೆ–ಆಚರಣೆ :**

ಮಂತ್ರ, ಮಾಟ, ಶಕುನ, ಭವಿಷ್ಯ ಜಾದೂ ಮುಂತಾದವುಗಳಲ್ಲಿ ಡೊಂಬ ವೃಂದಕ್ಕೆ ವಿಶೇಷ ಶ್ರದ್ಧೆ.

ಗುರುಮೂರ್ತಿ ಈ ವೃಂದದ ಮುಖ್ಯ ದೇವರು–ಯಲ್ಲಮ್ಮ ಅಧಿದೇವತೆ. ಇದಲ್ಲದೆ ಮಾರಿಯಮ್ಮ, ಸಂಕಾಲಮ್ಮಗಳೂ ಇವರು ಆರಾಧಿಸುವ ದೇವತೆಗಳು. ಕಾಲಾನುಕ್ರಮದಲ್ಲಿ ವೆಂಕಟೇಶ್ವರನೂ ಇವರ ದೇವತೆ. ತಿರುಪತಿ ಯಾತ್ರೆಗೆ ಹೋಗಿ ವೆಂಕಟೇಶ್ವರನಿಗೆ ಹರಕೆ ಸಲ್ಲಿಸುವ ಆಚರಣೆಯೂ ಇವರಲ್ಲಿ ಸೇರಿತು. ಕೊಟಿಗೇರಮ್ಮ ಮಾರಿಯಮ್ಮ ಇತರ ದೇವತೆಗಳು.

ಸಾಮಾನ್ಯವಾಗಿ ಚೈತ್ರ ಪೂರ್ಣಿಮೆಯಂದು, ಮಂಗಳವಾರ ತಮ್ಮ ಕುಲದೇವತೆ ಯಲ್ಲಮ್ಮನ ಪೂಜೆಯನ್ನು ಡೊಂಬರು ವೈಭವದಿಂದ ಮಾಡಿ ಹಬ್ಬ ಆಚರಿಸುತ್ತಾರೆ.

---

Castes and Tribes of Southern India p. 182.by E. Thurston,

,, ,, p. 183 ,,

ಸಗಣಿಯಿಂದ ಸಾರಿಸಿದ ಸ್ಥಳದಲ್ಲಿ ೬ ಅಥವಾ ೭ ಹೆಂಡದಿಂದ ತುಂಬಿದ ಮ
ಗಳನ್ನಿಟ್ಟು ಪ್ರತಿ ಗಡಿಗೆಯನ್ನೂ ಅರಿಷಿಣ ಕುಂಕುಮದಲ್ಲಿ ಅದ್ದಿದ ನೂಲಿನಿಂದ ಸ
ಮಧ್ಯದ ಪಾತ್ರೆಯನ್ನು ದೇವತೆ ಎಂದು ಭಾವಿಸಿ ಶುಚಿರ್ಭೂತರಾಗಿ 'ಮಡಿ ಬ
ಉಟ್ಟು 'ಯಜಮಾನ'ನ ಹಿರಿತನದಲ್ಲಿ ಅತ್ಯಂತ ಗೌರವದಿಂದ ಅರ್ಚಿಸುತ್ತಾರೆ. ಕಾಯ
ಫಲ ತಾಂಬೂಲಗಳ ಜೊತೆಗೆ ಅನೇಕ ಕುರಿಗಳನ್ನೂ ಬಲಿಗೊಟ್ಟು ಬೇಯಿಸುತ್ತಾ
ಬೆಳ್ಳಂಬೆಳಗು ಹಾಡುಕುಣಿತಗಳ ಹೋಳಿ. ಮೂರನೆಯ ದಿನ ಆ ಪಾತ್ರೆಯ ಹೆಂಡವ
–'ತೀರ್ಥ'– ಹಂಚಿ ಬಳಿಕ ಭೋಜನ.

ಆದರೆ ಸಂಕಾಲಮ್ಮ ದೇವತೆಯಾಗಿರುವ ಡೊಂಬರ ವೃಂದ ಆಕೆಯ ಪೂಜೆಗ
ಬಳಸುವ ಗಡಿಗೆಯಲ್ಲಿ ಹೆಂಡ ತುಂಬುವುದಿಲ್ಲ– ಬದಲು ನೀರು ತುಂಬುತ್ತಾರೆ. ಇ
ಉತ್ಸವದಲ್ಲಿ ಪ್ರಾಣಿಬಲಿ ಕೊಡುವುದಿಲ್ಲ. ಅನ್ನ, ಕುಂಬಳಕಾಯಿ, ಇತರ ಫಲಗ
'ಎಡೆ', ಆಹಾರ. ಚೈತ್ರ ಪೂರ್ಣಿಮೆ, ಗೌರೀ ಹುಣ್ಣಿಮೆ ಮತ್ತು ಮಹಾಲ
ಅಮಾವಾಸ್ಯೆಗಳಲ್ಲಿ ಇವರು ವಿಶೇಷ ಹಬ್ಬ ಆಚರಿಸುತ್ತಾರೆ. ದೂರ ದೂರ ಚದುರಿರು
ಇವರ ಎಲ್ಲ ಗುಂಪು ಒಂದೆಡೆ ಕೂಡುವುದು ಇಂಥ ಸಂದರ್ಭಗಳಲ್ಲಿಯೇ.

**ಶವಸಂಸ್ಕಾರ :**

ಡೊಂಬರು ಹೆಣ ಹುಗಿಯುತ್ತಾರೆ. ಶವವನ್ನು ಬಿದಿರು ಚಟ್ಟದ ಮೇಲಿ
ಅಥವಾ ಒಂದು ಬಟ್ಟೆಯಲ್ಲಿ ಮಲಗಿಸಿ ನಾಲ್ಕು ಜನ ಹೊತ್ತು ಮಸಣಗಟ್ಟೆಗೆ ಹೋ
ತ್ತಾರೆ. ಮನೆಯ ಮುಖ್ಯಸ್ಥ ಶವದ ಮುಂದೆ ಒಂದು ಮಡಿಕೆ ಹಿಡಿದುಕೊಂ
ಹೋಗುತ್ತಾನೆ. ಅವನ ಜೊತೆಗೆ ಇನ್ನೊಬ್ಬ ಒಂದು ಸಣ್ಣ ಪಂಜು ಹಿಡಿದಿರುತ್ತಾ
ಕುಣಿಯಿದ್ದ ಸ್ಥಳಕ್ಕೆ ಹೋದಬಳಿಕ ಶವವನ್ನು ದಕ್ಷಿಣಕ್ಕೆ ತಲೆಮಾಡಿ ಇಟ್ಟು ಶವ
ತಲೆಗೆ ನಿವಾಳಿಸಿ ಗಡಿಗೆ ಒಡೆದು ಚೆಲ್ಲುತ್ತಾರೆ. ಮೃತನ ಹೆಂಡತಿ ಅಲ್ಲಿಯೇ ಬಳೆ ಸಿ
ಚೆಲ್ಲುತ್ತಾಳೆ, ತಾಳಿ ತೆಗೆಯುತ್ತಾಳೆ. ಆಬಳಿಕ ಶವವನ್ನು ಹುಗಿದು ಒಂದು ಬಾ
ಅಥವಾ ಕೆರೆಗೆ ಬಂದು ಕೈಕಾಲು ತೊಳೆದುಕೊಂಡು ಎಲ್ಲರೂ ಸೇರಿ ಒಂದು ಹೆಂಡ
ಮನೆಗೆ ಬಂದು ಕಳ್ಳು ಕುಡಿಯುತ್ತಾರೆ. ಇದರಲ್ಲಿ ಮೃತನ ಕುಟುಂಬದ ಹೆಣ್ಣುಮಕ್ಕ
ಭಾಗಿಗಳಾಗುವುದಿಲ್ಲ. ಹೆಂಡದಂಗಡಿಯಿಂದ ಒಂದು ಗಡಿಗೆಯಲ್ಲಿ ಕಳ್ಳು ತುಂಬಿಕೊಂ
ಮೃತನ ಮನೆಗೆ ಬಂದು ಅದನ್ನು ಆತ ಸತ್ತ ಜಾಗೆಯಲ್ಲಿಡುತ್ತಾರೆ. ರಾತ್ರಿ ಆ ಜಾ
ಯಲ್ಲಿ ಸಣ್ಣನೆಯ ಉಸುಕು ಹಾಸಿ ಅದರ ಮೇಲೆ ಮೊಸರು ಕಲಿಸಿದ ಅನ್ನದ ಉಂ
ಇಟ್ಟು ದೀಪ ಹಚ್ಚಿರುತ್ತಾರೆ. ರಾತ್ರಿಯೆಲ್ಲಾ ದೀಪ ಆರಗೊಡುವುದಿಲ್ಲ. ಇನ
ನಸುಕಿನಲ್ಲಿಯೇ ಎದ್ದು ಆ ಉಸುಕಿನಲ್ಲಿ 'ಮೃತನ ಆತ್ಮ' ಬಂದುಹೋದ ಗುರುತಿಗಾ
ಹುಡುಕಿ, ಪೂಜೆ ಮಾಡಿ ಮಡಿಕೆಯೊಳಗಿನ ಹೆಂಡ ಮತ್ತು ಅನ್ನದ ಉಂಡೆಗಳನ
ಒಂದು ಮರದ ಮೇಲೆ ಚೆಲ್ಲಿ ಸೂರೆ ಮಾಡುತ್ತಾರೆ, ಮೂರನೆಯ ದಿನ ಸಮಾಧಿಯ

# ಹಾವಾಡಿಗರು

ಸೋಮಶೇಖರ ಇಮ್ರಾಪೂರ

ಕರ್ನಾಟಕದ ಜಾನಪದ ಅಧ್ಯಯನದಲ್ಲಿ ವೃತ್ತಿಕಾರರನ್ನು ಕುರಿತ ಸಾಮಾಜಿಕ ಶಾಸ್ತ್ರಾಧ್ಯಯನ ಅತ್ಯಂತ ಮಹತ್ವದ್ದಾಗಿದೆ. ಕೆಲವು ವೃತ್ತಿಕಾರರು ತಮ್ಮ ವೃತ್ತಿಯನ್ನು ಕೇವಲ ಧಾರ್ಮಿಕ ಪರಂಪರೆಯ ಹಿನ್ನೆಲೆಯಲ್ಲಿ ಪೋಷಿಸಿ ಬೆಳೆಸಿಕೊಂಡು ಬಂದಿದ್ದರೆ, ಇನ್ನು ಕೆಲವರು ಅರ್ಧಧಾರ್ಮಿಕ ಅರ್ಧಸಾಮಾಜಿಕವಾದ ಹಿನ್ನೆಲೆಯಲ್ಲಿ ಸಾಧಿಸಿಕೊಂಡು ಬಂದಿದ್ದಾರೆ. ಮತ್ತೆ ಕೆಲವರು ಕೇವಲ ಮನರಂಜನೆಯನ್ನೇ ವೃತ್ತಿಯ ಪ್ರಮುಖ ಗುರಿಯನ್ನಾಗಿಸಿಕೊಂಡಿರುವುದು ಗಮನಾರ್ಹ. ಇವರಲ್ಲಿ ಕೆಲವರಿಗೆ ಶಿವಶರಣರ ಕಾಯಕತ್ವದ ಮೇಲೆ ಅಪಾರವಾದ ನಂಬಿಕೆ ಇದ್ದರೆ ಹಲವರಿಗೆ ಕೇವಲ ಉದರನಿರ್ವಹಣೆಯ ಕಡೆಗೇ ಹೆಚ್ಚು ಆಸಕ್ತಿ. ಪೂರ್ಣಾವಧಿ ವೃತ್ತಿಯನ್ನಾಗಿಸಿಕೊಂಡವರು ಕೆಲವರಿದ್ದರೆ, ಉಪವೃತ್ತಿಯನ್ನಾಗಿಸಿಕೊಂಡವರು ಹಲವಾರು ಜನ. ಬಹುತೇಕವಾಗಿ ಈ ಅಲೆಮಾರಿ ವೃತ್ತಿಕಾರರೆಲ್ಲ ಒಂದರ್ಥದಲ್ಲಿ 'ಸೋಮಾರಿಗಳ' ಎಂಬುದನ್ನು ಬೇರೆ ಹೇಳಬೇಕಿಲ್ಲ. ಅಂಥವರಲ್ಲಿ 'ಹಾವಾಡಿಗರ'ದು ಒಂದು ವಿಶಿಷ್ಟ ವೃತ್ತಿ, ಉಪವೃತ್ತಿ.

'ಹಾವಾಡಿಗ' ಎಂಬುದು ವೃತ್ತಿಯನ್ನಾಧರಿಸಿ ಬಂದ ಪದ 'ಕಾಸಿ ಕಮ್ಮಾರ'ನಾದಂತೆ, 'ಬೀಸಿ ಮಡಿವಳ' ನಾದಂತೆ, ಹಾವನ್ನು ಆಡಿಸುವವ ಹಾವಾಡಿಗನಾದ. ಮೂಲತಃ ಇವರು ಕಡ್ಡಿಕೊರಸರು, ಕೊರವರು ಇಲ್ಲವೆ ಕೊರ್ರು. ಅದಲ್ಲದೇ ಗೋವಳಿಗರಾದ ಕಾಡು ಗೊಲ್ಲರೂ ಈ ವೃತ್ತಿನಿರತರಾಗಿರುವುದನ್ನು ಕಾಣುತ್ತೇವೆ. ಇತ್ತೀಚೆಗೆ ಮುಸಲ್ಮಾನ, ಇತ್ಯಾದಿ ಬೇರೆ ಜಾತಿಯವರೂ ಈ ಹಾವಾಡಿಸುವುದನ್ನು

ಲಕ್ಷಿಸಿದಾಗ ಇತ್ತೀಚೆಗೆ ಇದೊಂದು ಕಲಿತ ಕಲೆಯಾಗಿಯೇ ಬೆಳೆದುಬರುತ್ತಿರುವಂ
ತೋರುತ್ತದೆ. ಅದೇನೇ ಇದ್ದರೂ ಕಾಡಿನಲ್ಲಿ ಅಲೆಯುತ್ತ ಅಡವಿಯ ದೇವಬಳ್ಳಿ
ಮುಲ್ಲುಕಡ್ಡಿ, ಹಸ್ತಿದಂತ ಇತ್ಯಾದಿಗಳನ್ನು ತಂದು ಬುಟ್ಟಿ ಮರ, ಚಾಪೆ, ಹಗ್ಗ, ಕಣ್ಣಿ
ಬಡಿಚುಣಿಕೆಗಳನ್ನು ಮಾಡಿ ಮಾರುವ 'ಕೊರವರೇ' ಈ ಹಾವಾಡಿಸುವ ವೃತ್ತಿಗಿಳಿದವರ
ಮೊದಲಿಗರೆಂದು ಹೇಳಬಹುದು. ಕಾಡಿನೊಂದಿಗೇ ಹೆಚ್ಚು ಸಂಪರ್ಕ ಹೊಂದಿ
ಇವರು ಕಾಡಿನ ವಿಷಜಂತುಗಳನ್ನಾಗಲಿ ಕ್ರೂರ ಪ್ರಾಣಿಗಳನ್ನಾಗಲಿ ನಿಗ್ರಹಿಸು
ಸಾಮರ್ಥ್ಯಪಡೆದುದು ಸ್ವಾಭಾವಿಕ, ಅಷ್ಟೇ ಅತ್ಯವಶ್ಯವಾದುದು ಅಂತೆಯೇ ಹಾ
ಗಳಂಥ ವಿಷಜಂತುಗಳು ಕಚ್ಚಿದಾಗ ವಿಷದ ಉಪಶಮನಕ್ಕಾಗಿ ತಕ್ಷಣವೇ ಕಾಡಿ
ವನಸ್ಪತಿಯನ್ನು ಬಳಸಿಕೊಂಡದ್ದು ಹಾಗೆಯೇ ಮಾಂತ್ರಿಕ ಶಕ್ತಿಯನ್ನು ಬೆಳೆಸಿಕೊಂಡದ್ದು
ಗಮನಾರ್ಹ. ಬರುಬರುತ್ತ ಕೊರವ ಬಿಸಿಲು. ಮಳೆ ಗಾಳಿಗಳನ್ನು ಬಡಿಸಿಕೊಂಡ
ತಿರುಗುತ್ತಿದ್ದ ಈ ಜನ, ನಾಗರಹಾವನ್ನು ಹಿಡಿದು, ಊರಲ್ಲಿ ತಂದರು- 'ನಾಗಪ್ಪ
ನೆಂದರೆ ಶಿವನ ಆಭರಣವೆಂದೇ ಕಲ್ಲಿಗೆ ಹಾಲೆರೆದು ಪೂಜಿಸುತ್ತಿದ್ದ ಧಾರ್ಮಿಕ ಮನೋ
ಭಾವದ ಜನತೆಯ ಮುಂದೆ ಸಾಕ್ಷಾತ ನಾಗಪ್ಪನೊ ಹೆಡೆಯಾಡುವಂತೆ ಆಡಿಸಿ ಸಂತೋಷ
ಪಡಿಸಿದರು. ಅವರಿಂದ ಕಾಣಿಕೆ ಪಡೆದರು, ಹೀಗೆ ನಿರಾಯಾಸವಾಗಿಯೇ ಹೆಚ್ಚಿನ
ಮೊತ್ತದ ಧನ ಧಾನ್ಯ ಪಡೆದದ್ದರ ಪರಿಣಾಮವಾಗಿ ಮೂಲವೃತ್ತಿಯ ಕಡೆಗೆ ಗಮನ
ಕಡಿಮೆಯಾಗಿ ಹಾವಾಡಿಸುವುದನ್ನೇ ಪ್ರಮುಖ ವೃತ್ತಿಯನ್ನಾಗಿಸಿಕೊಂಡದ್ದು ಮಹತ್ವದ
ಅಂಶವಾಗಿದೆ.

ಹೀಗೆ ಹಾವಾಡಿಸುವುದು ಮತ್ತು ಗಿಡಮೂಲಿಕೆ ವೈದ್ಯಕೀಯ ಮಾಡುವುದನ್ನು
ಗಂಡುಮಕ್ಕಳು ತಮ್ಮ ವೃತ್ತಿಯಾಗಿಸಿಕೊಂಡರೆ; ಕೊರವರ ಹೆಣ್ಣುಮಕ್ಕಳು ಚಾಪೆ
ಬುಟ್ಟಿ ಕಸಬರಿಗೆ ಹಗ್ಗ ಇತ್ಯಾದಿಗಳನ್ನು ಹೆಣೆದು ಮಾರುವ ಮೂಲ ವೃತ್ತಿಯನ್ನೇ
ಸಾಗಿಸಿಕೊಂಡು ಬಂದರು. ಅದಲ್ಲದೆ ಜೊತೆಗೆ ಕಣಿ ಹೇಳುವ ಕಲೆಯನ್ನು ಬೆಳೆಸಿ
ಕೊಂಡು ಬಂದದ್ದರಿಂದ ಕೊರವರ ಹೆಣ್ಣುಮಕ್ಕಳು 'ಕೊರವಂಜಿ'ಯರೆಂದು ಕರೆಸಿ
ಕೊಂಡರು. ಅವರಿಗೆ 'ಕೊರವಿ'ಯೆಂದೂ ಕರೆಪವಾಡಿಕೆ. ಗಂಡಸರಿಗೆ 'ಕೊರವ'
ಎಂದು ಹೇಳುವುದುಂಟು. ಆದರೆ ಈ 'ಕೊರವ'ನಿಗೂ ಮೈಲಾರದೇವರ ಭಕ್ತನಾದ
'ಗೊರವ'ನಿಗೂ ಯಾವ ಸಂಬಂಧವೂ ಇಲ್ಲ.

ಹಾವಾಡಿಸುವ ಈ ಕೊರವರ ಜಾತಿಯ ಮೂಲದ ಬಗ್ಗೆ ನಂಬಲರ್ಹವಾದ
ಗಟ್ಟಿ ಆಧಾರಗಳೇನೂ ಇಲ್ಲ, ತಮ್ಮ ತಮ್ಮ ಜಾತಿ ಮೇಲ್ಮೆಗಾಗಿ ಎಲ್ಲ ವೃತ್ತಿಕಾರರೂ
ಯಾವಾವುದೋ ಪೌರಾಣಿಕ ಸಂದರ್ಭಗಳ ಹಿನ್ನೆಲೆಯಲ್ಲಿ ಕಥೆ ಕಲ್ಪಿಸಿ ತಮ್ಮ ಮೂಲ
ಪುರುಷನ ಕಾರಣಿಕ ಶಕ್ತಿ ಸಾಮರ್ಥ್ಯಗಳನ್ನು ಪುಷ್ಟೀಕರಿಸುವಂತೆ ಈ ಹಾವಾಡಿಗರೂ-
ಸಾಕ್ಷಾತ ಶಿವನಿಗೇ ಸಂಬಂಧಿಸಿದ ಕಥೆಗಳನ್ನು ಹೇಳುವುದುಂಟು. ನಾಗಭೂಷಣ
ನಾಗೇಂದ್ರ ನಾಗಲೋಕ ನಾಗಕನ್ನಿಕೆಯುವರೆಗೂ ಇವರ ಜಾತಿಯ ಸಂಬಂಧವೇರ್ಪಡಿಸುವ

ಕಥೆ ರಂಜನೀಯವೆನಿಸುತ್ತವೆ. ಅದೇನೇ ಇದ್ದರೂ ಮೂಲತಃ ತಾವು ಕ್ಷತ್ರಿಯರೆಂದು ಹೇಳಿಕೊಳ್ಳುತ್ತಾರೆ. ಇವರ ಜಾತಿಯಲ್ಲಿಯೇ ಅತ್ಯಂತ ಶ್ರೇಷ್ಠದವರೆಂದು ಭಾವಿಸುವ ಮಾದಗುಂಡವರು ಕ್ಷತ್ರಿಯ ವಂಶದವರೆಂದೂ ಅವರ ಮೂಲಪುರುಷನೇ ತಮ್ಮ ಜಾತಿಯ ಮೂಲದವನೆಂದು ಭಾವಿಸುತ್ತಾರೆ. ಆ ಕುರಿತು ಹೇಳುವ ಅವರ ಕಥೆ ಹೀಗಿದೆ: ಹಿಂದಿನ ಕಾಲಕ್ಕೆ ಕ್ಷತ್ರಿಯ ರಾಜ್ಯವಿತ್ತಂತೆ. ಆ ರಾಜನಲ್ಲಿ ಒಬ್ಬ ಮುದುಕ ಇದ್ದ. ಅವನಿಗೆ ಒಂದೇ ಕೈಯಿತ್ತು ಒಂದೇ ಕೈಯಿಂದ ಮೂರು ದಿನ ಸತತವಾಗಿ ಯುದ್ಧಮಾಡಿದನಂತೆ. ಕೊನೆಗೆ ಉಕ್ಕಿನ ಸಳಿಯಿಂದ ಎದುರಾಳಿಯ ಎದೆಗುಂಡಿಗೆಗೆ ತಿವಿದು ಜಯಿಸಿದನಂತೆ. ಆಗ ಸತ್ತ ವೈರಿಯ ಹೆಂಡತಿ "ನಿನ್ನ ವಂಶದಲ್ಲಿ ಹೆಣ್ಣು ಹೆಚ್ಚಾಗಲಿ" ಎಂದು ಶಾಪಕೊಟ್ಟಳಂತೆ. ಅಂತೆಯೇ ಈ ವಂಶದಲ್ಲಿ ಇಂದಿಗೂ ಹೆಣ್ಣು ಹೆಚ್ಚು ಎಂದು ಈ ಜನಾಂಗದವರಲ್ಲಿ ತಿಳುವಳಿಕೆ ಇದೆ. ಸಾಮಾಜಿಕವಾಗಿ ಈ ಸಂಗತಿಯನ್ನು ಪರಿಶೀಲಿಸಿದರೆ ಬಹುಶಃ ಇವರು ತಮ್ಮ ಕುಟುಂಬದಲ್ಲಿ ಹೆಣ್ಣಿನ ಆಧಿಕ್ಯವನ್ನು ಸ್ವಾಗತಿಸುವಂತಿದೆ. ಕಾರಣ ಹೆಣ್ಣುಮಕ್ಕಳು ಹೆಚ್ಚಿಗಿದ್ದರೆ ತಮ್ಮ ಮೂಲ ವೃತ್ತಿಗೆ ಹೆಚ್ಚು ಅನುಕೂಲ ಎಂಬುದೇ ವಾಸ್ತವಿಕ ಸತ್ಯವಾಗಿರಬಹುದು. ಹೀಗೆ ಹೆಣ್ಣುಮಕ್ಕಳು ಈ ಜನಾಂಗದಲ್ಲಿ ಹೆಚ್ಚಿಗಿದ್ದಾಗ್ಯೂ (ಹಿಂದೂ ಪದ್ಧತಿಯಲ್ಲಿ ಮೊದಲಿದ್ದಂತೆ) ತೆರಕೊಟ್ಟು ಹೆಣ್ಣು ತರುವ ಪದ್ಧತಿ ಬೆಳೆದು ಬಂದಿರುವುದು ಗಮನಾರ್ಹ. ವರದಕ್ಷಿಣೆ ಪದ್ಧತಿ ಇವರಲ್ಲಿಲ್ಲ. ಆ ಕುಟುಂಬದಲ್ಲಿ ಮೊದಲು ಹುಟ್ಟಿದ ಹೆಣ್ಣಿಗೆ ಕಡಿಮೆ ತೆರವು, ನಂತರ ಹುಟ್ಟಿದ ಹೆಣ್ಣಿಗೆ ಹೆಚ್ಚು ತೆರವು ಕೊಡುವ ಪದ್ಧತಿ ಇದೆ. ಹೆಚ್ಚಾಗಿ ಬಾಲ ವಿವಾಹ ಪದ್ಧತಿಯೇ ಹೆಚ್ಚು. ಉಡಿಕೆಯ ವಿವಾಹಪದ್ಧತಿಯೂ ಇವರಲ್ಲಿದೆ. ನಂಬಿಕೆ, ಆಚಾರ ವಿಚಾರ ಸಂಪ್ರದಾಯಗಳಂತೆ ಮದುವೆಯ ಶಾಸ್ತ್ರವಿಧಿ ವಿಧಾನಗಳೆಲ್ಲವೂ ಹಿಂದು ಪದ್ಧತಿಯಂತೆಯೇ ನಡೆಯುತ್ತವೆ. ಕರಿಮಣಿ ತಾಳಿ ಕಟ್ಟುತ್ತಾರೆ. ಮದುವೆಯ ಊಟ ಸಾಮಾನ್ಯವಾಗಿ ಮಾಂಸಾಹಾರ. ಒಬ್ಬನು ಒಂದೇ ಲಗ್ನವಾಗಬೇಕು. ಒಬ್ಬಳಿಗಿಂತ ಹೆಚ್ಚು ಹೆಣ್ಣುಗಳನ್ನು ಲಗ್ನವಾಗಬೇಕಿದ್ದಲ್ಲಿ ಆ ಸಮಾಜದ ಹಿರಿಯರ ಒಪ್ಪಿಗೆಯನ್ನು ಪಡೆಯಬೇಕಾಗುವುದು. ಇಲ್ಲವಾದರೆ ಅಂಥವನು ಜಾತಿಬಾಹಿರನೆಂದು ಪರಿಗಣಿಸಲ್ಪಡುತ್ತಾನೆ.

ಇತರ ಎಲ್ಲ ಜಾತಿಗಳಲ್ಲಿಯೂ ಇರುವ ಹಾಗೆ ಈ ಜನಾಂಗದಲ್ಲೂ ಎರಡು ಪ್ರಮುಖ ಉಪಜಾತಿಗಳಿವೆ. ಅವರಲ್ಲಿ ಮಾದಗುಂಡವರು, ಬಂಗಿಯವರು ಕದರಿಯವರು, ಚಿಕ್ಕೆನ್ನವರದು ಒಂದು ಪಂಗಡವಾದರೆ: ಸಿರಾಮದವರು ಸಂಡದವರು. ಪಾಲವವರು ಮುಂತಾದವರದು ಎರಡನೆಯ ಪಂಗಡ. ಈ ಎರಡೂ ಪಂಗಡಗಳಲ್ಲಿ ಪರಸ್ಪರವಾದ ಹೆಣ್ಣುಗಂಡಿನ ಕೊಡುಕೊಳೆಯ ಸಂಬಂಧವೇರ್ಪಡುತ್ತದೆ. ಆದರೆ ಆಯಾ ಒಂದೇ ಪಂಗಡಗಳಲ್ಲಿ ಒಳಜಾತಿಯವರಲ್ಲಿ ಪರಸ್ಪರ ಸಹೋದರ ಸಂಬಂಧವಿಟ್ಟು ಅವರಲ್ಲಿಯೇ ಹೆಣ್ಣುಗಂಡು ಕೊಡುಕೊಳೆಯ ಸಂಬಂಧ ನಿಷಿದ್ಧ. ಈ ಎರಡೂ

ಪ್ರಮುಖವಾದ ಜಾತಿ ಪಂಗಡಗಳಲ್ಲಿ ಪರಸ್ಪರವಾದ ಈರ್ಷೆ, ಸ್ಪರ್ಧೆ ಬೆಳೆದು ಬಂದು ತಮ್ಮ ತಮ್ಮ ಜಾತಿಯ ಮೇಲ್ಮೆಯನ್ನು ಪ್ರತಿಷ್ಠಾಪಿಸಿಕೊಳ್ಳುವುದು ಪರಂಪರಾಗತವಾಗಿ ಬೆಳೆದು ಬಂದಿದೆ.

ಈ ಜನಾಂಗದವರು ಆರಾಧಿಸುವ ದೇವರೆಂದರೆ ಹೆಚ್ಚಾಗಿ ಉಗ್ರದೇವತೆಗಳು. ರೋಗ, ರುಜೆನ ಎಲ್ಲ ಅನಿಷ್ಟಗಳನ್ನು ದೂರ ಮಾಡುವ ದ್ಯಾಮವ್ವ, ದುರುಗವ್ವ, ಎಲ್ಲಮ್ಮ, ಲಕ್ಕವ್ವ, ಕಾಳವ್ವ ಮಾರೆಮ್ಮ, ಮಸಣಮ್ಮ ಹುಲಿಗೆಮ್ಮ ಮುಂತಾದ ಗ್ರಾಮ ದೇವತೆಗಳಲ್ಲಿ ಅಪಾರ ಶ್ರದ್ಧೆ-ನಂಬಿಕೆ-ಭಕ್ತಿ. ಹನುಮಂತ, ವೀರಭದ್ರ, ಶಿವರನ್ನು ಪೂಜಿಸುವದುಂಟು. ವಿಭೂತಿ ಧಾರಣೆ ಮಾಡುವುದುಂಟು.

ಈ ಜನಾಂಗಕ್ಕೆ ತಮ್ಮದೇ ಎಂದು ಹೇಳಿಕೊಳ್ಳುವ ಹೊಲಮನೆ ಮುಂತಾದ ಯಾವ ಸ್ಥಿರಾಸ್ತಿಯೂ ಇಲ್ಲದ್ದರಿಂದ ಉಪಜೀವನಕ್ಕಾಗಿ ಊರೂರಿಗೆ ಅಲೆಯುತ್ತಾರೆ. ಹೀಗಾಗಿ ನಿತ್ಯ ಸಂಚಾರಿಗಳಾದ ಇವರು ಋತುಚಕ್ರದಂತೆ ಇಡೀ ದೇಶದಾದ್ಯಂತ ಸಂಚರಿಸಬಲ್ಲರು. ಅಂತೆಯೇ ಇವರು ಆಡುಭಾಷೆ ಇಂಥದೇ ಎಂದು ಹೇಳುವಂತಿಲ್ಲ. ಕರ್ನಾಟಕದಲ್ಲಿ ಸಂಚರಿಸುವಾಗ ಕನ್ನಡ, ಮಹಾರಾಷ್ಟ್ರದಲ್ಲಿರುವಾಗ ಮರಾಠಿ, ಹಿ... ತಮಗೆ ಸಾಧ್ಯವಾದ ಎಲ್ಲ ಭಾಷೆಗಳನ್ನು ಕಲಿಯಬಲ್ಲ ಜಾಣ್ಮೆ ಅವರಿಗೆ ಕರಗತವಾಗಿದೆ. ನಿರಕ್ಷರಿಗಳಾದರೂ ಸಂಚಾರಿ ಜನಾಂಗದಷ್ಟು ಭಾಷೆಯನ್ನು ಬಹುಬೇಗನೇ ಕಲಿಯುವ ಸಾಮರ್ಥ್ಯ ಎಂಥ ವಿದ್ವಾಂಸರಿಗೂ ಅಸಾಧ್ಯ. ಅಂತೆಯೇ ಇವರು ಆ ದೃಷ್ಟಿಯಿಂದ ಗಣನೀಯರೆನಿಸುತ್ತಾರೆ. ಅವರು ಆ ಹಾವಾಡಿಸುವಾಗಿನ ಮಾತಿನ ಮೋಡಿ ಯಾ... ನ್ನಾದರೂ ಬೆರಗುಗೊಳಿಸುತ್ತದೆ. ತಾವು ಮಾಡುವ ಆಟ ಅನ್ನುವ ಮಂತ್ರ ಮೋ... ಕಾರ ವಿದ್ಯೆಯನ್ನೆಲ್ಲವನ್ನು ತಮ್ಮ ಮಕ್ಕಳಿಗೆ ಕಲಿಸಿ, ತಮ್ಮ ವಿದ್ಯೆ ಹಾಗೂ ವೃ... ಪರಂಪರೆಗೆ ನೀರೆರೆಯುತ್ತಾರೆ.

ಹಾವು ಆಡಿಸುವ ಆಟಕ್ಕೆ ತಂದೆಯೊಡನೆ ಆತನ ಗಂಡು ಮಕ್ಕಳೇ ವಿಶೇಷವಾಗಿ ಹೋಗಿ ಆತನೊಂದಿಗೆ ಸಹಕರಿಸುತ್ತಾರೆ. ಮೋಡಿ ವಿದ್ಯೆ ಹಾವಾಡಿಗನಿಗೆ ಕರಗತ. ಅಂತೆಯೇ ಹೂವು, ಹಾವು ಚೇಳು ಇತ್ಯಾದಿಗಳನ್ನು ಮಾಡುವ, ಕಲ್ಲು ಉಂಗುರ ವಾಗಿಸುವ ಅದ್ಭುತ ಮಾಯದಾಟದಿಂದ ಸುತ್ತಲೂ ನಿಂತವರನ್ನು ಅಚ್ಚರಿಗೊಳಿಸುತ್ತಾರೆ. ಪುಂಗಿ, ಕೊಳಲು, ಬಾಣಂತಿ ಹಸ್ತ, ಡಮರುಗ, ಡೋಗಿ ಮುಂಗಲಿ, ಇತ್ಯಾದಿಗಳಲ್ಲದೆ ಕೈಪೇಟಿ ಡೋಲಕ ಇತ್ಯಾದಿಗಳನ್ನು ಬಳಸಿಕೊಂಡು ತನ್ನ ಆಟಕ್ಕೆ ರಂಗು ತಂದು ಕೊಳ್ಳುತ್ತಾನೆ. ನಾಗರಹಾವು ಮಾತ್ರ ಪುಂಗಿಗೆ ಹೆಡೆಬಿಚ್ಚಿ ಆಡುತ್ತದೆ. ಪುಂಗಿಕಾಯಿ ಎಂದರೆ ಪುಂಗಿಯಬಳ್ಳಿಯದು. ಹಾವು ಕಡಿದಾಗ ಈ ಪುಂಗಿಯ ಬಳ್ಳಿಯ ತಪ್ಪಲ ರಸವನ್ನೇ ವಿಷ ಇಳಿಸಲು ಉಪಯೋಗಿಸುತ್ತಾರೆ. ಈ ಬಳ್ಳಿ ಇದ್ದಲ್ಲಿ ನಾಗರಹಾವು ಕೂಡಾ ಸುಳಿಯುವುದಿಲ್ಲವಂತೆ.

ಹಾವಾಡಿಗರು ತಮ್ಮ ಆಟಕ್ಕಾಗಿ ನಾಗರ, ಮಿಡಿನಾಗರ, ಘಟಸರ್ಪ, ಹೆಬ್ಬಾವು, ಕರಿಹಾವು, ಮಣ್ಣುಮುಕ್ಕಹಾವು ಇತ್ಯಾದಿ ಎಲ್ಲ ಜಾತಿಯ ಹಾವುಗಳನ್ನು ಸಂಗ್ರಹಿಸಿ ರುತ್ತಾರೆ. ಆಯಾ ಹಾವುಗಳ ಹಾಗೂ ವಿಶಿಷ್ಟ ಮನೋಧರ್ಮ ಲಕ್ಷಣಗಳನ್ನು ಅವರು ಚೆನ್ನಾಗಿ ಬಲ್ಲರು.

ಹಾವು ಗರುಡಗೈ ಇದ್ದವರಿಗೆ ಏನೂ ಮಾಡುವುದಿಲ್ಲವೆಂಬ ನಂಬಿಕೆ ಜನ ಸಾಮಾನ್ಯವಾಗಿದೆ. ಹಾವು ಆಡಿಸುವುದನ್ನು ವೃತ್ತಿಯನ್ನಾಗಿಸಿಕೊಳ್ಳದಿದ್ದರೂ, ಹಾವು ಕಡಿದಾಗ ಮಂತ್ರಿಸುವುದನ್ನು ಅನ್ಯಜಾತಿಯವರಲ್ಲಿಯೂ ಕಾಣುತ್ತೇವೆ. ಅಷ್ಟೇ ಅಲ್ಲ; ಹಾವು ಹಿಡಿಯುವಲ್ಲಿ ತಮ್ಮ ಸುಪ್ರಸಿದ್ಧಿಯನ್ನು ಮೆರೆದ ಇತ್ತೀಚಿನ ದೊಡ್ಡ ಉದಾ ಹರಣೆಯೆಂದರೆ ಹಂಚಿನಾಳ ಚನಬಸಪ್ಪ. ಹೀಗೆ ಇತರರೂ ಈ ಹಾವು ವಿದ್ಯೆಯತ್ತ ತಿರುಗಿದ್ದರಿಂದ ಹಾವು ಆಡಿಸುವಲ್ಲಿಯೇ ತನ್ನ ದೊಡ್ಡ ಹಿರಿಮೆಯೆಂದು ಭಾವಿಸಿದ ವೃತ್ತಿಹಾವಾಡಿಗನು– ತನ್ನ ಆಟದೊಂದಿಗೆ ಮೋಡಿ, ಕೈಚಳಕ ವಿದ್ಯೆಯನ್ನೂ ಅಷ್ಟೇ ಪ್ರಧಾನವೆಂದು ಪರಿಗಣಿಸಿದಂತೆ ತೋರುತ್ತದೆ.

ಒಟ್ಟಾರೆ ನಿತ್ಯವೂ ಬದಲಾಗುತ್ತಿರುವ ಹಾವಾಡಿಗರದೂ ಒಂದು ದೊಡ್ಡ ಕಲೆ ಪ್ರಾಣಾಂತಿಕ ಇಡೀ ಕುಟುಂಬದ ಗಂಡು ಸಂತಾನಕ್ಕೇ ಬಳುವಳಿಯಾಗಿ ಬಂದ ಈ ಹಾವಾಡಿಗರ ಬದುಕಿನ ಬಗೆಗೆ ಇನ್ನೂ ಹೆಚ್ಚಿನ ಅಭ್ಯಾಸನಡೆಯಬೇಕು. ನಿರ್ದಿಷ್ಟವಾಗಿ ಯಾವ ಹಾವಾಡಿಗರೂ ಏನೊಂದನ್ನು ಹೇಳುವುದಿಲ್ಲವಾದ್ದರಿಂದ ಪತ್ತಾರು ನಿಟ್ಟಿನ ಕ್ಷೇತ್ರಕಾರ್ಯ ಪರೀಕ್ಷೀಕ್ಷಣೆಯಿಂದ ಈ ಜನಾಂಗದ ಪೂರ್ವೇತಿಹಾಸವನ್ನು ನಿಗದಿಗೊಳಿಸ ಬೇಕಾದ್ದು ಅತ್ಯವಶ್ಯ.

● ●

# ಅಧ್ಯಕ್ಷರ ಭಾಷ

**ಡಾ. ಕೆ. ಜಿ. ಶಾಸ್ತ್ರಿ**

ಸೌಂದರ್ಯವನ್ನು ಪರಿಪೂರ್ಣದೆಡೆಗೆ ಒಯ್ದು ಮುಟ್ಟಿಸುವದೇ ಕಲೆ. ಕ
ಎಂಬುದು ಒಂದೇ ಆದರೂ ಅದಕ್ಕಿರುವ ಮುಖಗಳು ಅನಂತ. ಒಂದೊಂದು ಮುಖ
ಒಂದು ತೆರ. ಅದು ಯಾವ ಮುಖದಲ್ಲಿ ವ್ಯಕ್ತವಾದರೂ ಸೊಗಸಿನ ಬುಗ್ಗೆಯಾ
ನಿಲ್ಲಬಲ್ಲುದು. ಇಂತಹ ಕಲೆ ಮೂಲದಲ್ಲಿ ಹುಟ್ಟಿಬರುವದು ಪ್ರತಿಭೆಯ ಮೂಷೆಯಲ್ಲಿ
ಪ್ರತಿಭಾವಂತನು ತನಗೆ ತೋಚಿದುದರ ಹಿನ್ನೆಲೆಯಲ್ಲಿ ಅನುಕರಣೆಗೆ ಕೈಹಾಕುವನು
ಪ್ರಕೃತಿ ಆಗ ಅನುಕರಣೆಯ ವಸ್ತುವಾಗುವದು. ಅಲ್ಲಿ ಹುದುಗಿರುವ ಸೌಂದಯ
ವನ್ನು ಹೊರದೆಗೆದು ಜನಮನಕ್ಕೆ ಮುಟ್ಟುವಂತೆ ಮಾಡುವಲ್ಲಿ ಪ್ರತಿಭಾವಂತ ಶ್ರಮಿಸ
ತ್ತಾನೆ. ಆ ವಸ್ತು ಸೌಂದರ್ಯವು ಹೊರಗೆ ಪ್ರಕಟವಾಗುತ್ತಲೇ ಕಲೆಯೆಂದು ಹೆಸರಿ
ಕೊಳ್ಳುತ್ತದೆ. ಅದು ಮೂಲದಲ್ಲಿ ಒರಟಾಗಿ ತೋರಿದರೂ ಬೆಳವಣಿಗೆಯಲ್ಲಿ ನುಣ್ಣ
ಗಾಗುವದು. ಮೂಲಕಲಾಕಾರನ ಸೃಷ್ಟಿ ಇತರ ಕಲಾಕಾರರ ಕೈಯಲ್ಲಿ ತೀಡಿ ತಿದ್ದಿ
ಕೊಂಡು ಪರಿಪೂರ್ಣದತ್ತ ಸಾಗುವದು. ಪರಿಪೂರ್ಣಕಲೆಯೆಂದು ಮೆರೆಯತೊಡಗು
ವದು. ಇದು ಕಲೆಯ ಮೂಲ, ನಿಲುವು,

ಕಲೆಯ ಪ್ರಸಾರಕ್ಕೆ ಪ್ರಚಾರವೊಂದು ಸಾಧನ. ಪ್ರಚಾರ ಉತ್ತಮ ಉದ್ದೇಶ
ಹೊಂದಿದ್ದರೆ ಕಲೆಗೆ ಮೆರಗು ಬರುತ್ತದೆ. ಕಲೆ ಪ್ರಚಾರಕನನ್ನು ಪ್ರಚೋದನೆಯತ್ತ
ಸಾಗಿಸಬೇಕು. ತಾನು ಮಾಡುವದರಲ್ಲಿ ಪ್ರಚಾರಕನಾದವನು ಮುಖ್ಯವಾಗಿ ಪಡೆಯ
ಬೇಕಾದುದು ಆನಂದ. ತನಗೆ ಆನಂದವೆನಿಸಿದಾಗ ಹಿಗ್ಗಿ ಆನಂದಪಡಬೇಕು. ತನಗಾದ
ಆನಂದ ಇತರರಿಗೂ ದೊರೆಯಲೆಂದು ಅವನು ಆಶೆಪಟ್ಟಾಗ ಪ್ರಚಾರದ ಹುಚ್ಚು

ಹಿಡಿಯುತ್ತದೆ. ಹಿಡಿದ ಹುಚ್ಚು ಕಡಿಮೆಯಾಗುವ ವರೆಗೆ ಅವನು ಕಲಾಪ್ರಚಾರವನ್ನು ಮುಂದುವರಿಸುತ್ತಲೇ ಇರುತ್ತಾನೆ. ಕಲಾಪ್ರಚಾರ ವೈಯಕ್ತಿಕವಾಗಿರಬಹುದು, ಸಾಮೂಹಿಕವಾಗಿರಬಹುದು. ಹೇಗಿದ್ದರೂ ಅದು ಮೊದಮೊದಲು ಬೆಳೆಯುವದು ಹವ್ಯಾಸವಾಗಿಯೇ, ಆ ಹವ್ಯಾಸ ಕೆಲವು ಪ್ರಚಾರಕರಲ್ಲಿ ಚಟವಾಗಿ ಪರಿಣಮಿಸುವದೂ ಉಂಟು. ಹತ್ತಿದ ಚಟ ಹಗುರಾಗಿ ಕೈಬಿಡದು. ಅಂತಹ ಪ್ರಸಂಗದಲ್ಲಿ ಪ್ರಚಾರಕ ಕಲಾವಿದ ಅದಕ್ಕೇ ಅಂಟಿಕೊಂಡು ತನ್ನ ಉಪಜೀವನವನ್ನು ಅದರಿಂದಲೇ ಸಾಗಿಸಲು ಯತ್ನಿಸುವನು. ಆಗ ಅದೊಂದು ಅವನಿಗೆ ವೃತ್ತಿಯಾಗಿ ಪರಿಣಮಿಸುವದು. ಅದು ಹೊಟ್ಟೆ ಬಟ್ಟೆ ಪೂರೈಸಲು ಸಮರ್ಥವೆನಿಸಿದರೆ ಅವನ ಮನೆತನದವರೂ ಕಲಾಪ್ರಚಾರ ವನ್ನೇ ತಮ್ಮ ವೃತ್ತಿಯಾಗಿ ಅನುಸರಿಸುವರು. ಅವರಲ್ಲಿ ಪ್ರತಿಭೆ, ಪರಿಶ್ರಮ, ಕಲಾಭಿಮಾನವಿದ್ದರೆ ಹಿಡಿದ ವೃತ್ತಿಗೆ ಕೊರತೆಯಾಗದು. ಹೀಗೆ ಜನಪದ ಪ್ರಪಂಚದಲ್ಲಿ ಕಲಾಪ್ರಚಾರವನ್ನು ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡು ಬಂದಿರುವದು ಗೋಚರ ವಾಗುತ್ತದೆ. ಆಯಾ ವೃತ್ತಿಗಳಿಗೆ ಅನುಗುಣವಾಗಿ ಅವರ ಮನೆತನಗಳು ಹೆಸರುವಾಸಿ ಯಾದುದನ್ನು ಇಂದಿಗೂ ಕಾಣುತ್ತೇವೆ. ಅದು ಆನುವಂಶಿಕವಾಗಿ ನಿಂತುದನ್ನು ಅರಿಯುತ್ತೇವೆ.

ಪ್ರಸ್ತುತ ಸಮ್ಮೇಳನದಲ್ಲಿ ಕಲೆಯನ್ನು ವೃತ್ತಿಯನ್ನಾಗಿ ಮಾಡಿಕೊಂಡ ಕಲಾ ಪ್ರಚಾರಕರ ಏಳುಬೀಳನ್ನು ಕುರಿತು ವಿಚಾರಸಂಕಿರಣಗಳನ್ನು ಏರ್ಪಡಿಸಿರುವದು ಜಾನಪದ ದೃಷ್ಟಿಯಿಂದ ಅತಿಮುಖ್ಯವಾದುದು ಈ ಗೋಷ್ಠಿಯಲ್ಲಿ ಲಾವಣಿಕಾರರು, ಕಿಳ್ಳಿಕೇತರು, ಸಿದ್ಧಿಕಿಸಿದ್ಧಿಯವರು, ಕವಲೆತ್ತಿನವರು. ವೇಷಗಾರರು, ಡೊಂಬರು, ಹಾವಾಡಿಗರು ತಂತಮ್ಮ ವೃತ್ತಿಗಳನ್ನು ಇಂದಿಗೂ ನಡೆಯಿಸಿಕೊಂಡು ಬಂದ ಬಗೆಯನ್ನು ಕುರಿತು ಅನೇಕ ಜನ ಪಂಡಿತರು ಸಾಕಷ್ಟು ಅಭ್ಯಾಸಮಾಡಿ ವಿಷಯ ಪ್ರತಿಪಾದನೆ ಮಾಡಿದ್ದಾರೆ. ಜನಪದ ಕಲೆಗಳ ಉಳಿಮೆಗಾಗಿ ಈ ವೃತ್ತಿಕಾರರು ಒಂದು ಕಾಲದಲ್ಲಿ ಪ್ರಖ್ಯಾತಿ ಪಡೆದಿದ್ದರು. ಜನತೆಗೆ ಮನೋರಂಜನೆ ನೀಡಿ, ಅವರಿಂದ ನಗನಾಣ್ಯಗಳನ್ನು ದೊರಕಿಸಿ ಜೀವನ ಸಾಗಿಸುವದೇ ಈ ವೃತ್ತಿಕಾರರ ಕಾಯಕವಾಗಿತ್ತು. ಆದರೆ ಇಂದು ಕಾಲ ಬದಲಾಗಿದೆ. ಜನರ ನಂಬಿಕೆ. ನಡೆವಳಿ, ಸ್ವಭಾವದಲ್ಲಿ ತೀವ್ರತರ ಬದಲಾವಣೆ ಬಂದಿದೆ. ವಿಜ್ಞಾನದ ಬೆಳೆವಣಿಗೆ ಜನತೆಯ ಅಜ್ಞಾನವನ್ನು ಹಿಂದೆ ಸರಿಸುತ್ತಲಿದೆ. ಹೀಗಾಗಿ ಕಲಾವೃತ್ತಿಕಾರರು ತಮ್ಮ ಜೀವನವನ್ನೇ ಸಾಗಿಸುವದು ದುಸ್ತರವಾಗಿದೆ. ಕೆಲವೊಂದು ಕಲಾವೃತ್ತಿಗಳು ನಿವೃತ್ತಿಪಡೆಯತೊಡಗಿವೆ. ಇದು ಕಾಲ ಮಹಿಮೆ.

ಲಾವಣಿಕಾರರು ಹವ್ಯಾಸಿಗಳಾಗಿಯೇ ಉಳಿದಿರುವದು ಒಂದು ವೈಶಿಷ್ಟ್ಯ. ಅದು ಮನೆತನದ ವೃತ್ತಿಯಾಗಿ ನಿಂತದ್ದು ಕಾಣುವದಿಲ್ಲ. ಉಳಿದವರು ಕಲೆಯನ್ನು ತಮ್ಮ

ವೃತ್ತಿಯನ್ನಾಗಿ ಮಾಡಿಕೊಂಡು ಬಾಳುತ್ತ ಬಂದಿದ್ದರೂ ಇಂದು ಅವರ ಜೀ
ನಿಕೃಷ್ಟವಾಗಿದೆ. ಬಂದದ್ದು ಹೊಟ್ಟೆ ಬಟ್ಟೆಗೆ ಸಾಕಾಗದಿದ್ದಾಗ ಅವರು ಮತ್ತೊ
ವೃತ್ತಿಗೆ ಕೈಹಾಕುವದು ಸ್ವಾಭಾವಿಕ. ಮೂಲವೃತ್ತಿ ಮೂಲೆಗೆ ಬಿದ್ದಾಗ ಕಾ
ಅನುಗುಣವಾಗಿ ಮತ್ತೊಂದು ವೇಷ ಹಾಕುವದೂ ಅಷ್ಟೇ ಸ್ವಾಭಾವಿಕ. ಕೆಲವರು
ಭಿಕ್ಷೆಗಾಗಿ ಕಲಾಪೋಷಣೆ ಮಾಡುತ್ತಿರುವದು ಕಂಡುಬಂದಿದೆ. ಹೀಗಾದರೆ ಕಲೆಯ
ಬಂತು ? ಉದರಪೋಷಣೆಯೇ ಅವರ ವೃತ್ತಿಯಾದರೆ ಕಲೆಗೆ ಬೆಲೆ ಇಲ್ಲದಂತಾಗುವ
ನಿಶ್ಚಿತ. ಜನತೆಯ ಪೋಷಣೆ ಇದ್ದಾಗ ಕಲೆ ಬೆಳೆಯುತ್ತದೆ. ಅದು ತಪ್ಪಿದಾಗ
ಅಳಿಯುತ್ತದೆ.

ಕಿಳ್ಳಿಕೇತರು ಗೊಂಬೆಯಾಟವನ್ನು ಆಡುತ್ತ ಬಂದರು. ಹಾಡುತ್ತಲೇ ಗೊ
ಕುಣಿಸಿ ಅವರು ಆನಂದಪಟ್ಟರು.' ಜನತೆಗೆ ರಂಜನೆ ನೀಡಿದರು. "ಭಗವಂತನೊ
ಸೂತ್ರಧಾರ, ನಾವೆಲ್ಲ ಅವನ ಕೈಗೊಂಬೆ" ಎನ್ನುವ ಉದಾತ್ತ ತತ್ವವನ್ನು ಪ್ರಚ
ಗೊಳಿಸಿದರು. ಜನತೆ ಅದರಲ್ಲಿ ನಂಬಿಗೆಯಿಟ್ಟು ಕಿಳ್ಳಿಕೇತರ ಗೊಂಬೆಯಾಟವ
ಆದರಿಸಿದರು. ಆದರೆ ಇತ್ತಿತ್ತಲಾಗಿ ನಾಟಕ, ಸಿನೀಮಾ ಅಚ್ಚುಕಟ್ಟಾಗಿ, ಕಲಾತ್ಮಕವ
ಬೆಳೆದು ಪ್ರಚಾರಕ್ಕೆ ಬಂದಿವೆ. ನೆಳಲು ಬೆಳಕುಗಳ ತಾಕಲಾಟದಲ್ಲಿ ಮೋಡಿ ಎ
ಕಾಣುತ್ತದೆ. ಹೀಗಿದ್ದಾಗ ಹಿಲಾಲಿನ ಹಿನ್ನೆಲೆಯಲ್ಲಿ ಕುಣಿಯುವ ಗೊಂಬೆಗಳ
ಯಾರು ಆದರಿಸಬೇಕು ? ಹೀಗಾಗಿ ಈ ವೃತ್ತಿಕಾರರು ಕಾಣಸಿಗುವದೇ ದುಸ್ತರವಾಗಿ
ಸರ್ಕಸ್ಸು ಸುಸಜ್ಜಿತವಾಗಿ ನಡೆಯುತ್ತಿರುವಾಗ ಡೋಲು ಹೊಡೆದು ಲಾಗಹಾಕು
ಹಗ್ಗದ ಮೇಲೆ ಸಾಗುವ ಡೊಂಬರನ್ನು ಯಾರು ನೋಡಬೇಕು ? ವೇಷಗಾರ
ಎಲ್ಲೆಡೆಯಲ್ಲಿ ಇರುವಾಗ ವೇಷಗಾರರನ್ನು ಯಾರು ಕೇಳಬೇಕು ? ಹೀಗೆ ಕಳೆ
ಹೋಗುತ್ತಿರುವ ಕಲೆಯನ್ನು ಕಲಾಕಾರರನ್ನೂ ಸಾಂಸ್ಕೃತಿಕ ದೃಷ್ಟಿಯಿಂದಾದರ
ಉಳಿಸಿಕೊಳ್ಳುವದು ಜನತೆಯ ಕರ್ತವ್ಯ. ಕಾರಿನಲ್ಲಿ ಸಾಗಿದವನು ಬಂಡಿಯನ್ನು
ಗಣಿಸಿ ನೋಡುವದು ಸರ್ವಥಾ ಸರಿಯಲ್ಲ, ಕಾಲಚಕ್ರ ತಿರುಗುತ್ತಲಿದೆ. ಹಳೆಯ
ಒಳ್ಳೆಯದು ಎನ್ನುವ ಕಾಲ ಬಂದರೂ ಬರಬಹುದು. ಅದ್ದರಿಂದ ವೃತ್ತಿ ಕಲಾಕಾ
ಪರಿಳಿತಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಪರಿಹಾರ ಕಂಡುಕೊಳ್ಳುವದು ವಿಹಿತ.
ದೃಷ್ಟಿಯಿಂದ ಇಂತಹ ವಿಚಾರ ಸಂಕಿರಣಗಳು ಹೆಚ್ಚಾಗಿ ನಡೆಯಬೇಕಾದುದು ಅಗ
ಎಂದು ನನ್ನ ಭಾವನೆ.

